ವಿಷಯಾನುಕ್ರಮಣಿಕೆ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ—೧೭

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಪದ್ಮಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಸೃಷ್ಟಿಖಂಡ—ಐದನೆಯ ಭಾಗ

(೪೭—೬೩ ಅಧ್ಯಾಯಗಳು)

ಅನುವಾದಕ:

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ**

ಸಾಹಿತ್ಯ ವಿದ್ವಾನ್

ಕನ್ನಡ ಪಂಡಿತ (ಮೈಸೂರು) ಕನ್ನಡ ವಿದ್ವಾನ್ (ಮದ್ರಾಸು)

ಮೈಸೂರು:

ಶ್ರೀ ಹನುಮಾನ್ ಪ್ರೆಸ್

೧೯೪೫

॥ ಶ್ರೀಃ ॥

-X-

# ಮುನ್ನುಡಿ



ಪದ್ಮಪುರಾಣದ ಸೃಷ್ಟಿಖಂಡವನ್ನು ಐದು ಭಾಗಗಳಾಗಿ ವಿಭಾಗಿಸಿದೆಯಷ್ಟೆ. ಅವುಗಳಲ್ಲಿ ಇದು ಕಡೆಯದಾದ ಐದನೆಯ ಭಾಗವಾಗಿದೆ. ಇದರಲ್ಲಿ ನಾಲ್ವತ್ತೇಳನೆಯ ಅಧ್ಯಾಯದಿಂದ ಎಂಭತ್ತೆರಡನೆಯ ಅಧ್ಯಾಯವು ಪೂರ್ತಿಯಾಗಿ ಅಡಕವಾಗಿದೆ.

ಇದರಲ್ಲಿ ಒಳ್ಳೆಯ ಕೆಲಸಗಳೆಂದು ಯಾವುವು ಇವೆಯೋ ಅವನ್ನು ಒಂದು ನಿಯಮದಿಂದ ಮನಸ್ಸನ್ನು ಜಯಿಸಿ ಸಾಧಿಸಿದರೆ ಅದರಿಂದ ಇಹದಲ್ಲಿ ಕೀರ್ತಿಯೂ ಪರದಲ್ಲಿ ಮೋಕ್ಷವೂ ಉಂಟಾಗುತ್ತದೆ ಎಂಬುದನ್ನು ಅನೇಕ ದೃಷ್ಟಾಂತಗಳಿಂದ ಪ್ರತಿಪಾದಿಸಲಾಗಿದೆ.

ಪತಿವ್ರತೆಯ ಮಹಿಮೆಯನ್ನು ಹೇಳುವಾಗ ಆಕೆಯ ಮಹಿಮೆಯು ಸೂರ್ಯನನ್ನೇ ಉದಯಿಸದಂತೆ ಮಾಡಿ ಅದರಿಂದ ಬ್ರಹ್ಮಾದಿಗಳು ಆಕೆಯ ಬಳಿಗೆ ಬರುವಂತೆ ಮಾಡಿತೆಂಬ ವಿಷಯ ಬಲು ಚೆನ್ನಾಗಿ ವಿವರಿಸಲ್ಪಟ್ಟಿದೆ. ಹೆಂಗಸರಿಗೆ ಈ ಪತಿವ್ರತಾ ಮಹಿಮೆಯ ಯೋಗ್ಯತೆಯನ್ನು ಪಡೆಯಲು ಶಕ್ತಿ ಇದ್ದರೂ ಸ್ಥಳಕಾಲಗಳ ಅಭಾವದಿಂದ ಎಲ್ಲರೂ ಪತಿವ್ರತೆಯರಾಗಿದ್ದಾರೆಯೇ ಹೊರತು ಮನಃಪೂರ್ತಿಯಾಗಿ ಆಚರಿಸುವವರು ಬಹು ಕಡಿಮೆ ಎಂಬುದೂ ವಿಶದೀಕರಿಸಲ್ಪಟ್ಟಿದೆ.

ಈ ಸಂದರ್ಭದಲ್ಲಿ ಹೆಂಗಸರೂ, ಗಂಡಸರೂ ಅಯೋಗ್ಯ ಕೆಲಸಗಳನ್ನು ಮಾಡಿದರೆ ಅದರಿಂದ ಬರುವ ದೋಷವನ್ನು ಪರಿಹರಿಸಿಕೊಳ್ಳಲು ಅನೇಕ ಬಗೆಯ ಪ್ರಾಯಶ್ಚಿತ್ತಗಳನ್ನೂ ವಿವರಿಸಿದೆ.

ದಾನದ ಮಹಿಮೆಯನ್ನು ಹೇಳಿ ಸಾಲಂಕಾರದ ಕನ್ಯಾದಾನದ ಫಲವನ್ನು ವಿಶೇಷವಾಗಿ ವಿವರಿಸಿ ವರದಕ್ಷಿಣೆಯು ಬಹು ನಿಷಿದ್ಧವಾದುದೆಂದು ಪುಷ್ಟೀಕರಿಸಿ ವಿವರಿಸಲ್ಪಟ್ಟಿದೆ.

ಇನ್ನೂ ಅನೇಕ ವಿಧವಾದ ದಾನಗಳನ್ನೂ, ಅವುಗಳ ಕ್ರಮವನ್ನೂ, ಅವುಗಳ ಫಲವನ್ನೂ, ಅತಿಶಯವಾಗಿ ವಿವರಿಸಿದೆ.

ಸತ್ಯವು ಬಹು ಶ್ರೇಷ್ಠವಾದುದೆಂದು ವಿವರಿಸುತ್ತ ಅದರಲ್ಲಿ ಅಕಾಮ, ದಯೆ, ಸಂತೋಷ, ಅಲೋಭ, ಅಹಿಂಸೆಗಳಿರಬೇಕೆಂದು ವಿವರಿಸಿ ಕಾಮವನ್ನು ಜಯಿಸು ವುದು ಬಹು ಗುರುತರವಾದ ಕೆಲಸವೆಂದು ವಿವರಿಸುತ್ತ ಬ್ರಹ್ಮನು ಕಾಮಿಸಿದುದನ್ನು ವಿವರಿಸಿ ಇಂದ್ರನು ಅಹಲ್ಯೆಯಲ್ಲಿ ಆಸೆಪಟ್ಟು ತೊಂದರೆಪಟ್ಟುದು ವಿವೃತವಾಗಿದೆ.

ಶಂಕರನೂ ಕೂಡ ಈ ಕಾಮನಿಗೆ ಅಧೀನನಾಗಿ ಅಂತರಿಕ್ಷದಲ್ಲಿಯೇ ಮನೆಯನ್ನು ಕಟ್ಟಿಕೊಂಡು ಉತ್ತಮ ಸ್ತ್ರೀಯೊಡನೆ ರಮಿಸುತ್ತಿದ್ದನೆಂಬುದು ವರ್ಣಿಸಲ್ಪಟ್ಟು ಇದನ್ನು ಕಂಡು ಹಿಡಿಯಲು ಅವತರಿಸಿದ ಪಾರ್ವತಿಯ ಕ್ಷೇಮಂಕರಿ ಎಂಬ ಅವತಾರವೂ ಅದರಿಂದ ಲೋಕಕ್ಕೆ ಉಂಟಾದ ಸುಖಗಳೂ ಅನೇಕವಾಗಿ ವರ್ಣಿತವಾಗಿದೆ.

ಕೆರೆ ಕಟ್ಟೆಗಳನ್ನು ಕಟ್ಟುವುದು, ಅವುಗಳ ದಾನ, ಮರಗಳನ್ನು ಬೆಳೆಸುವುದು, ಅವುಗಳ ವಿಧಿಯನ್ನು ವಿವರಿಸಿ ಅವುಗಳಿಂದ ಬರುವ ಫಲವೂ ಸೂಚಿತವಾಗಿದೆ.

ಇದರಂತೆಯೇ ಸೇತುವೆ, ಅಣೆ, ಸಾರಣೆ, ಸೋಪಾನಗಳನ್ನು ಕಟ್ಟಿಸುವುದ ರಲ್ಲಿಯೂ ಫಲವುಂಟೆಂದು ಹೇಳಿದೆ. ಮನೆ ಕಟ್ಟಿ ದಾನಮಾಡುವುದು, ದೇವಸ್ಥಾನ ಗಳನ್ನು ಕಟ್ಟಿಸುವುದು ಬಹು ಉತ್ತಮವಾದುದೆಂದು ಹೇಳಲ್ಪಟ್ಟಿದೆ.

ರುದ್ರಾಕ್ಷಿಯ ಮಹಿಮೆ ಅದರ ಇತರ ವಿಷಯಗಳು, ನೆಲ್ಲಿಯ ಮಹಿಮೆ ಅದರ ಇತರ ವಿಷಯಗಳು, ತುಳಸಿಯ ಮಹಿಮೆ ಅದರ ಇತರ ವಿಷಯಗಳು ಬಹು ವಿಸ್ತಾರವಾಗಿ ಹೇಳಲ್ಪಟ್ಟಿವೆ.

ಗಣೇಶನಿಗೆ ಅಗ್ರಪೂಜೆಯು ಬರಲು ಕಾರಣ, ಅಗ್ರಪೂಜೆಯನ್ನು ಮಾಡಿದರೆ ಬರುವ ಫಲ, ಅದನ್ನು ನಿರಾಕರಿಸಿದರೆ ಬರುವ ತೊಂದರೆಗಳನ್ನು ವಿವರಿಸುತ್ತ ಈ ಗಣೇಶನನ್ನು ಪೂಜಿಸದುದರಿಂದಲೇ ದೇವದಾನವರ ಯುದ್ಧವು ನಡೆಯಿತೆಂಬುದನ್ನು ವಿವರಿಸಿ ಅದೇ ಯುದ್ಧವು ಹೇಗೆ ನಡೆಯಿತು? ಯಾರು ಯಾರನ್ನು ಕೊಂದರು? ಎಂಬುದನ್ನು ವಿವರಿಸಲಾಗಿದೆ.

ದೈತ್ಯರಾದರೂ ನ್ಯಾಯ ಯುದ್ಧವನ್ನು ಮಾಡಿದರೆ ಅವರಿಗೂ ಸ್ವರ್ಗವು ಉಂಟೆಂದು ಹೇಳಿದೆ. ದೈತ್ಯರಾದರೂ ತಪಸ್ಸಿನಿಂದ ದೇವತೆಗಳಾಗಬಹುದು ಎಂಬುದನ್ನು ಸೂಕ್ತ ದೃಷ್ಟಾಂತದಿಂದ ವಿವರಿಸಿರುತ್ತದೆ.

ವೈಷ್ಣವನಾದವನು ವಂಶದಲ್ಲಿ ಒಬ್ಬನಾದರೂ ಇದ್ದರೆ ಅದರಿಂದ ಕುಲಕ್ಕೆ ಬರುವ ಉಪಕಾರವನ್ನು ಹೇಳಿದೆ. ದೇವತೆಗಳೂ ದಾನವರೂ ಮನುಷ್ಯ ಲೋಕದಲ್ಲಿ ಹುಟ್ಟುತ್ತಾರೆ. ಆಗ ಅವರ ಆಚಾರದಿಂದ ಇಂತಹವರಾಗಿದ್ದ ರೆಂದು ನಡತೆಯಿಂದ ನಿರ್ದೇಶಿಸಬಹುದೆಂದು ಸೂಚಿಸುತ್ತದೆ.

ಸೂರ್ಯನ ಉತ್ಪತ್ತಿ, ಅವನ ಪ್ರತಾಪ, ಅದರ ಕೊರತೆಗಳನ್ನೂ, ಅವನಿಂದ ಆಗುವ ಉಪಕಾರವನ್ನೂ ಹೇಳಿ, ಅವನ ತೇಜಸ್ಸಿನಿಂದ ವಿಷ್ಣುವಿನ ಚಕ್ರವೇ ಮುಂತಾದುವು ಉಂಟಾದುವೆಂದು ಸ್ಪಷ್ಟಪಡಿಸಲ್ಪಟ್ಟಿದೆ.

ನವಗ್ರಹಗಳಪೂಜೆ, ಸ್ತೋತ್ರ, ಮಂತ್ರಗಳನ್ನು ವಿವರಿಸುತ್ತ ಚಂಡಿಯ ಪೂಜೆಯ ಫಲವನ್ನೂ ಅದರ ಪೂಜಾಕ್ರಮವನ್ನೂ ಹೇಳಿ ಆಕೆಯ ತೃಪ್ತಿಗೋಸ್ಕರ ಕೊಡತಕ್ಕ ದಾನವನ್ನೂ, ಸ್ತೋತ್ರವನ್ನೂ ಹೇಳಿದೆ.

ಕೃತ, ತ್ರೇತಾ, ದ್ವಾಪರ, ಕಲಿಯುಗಗಳಲ್ಲಿ ಕ್ರಮವಾಗಿ ತಪಸ್ಸು, ಜ್ಞಾನ, ಯಜ್ಞ, ದಾನ ಇವುಗಳಿಗೆ ಪ್ರಾಶಸ್ತ್ಯವನ್ನು ಕೊಟ್ಟು, ದಾನದಾನಕ್ಕೆಲ್ಲಾ ಅಭಯ ದಾನವೇ ಉತ್ತಮವೆಂದು ಹೇಳಿ ವಿಶದೀಕರಿಸಲ್ಪಟ್ಟಿದೆ.

ಅನಂತರ ಪದ್ಮಪುರಾಣದ ಸೃಷ್ಟಿಖಂಡದ ಫಲವೂ, ಓದುವುದರಿಂದಲೂ, ಓದಿಸುವುದರಿಂದಲೂ, ಕೇಳುವುದರಿಂದಲೂ, ಬರುವ ಪುಣ್ಯವೂ ವಿವೃತವಾಗಿದೆ.

ಪಂಡಿತರುಗಳಿಗೆ ಆಶ್ರಯವನ್ನು ಕೊಟ್ಟು ಅವರನ್ನು ಪ್ರೋತ್ಸಾಹಿಸುತ್ತ ಅವರುಗಳಿಂದ ಅನೇಕ ಗ್ರಂಥಗಳು ಕನ್ನಡದಲ್ಲಿ ಹೊರಹೊಮ್ಮುವಂತೆ ಮಾಡಿ ತನ್ಮೂಲಕ ಜನಸಾಮಾನ್ಯರಿಗೂ ಜ್ಞಾನಾಮೃತಪಾನವು ಸುಲಭದಲ್ಲಿ ದೊರಕುವಂತೆ ಲೋಕೋಪಕಾರಮಾಡುತ್ತಲಿರುವ ನಮ್ಮನ್ನಾಳುವ ಮಹಾಸ್ವಾಮಿಯವರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಎಸ್. ಐ.** ಮಹಾಪ್ರಭುಗಳವರಿಗೆ ಭಗವಂತನು ಆಯುರಾರೋಗ್ಯಗಳನ್ನೂ ಸತ್ಸಂತಾನವನ್ನೂ ಕೊಟ್ಟು ಕಾಪಾಡಲೆಂದು ಅನನ್ಯಮನಸ್ಕನಾಗಿ ಪ್ರಾರ್ಥಿಸುತ್ತೇನೆ.

ಮೈಸೂರು,
4—7—1945

ಅನುವಾದಕ,
**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರಿ.**



# ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಐದನೆಯ ಭಾಗದ

## ವಿಷಯಾನುಕ್ರಮಣಿಕೆ.



ಪುಟಸಂಖ್ಯೆ

ಪುಟಸಂಖ್ಯೆ

ಪುಟಸಂಖ್ಯೆ

॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಸಪ್ತಚತ್ವಾರಿಂಶೋಽಧ್ಯಾಯಃ ॥



॥ ಭೀಷ್ಮ ಉವಾಚ ॥

ಯತ್ಪುಣ್ಯಮಧಿಕಂ ಲೋಕೇ ಸರ್ವದಾ ಸರ್ವಸಮ್ಮತಂ ।
ತದ್ವದಸ್ವೇಚ್ಛಯಾ ವಿಪ್ರ ಯತ್ಕೃತಂ ಪೂರ್ವಪೂರ್ವಕೈಃ ॥ ೧ ॥

॥ ಪುಲಸ್ತ್ಯ ಉವಾಚ ॥

ಏಕದಾ ತು ದ್ವಿಜಾಃ ಸರ್ವೇ ವ್ಯಾಸ ಶಿಷ್ಯಾಃ ಸಹಾದರಾಃ ।
ವ್ಯಾಸಂ ಪ್ರಣಮ್ಯ ಪಪ್ರಚ್ಛುರ್ಧರ್ಮಂ ಮಾಂ ಚ ಯಥಾ ಭವಾನ್ ॥ ೨ ॥

॥ ದ್ವಿಜಾ ಊಚುಃ ॥

ಪುಣ್ಯಾತ್ಪುಣ್ಯತಮಂ ಲೋಕೇ ಸರ್ವಧರ್ಮೇಷು ಚೋತ್ತಮಂ ।
ಕಿಂ ಕೃತ್ವಾ ಮಾನವಾಃ ಸ್ವರ್ಗಂ ಭಜಂತೇ ಚಾಕ್ಷಯಂ ಪದಂ ॥ ೩ ॥

---

## ನಾಲ್ವತ್ತೇಳನೆಯ ಅಧ್ಯಾಯವು

೧. ಭೀಷ್ಮನು ಹೇಳಿದನು- ಎಲೈ ಪುಲಸ್ತ್ಯನೇ ! ಲೋಕದಲ್ಲಿ ಸರ್ವರಿಗೂ ಸಮ್ಮತವಾದ ಯಾವ ಪುಣ್ಯವು ಅಧಿಕವಾದುದು ? ಯಾವುದನ್ನು ಪೂರ್ವಿಕರೆಲ್ಲರೂ ಆಚರಿಸುತ್ತ ಬಂದಿದ್ದಾರೆ ? ಎಂಬುದನ್ನು ಸಂತೋಷದಿಂದ ಹೇಳು.

೨. ಪುಲಸ್ತ್ಯನು ಹೇಳಿದನು- ಒಂದು ಸಾರಿ ವ್ಯಾಸ ಶಿಷ್ಯರೆಲ್ಲರೂ ಆಸೆಯಿಂದ ವ್ಯಾಸನನ್ನು ಕುರಿತು ನೀನು ನನ್ನನ್ನು ಕೇಳಿದಂತೆ ಧರ್ಮವನ್ನು ಕುರಿತು ಕೇಳಿದರು

೩. ಬ್ರಾಹ್ಮಣರು ಹೇಳಿದರು-ಎಲೈ ವ್ಯಾಸರೇ ! ಲೋಕದಲ್ಲಿ ಅತಿ ಪುಣ್ಯವೂ ಧರ್ಮಗಳಲ್ಲಿ ಉತ್ತಮವಾದುದೂ ಯಾವುದು ? ಯಾವ ಧರ್ಮವನ್ನು ಆಶ್ರಯಿಸಿದರೆ ಮನುಷ್ಯರು ಶಾಶ್ವತವಾದ ಪದವನ್ನು ಹೊಂದುತ್ತಾರೆ.

ಲಘ್ವಂ ಚಾಕಷ್ಟಕಂ ಶುದ್ಧಂ ವರ್ಣಾನಾಂ ಮರ್ತ್ಯವಾಸಿನಾಂ ।
ಗುರೂಣಾಂ ಚ ಲಘೂಣಾಂ ಚ ಸಾಧ್ಯಮೇವ ಕ್ರತುಂ ವದ ॥

ಯದ್ಯತ್ಕೃತ್ವಾ ಚ ದೇವಾನಾಂ ಪೂಜ್ಯೋ ನಾಕೇ ಭವೇನ್ನರಃ ।
ತತ್ತದ್ವದ ಚ ನೋ ಬ್ರಹ್ಮನ್ಪ್ರಸಾದೀ ಭವ ಧರ್ಮತಃ ॥ ೫ ॥

॥ ವ್ಯಾಸ ಉವಾಚ ॥

ಪಂಚಾಖ್ಯಾನಂ ಪ್ರವಕ್ಷ್ಯಾಮಿ ಶೃಣುಧ್ವಂ ತತ್ರ ಪೂರ್ವತಃ ।
ಪಂಚಾನಾಮೇಕಕಂ ಕೃತ್ವಾ ವಿಂದ್ಯಾನ್ಮೋಕ್ಷಂ ದಿವಂ ಯಶಃ ॥ ೬ ॥

ಪಿತ್ರೋರರ್ಚಾಽಥ ಪತ್ಯುಶ್ಚ ಸಮಃ ಸರ್ವಜನೇಷು ಚ ।
ಮಿತ್ರಾದ್ರೋಹೋ ವಿಷ್ಣುಭಕ್ತಿರೇತೇ ಪಂಚ ಮಹಾಮಖಾಃ ॥ ೭ ॥

ಪ್ರಾಕ್ಪಿತ್ರೋರರ್ಚಯಾ ವಿಪ್ರಾ ಯದ್ಧರ್ಮಂ ಸಾಧಯೇನ್ನರಃ ।
ನ ತತ್ಕ್ರತುಶತೈರೇವ ತೀರ್ಥಯಾತ್ರಾದಿಭಿರ್ಭುವಿ ॥ ೮ ॥

---

೪. ಕಷ್ಟವಿಲ್ಲದೆ ನಾವು ಮಾಡುವುದಕ್ಕೆ ಸಾಧ್ಯವಾಗುವ ಶುದ್ಧವಾದ ಈ ಲೋಕದಲ್ಲಿರುವ ಬಡವರಿಗೂ ಬಲ್ಲಿದರಿಗೂ ಅನುಕೂಲವಾಗುವಂತಹ ಪುಣ್ಯ ಕೆಲಸವನ್ನು ಹೇಳು.

೫ ಯಾವ ಯಾವ ಕೆಲಸವನ್ನು ಮಾಡಿದರೆ ಸ್ವರ್ಗದಲ್ಲಿ ದೇವತೆಗಳು ಗೌರವಿಸುತ್ತಾರೆಯೋ ಅವೆಲ್ಲವನ್ನೂ ದಯವಿಟ್ಟು ಹೇಳು.

೬. ವ್ಯಾಸನು ಹೇಳಿದನು– ಪಂಚ (ಐದು) ವ್ರತಗಳನ್ನು ಕ್ರಮವಾಗಿ ಹೇಳುತ್ತೇನೆ. ಕೇಳು. ಇವುಗಳಲ್ಲಿ ಒಂದನ್ನು ಮಾಡಿದರೂ ಸ್ವರ್ಗ, ಮೋಕ್ಷ, ಯಶಸ್ಸುಗಳು ಬರುತ್ತವೆ.

೭. ಪಿತೃಪೂಜೆ, ಯಜಮಾನನ ಪೂಜೆ, ಸರ್ವರಲ್ಲಿಯೂ ಒಂದೇ ರೀತಿ ಇರುವಿಕೆ, ಮಿತ್ರರಿಗೆ ದ್ರೋಹವೆಣಿಸದಿರುವುದು, ವಿಷ್ಣುಭಕ್ತಿ ಈ ಐದೂ ಐದು ಮಹಾಯಜ್ಞಗಳು.

೮. ಎಲೈ ಬ್ರಾಹ್ಮಣರಿರಾ ! ಪಿತೃಗಳ ಶುಶ್ರೂಷೆಯಿಂದ ಮನುಷ್ಯನು ಯಾವ ಧರ್ಮವನ್ನು ಹೊಂದುತ್ತಾನೆಯೋ ಅದನ್ನು ನೂರು ಯಾಗಗಳನ್ನು ಮಾಡುವುದರಿಂದಾಗಲೀ, ತೀರ್ಥಗಳಿಂದಲಾಗಲೀ ಹೊಂದಲಾರನು.

ಪಿತಾ ಧರ್ಮಃ ಪಿತಾ ಸ್ವರ್ಗಃ ಪಿತಾ ಹಿ ಪರಮಂ ತಪಃ ।
ಪಿತರಿ ಪ್ರೀತಿಮಾಪನ್ನೇ ಪ್ರೀಯಂತೇ ಸರ್ವದೇವತಾಃ ॥ ೯ ॥

ಪಿತರೋ ಯಸ್ಯ ತೃಪ್ಯಂತಿ ಸೇವಯಾ ಚ ಗುಣೇನ ಚ ।
ತಸ್ಯ ಭಾಗೀರಥೀಸ್ನಾನಮಹನ್ಯಹನಿ ವರ್ತತೇ ॥ ೧೦ ॥

ಸರ್ವತೀರ್ಥಮಯೀ ಮಾತಾ ಸರ್ವದೇವಮಯಃ ಪಿತಾ ।
ಮಾತರಂ ಪಿತರಂ ತಸ್ಮಾತ್ಸರ್ವಯತ್ನೇನ ಪೂಜಯೇತ್ ॥ ೧೧ ॥

ಮಾತರಂ ಪಿತರಂ ಚೈವ ಯಸ್ತು ಕುರ್ಯಾತ್ಪ್ರದಕ್ಷಿಣಂ ।
ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪಾ ವಸುಂಧರಾ ॥ ೧೨ ॥

ಜಾನುನೀ ಚ ಕರೌ ಯಸ್ಯ ಪಿತ್ರೋಃ ಪ್ರಣಮತಃ ಶಿರಃ ।
ನಿಪತಂತಿ ಪೃಥಿವ್ಯಾಂ ಚ ಸೋಽಕ್ಷಯಂ ಲಭತೇ ದಿವಂ ॥ ೧೩ ॥

---

೯ ಪಿತೃಗಳೇ ಸ್ವರ್ಗವು, ಪಿತೃಗಳೇ ಧರ್ಮವು, ಪಿತೃಗಳೇ ಉತ್ತಮವಾದ ತಪಸ್ಸು, ಪಿತೃಗಳು ಸಂತೋಷಪಟ್ಟರೆ ಎಲ್ಲಾ ದೇವತೆಗಳೂ ಸಂತೋಷಪಡುತ್ತಾರೆ.

೧೦. ಯಾವನ ಸೇವೆಯಿಂದಲೂ, ಗುಣದಿಂದಲೂ, ತಾಯಿತಂದೆಗಳು ತೃಪ್ತಿ ಹೊಂದುತ್ತಾರೆಯೋ ಅವನಿಗೆ ನಿತ್ಯವೂ ಗಂಗಾನದಿ ಸ್ನಾನವನ್ನು ಮಾಡಿದ ಪುಣ್ಯವು ಬರುತ್ತದೆ.

೧೧. ತಾಯಿಯು ಸರ್ವ ತೀರ್ಥ ಸ್ವರೂಪಳು. ತಂದೆಯು ಸರ್ವ ದೇವತಾ ಸ್ವರೂಪನು. ಆದ್ದರಿಂದ ತಾಯಿತಂದೆಗಳನ್ನು ಪ್ರಯತ್ನಪಟ್ಟು ಪೂಜಿಸಬೇಕು.

೧೨. ತಾಯಿತಂದೆಗಳನ್ನು ಪ್ರದಕ್ಷಿಣೆ ಮಾಡಿದರೆ ಅವನು ಸಪ್ತ ದ್ವೀಪಗಳಿಂದ ಕೂಡಿದ ಭೂಮಿಯನ್ನು ಪ್ರದಕ್ಷಿಣೆ ಮಾಡಿದಂತಾಯಿತು.

೧೩. ಮಂಡಿಗಳೂ, ತಲೆಯೂ, ಕೈಗಳೂ, ತಾಯಿತಂದೆಗಳನ್ನು ನಮಸ್ಕರಿಸುವಾಗ ಯಾವನಿಗೆ ನೆಲದಲ್ಲಿ ಬೀಳುತ್ತವೆಯೋ ಅವನು ಶಾಶ್ವತವಾದ ಸ್ವರ್ಗವನ್ನು ಹೊಂದುತ್ತಾನೆ.

ತಯೋಶ್ಚರಣಯೋರ್ಯಾವದ್ರಜಶ್ಛಿಹ್ನಂ ತು ಮಸ್ತಕೇ ।
ಪ್ರತೀಕೇ ಚ ವಿಲಗ್ನಾನಿ ತಾವತ್ಪೂತಃ ಸುತಸ್ತಯೋಃ ॥ ೧೪ ॥

ಪಾದಾರವಿಂದಾಚ್ಚ ಜಲಂ ಯಃ ಪಿತ್ರೋಃ ಪಿಬತೇ ಸುತಃ ।
ತಸ್ಯ ಪಾಪಂ ಕ್ಷಯಂ ಯಾತಿ ಜನ್ಮಕೋಟಿಶತಾರ್ಜಿತಂ ॥ ೧೫ ॥

ಧನ್ಯೋಽಸೌ ಮಾನವೋ ಲೋಕೇ ಪೂತೋಽಸೌ ಸರ್ವಕಲ್ಮಷಾತ್ ।
ವಿನಾಯಕತ್ವಮಾಪ್ನೋತಿ ಜನ್ಮನೈಕೇನ ಮಾನವಃ ॥ ೧೬ ॥

ಪಿತರೌ ಲಂಘಯೇದ್ಯಸ್ತು ವಚೋಭಿಃ ಪುರುಷಾಧಮಃ ।
ನಿರಯೇ ಚ ವಸೇತ್ತಾವದ್ಯಾವದಾಭೂತಸಂಪ್ಲವಂ ॥ ೧೭ ॥

ಪಿತ್ರೋರನರ್ಚನಂ ಕೃತ್ವಾ ಭುಂಕ್ತೇ ಯಸ್ತು ಸುತಾಧಮಃ ।
ಕೃಮಿಕೂಪೇಽಥ ನರಕೇ ಕಲ್ಪಾಂತಮಪಿ ತಿಷ್ಠತಿ ॥ ೧೮ ॥

---

೧೪. ಆ ತಾಯಿತಂದೆಗಳ ಪಾದಧೂಳಿಯು ಎಷ್ಟೆಷ್ಟು ತಲೆಯಲ್ಲಿಯೂ, ಮೈಯಲ್ಲಿಯೂ ಅಂಟಿಕೊಳ್ಳುತ್ತವೆಯೋ ಮಗನು ಅಷ್ಟು ಶುದ್ಧನಾಗುತ್ತಾನೆ.

೧೫. ಪಾದಗಳ ನೀರನ್ನು ಯಾವ ಮಗನು ಕುಡಿಯುತ್ತಾನೆಯೋ ಅವನ ಕೋಟ್ಯಂತರ ಜನ್ಮಗಳಲ್ಲಿ ಮಾಡಿದ ಪಾಪವು ನಾಶವಾಗುತ್ತದೆ,

೧೬. ಆ ಮನುಷ್ಯನೇ ಧನ್ಯನು. ಅವನು ಪಾಪಗಳನ್ನೆಲ್ಲಾ ಕಳೆದುಕೊಂಡು ಪವಿತ್ರನಾಗುತ್ತಾನೆ. ಒಂದು ಜನ್ಮದಿಂದಲೇ ಎಲ್ಲಾ ಗಣಗಳಿಗೂ ಅಧಿಪತಿಯಾಗುತ್ತಾನೆ.

೧೭. ಯಾವ ಅಯೋಗ್ಯನು ತಾಯಿತಂದೆಗಳನ್ನು ಮೀರುತ್ತಾನೆಯೋ ಆ ನೀಚನು ಪ್ರಳಯಪರ್ಯಂತದವರೆಗೂ ನರಕದಲ್ಲಿ ಬಿದ್ದಿರುತ್ತಾನೆ.

೧೮. ಪಿತೃಗಳಿಗೆ ಪೂಜೆಮಾಡದೆ ಯಾವನು ಅನ್ನ ತಿನ್ನುತ್ತಾನೆಯೋ ಆ ಅಯೋಗ್ಯನು ಹುಳಿತಿರುವ ನರಕದಲ್ಲಿ ಕಲ್ಪಕಾಲವಿರುತ್ತಾನೆ.

**ರೋಗಿಣಂ ಚಾಪಿ ವೃದ್ಧಂ ಚ ಪಿತರಂ ವೃತ್ತಿಕರ್ಶಿತಂ ।**
**ವಿಕಲಂ ನೇತ್ರಕರ್ಣಾಭ್ಯಾಂ ತ್ಯಕ್ತ್ವಾ ಗಚ್ಛೇಚ್ಚ ರೌರವಂ ॥ ೧೯ ॥**

**ಅಂತ್ಯಜಾತಿಷು ಮ್ಲೇಚ್ಛೇಷು ಚಾಂಡಾಲೇಷ್ವಪಿ ಜಾಯತೇ ।**
**ಪಿತ್ರೋರರಪೋಷಣಂ ಕೃತ್ವಾ ಸರ್ವಪುಣ್ಯಕ್ಷಯೋ ಭವೇತ್ ॥ ೨೦ ॥**

**ನಾರಾಧ್ಯ ಪಿತರೌ ಪುತ್ರಸ್ತೀರ್ಥದೇವಾನ್ ಭಜನ್ನಪಿ ।**
**ತಯೋರ್ನ ಫಲಮಾಪ್ನೋತಿ ಕೀಟವದ್ಭ್ರಮತೇ ಮಹೀಂ ॥ ೨೧ ॥**

**ಕಥಯಾಮಿ ಪುರಾವೃತ್ತಂ ವಿಪ್ರಾಃ ಶೃಣುತ ಯತ್ನತಃ ।**
**ಯಚ್ಛ್ರುತ್ವಾ ನ ಪುನರ್ಮೋಹಂ ಪ್ರಯಾಸ್ಯಥ ಪುನರ್ಭುವಿ ॥ ೨೨ ॥**

**ಪುರಾಸೀಚ್ಚ ದ್ವಿಜಃ ಕಶ್ಚಿನ್ನರೋತ್ತಮ ಇತಿ ಸ್ಮೃತಃ ।**
**ಸ್ವಪಿತರಾವನಾದೃತ್ಯ ಗತೋಽಸೌ ತೀರ್ಥಸೇವಯಾ ॥ ೨೩ ॥**

---

೧೯. ರೋಗಬಂದ, ಮುದುಕನಾದ, ಹೊಟ್ಟೆಗೆ ಸಂಪಾದಿಸಿಕೊಳ್ಳಲಾರದ, ಕಿವಿಕೇಳದ, ಕಣ್ಣುಕಾಣದ, ತಾಯಿತಂದೆಗಳನ್ನು ಬಿಟ್ಟುಬಿಟ್ಟರೆ ಅವನು ರೌರವ ನರಕವನ್ನು ಹೊಂದುತ್ತಾನೆ.

೨೦. ತಾಯಿತಂದೆಗಳನ್ನು ಕಾಪಾಡದಿದ್ದರೆ ಅವನು ಪುಣ್ಯಗಳನ್ನು ಕಳೆದುಕೊಂಡು ಅಂತ್ಯ ಜಾತಿಯಾದ ಮ್ಲೇಚ್ಛ ಚಾಂಡಾಲರಲ್ಲಿ ಹುಟ್ಟುತ್ತಾನೆ.

೨೧. ತಾಯಿತಂದೆಗಳನ್ನು ಪೂಜಿಸದೆ ಮಗನು ತೀರ್ಥ ದೇವರುಗಳನ್ನು ಸೇವಿಸಿದರೂ ಅವುಗಳ ಫಲವನ್ನು ಅವನು ಹೊಂದದೆ ಹುಳದಂತೆ ಭೂಮಿಯನ್ನು ಸುತ್ತುತ್ತಾನೆ.

೨೨. ಬ್ರಾಹ್ಮಣರಿರಾ ! ಪೂರ್ವದ ಕಥೆಯೊಂದನ್ನು ಹೇಳುತ್ತೇನೆ. ಕೇಳಿರಿ. ಅದನ್ನು ಕೇಳಿದರೆ ನೀವು ಅಜ್ಞಾನಿಗಳಾಗುವುದಿಲ್ಲ.

೨೩. ಪೂರ್ವದಲ್ಲಿ ನರೋತ್ತಮನೆಂಬೊಬ್ಬ ಬ್ರಾಹ್ಮಣನಿದ್ದನು. ಆತನು ತನ್ನ ತಾಯಿತಂದೆಗಳನ್ನು ಉದಾಸೀನಮಾಡಿ ತೀರ್ಥಯಾತ್ರೆಗೆ ಹೊರಟನು.

ತತಃ ಸರ್ವಾಣಿ ತೀರ್ಥಾನಿ ಗಚ್ಛತೋ ಬ್ರಾಹ್ಮಣಸ್ಯ ಚ ।
ಅಲಂ ತತ್ಸ್ನಾನಚೇಲಾನಿ ಪ್ರಶುಷ್ಯಂತಿ ದಿನೇ ದಿನೇ ॥ ೨೪ ॥

ಅಹಂಕಾರೋಽವಿಶತ್ತಸ್ಯ ಮಾನಸೇ ಬ್ರಾಹ್ಮಣಸ್ಯ ಚ ।
ಮತ್ಸಮೋ ನಾಸ್ತಿ ವೈ ಕಶ್ಚಿತ್ಪುಣ್ಯಕರ್ಮಾ ಮಹಾಯಶಾಃ ॥ ೨೫ ॥

ಇತ್ಯುಕ್ತೇ ಚಾನನೇ ತಸ್ಯ ಅಹದಚ್ಚ ಬಕಸ್ತದಾ ।
ಕ್ರೋಧಾಚ್ಚೈವೇರಿತಸ್ತಸ್ಯ ಸ ಶಶಾಪ ದ್ವಿಜೋ ಬಕಂ ॥ ೨೬ ॥

ಪಪಾತ ಚ ಬಕಃ ಪೃಥ್ವ್ಯಾಂ ಸ ಭಸ್ಮೀಭೂತವಿಗ್ರಹಃ ।
ಭೋದ್ವಿಜೇಂದ್ರಾ ಮಹಾಮೋಹಃ ಪ್ರಾವಿಶತ್ತ್ವಂತಕರ್ಮಣಿ ॥ ೨೭ ॥

ತತಃ ಪಾಪಾಚ್ಚ ವಿಪ್ರಸ್ಯ ಚೇಲಂ ಖಂ ಚ ನ ಗಚ್ಛತಿ ।
ವಿಷಾದಮಗಮತ್ಸದ್ಯಸ್ತತಃ ಖೇ ತಮುವಾಚ ಹ ॥ ೨೮ ॥

---

೨೪. ಹೀಗೆ ಎಲ್ಲಾ ತೀರ್ಥಗಳನ್ನೂ ಸೇವಿಸುತ್ತಿರಲು ಅವನ ಸ್ನಾನದ ಬಟ್ಟೆಗಳು ಒಣಗದ ದಿನವೇ ಇಲ್ಲ,

೨೫. ಆ ಬ್ರಾಹ್ಮಣನ ಮನಸ್ಸಿನಲ್ಲಿ ನನ್ನ ಸಮನಾದ ಪುಣ್ಯವಂತನೂ ಯಶಸ್ವಿಯೂ ಇಲ್ಲವೇ ಇಲ್ಲವೆಂಬ ಅಹಂಕಾರವು ಬಂದಿತು.

೨೬. ಹೀಗೆ ಹೇಳುತ್ತ ಬರುತ್ತಿರಲು ಒಂದು ಬಕವು ಅವನ ಮುಖದ ಮೇಲೆ ಹೇತುಬಿಟ್ಟಿತು. ಆಗ ಕೋಪದಿಂದ ಆ ಬ್ರಾಹ್ಮಣನು ಅದನ್ನು ಶಪಿಸಿದನು.

೨೭. ಆಗ ಭಸ್ಮವಾಗಿ ಆ ಬಕವು ಕೆಳಗೆ ಬಿದ್ದುಹೋಯಿತು. ಆಗ ಆ ಬಕದ ನಾಶಕ್ಕೋಸ್ಕರ ಮೋಹವು (ಅಜ್ಞಾನವು) ಅವನನ್ನು ಹೊಂದಿತು.

೨೮. ಆಗ ಆ ಪಾಪದಿಂದ ಅವನ ಬಟ್ಟೆಯು ಆಕಾಶದಲ್ಲಿ ಹಾರಾಡಲು ಬರಲಿಲ್ಲ. ಆಗ ಆತನು ದುಃಖಿಯಾಗಲು ಆಕಾಶವಾಣಿಯು ಇಂತೆಂದಿತು.

॥ ದೇವಗುವಾಚ ॥

ಗಚ್ಛ ಬಾಡವ ಚಾಂಡಾಲಂ ಮೂಕಂ ಪರಮಧಾರ್ಮಿಕಂ ।
ತತ್ರ ಧರ್ಮಂ ಚ ಜಾನೀಷೇ ಕ್ಷೇಮಂ ತೇ ತದ್ವಚೋ ಭವೇತ್ ॥ ೨೯ ॥

॥ ವ್ಯಾಸ ಉವಾಚ ॥

ಖಾಚ್ಚ ತದ್ವಚನಂ ಶ್ರುತ್ವಾ ಗತೋಽಸೌ ಮೂಕಮಂದಿರಂ ।
ಶುಶ್ರೂಷಂತಂ ಚ ಪಿತರೌ ಸರ್ವಾರಂಭಾದ್ದದರ್ಶ ಸಃ ॥ ೩೦ ॥

ದದತಂ ಶೀತಕಾಲೇ ಚ ಸಮ್ಯಗುಷ್ಣಂ ಜಲಂ ತಯೋಃ ।
ತೈಲತಾಪನತಾಂಬೂಲಂ ತಥಾ ತೂಲವತೀಂ ಪಟೀಂ ॥ ೩೧ ॥

ನಿತ್ಯಾಶನಂ ಚ ಮಿಷ್ಟಾನ್ನಂ ದುಗ್ಧಖಂಡಂ ತಥೈವ ಚ ।
ದಾಪಯಂತಂ ವಸಂತೇ ಚ ಮಧುಮಾಲಾಂ ಸುಗಂಧಿಕಾಂ ॥ ೩೨ ॥

ಅನ್ಯಾನಿ ಯಾನಿ ಭೋಗ್ಯಾನಿ ಕೃತ್ಯಾನಿ ವಿವಿಧಾನಿ ಚ ।
ಉಷ್ಣೇ ಚ ವೀಜಯೇತ್ಸೋಽಪಿ ನಿತ್ಯಂ ಚ ಪಿತರಾವಪಿ ॥ ೩೩ ॥

---

೨೯. ದೇವತೆಗಳ ಮಾತು ಇಂತೆಂದಿತು– ಎಲೈ ಬ್ರಾಹ್ಮಣನೇ ! ಧರ್ಮಿಷ್ಠನಾದ ಮೂಕನೆಂಬ ಚಾಂಡಾಲನಲ್ಲಿಗೆ ಹೋಗು. ಅವನು ಧರ್ಮವನ್ನು ನಿನಗೆ ಹೇಳುತ್ತಾನೆ, ಆತನ ಮಾತು ನಿನಗೆ ಕ್ಷೇಮವನ್ನುಂಟುಮಾಡುತ್ತದೆ.

೩೦. ವ್ಯಾಸನು ಹೇಳಿದನು– ಆಕಾಶವಾಣಿಯನ್ನು ಕೇಳಿ ಅವನು ಮೂಕನ ಮನೆಗೆ ಹೋದನು. ಅಲ್ಲಿ ಆ ಮೂಕನು ತನ್ನ ಸರ್ವ ಪ್ರಯತ್ನದಿಂದಲೂ ತಾಯಿ, ತಂದೆಗಳನ್ನು ಸೇವಿಸುತ್ತಿರುವುದನ್ನು ಕಂಡನು.

೩೧-೩೨. ಅವನು ಅವರಿಗೆ ಛಳಿಗಾಲದಲ್ಲಿ ಬಿಸಿ ನೀರನ್ನು ಕೊಡುತ್ತಿದ್ದನು. ಎಣ್ಣೆಯನ್ನು ಅದ್ದಿ ಕಾಯಿಸಿದ ತಾಂಬೂಲವನ್ನೂ, ಬೆಚ್ಚಗಿರುವ ಉಣ್ಣೆಯ ಬಟ್ಟೆಗಳನ್ನೂ, ಕೊಡುತ್ತಿದ್ದನು, ನಿತ್ಯವೂ ಊಟಕ್ಕೆ ಉತ್ತಮವಾದ ಊಟವನ್ನು ಕೊಡುತ್ತಿದ್ದನು. ಹಾಲುಖೋವ ಮುಂತಾದುವನ್ನು ಕೊಡುತ್ತಿದ್ದನು. ವಸಂತಕಾಲದಲ್ಲಿ ಒಳ್ಳೆಯ ವಾಸನೆಯುಳ್ಳ ಹೂ ಮಾಲೆಗಳನ್ನು ಕೊಡುತ್ತಿದ್ದನು.

೩೩. ಇನ್ನೂ ಅನುಭವಿಸುವ ಪದಾರ್ಥಗಳೇನೇನಿರುವುವೋ ಅವೆಲ್ಲವನ್ನೂ ಕೊಡುತ್ತಿದ್ದನು. ಸೆಖೆಯಾದರೆ ಬೀಸುವನು.

ತತಸ್ತಯೋಃ ಪ್ರಚರ್ಯಾಂ ಚ ಕೃತ್ವಾ ಭುಂಕ್ತೇऽಥ ಸರ್ವದಾ ।
ಶ್ರಮಸ್ಯ ವಾರಣಂ ಕುರ್ಯಾತ್ಸಂತಾಪಸ್ಯ ತಥೈವ ಚ ॥ ೩೪ ॥

ಏಭಿಃ ಪುಣ್ಯೈಃ ಸ್ಥಿತೋ ವಿಷ್ಣುಸ್ತಸ್ಯ ಗೇಹೋದರೇ ಚಿರಂ ।
ಅಂತರಿಕ್ಷೇ ಚ ಕ್ರೀಡಂತಮಾಧಾರಸ್ತಂಭವರ್ಜಿತೇ ॥ ೩೫ ॥

ತಸ್ಯಾಪಿ ಭವನೇ ನಿತ್ಯಂ ಸ್ಥಿತಂ ತ್ರಿಭುವನೇಶ್ವರಂ ।
ವಿಪ್ರರೂಪಧರಂ ಕಾಂತಂ ನಾನ್ಯೈರ್ಭೂತಂ ಚ ಸತ್ಪರಂ ॥ ೩೬ ॥

ತೇಜೋಮಯಂ ಮಹಾಸತ್ವಂ ಶೋಭಯಂತಂ ಚ ಮಂದಿರಂ ।
ದೃಷ್ಟ್ವಾ ವಿಸ್ಮಯಮಾಪನ್ನೋ ವಿಪ್ರಃ ಪ್ರೋವಾಚ ಮೂಕಕಂ ॥ ೩೭ ॥

॥ ವಿಪ್ರ ಉವಾಚ ॥

ಆಸನ್ನಂ ಚ ಮಮಾಗಚ್ಛ ತ್ವಯಿ ಪೃಚ್ಛಾಮಿ ಶಾಶ್ವತಂ ।
ಹಿತಂ ಮೇ ಸರ್ವಲೋಕಾನಾಂ ತತ್ವತೋ ವಕ್ತುಮರ್ಹಸಿ ॥ ೩೮ ॥

---

೩೪. ಹೀಗೆ ಅವರ ಶುಶ್ರೂಷೆಯನ್ನು ಮಾಡಿದನಂತರ ಊಟ ಮಾಡುತ್ತಿದ್ದನು. ಶ್ರಮ ತಾಪಗಳನ್ನು ಇದೇ ರೀತಿ ಪರಿಹರಿಸುತ್ತಿದ್ದನು.

೩೫. ಈ ಪುಣ್ಯಗಳಿಂದ ವಿಷ್ಣುವು ಅವನ ಮನೆಯಲ್ಲಿ ಸ್ಥಿರವಾಗಿದ್ದುಬಿಟ್ಟನು ಅವನ ಮನೆಯು ಊರುಗಂಬಗಳಿಲ್ಲದೆ ಅಂತರಿಕ್ಷದಲ್ಲಿದ್ದಿತು.

೩೬. ಅವನ ಮನೆಯಲ್ಲಿ ತ್ರಿಭುವನೇಶ್ವರನಾದ ವಿಷ್ಣುವು ಬ್ರಾಹ್ಮಣರೂಪವನ್ನು ಧರಿಸಿಕೊಂಡಿದ್ದನು ಇಂತಹ ಸುಂದರವಾದ ಮನೆಯನ್ನು ಯಾರೂ ಕಟ್ಟಿರಲಿಲ್ಲ.

೩೭. ತೇಜೋರೂಪನಾದ, ಬಲಿಷ್ಠನಾದ, ಆ ಮನೆಯನ್ನೇ ಬೆಳಗುತ್ತಿರುವ ಆ ಬ್ರಾಹ್ಮಣನನ್ನು ನೋಡಿ ಆಶ್ಚರ್ಯಪಟ್ಟು ಮೂಕನನ್ನು ಕರೆದು ಇಂತೆಂದನು.

೩೮. ವಿಪ್ರನು ಹೇಳಿದನು– ನಾನು ನಿನ್ನ ಬಳಿಗೆ ಬಂದಿದ್ದೇನೆ. ಬಾ. ಶಾಶ್ವತವಾದ ಧರ್ಮವನ್ನು ಕೇಳಬೇಕೆಂದಿದ್ದೇನೆ. ನನಗೂ ಸರ್ವಜನರಿಗೂ ಹಿತವಾಗಿರುವುದನ್ನು ನೀನು ಹೇಳಬೇಕು.

॥ ಮೂಕ ಉವಾಚ ॥

ಪಿತ್ರೋರ್ವರ್ಚಾಂ ಕರೋಮ್ಯದ್ಯ ಕಥಮಾಯಾಮಿ ತೇಽಂತಿಕಂ ।
ಅರ್ಚಯಿತ್ವಾ ತು ಪಿತರೌ ಕೃತ್ಯಂ ತೇ ಕರವಾಣಿ ವೈ ॥

ತಿಷ್ಠ ಮೇ ದ್ವಾರದೇಶೇ ಚ ಆತಿಥ್ಯಂ ತೇ ಕರೋಮ್ಯಹಂ ॥ ೩೯ ॥

॥ ವ್ಯಾಸ ಉವಾಚ ॥

ಇತ್ಯುಕ್ತೇ ಚೈವ ಚಾಂಡಾಲೇ ಚುಕೋಪ ಬ್ರಾಹ್ಮಣಸ್ತದಾ ॥ ೪೦ ॥

॥ ವಿಪ್ರ ಉವಾಚ ॥

ಬ್ರಾಹ್ಮಣಂ ಮಾಂ ಪರಿತ್ಯಜ್ಯ ಕಿಂ ತೇ ಕಾರ್ಯಾಧಿಕಂ ತದಾ । ॥ ೪೧ ॥

॥ ಮೂಕ ಉವಾಚ ॥

ಕಿಂ ಕುಪ್ಯಸಿ ವೃಥಾ ವಿಪ್ರ ನ ಬಕೋಽಹಂ ತವಾಧುನಾ ।
ಕೋಪಃ ಸಿಧ್ಯತಿ ತೇ ತಾತ ಬಕೇ ನಾನ್ಯೇ ಕಥಂಚನ ॥ ೪೨ ॥

---

೩೯. ಮೂಕನು ಹೇಳಿದನು- ತಾಯಿತಂದೆಗಳ ಸೇವೆಯನ್ನು ಮಾಡುತ್ತಿದ್ದೇನೆ. ಈಗ ನಿನ್ನ ಬಳಿಗೆ ಹೇಗೆ ಬರಲಿ ? ಇವರ ಸೇವೆಯನ್ನು ಮುಗಿಸಿಕೊಂಡು ನಿನಗೆ ಬೇಕಾದುದನ್ನು ಹೇಳುತ್ತೇನೆ. ನೀನು ನನ್ನ ಮನೆಯ ಬಾಗಿಲಿನಲ್ಲಿರು. ನಿನಗೆ ಅತಿಥಿಸತ್ಕಾರವನ್ನು ಮಾಡುತ್ತೇನೆ.

೪೦. ವ್ಯಾಸನು ಹೇಳಿದನು- ಚಂಡಾಲನು ಹೀಗೆನ್ನುತ್ತಲೂ ಆ ಬ್ರಾಹ್ಮಣನಿಗೆ ಕೋಪಬಂದಿತು

೪೧. ವಿಪ್ರನು ಹೇಳಿದನು–ಬ್ರಾಹ್ಮಣನಾದ ನನ್ನನ್ನು ಬಿಟ್ಟು ನಿನಗೆ ಅದಕ್ಕಿಂತಲೂ ಹೆಚ್ಚಿನ ಕೆಲಸವಾವುದಿರುವುದು ?

೪೨. ಮೂಕನು ಹೇಳಿದನು– ಎಲೈ ಬ್ರಾಹ್ಮಣನೇ ! ಏಕೆ ಸುಮ್ಮನೆ ಕೋಪ ಮಾಡುತ್ತಿದ್ದೀಯೇ ? ನಿನಗೆ ಈಗ ನಾನು ಬಕನಲ್ಲ. ನಿನ್ನ ಕೋಪವು ಬಕನಲ್ಲಿ ಸಿದ್ಧಿಸಿತೇ ಹೊರತು ಮತ್ತಾರಲ್ಲೂ ಸಿದ್ಧಿಸದು.

ಗಗನೇ ಸ್ನಾನಶಾಟೀ ತೇ ನ ಶುಷ್ಯತಿ ನ ತಿಷ್ಠತಿ ।
ವಚನಂ ಖಾತ್ತತಃ ಶ್ರುತ್ವಾ ಮದ್ಗೃಹಂ ಚಾಽಗತೋ ಭವಾನ್ ॥ ೪೩ ॥

ತಿಷ್ಠ ತಿಷ್ಠ ವದಿಷ್ಯಾಮಿ ನೋ ಚೇದ್ಗಚ್ಛ ಪತಿವ್ರತಾಂ ।
ತಾಂ ಚ ದೃಷ್ಟ್ವಾ ದ್ವಿಜಶ್ರೇಷ್ಠ ದಯಿತಂ ತೇ ಫಲಿಷ್ಯತಿ ॥ ೪೪ ॥

॥ ವ್ಯಾಸ ಉವಾಚ ॥

ತತಸ್ತಸ್ಯ ಗೃಹಾದ್ವಿಷ್ಣುರ್ದ್ವಿಜರೂಪಧರೋ ವಿಭುಃ ।
ವಿನಿಸ್ಸೃತ್ಯ ದ್ವಿಜಂ ಪ್ರಾಹ ಗೇಹಂ ತಸ್ಯಾಃ ಪ್ರಯಾಮ್ಯಹಂ ॥ ೪೫ ॥

ಸ ವಿಮೃಶ್ಯ ದ್ವಿಜಶ್ರೇಷ್ಠಸ್ತೇನ ಸಾರ್ಧಂ ಚಚಾಲ ಹ ।
ಗಚ್ಛಂತಂ ತಮುವಾಚೇದಂ ಹರಿಂ ವಿಪ್ರೋಽತಿವಿಸ್ಮಿತಃ ॥ ೪೬ ॥

॥ ವಿಪ್ರ ಉವಾಚ ॥

ಕಿಮರ್ಥಂ ಚ ತ್ವಯಾ ವಿಪ್ರ ಚಾಂಡಾಲಸ್ಯ ಗೃಹೋದರೇ ।
ಸದಾ ಸಂಸ್ಥೀಯತೇ ತಾತ ಯೋಷಾಜನವೃತೇ ಮುದಾ ॥ ೪೭ ॥

---

೪೩. ನಿನ್ನ ಬಟ್ಟೆಯು ಅಂತರಿಕ್ಷದಲ್ಲಿ ಹಾರಾಡುತ್ತ ನಿಲ್ಲುವುದಿಲ್ಲ ಒಣಗುವುದೂ ಇಲ್ಲ. ನೀನು ಆಕಾಶವಾಣಿಯನ್ನು ಕೇಳಿ ನನ್ನ ಮನೆಗೆ ಬಂದಿದ್ದೀಯೆ.

೪೪. ಇರು, ಇರು, ಹೇಳುತ್ತೇನೆ. ಇಲ್ಲದಿದ್ದರೆ ಪತಿವ್ರತೆಯ ಬಳಿಗೆ ಹೋಗು ಆ ಪತಿವ್ರತೆಯನ್ನು ನೋಡಿದರೆ ನಿನ್ನ ಇಷ್ಟಾರ್ಥವು ನೆರವೇರುವುದು.

೪೫. ವ್ಯಾಸನು ಹೇಳಿದನು- ಆಗ ಅವನ ಮನೆಯಿಂದ ಬ್ರಾಹ್ಮಣ ರೂಪಿನ ವಿಷ್ಣುವು ಹೊರಗೆ ಬಂದು ನಾನು ಪತಿವ್ರತೆಯ ಮನೆಗೆ ಹೋಗುತ್ತೇನೆಂದು ಹೇಳಿದನು.

೪೬. ಆಗ ಆ ಬ್ರಾಹ್ಮಣನು ಯೋಚಿಸಿ ಅವನೊಡನೆ ಹೊರಟನು. ಹರಿಯ ಜೊತೆಯಲ್ಲಿ ಹೋಗುತ್ತಾ ಆಶ್ಚರ್ಯಪಟ್ಟು ಹರಿಯನ್ನು ಕುರಿತು ಇಂತೆಂದನು.

೪೭. ವಿಪ್ರನು ಹೇಳಿದನು- ಎಲೈ ಬ್ರಾಹ್ಮಣನೇ ! ಈ ಚಂಡಾಲನ ಮನೆಯಲ್ಲಿ ಅದರಲ್ಲೂ ಹೆಂಗಸರು ಹೆಚ್ಚಾಗಿರುವ ಈ ಮನೆಯಲ್ಲಿ ಯಾವಾಗಲೂ ಸಂತೋಷದಿಂದ ಇದ್ದೀಯಲ್ಲ ? ಕಾರಣವೇನು ?

॥ ಹರಿರುವಾಚ ॥

ಇದಾನೀಂ ಮಾನಸಂ ಶುದ್ಧಂ ನ ಭೂತಂ ಭವತೋ ಧ್ರುವಂ ।
ಪತಿವ್ರತಾದಿಕಂ ದೃಷ್ಟ್ವಾ ಪಶ್ಚಾಜ್ಜ್ಞಾಸ್ಯಸಿ ಮಾಂ ಕಿಲ ॥ ೪೮ ॥

॥ ವಿಪ್ರ ಉವಾಚ ॥

ಪತಿವ್ರತಾ ಚ ಕಾ ತಾತ ಕಿಂ ವಾ ತಸ್ಯಾಶ್ಚಪ್ರತಂ ಮಹತ್ ।
ಯೇನಾಹಂ ತತ್ರ ಗಚ್ಛಾಮಿ ಕಾರಣಂ ವದ ಮೇ ದ್ವಿಜ ॥ ೪೯ ॥

॥ ಹರಿರುವಾಚ ॥

ನದೀನಾಂ ಜಾಹ್ನವೀ ಶ್ರೇಷ್ಠಾ ಪ್ರಮದಾನಾಂ ಪತಿವ್ರತಾ ।
ಮನುಷ್ಯಾಣಾಂ ಪ್ರಜಾಪಾಲೋ ದೇವಾನಾಂ ಚ ಜನಾರ್ದನಃ ॥ ೫೦ ॥

ಪತಿವ್ರತಾ ಚ ಯಾ ನಾರೀ ಪತ್ಯುರ್ನಿತ್ಯಂ ಹಿತೇ ರತಾ ।
ಕುಲದ್ವಯಸ್ಯ ಪುರುಷಾನುದ್ಧರೇತ್ಸಾ ಶತಂ ಶತಂ ॥ ೫೧ ॥

ಸ್ವರ್ಗಂ ಭುನಕ್ತಿ ತಾವಚ್ಚ ಯಾವದಾಭೂತಸಂಪ್ಲವಂ ।
ಸ್ವರ್ಗಾದ್ಭ್ರಷ್ಟೋ ಭವೇದ್ಯಾಸ್ಯಾಃ ಸಾರ್ವಭೌಮೋ ನೃಪಃ ಪತಿಃ ॥ ೫೨ ॥

---

೪೮. ಹರಿಯು ಹೇಳಿದನು- ಅಪ್ಪ ! ನಿನಗೆ ಈಗ ಮನಸ್ಸು ಖಂಡಿತವಾಗಿಯೂ ಶುದ್ಧವಾಗಿಲ್ಲ ಪತಿವ್ರತೆಯೇ ಮುಂತಾದವರನ್ನು ನೋಡಿದಮೇಲೆ ನಾನಾರೆಂಬುದು ಗೊತ್ತಾಗುತ್ತದೆ.

೪೯. ವಿಪ್ರನು ಹೇಳಿದನು- ಅಪ್ಪ ! ಆ ಪತಿವ್ರತೆಯು ಯಾರು ? ಅವಳಲ್ಲಿ ರತಕ್ಕ ವಿಶೇಷವೇನು ? ಅಲ್ಲಿಗೆ ನಾನು ಏಕೆ ಬರಬೇಕು ? ಕಾರಣವನ್ನು ಹೇಳು.

೫೦. ಹರಿಯು ಹೇಳಿದನು- ನದಿಗಳಲ್ಲಿ ಗಂಗೆಯೂ, ಹೆಂಗಸರಲ್ಲಿ ಪತಿವ್ರತೆಯೂ, ಮನುಷ್ಯರಲ್ಲಿ ದೊರೆಯೂ, ದೇವತೆಗಳಲ್ಲಿ ಜನಾರ್ದನನೂ ಶ್ರೇಷ್ಠರು.

೫೧. ಯಾವ ಹೆಂಗಸು ಗಂಡನಿಗೆ ಹಿತವನ್ನು ಮಾಡುತ್ತಾಳೆಯೋ ಅವಳೇ ಪತಿವ್ರತೆಯು. ಆಕೆಯು ಹೊಕ್ಕ ಹೆತ್ತ ಮನೆಗಳಲ್ಲಿ ನೂರು ನೂರು ತಲೆಗಳನ್ನು ನರಕದಿಂದ ಉದ್ಧಾರ ಮಾಡುತ್ತಾಳೆ.

೫೨. ಅವಳ ಗಂಡನು ಪ್ರಳಯ ಕಾಲದವರೆಗೂ ಸ್ವರ್ಗವನ್ನು ಅನುಭವಿಸುತ್ತಾನೆ. ಸ್ವರ್ಗದಿಂದ ಬಂದನಂತರ ಚಕ್ರವರ್ತಿಯಾಗುತ್ತಾನೆ.

ಅಸ್ಯೈವ ಮಹಿಷೀ ಭೂತ್ವಾ ಸುಖಂ ವಿದ್ಯಾದನಂತರಂ ।
ಪುನಃ ಪುನಃ ಸ್ವರ್ಗರಾಜ್ಯಂ ತಸ್ಯ ತಸ್ಯಾ ನ ಸಂಶಯಃ ।
ಏವಂ ಜನ್ಮಶತಂ ಪ್ರಾಪ್ಯ ಅಂತೇ ಮೋಕ್ಷೋ ಭವೇದ್ಧ್ರುವಂ ॥ ೫೩ ॥

॥ ವಿಪ್ರ ಉವಾಚ ॥

ಪತಿವ್ರತಾ ಭವೇತ್ಕಾ ವಾ ತಸ್ಯಾಃ ಕಿಂ ವಾ ಚ ಲಕ್ಷಣಂ ।
ಬ್ರೂಹಿ ಮೇ ದ್ವಿಜಶಾರ್ದೂಲ ಯಥಾ ಜಾನಾಮಿ ತತ್ತ್ವತಃ ॥ ೫೪ ॥

॥ ಹರಿರುವಾಚ ॥

ಪುತ್ರಾಚ್ಛತಗುಣಂ ಸ್ನೇಹಾದ್ರಾಜಾನಂ ಚ ಭಯಾದಥ ।
ಆರಾಧಯೇತ್ಪತಿಂ ಶೌರಿಂ ಯಾ ಪಶ್ಯೇತ್ಸಾ ಪತಿವ್ರತಾ ॥ ೫೫ ॥

ಕಾರ್ಯೇ ದಾಸಿ ರತೌ ವೇಶ್ಯಾ ಭೋಜನೇ ಜನನೀಸಮಾ ।
ವಿಪತ್ಸು ಮಂತ್ರಿಣೀ ಭರ್ತುಃ ಸಾ ಚ ಭಾರ್ಯಾ ಪತಿವ್ರತಾ ॥ ೫೬ ॥

ಭರ್ತುರಾಜ್ಞಾಂ ನ ಲಂಘೇದ್ಯಾ ಮನೋವಾಕ್ಕಾಯಕರ್ಮಭಿಃ ।
ಭುಂಕ್ತೇ ಪತೌ ಸದಾ ಚಾತ್ತಿ ಸಾ ಚ ಭಾರ್ಯಾ ಪತಿವ್ರತಾ ॥ ೫೭ ॥

---

೫೩. ಮತ್ತೆ ಈಕೆಗೆ ಗಂಡನಾಗಿ ಸುಖಪಡುತ್ತಾನೆ. ಅವರಿಬ್ಬರಿಗೂ ಮತ್ತೆ ಮತ್ತೆ ಸ್ವರ್ಗವೂ ಸಿಕ್ಕುತ್ತದೆ. ಸಂಶಯವಿಲ್ಲ. ಹೀಗೆ ನೂರು ಜನ್ಮಗಳನ್ನು ಹೊಂದಿ ಕೊನೆಯಲ್ಲಿ ಮೋಕ್ಷವನ್ನು ಹೊಂದುತ್ತಾರೆ.

೫೪. ವಿಪ್ರನು ಹೇಳಿದನು- ಪತಿವ್ರತೆಯು ಯಾರು? ಅವಳ ಲಕ್ಷಣಗಳೇನು? ಅವಳನ್ನು ಸರಿಯಾಗಿ ತಿಳಿಯುವಂತೆ ಲಕ್ಷಣಗಳನ್ನು ಹೇಳು.

೫೫. ಹರಿಯು ಹೇಳಿದನು– ಮಗನಲ್ಲಿರುವುದಕ್ಕಿಂತ ನೂರರಷ್ಟು ಸ್ನೇಹವನ್ನೂ ರಾಜನಿಗಿಂತಲೂ ಹೆಚ್ಚು ಭಯವನ್ನೂ ಗಂಡನಲ್ಲಿ ಹೊಂದಿ ಅವನನ್ನು ವಿಷ್ಣುವೆಂದೇ ತಿಳಿದು ಯಾವಳು ಪೂಜಿಸುತ್ತಾಳೆಯೋ ಆಕೆಯೇ ಪತಿವ್ರತೆಯು.

೫೬. ಕೆಲಸದಲ್ಲಿ ಆಳಾಗಿಯೂ, ರತಿಯಲ್ಲಿ ಸೂಳೆಯಾಗಿಯೂ, ಊಟದಲ್ಲಿ ತಾಯಿಯಾಗಿಯೂ, ವಿಪತ್ತಿನಲ್ಲಿ ಮಂತ್ರಿಯಾಗಿಯೂ, ಗಂಡನಿಗೆ ನೆರವಾಗಿರುವವಳೇ ಪತಿವ್ರತೆಯು.

೫೭. ಗಂಡನ ಅಪ್ಪಣೆಯನ್ನು ಮನಸ್ಸು, ಮಾತು, ಕೆಲಸಗಳಿಂದ ಮೀರದೆ ಗಂಡನು ಊಟ ಮಾಡಿದ ಮೇಲೆ ಊಟ ಮಾಡುವ ಹೆಂಡತಿಯು ಪತಿವ್ರತೆಯು.

ಯಸ್ಯಾ ಯಸ್ಯಾಸ್ತು ಶಯ್ಯಾಯಾಂ ಪತಿಃ ಸ್ವಪಿತಿ ಯತ್ನತಃ ।
ತತ್ರ ತತ್ರ ಚ ಸಾ ಭರ್ತುರರ್ಚಾಂ ಕರೋತಿ ನಿತ್ಯಶಃ　　　॥ ೫೮ ॥

ನೈವ ಮತ್ಸರತಾಂ ಯಾತಿ ನ ಕಾರ್ಪಣ್ಯಂ ನ ಮಾನಿನೀ ।
ಮಾನೇಽಮಾನೇ ಸಮಾನತ್ವಂ ಯಾ ಪಶ್ಯೇತ್ಸಾ ಪತಿವ್ರತಾ　　　॥ ೫೯ ॥

ಸುವೇಷಂ ಯಾ ನರಂ ದೃಷ್ಟ್ವಾ ಭ್ರಾತರಂ ಪಿತರಂ ಸುತಂ ।
ಮನ್ಯತೇ ಚ ಪರಂ ಸಾಧ್ವೀ ಸಾ ಚ ಭಾರ್ಯಾ ಪತಿವ್ರತಾ　　　॥ ೬೦ ॥

ತಾಂ ಗಚ್ಛ ದ್ವಿಜಶಾರ್ದೂಲ ವದ ಕಾಮಂ ಯಥಾ ತವ ।
ತಸ್ಯ ಪತ್ನ್ಯೋಽಷ್ಟ ತಿಷ್ಠಂತಿ ತನ್ಮಧ್ಯೇ ವರವರ್ಣಿನೀ　　　॥ ೬೧ ॥

ರೂಪಯೌವನಸಂಪನ್ನಾ ದಯಾಯುಕ್ತಾ ಯಶಸ್ವಿನೀ ।
ಶುಭಾ ನಾಮೇತಿ ವಿಖ್ಯಾತಾ ಗತ್ವಾ ತಾಂ ಪೃಚ್ಛ ತೇ ಹಿತಂ　　　॥ ೬೨ ॥

---

೫೮. ಯಾರ ಯಾರ ಹಾಸಿಗೆಯಲ್ಲಿ ಗಂಡನು ಮಲಗುತ್ತಾನೆಯೋ ಅಲ್ಲಲ್ಲೇ ಗಂಡನಿಗೆ ಸೇವೆ ಮಾಡಬೇಕು.

೫೯. ಅವರಲ್ಲಿ ಈಕೆಯು ಹೊಟ್ಟೆಕಿಚ್ಚನ್ನಾಗಲೀ, ಲೋಭಿತನವನ್ನಾಗಲೀ, ಕೋಪವನ್ನಾಗಲೀ, ಮಾಡುವುದಿಲ್ಲ. ಮಾನಾವಮಾನಗಳನ್ನು ಸಮವಾಗಿ ನೋಡಬೇಕು. ಆಕೆಯೇ ಪತಿವ್ರತೆಯು.

೬೦. ಒಳ್ಳೆಯ ಬಟ್ಟೆ ಮುಂತಾದುವನ್ನು ಹಾಕಿರುವ ಸಹೋದರರು, ತಂದೆ ಮಕ್ಕಳನ್ನು ನೋಡಿದರೂ ಅವರು ಪರರೆಂದು ಭಾವಿಸುವವಳೇ ಪತಿವ್ರತೆಯು.

೬೧. ಆಕೆಯ ಬಳಿಗೆ ಹೋಗಿ ನಿನ್ನ ಇಷ್ಟವನ್ನು ಹೇಳು. ಅವಳಿಗೆ ಏಳು ಜನ ಸವತಿಯರಿದ್ದಾರೆ. ಅವರ ಮಧ್ಯದಲ್ಲಿ ಈ ಪತಿವ್ರತೆಯಿದ್ದಾಳೆ.

೬೨. ಆಕೆಯು ರೂಪವತಿ, ಯುವತಿ, ದಯಾವತಿ, ಯಶಸ್ವಿನಿ, ಆಕೆಯ ಹೆಸರು ಶುಭೆಯೆಂದು. ಆಕೆಯಲ್ಲಿ ನಿನಗೆ ಬೇಕಾದುದನ್ನು ಕೇಳಿಕೋ

॥ ವ್ಯಾಸ ಉವಾಚ ॥

ಏವಮುಕ್ತ್ವಾ ತು ಭಗವಾಂಸ್ತತ್ರೈವಾಂತರಧೀಯತ ।
ತಸ್ಯೈವಾದೃಶ್ಯತಾಂ ದೃಷ್ಟ್ವಾ ವಿಸ್ಮಿತೋಽಭೂದ್ವಿಜಸ್ತದಾ ॥ ೬೩ ॥

ಸ ಚ ಸಾಧ್ವೀಗೃಹಂ ಗತ್ವಾ ಪಪ್ರಚ್ಛಾಥ ಪತಿವ್ರತಾಂ ।
ಅತಿಥೇರ್ವಚನಂ ಶ್ರುತ್ವಾ ಗೃಹಾನ್ನಿಸ್ಸೃತ್ಯ ಸಂಭ್ರಮಾತ್ ॥ ೬೪ ॥

ದೃಷ್ಟ್ವಾ ದ್ವಿಜಂ ಸತೀ ತತ್ರ ದ್ವಾರದೇಶೇ ಸ್ಥಿತಾಽಭವತ್ ।
ತಾಂ ಚ ದೃಷ್ಟ್ವಾ ದ್ವಿಜಶ್ರೇಷ್ಠ ಉವಾಚ ವಚನಂ ಮುದಾ ॥ ೬೫ ॥

॥ ವಿಪ್ರ ಉವಾಚ ॥

ಪ್ರಿಯಂ ಮಮ ಹಿತಂ ಬ್ರೂಹಿ ಯಥಾದೃಷ್ಟಂ ತ್ವಮೇವ ಹಿ ॥ ೬೬ ॥

॥ ಪತಿವ್ರತೋವಾಚ ॥

ಸಾಂಪ್ರತಂ ಪತ್ಯುರರ್ಚಾಽಸ್ತಿ ನ ಚಾಸ್ಮಾಕಂ ಸ್ವತಂತ್ರತಾ ।
ಪಶ್ಚಾತ್ಕಾರ್ಯಂ ಗಮಿಷ್ಯಾಮಿ ಆತಿಥ್ಯಂ ಗೃಹ್ಣ ಸಾಂಪ್ರತಂ ॥ ೬೭ ॥

---

೬೩. ವ್ಯಾಸನು ಹೇಳಿದನು- ಇಂತೆಂದು ಹೇಳಿ ಆ ಬ್ರಾಹ್ಮಣನು ಅಂತರ್ಧಾನವಾಗಲು ಅದನ್ನು ನೋಡಿ ಆ ನರೋತ್ತಮನು ಆಶ್ಚರ್ಯಪಟ್ಟನು.

೬೪–೬೫. ಅವನು ಆ ಪತಿವ್ರತೆಯ ಮನೆಗೆ ಹೋಗಿ ಆ ಪತಿವ್ರತೆಯನ್ನು ಕೇಳಿದನು. ಅತಿಥಿಯ ಮಾತನ್ನು ಕೇಳಿ ಜಾಗ್ರತೆಯಾಗಿ ಮನೆಯಿಂದ ಹೊರಗೆ ಬಂದು ಆ ಬ್ರಾಹ್ಮಣನನ್ನು ನೋಡಿ ಬಾಗಿಲಿನಲ್ಲಿ ನಿಂತುಕೊಂಡಳು. ಆಗ ಆಕೆಯನ್ನು ಕುರಿತು ಬ್ರಾಹ್ಮಣನು ಇಂತೆಂದನು.

೬೬. ವಿಪ್ರನು ಹೇಳಿದನು- ನನಗೆ ಒಳ್ಳೆಯದನ್ನೂ, ಹಿತವಾಗಿರುವುದನ್ನೂ ನಿನಗೆ ತಿಳಿದಂತೆ ನನಗೆ ಹೇಳು.

೬೭. ಪತಿವ್ರತೆಯು ಹೇಳಿದಳು- ಈಗ ನನಗೆ ಗಂಡನ ಸೇವೆಯಿದೆ. ನಾನು ಸ್ವತಂತ್ರಳಲ್ಲ, ನಾನು ಕೆಲಸಕ್ಕೆ ಹೋಗಬೇಕು. ಮೊದಲು ಅತಿಥಿಸತ್ಕಾರವನ್ನು ಸ್ವೀಕರಿಸು.

॥ ವಿಪ್ರ ಉವಾಚ ॥

ಮಮ ದೇಹೇ ಕ್ಷುಧಾ ನಾಸ್ತಿ ಪಿಪಾಸಾಽದ್ಯ ನ ಚ ಶ್ರಮಃ ।
ಅಭೀಷ್ಟಂ ವದ ಕಲ್ಯಾಣಿ ನೋ ಚೇಚ್ಛಪ್ಸ್ಯಾಮಿ ತ್ವಾಮಿತಃ ॥ ೬೮ ॥

॥ ವ್ಯಾಸ ಉವಾಚ ॥

ತಮುವಾಚ ತದಾ ಸಾಽಪಿ ನ ಬಕೋಽಹಂ ದ್ವಿಜೋತ್ತಮ ।
ಗಚ್ಛ ಧರ್ಮತುಲಾಧಾರಂ ಪೃಚ್ಛ ತಂ ತೇ ಹಿತಂ ದ್ವಿಜ ॥ ೬೯ ॥

ಇತ್ಯುಕ್ತ್ವಾ ಸಾ ಮಹಾಭಾಗಾ ಪ್ರಯಯೌ ಚ ಗೃಹೋದರಂ ।
ತತ್ರಾಪಶ್ಯದ್ದ್ವಿಜೋ ವಿಪ್ರಂ ಯಥಾ ಚಾಂಡಾಲವೇಶ್ಮನಿ ॥ ೭೦ ॥

ವಿಮೃಶ್ಯ ವಿಸ್ಮಯಾಪನ್ನಃ ಸರಥಂ ಚ ಯಯೌ ದ್ವಿಜಃ ।
ತಿಷ್ಠಂತಂ ಚ ದ್ವಿಜಂ ತಂ ಚ ಸೋಽಪಶ್ಯದ್ಧೃಷ್ಟಮಾನಸಂ ॥
ಅಥೋವಾಚ ಮುದಾ ವಿಪ್ರಂ ದೃಷ್ಟ್ವಾ ತಂ ತಾಂ ಸತೀಂ ಚ ಸಃ ॥ ೭೧ ॥

---

೬೮. ವಿಪ್ರನು ಹೇಳಿದನು- ನನಗೆ ಹಸಿವಿಲ್ಲ, ಬಾಯಾರಿಕೆಯಿಲ್ಲ, ಆಯಾಸ ವಿಲ್ಲ, ನಾನು ಕೇಳಿದುದನ್ನು ಹೇಳು. ಇಲ್ಲದಿದ್ದರೆ ನಿನಗೆ ಶಾಪ ಕೊಡುತ್ತೇನೆ.

೬೯. ವ್ಯಾಸನು ಹೇಳಿದನು– ಆಗ ಆಕೆಯು ನಾನು ಬಕನಲ್ಲ. ತುಲಾಧಾರನ ಬಳಿಗೆ ಹೋಗು. ಅವನು ನಿನಗೆ ಬೇಕಾದುದನ್ನು ಹೇಳುತ್ತಾನೆ.

೭೦. ಹೀಗೆಂದು ಹೇಳಿ ಆಕೆಯು ಮನೆಯೊಳಕ್ಕೆ ಹೊರಟುಹೋದಳು. ಅನಂತರ ಚಂಡಾಲನ ಮನೆಯಲ್ಲಿದ್ದಂತೆಯೇ ಇಲ್ಲಿಯೂ ಒಬ್ಬ ಬ್ರಾಹ್ಮಣನನ್ನು ಕಂಡನು.

೭೧. ಯೋಚಿಸಿ ಆಶ್ಚರ್ಯಪಡುತ್ತ ಆತನ ಬಳಿಗೆ ಹೋದನು. ಅಲ್ಲಿ ತವಕ ಪಡುತ್ತಿರುವ ಮನಸ್ಸುಳ್ಳ ಅವನು ಆ ಬ್ರಾಹ್ಮಣನನ್ನೂ, ಆಕೆಯನ್ನೂ, ಕುರಿತು ಇಂತೆಂದು ಕೇಳಿದನು.

॥ ವಿಪ್ರ ಉವಾಚ ॥

ದೇಶಾಂತರೇ ಚ ಯದ್ವೃತ್ತಂ ತಯಾ ಚ ಕಥಿತಂ ಕಿಲ ।
ಕಥಂ ಜಾನಾಮಿ ತದ್ವೃತ್ತಂ ಚಾಂಡಾಲೋಽಪಿ ಪತಿವ್ರತಾ ॥
ಅತೋ ಮೇ ವಿಸ್ಮಯಸ್ತಾತ ಕಿಮಾಶ್ಚರ್ಯಂ ಪರಂ ಮಹತ್ ॥ ೭೨ ॥

॥ ಹರಿರುವಾಚ ॥

ಜ್ಞಾಯತೇ ಕಾರಣಂ ತಾತ ಸರ್ವೇಷಾಂ ಭೂತಭಾವನೈಃ ।
ಅತಿಪುಣ್ಯಾತ್ಸದಾಚಾರಾದ್ಯತಸ್ತೇ ವಿಸ್ಮಯೋ ಗತಃ ॥
ಕಿಮುಕ್ತಶ್ಚ ತಯಾ ತ್ವಂ ಚ ವದ ತತ್ಸಾಂಪ್ರತಂ ಮುನೇ ॥ ೭೩ ॥

॥ ವಿಪ್ರ ಉವಾಚ ॥

ಪ್ರಷ್ಟುಂ ಧರ್ಮತುಲಾಧಾರಂ ಸಾ ಚ ಮಾಮುಪದಿಶ್ಯತಿ ॥ ೭೪ ॥

॥ ಹರಿರುವಾಚ ॥

ಆಗಚ್ಛ ಮುನಿಶಾರ್ದೂಲ ಅಹಂ ಗಚ್ಛಾಮಿ ತಂ ಪ್ರತಿ ॥ ೭೫ ॥

---

೭೨. ವಿಪ್ರನು ಹೇಳಿದನು- ಬೇರೆಯ ದೇಶದಲ್ಲಿ ನಡೆದ ವಿಷಯವನ್ನು ಅವಳು ಹೇಳಿದಳಲ್ಲ, ಈಕೆಯೂ, ಈ ಚಂಡಾಲನೂ, ಅದನ್ನು ಹೇಗೆ ತಿಳಿದಿರುವರು ? ಅದನ್ನು ನಾನು ಹೇಗೆ ತಿಳಿಯಲಿ ? ಅದರಿಂದ ನನಗೆ ಆಶ್ಚರ್ಯವುಂಟಾಗಿದೆ.

೭೩. ಹರಿಯು ಹೇಳಿದನು- ಅದರ ಕಾರಣವು ಲೋಕದಲ್ಲಿ ಹಿಂದು ಮುಂದಿನ ಎಲ್ಲರಿಗೂ ಗೊತ್ತಾಗುತ್ತದೆ. ಅತಿ ಪುಣ್ಯದಿಂದಲೂ, ಸದಾಚಾರದಿಂದಲೂ, ಅದು ತಿಳಿಯುತ್ತದೆ. ಅದರಿಂದ ನಿನಗೆ ಆಶ್ಚರ್ಯವಾಗಿದೆ. ಆಕೆಯೇನು ಹೇಳಿದಳು ? ನೀನು ಏನೆಂದೆ ? ಎಲ್ಲವನ್ನೂ ಹೇಳು.

೭೪ ಬ್ರಾಹ್ಮಣನು ಹೇಳಿದನು- ಆಕೆಯು ಧರ್ಮತುಲಾಧಾರನನ್ನು ಹೋಗಿ ಕೇಳೆಂದು ಹೇಳಿದಳು.

೭೫. ಹರಿಯು ಹೇಳಿದನು- ಎಲೈ ಮುನಿಯೇ ! ಅಲ್ಲಿಗೆ ನಾನು ಹೋಗುತ್ತೇನೆ. ನನ್ನೊಡನೆ ಬಾ.

॥ ವ್ಯಾಸ ಉವಾಚ ॥

ಗಚ್ಛಂತಂ ಚ ಹರಿಂ ಪ್ರಾಹ ತುಲಾಧಾರಃ ಕ್ವ ತಿಷ್ಠತಿ ॥ ೭೬ ॥

॥ ಹರಿರುವಾಚ ॥

ಜನಾನಾಂ ನಿಕರೇ ಹಟ್ಟೇ ಬಹುದ್ರವ್ಯಸುವಿಕ್ರಯೇ ।
ವಿಕ್ರೀಣಾತಿ ಚ ಕ್ರೀಣಾತಿ ತುಲಾಧಾರಸ್ತತಸ್ತತಃ ॥ ೭೭ ॥

ವಿಕ್ರಿಯಾಂ ನಾಕರೋತ್ಕಿಂಚಿನ್ಮನಸಾ ಕರ್ಮಣಾ ಗಿರಾ ।
ನ ಮೃಷಾ ನ ಚ ದೌರ್ಜನ್ಯಂ ಸರ್ವಲೋಕಹಿತೇ ರತಃ ॥ ೭೮ ॥

ಸಮಃ ಸರ್ವೇಷು ಸತ್ತ್ವೇಷು ಸಮಲೋಷ್ಟಾಶ್ಮಕಾಂಚನಃ ।
ಜನೋ ಯವಾನ್ರಸಂ ಸ್ನೇಹಂ ಕೂಟಮನ್ನಸ್ಯ ಸಂಚಯಂ ॥ ೭೯ ॥

ಸರ್ವಂ ತಸ್ಯ ಮುಖಾದೇವ ಗೃಹ್ಣಾತಿ ಚ ದದಾತ್ಯಪಿ ।
ಸತ್ಯಂ ತ್ಯಕ್ತ್ವಾಽನೃತಂ ಕಿಂಚಿತ್ಪ್ರಾಣಾಂತೇ ಸಮುಪಸ್ಥಿತೇ ॥
ನೋಕ್ತಂ ನರವರಶ್ರೇಷ್ಠ ತೇನ ಧರ್ಮತುಲಾಧರಃ ॥ ೮೦ ॥

---

೭೬. ವ್ಯಾಸನು ಹೇಳಿದನು- ಬ್ರಾಹ್ಮಣನು ಹರಿಯೊಡನೆ ಹೋಗುತ್ತ ಆ ತುಲಾಧಾರನು ಎಲ್ಲಿರುವನೆಂದು ಕೇಳಿದನು.

೭೭. ಹರಿಯು ಹೇಳಿದನು– ಜನಗಳ ಸಂದಣಿಯಿರುವ ಈ ಜಾಗದಲ್ಲಿ ಅಂಗಡಿಯಲ್ಲಿ ಬಹಳ ಸಾಮಾನುಗಳನ್ನಿಟ್ಟುಕೊಂಡು ಆ ತುಲಾಧಾರನು ಮಾರುತ್ತಾನೆ. ಕೊಳ್ಳುತ್ತಾನೆ.

೭೮. ಮನೋವಾಕ್ಕಾಯ ಕರ್ಮಗಳಿಂದ ವಿಕಾರವನ್ನು ಸ್ವಲ್ಪವೂ ಹೊಂದುವುದಿಲ್ಲ. ಸುಳ್ಳಾಡುವುದಿಲ್ಲ ದುಷ್ಟತನ ಮಾಡುವುದಿಲ್ಲ. ಜನರಲ್ಲೆಲ್ಲಾ ಹಿತವಾಗಿದ್ದಾನೆ.

೭೯-೮೦. ಎಲ್ಲಾ ಪ್ರಾಣಿಗಳಲ್ಲಿಯೂ ಒಂದೇ ಬಗೆಯಾಗಿದ್ದಾನೆ. ಹೊನ್ನು, ಹೆಣ್ಣು, ಮಣ್ಣುಗಳನ್ನು ಒಂದೇ ರೀತಿಯಾಗಿ ತಿಳಿಯುತ್ತಾನೆ. ಅವನು ಅಕ್ಕಿ, ತುಪ್ಪ, ಎಣ್ಣೆ, ಉಪ್ಪು, ಮುಂತಾದುವನ್ನೂ ಅನ್ನವನ್ನೂ ಮಾರುತ್ತಾನೆ. ಯಾವ ವ್ಯಾಪಾರವನ್ನೂ ಆ ತಕ್ಕಡಿಯಿಂದಲೇ ತೂಗಿ ಕೊಡುತ್ತಾನೆ. ಕೊಂಡುಕೊಳ್ಳುತ್ತಾನೆ. ಪ್ರಾಣ ಹೋಗುವಂತಾದರೂ ಸತ್ಯವನ್ನು ಬಿಟ್ಟು ಸುಳ್ಳನ್ನು ಹೇಳುವುದೇ ಇಲ್ಲ. ಆದ್ದರಿಂದ ಅವನಿಗೆ ತುಲಾಧಾರನೆಂದು ಹೆಸರು ಬಂದಿದೆ.

॥ ವ್ಯಾಸ ಉವಾಚ ॥

ಇತ್ಯುಕ್ತೇ ತು ತಮದ್ರಾಕ್ಷೀದ್ವಿಕ್ರೀಣಂತಂ ರಸಾನ್ಬಹೂನ್ ।
ಮಲಪಂಕಧರಂ ಮರ್ತ್ಯಂ ದಂತಕುಡ್ಮಲಪಂಕಿಲಂ ॥ ೮೧ ॥

ತತ್ರ ವಸ್ತುಧನೋತ್ಥಾಂ ಚ ಭಾಷಂತಂ ವಿವಿಧಾಂ ಗಿರಂ ।
ವೃತಂ ಬಹುವಿಧೈರ್ಮರ್ತ್ಯೈಃ ಸ್ತ್ರೀಭಿಃ ಪುಂಭಿಶ್ಚ ಸರ್ವತಃ ॥
ಕಥಂ ಕಥಮಿತಿ ಪ್ರಾಹ ಸ ತಂ ಮಧುರಯಾ ಗಿರಾ ॥ ೮೨ ॥

॥ ವಿಪ್ರ ಉವಾಚ ॥

ಧರ್ಮಸ್ಯ ಮೇ ಸಮುದ್ದೇಶಂ ವದ ಪ್ರಾಪ್ತೋಽಂತಿಕಂ ಹಿ ತೇ ॥ ೮೩ ॥

॥ ತುಲಾಧಾರ ಉವಾಚ ॥

ಯಾವಜ್ಜನಾಃ ಪ್ರತಿಷ್ಠಂತಿ ಮಮೈವ ಸನ್ನಿಧೌ ದ್ವಿಜ ।
ತಾವನ್ಮೇ ಸ್ವಸ್ಥತಾ ನಾಸ್ತಿ ಯಾವಚ್ಚ ರಾತ್ರಿಯಾಮಕಃ ॥ ೮೪ ॥

ತಸ್ಯೋಪದೇಶಮಾದಾಯ ಗಚ್ಛ ಧರ್ಮಾಕರಂ ಪ್ರತಿ ।
ಬಕಸ್ಯ ಮರಣೇ ದೋಷಂ ಖೇ ಚ ವಸ್ತ್ರಾವಶೋಷಣಂ ॥ ೮೫ ॥

---

೮೧. ವ್ಯಾಸನು ಹೇಳಿದನು- ಹಾಗೆನ್ನಲು ಅನೇಕ ರಸಗಳನ್ನು ಮಾರುತ್ತಿರುವ ಕೊಳಕನಾದ ಹಲ್ಲಿನಲ್ಲಿ ಕೊಳಕುಳ್ಳ ಆತನನ್ನು ನೋಡಿದನು.

೮೨. ಅಲ್ಲಿ ಆ ತುಲಾಧಾರನು ಪದಾರ್ಥಗಳ ವಿಷಯಗಳನ್ನೂ, ಹಣದ ವಿಷಯಗಳನ್ನೂ, ಮಾತಾಡುತ್ತಿದ್ದನು. ಆತನ ಸುತ್ತಲೂ ಬಹು ಮಂದಿ ಗಂಡಸರು, ಹೆಂಗಸರು, ಎಲ್ಲರೂ ತುಂಬಿಕೊಂಡಿದ್ದರು. ಆಗ ಬಹು ಕಷ್ಟಪಟ್ಟುಕೊಂಡು ಆತನನ್ನು ಕುರಿತು ಸಮಯವನ್ನು ನೋಡಿಕೊಂಡು ಒಳ್ಳೆಯ ಮಾತಿನಿಂದ ಇಂತೆಂದನು.

೮೩. ವಿಪ್ರನು ಹೇಳಿದನು- ಧರ್ಮದ ವಿಷಯವನ್ನು ಹೇಳು. ಅದಕ್ಕೋಸ್ಕರ ನಿನ್ನ ಬಳಿಗೆ ಬಂದಿದ್ದೇನೆ.

೮೪. ತುಲಾಧಾರನು ಹೇಳಿದನು– ನನ್ನ ಹತ್ತಿರದಲ್ಲಿ ಜನಗಳಿರುವವರೆಗೂ ನನಗೆ ವಿರಾಮವಿಲ್ಲ. ರಾತ್ರಿಯವರೆಗೂ ಹೀಗೇನೇ.

೮೫-೮೬. ನಾನು ಹೇಳುವುದನ್ನು ಕೇಳು, ಧರ್ಮಾಕರನ ಬಳಿಗೆ ಹೋಗು. ಬಕನ ಮರಣದಲ್ಲಿ ದೋಷವನ್ನೂ, ಸ್ನಾನದ ಬಟ್ಟೆ ಒಣಗಿದುದನ್ನೂ, ಎಲ್ಲವನ್ನೂ

ಸರ್ವಂ ತತ್ರ ಚ ಜಾನೀಷೇ ಸಜ್ಜನಾದ್ರೋಹಕಂ ವ್ರಜ ।
ತತ್ರ ತಸ್ಯೋಪದೇಶೇನ ತವ ಕಾಮಃ ಫಲಿಷ್ಯತಿ ॥ ೮೭ ॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ತಂ ತುಲಾಧಾರಃ ಕರೋತಿ ಕ್ರಯವಿಕ್ರಯಂ ॥ ೮೭ ॥

॥ ವಿಪ್ರ ಉವಾಚ ॥

ತಥಾ ತಾತ ಗಮಿಷ್ಯಾಮಿ ಸಜ್ಜನಾದ್ರೋಹಕಂ ಪ್ರತಿ ।
ತುಲಾಧಾರಸಮುದ್ದೇಶಾನ್ನ ಜಾನಾಮಿ ತದಾಲಯಂ ॥ ೮೮ ॥

॥ ಹರಿರುವಾಚ ॥

ವಿಹ್ಯಾಗಚ್ಛ ಗಮಿಷ್ಯಾಮಿ ತ್ವಯಾ ಸಾರ್ಧಂ ಚ ತದ್ಗೃಹಂ ।
ಅಥ ವರ್ತ್ಮನಿ ಗಚ್ಛಂತಮುವಾಚ ಬ್ರಾಹ್ಮಣೋ ಹರಿಂ ॥ ೮೯ ॥

॥ ವಿಪ್ರ ಉವಾಚ ॥

ತುಲಾಧಾರಸ್ಯ ನ ಸ್ನಾನಂ ನ ದೇವಪಿತೃತರ್ಪಣಂ ।
ಮಲದಿಗ್ಧಂ ಚ ಗಾತ್ರಂ ತು ಸರ್ವಂ ಚೈಲಮಲಕ್ಷಣಂ ॥ ೯೦ ॥

---

ಅವನು ಬಲ್ಲನು. ಅವನು ಸಜ್ಜನರಿಗೆ ಉಪಕಾರಿಯು. ಅಲ್ಲಿಗೆ ಹೋಗು. ಅಲ್ಲಿ ಅವನ ಉಪದೇಶದಿಂದ ನಿನ್ನ ಇಷ್ಟವು ಕೈಗೂಡುತ್ತದೆ.

೮೭. ವ್ಯಾಸನು ಹೇಳಿದನು– ಆ ತುಲಾಧಾರನು ಹೀಗೆಂದು ಹೇಳಿ ವ್ಯಾಪಾರಕ್ಕೆ ಮೊದಲು ಮಾಡಿದನು.

೮೮. ವಿಪ್ರನು ಹೇಳಿದನು– ಹಾಗೆಯೇ ಆಗಲಿ, ಆ ಸಜ್ಜನ ಅದ್ರೋಹಕನ ಬಳಿಗೆ ನಿನ್ನ ಮಾತಿನಂತೆ ಹೋಗುತ್ತೇನೆ. ಆದರೆ ಅವನ ಮನೆಯು ನನಗೆ ಗೊತ್ತಿಲ್ಲ.

೮೯. ಹರಿಯು ಹೇಳಿದನು- ನಾನು ಬರುತ್ತೇನೆ, ಬಾ ಹೋಗೋಣವೆಂದು ಹೊರಟನು. ಹೋಗುತ್ತಾ ದಾರಿಯಲ್ಲಿ ಹರಿಯನ್ನು ಕುರಿತು ಇಂತೆಂದನು.

೯೦-೯೧. ವಿಪ್ರನು ಹೇಳಿದನು– ಈ ತುಲಾಧಾರನು ಸ್ನಾನಮಾಡುವುದಿಲ್ಲ. ಪಿತೃ ತರ್ಪಣಗಳಿಲ್ಲ, ದೇಹವೆಲ್ಲ ಸ್ನಾನವಿಲ್ಲದೆ ಕೊಳೆಯಿಂದ ತುಂಬಿದೆ, ಬಟ್ಟೆ

ಕಥಂ ಜಾನಾತಿ ಮದ್ವೃತ್ತಂ ದೇಶಾಂತರಸಮುದ್ಭವಂ ।
ಅತೋ ಮೇ ವಿಸ್ಮಯಸ್ತಾತ ಸರ್ವಂ ತ್ವಂ ವದ ಕಾರಣಂ ॥ ೯೧ ॥

॥ ಹರಿರುವಾಚ ॥

ಸತ್ಯೇನ ಸಮಭಾವೇನ ಜಿತಂ ತೇನ ಜಗತ್ತ್ರಯಂ ।
ಅತೃಪ್ಯತಾಂ ಚ ಪಿತರೌ ದೇವಾ ಮುನಿಗಣೈಃ ಸಹ ॥ ೯೨ ॥

ಭೂತಭವ್ಯಪ್ರವೃತ್ತಂ ಚ ತೇನ ಜಾನಾತಿ ಧಾರ್ಮಿಕಃ ।
ನಾಸ್ತಿ ಸತ್ಯಾತ್ಪರೋ ಧರ್ಮೋ ನಾನೃತಾತ್ಪಾತಕಂ ಪರಂ ॥ ೯೩ ॥

ವಿಶೇಷೇ ಸಮಭಾವಸ್ಯ ಪುರುಷಸ್ಯಾನಘಸ್ಯ ಚ ।
ಅರಿಮಿತ್ರೇಽಪ್ಯುದಾಸೀನೇ ಮನೋ ಯಸ್ಯ ಸಮಂ ವ್ರಜೇತ್ ॥ ೯೪ ॥

ಸರ್ವಪಾಪಕ್ಷಯಸ್ತಸ್ಯ ವಿಷ್ಣುಸಾಯುಜ್ಯತಾಂ ವ್ರಜೇತ್ ।
ಸಮೋ ಧರ್ಮಃ ಸಮಃ ಸ್ವರ್ಗಃ ಸಮಂ ಹಿ ಪರಮಂ ತಪಃ ॥ ೯೫ ॥

ಯಸ್ಯೈವ ಮಾನಸೇ ನಿತ್ಯಂ ಸಮಃ ಸ ಪುರುಷೋತ್ತಮಃ ।
ವಿಶೇಷೇ ಸರ್ವಲೋಕೇಷು ಸಮೋ ಯೋಗೀಷ್ವಲೋಲುಪಃ ॥ ೯೬ ॥

---

ಯೆಲ್ಲವೂ ಅವಲಕ್ಷಣವಾಗಿವೆ, ಅಂತಹವನು ಬೇರೆ ಜಾಗದ ವಿಷಯವನ್ನು ಹೇಗೆ ತಿಳಿಯಬಲ್ಲನು? ಅದೇ ನನಗೆ ಆಶ್ಚರ್ಯವು. ಅದರ ಕಾರಣವನ್ನು ನೀನು ಹೇಳು.

೯೨-೯೩. ಹರಿಯು ಹೇಳಿದನು- ಸತ್ಯ, ಸಮತೆ, ಇವುಗಳಿಂದ ಎಲ್ಲರನ್ನೂ ಗೆದ್ದಿದ್ದಾನೆ ತಾಯಿ ತಂದೆಗಳನ್ನೂ ದೇವಋಷಿಗಳನ್ನೂ ತೃಪ್ತಿಪಡಿಸಿದನು. ಆ ಧರ್ಮದಿಂದ ಕಳೆದ ಮುಂದಿನ ವಿಷಯಗಳನ್ನು ತಿಳಿಯುತ್ತಾನೆ. ಸತ್ಯಕ್ಕಿಂತಲೂ ಹೆಚ್ಚಿನ ಧರ್ಮವಿಲ್ಲ. ಸುಳ್ಳಿಗಿಂತಲೂ ಹೆಚ್ಚಿನ ಪಾಪವಿಲ್ಲ.

೯೪-೯೫. ವಿಶೇಷವಿದ್ದರೂ ಸಮವಾಗಿ ನೋಡಬೇಕು. ಶತ್ರುಗಳಲ್ಲಿಯೂ, ಮಿತ್ರರಲ್ಲಿಯೂ, ಉದಾಸೀನರಲ್ಲಿಯೂ, ಸಮವಾಗಿರಬೇಕು, ಅಂತಹವನು ಪಾಪಗಳನ್ನು ಕಳೆದುಕೊಂಡು ವಿಷ್ಣುವಿನ ಸಾಯುಜ್ಯವನ್ನು ಹೊಂದುತ್ತಾನೆ. ಸಮತೆಯೇ ಧರ್ಮವು. ಸಮತೆಯೇ ಸ್ವರ್ಗವು. ಸಮತೆಯೇ ಉತ್ತಮವಾದ ತಪಸ್ಸು.

೯೬. ಯಾವನ ಮನಸ್ಸು ಸಮವಾಗಿದೆಯೋ, ಅವನೇ ಪುರುಷೋತ್ತಮನು. ವಿಶೇಷವಿದ್ದವರಲ್ಲಿಯೂ, ಯೋಗಿಗಳಲ್ಲಿಯೂ, ಕೂಡ ಸಮವಾಗಿರಬೇಕು.

ಏವಂ ಯೋ ವರ್ತತೇ ನಿತ್ಯಂ ಕುಲಕೋಟಿಂ ಸಮುದ್ಧರೇತ್ ।
ಸತ್ಯಂ ದಮಃ ಶಮಶ್ಚೈವ ಧೈರ್ಯಂ ಸ್ಥೈರ್ಯಮಲೋಭತಾ ॥ ೯೭ ॥

ಅನಾಶ್ಚರ್ಯಮನಾಲಸ್ಯಂ ತಸ್ಮಿನ್ಸರ್ವಂ ಪ್ರತಿಷ್ಠಿತಂ ।
ತೇನ ವೈ ದೇವಲೋಕಸ್ಯ ನರಲೋಕಸ್ಯ ಸರ್ವಶಃ ॥ ೯೮ ॥

ವೃತ್ತಂ ಜಾನಾತಿ ಧರ್ಮಜ್ಞಸ್ತಸ್ಯ ದೇಹೇ ಸ್ಥಿತೋ ಹರಿಃ ।
ಲೋಕೇ ತಸ್ಯ ಸಮೋ ನಾಸ್ತಿ ಸಮಃ ಸತ್ಯಾರ್ಜವೇಷು ಚ ॥
ಸ ಚ ಧರ್ಮಮಯಃ ಸಾಕ್ಷಾತ್ತೇನೈವ ಧಾರಿತಂ ಜಗತ್ ॥ ೯೯ ॥

॥ ದ್ವಿಜ ಉವಾಚ ॥

ಜ್ಞಾತಂ ಮೇ ತ್ವತ್ಪ್ರಸಾದಾಚ್ಚ ತುಲಾಧಾರಸ್ಯ ಕಾರಣಂ ।
ಅದ್ರೋಹಕಸ್ಯ ಯದ್ವೃತ್ತಂ ತದ್ಬ್ರೂಹಿ ತ್ವಂ ಯದೀಚ್ಛಸಿ ॥ ೧೦೦ ॥

॥ ಹರಿರುವಾಚ ॥

ಪುರೈವ ರಾಜಪುತ್ರಸ್ಯ ಕುಲಸ್ತ್ರೀ ನವಯೌವನಾ ।
ರತೀವ ಕಾಮದೇವಸ್ಯ ಶಚೀವ ವಾಸವಸ್ಯ ಚ ॥ ೧೦೧ ॥

---

೯೭-೯೯. ಹೀಗಿರುವವನು ತನ್ನ ಕೋಟಿ ಕುಲಗಳನ್ನು ಉದ್ಧಾರಮಾಡು ತ್ತಾನೆ, ಸತ್ಯ, ದಮ, ಶಮ, ಧೈರ್ಯ, ಅಲೋಭಿತ್ವ, ಆಶ್ಚರ್ಯವಿಲ್ಲದಿರುವಿಕೆ, ಸೋಮಾರಿತನವಿಲ್ಲದಿರುವುದು, ಇವೆಲ್ಲವೂ ಆ ಸಮತ್ವದಲ್ಲಿಯೇ ನಿಂತಿವೆ, ಅದರಿಂ ದಲೇ ಮನುಷ್ಯನು ಇಹ ಪರಗಳ ಸಮಾಚಾರವನ್ನು ತಿಳಿಯುತ್ತಾನೆ. ಅವನ ದೇಹ ದಲ್ಲಿಯೇ ಹರಿಯೂ ಇರುತ್ತಾನೆ ಲೋಕದಲ್ಲಿ ಅವನ ಸಮ ಯಾರೂ ಇರುವುದಿಲ್ಲ ಸತ್ಯ ಋಜುತ್ವಗಳಲ್ಲಿ ಅವನ ಸಮ ಯಾರೂ ಇಲ್ಲ. ಅವನೇ ಧರ್ಮಮಯನು ಅವ ನಿಂದಲೇ ಜಗತ್ತು ನಿಂತಿರುವುದು.

೧೦೦. ಬ್ರಾಹ್ಮಣನು ಹೇಳಿದನು- ನಿನ್ನ ಅನುಗ್ರಹದಿಂದಲೇ ತುಲಾಧಾರನ ವಿಷಯದಲ್ಲಿ ಕಾರಣಗಳು ಗೊತ್ತಾದುವು. ಕೃಪೆಮಾಡಿ ಅದ್ರೋಹಕನ ವಿಷಯ ವನ್ನು ಹೇಳು.

೧೦೧-೧೦೩, ಹರಿಯು ಹೇಳಿದನು– ಹಿಂದೆ ಒಬ್ಬಳು ರಾಜಪುತ್ರನ ಹೆಂಡತಿ ಯಿದ್ದಳು. ನವಯೌವನಳು, ಯೋಗ್ಯಳಾದ ಹೆಂಗಸು, ಕಾಮದೇವನಿಗೆ ರತಿಯಂ

ತಸ್ಯ ಪ್ರಾಣಸಮಾ ಭಾರ್ಯಾ ಸುಂದರೀ ನಾಮ ಸುಂದರೀ ।
ಅಕಸ್ಮಾತ್ಪಾರ್ಥಿವಸ್ಯೈವ ಕಾರ್ಯೇ ಗಂತುಂ ಸಮುದ್ಯತಃ ॥ ೧೦೨ ॥

ಮನಸಾಽಲೋಚಿತಂ ತೇನ ಪ್ರಾಣೇಭ್ಯೋಽಪಿ ಗರೀಯಸೀಂ ।
ಕಸ್ಮಿನ್ಸ್ಥಾನೇ ಸ್ಥಾಪಯಾಮಿ ಯತೋ ರಕ್ಷಾ ಭವೇದ್ಧ್ರುವಂ ॥ ೧೦೩ ॥

ಇತ್ಯಾಲೋಚ್ಯೈವ ಸಹಸಾ ಆಗತೋಽಸ್ಯ ಗೃಹಂ ಪ್ರತಿ ।
ಉಕ್ತಂ ಚ ತಾದೃಶಂ ವಾಕ್ಯಂ ಶ್ರುತ್ವಾ ಸ ವಿಸ್ಮಯಂ ಗತಃ ॥ ೧೦೪ ॥

॥ ಅದ್ರೋಹಕ ಉವಾಚ ॥

ನ ತಾತಸ್ತೇ ನ ಚ ಭ್ರಾತಾ ನ ಚಾಹಂ ತವ ಭಾಂಧವಃ ।
ಪಿತೃಮಾತೃಕುಲಸ್ಯೈವ ತಸ್ಯಾ ನ ಹಿ ಸುಹೃಜ್ಜನಃ ॥
ಕಥಂ ಚ ಮದ್ಗೃಹೇ ತಾತ ಸ್ಥಿತ್ವಾ ಸ್ವಸ್ಥೋ ಭವಿಷ್ಯತಿ ॥ ೧೦೫ ॥

॥ ಹರಿರುವಾಚ ॥

ಏತಸ್ಮಿನ್ನಂತರೇ ತೇನ ಉಕ್ತಂ ವಾಕ್ಯಂ ಯಥೋಚಿತಂ ॥ ೧೦೬ ॥

---

ತೆಯೂ,ಇಂದ್ರನಿಗೆ ಶಚೀದೇವಿಯಂತೆಯೂ, ರಾಜಪುತ್ರನಿಗೆ ಪ್ರಾಣ ಪ್ರಿಯೆಯಾಗಿದ್ದಳು. ಅವಳ ಹೆಸರು ಸುಂದರಿ. ಒಂದು ಸಾರಿ ರಾಜಕೆಲಸದಿಂದ ಆ ರಾಜಪುತ್ರನು ಹೊರಗೆ ಹೋಗಬೇಕಾಗಿ ಬಂದಿತು.

೧೦೩-೧೦೪. ಅವನು ಮನಸ್ಸಿನಲ್ಲಿ ಈ ಪ್ರಾಣಪ್ರಿಯೆಯನ್ನು ಎಲ್ಲಿ ಬಿಡಲಿ ? ಎಲ್ಲಿ ಬಿಟ್ಟರೆ ಸುರಕ್ಷಿತೆಯಾಗಿದ್ದಾಳು ? ಎಂದು ಯೋಚಿಸಿ ಈತನ ಮನೆಗೆ ಬಂದು ಈಕೆಯನ್ನು ಇಲ್ಲಿ ಬಿಡುತ್ತೇನೆ, ಕಾಪಾಡು ಎಂದು ಹೇಳಲು ಅದ್ರೋಹಕನು ಆಶ್ಚರ್ಯಪಟ್ಟನು.

೧೦೫. ಅದ್ರೋಹಕನು ಹೇಳಿದನು:- ನಾನು ನಿನಗೆ ತಂದೆಯಲ್ಲ, ಸಹೋದರನಲ್ಲ, ಬಂಧುವು ಮೊದಲೇ ಅಲ್ಲ, ತಾಯಿ ತಂದೆಯ ಕಡೆಯ ಆಪ್ತ ಜನಗಳೂ ಇಲ್ಲ, ಈ ನನ್ನ ಮನೆಯಲ್ಲಿದ್ದರೆ ಹೇಗೆತಾನೇ ಸುಖವಾಗಿರುವಳು ?

೧೦೬. ಹರಿಯು ಹೇಳಿದನು- ಇಷ್ಟರೊಳಗೆ ಅವನು ಕಾಲಕ್ಕೆ ತಕ್ಕ ಮಾತುಗಳನ್ನಾಡಿದನು.

॥ ರಾಜಪುತ್ರ ಉವಾಚ ॥

ಲೋಕೇ ತ್ವತ್ಸದೃಶೋ ನಾಸ್ತಿ ಧರ್ಮಜ್ಞೋ ವಿಜಿತೇಂದ್ರಿಯಃ ॥ ೧೦೭ ॥

॥ ಹರಿರುವಾಚ ॥

ಸ ಚಾಽಽಹ ತಂ ಚ ಸರ್ವಜ್ಞಂ ವಕ್ತುಂ ನಾರ್ಹಸಿ ದೂಷಣಂ ।
ತ್ರೈಲೋಕ್ಯಮೋಹಿನೀಂ ಭಾರ್ಯಾಂ ಕಃ ಪುಮಾನ್ರಕ್ಷಿತುಂ ಕ್ಷಮಃ ॥೧೦೮॥

॥ ರಾಜಪುತ್ರ ಉವಾಚ ॥

ಧರಣ್ಯಾಂ ಪರಿವಿಜ್ಞಾಯ ಆಗತೋಽಹಂ ತವಾಂತಿಕಂ ।
ಏಷಾ ತಿಷ್ಠತು ತೇಽಗಾರೇ ವ್ರಜಾಮಿ ನಿಜಮಂದಿರಂ ॥ ೧೦೯ ॥

॥ ಹರಿರುವಾಚ ॥

ಇತ್ಯುಕ್ತೇ ಸ ಪುನಃ ಪ್ರಾಹ ನಗರೇಽಸ್ಮಿನ್ಪ್ರಶೋಭನೇ ।
ಬಹುಕಾಮುಕಸಂಪೂರ್ಣೇ ಕಥಂ ರಕ್ಷಾ ಭವೇತ್ಸ್ತ್ರಿಯಾಃ ॥ ೧೧೦ ॥

ಸ ಚೋವಾಚ ಪುನಸ್ತ್ವಂ ಚ ಕುರು ರಕ್ಷಾಂ ವ್ರಜಾಮ್ಯಹಂ ।
ಗೃಹಸ್ಥಃ ಸಂಕಟಾದಾಹ ಧರ್ಮಸ್ಯ ರಾಜಪುತ್ರಕಂ ॥ ೧೧೧ ॥

---

೧೦೭. ರಾಜಪುತ್ರನು ಹೇಳಿದನು- ಲೋಕದಲ್ಲಿ ನಿನ್ನ ಸಮನಾದ ಜಿತೇಂದ್ರಿಯನೂ, ಧರ್ಮಜ್ಞನೂ, ಇಲ್ಲ.

೧೦೮ ಹರಿಯು ಹೇಳಿದನು- ಆಗ ಅವನು ಅಯ್ಯಾ! ನನ್ನನ್ನು ಅನಂತರ ಬೈಯ್ಯಬೇಡ, ಈ ತ್ರಿಲೋಕಸುಂದರಿಯನ್ನು ಯಾವನು ತಾನೇ ಕಾಪಾಡಲು ಶಕ್ತನು? ಎಂದನು.

೧೦೯. ರಾಜಪುತ್ರನು ಹೇಳಿದನು- ಲೋಕದಲ್ಲೆಲ್ಲಾ ಹುಡುಕಿ ನಿನ್ನ ಬಳಿಗೆ ಬಂದಿದ್ದೇನೆ. ಇವಳು ನಿನ್ನ ಮನೆಯಲ್ಲಿರಲಿ, ನಾನು ನನ್ನ ಮನೆಗೆ ಹೋಗುತ್ತೇನೆ,

೧೧೦. ಹರಿಯು ಹೇಳಿದನು– ರಾಜಪುತ್ರನು ಹೀಗೆನ್ನಲು ಅದ್ರೋಹಕನು ಈ ನಾಜೋಕಾದ ಅನೇಕ ಜನ ಕಾಮುಕರಿರುವ ಈ ಊರಿನಲ್ಲಿ ಒಬ್ಬ ಸುಂದರಿಯಾದ ಈ ಹೆಂಗಸನ್ನು ಕಾಪಾಡುವುದು ಹೇಗೆ?

೧೧೧. ಮತ್ತೆ ಅವನು ನೀನು ಹೇಗಾದರೂ ಕಾಪಾಡು. ನಾನು ಹೋಗುತ್ತೇನೆ, ಎನ್ನಲು ಆ ಗೃಹಸ್ಥನು ಧರ್ಮ ಸಂಕಟದಿಂದ ಇಂತೆಂದನು.

॥ ಅದ್ರೋಹಕ ಉವಾಚ ॥

ಕರೋಮ್ಯನುಚಿತಂ ಕಾರ್ಯಂ ಸ್ವದಾಸ್ಯಮುಚಿತಂ ಹಿತಂ ।
ಸದಾ ವೈ ಚೇದ್ವಶೀ ಭಾರ್ಯಾ ಸ್ಥಿತವ್ಯಾ ಮದ್ಗೃಹೇ ಪಿತಃ ॥ ೧೧೨ ॥

ಅರಕ್ಷ್ಯಾರಕ್ಷಣೇ ದೇವ ವದಾಭೀಷ್ಟಂ ಕುರು ಪ್ರಿಯಂ ।
ಮಮ ತಲ್ಪೇ ಮಯಾ ಸಾರ್ಧಂ ಶಯಾನಾ ಭಾರ್ಯಯಾ ಸಹ ।
ಮನ್ಯಸೇ ದೈವತಂ ಸ್ವಂ ತು ನೋ ವಾ ತಿಷ್ಠತು ಗಚ್ಛತು ॥ ೧೧೩ ॥

॥ ಹರಿರುವಾಚ ॥

ಕ್ಷಣಂ ವಿಮೃಶ್ಯ ತಂ ಪ್ರಾಹ ರಾಜಪುತ್ರಃ ಪುನಸ್ತದಾ ॥ ೧೧೪ ॥

॥ ರಾಜಪುತ್ರ ಉವಾಚ ॥

ಬಾಢಮೇತದ್ವಚಸ್ತಾತ ಯಥಾಽಭೀಷ್ಟಂ ತಥಾ ಕುರು ॥ ೧೧೫ ॥

---

೧೧೨. ಅದ್ರೋಹಕನು ಹೇಳಿದನು- ಅಯ್ಯಾ ! ನಾನು ಕೆಟ್ಟಕೆಲಸವನ್ನು ಮಾಡಿದರೂ ಮಾಡಬಹುದು. ನನ್ನ ಆಳಾಗಿ ಈಕೆಯನ್ನು ಮಾಡಿಕೊಂಡು ಸೇವೆ ಮಾಡಿಸಿಕೊಳ್ಳಬಹುದು. ಅದೆಲ್ಲವನ್ನೂ ನೀನು ಒಪ್ಪಿಕೊಂಡರೆ ನನ್ನ ಮನೆಯಲ್ಲಿ ಬಿಡಬಹುದು.

೧೧೩. ಗತಿಯಿಲ್ಲದವರನ್ನು ಕಾಪಾಡುವುದರಲ್ಲಿ ನಿನ್ನ ಇಷ್ಟವನ್ನು ಹೇಳಿ ನನಗೆ ಅನುಕೂಲವನ್ನು ಮಾಡು. ನನ್ನ ಹಾಸಿಗೆಯಲ್ಲಿ ನನ್ನೊಡನೆಯೂ, ನನ್ನ ಹೆಂಡತಿಯೊಡನೆಯೂ ಮಲಗಬೇಕು, ಈಕೆಗೆ ನೀನೇ ಯಜಮಾನನೆಂದು ತಿಳಿಯುವ ಪಕ್ಷದಲ್ಲಿ ಇಲ್ಲಿರಬೇಕಾದ್ದಿಲ್ಲ. ಹೋಗಲಿ.

೧೧೪. ಹರಿಯು ಹೇಳಿದನು- ಕ್ಷಣಕಾಲ ಯೋಚಿಸಿ ಅವನಿಗೆ ರಾಜಪುತ್ರನು ಇಂತೆಂದನು.

೧೧೫. ರಾಜಪುತ್ರನು ಹೇಳಿದನು- ಒಳ್ಳೆಯದು. ನಿನಗೆ ಇಷ್ಟಬಂದಂತೆ ಮಾಡಿಕೋ.

॥ ಹರಿರುವಾಚ ॥

ತತೋ ಭಾರ್ಯಾಂ ಜಗಾದಾಥ ಅಸ್ಯ ವಾಕ್ಯಾಚ್ಛಿವಾಶಿವಂ ।
ಕರ್ತವ್ಯಂ ನ ಚ ತೇ ದೋಷ ಆಜ್ಞಯಾ ಮಮ ಸುಂದರಿ ॥ ೧೧೬ ॥

ಏತದುಕ್ತ್ವಾ ಗತಃ ಸೋಽಪಿ ಭೂಪತೇಃ ಶಾಸನಾತ್ಪಿತುಃ ।
ಅನಂತರಂ ಕ್ಷಪಾಯಾಂ ಚ ಯದುಕ್ತಂ ಚ ತಥಾ ಕೃತಂ ॥ ೧೧೭ ॥

ಯೋಷಿತೋರ್ಮಧ್ಯಗಃ ಸೋಽಪಿ ನಿತ್ಯಂ ಸ್ವಪಿತಿ ಧಾರ್ಮಿಕಃ ।
ಧರ್ಮಾನ್ನ ಲಭತೇ ಸೋಽಪಿ ಸ್ವಭಾರ್ಯಾಪರಭಾರ್ಯಯೋಃ ॥ ೧೧೮ ॥

ಸಂಸ್ಪರ್ಶಾಚ್ಚ ಸ್ತ್ರಿಯಾಶ್ಚಾಸ್ಯ ಕಾಮಾಭಿಲಷಿತಂ ಮನಃ ।
ತಸ್ಯಾಃ ಸಂಸರ್ಗತಶ್ಚೈವ ದುಹಿತ್ರೈವ ಪ್ರಮನ್ಯತೇ ॥ ೧೧೯ ॥

ಸ್ತನೌ ತಸ್ಯಾಸ್ಯ ಪೃಷ್ಠೇ ಚ ಲಗತಸ್ತು ಪುನಃ ಪುನಃ ।
ಬಾಲಕಸ್ಯ ಚ ಪುತ್ರಸ್ಯ ಸ್ತನೌ ಮಾತುಃ ಸ ಮನ್ಯತೇ ॥ ೧೨೦ ॥

---

೧೧೬. ಹರಿಯು ಹೇಳಿದನು- ಅನಂತರ ಹೆಂಡತಿಯನ್ನು ಕುರಿತು ಆತನು ಎಲೈ ಸುಂದರಿಯೇ, ನನ್ನ ಅಪ್ಪಣೆಯಂತೆ ಇವನು ಹೇಳಿದ ಒಳ್ಳೆಯದು ಕೆಟ್ಟದನ್ನು ಯೋಚಿಸದೆ ಮಾಡು. ನಿನಗೆ ದೋಷವಿಲ್ಲ.

೧೧೭. ರಾಜಪುತ್ರನು ಇಷ್ಟನ್ನು ಹೇಳಿ ರಾಜನಾದ ಆ ತಂದೆಯ ಅಪ್ಪಣೆಯಂತೆ ಹೊರಟುಹೋದನು. ಆಮೇಲೆ ರಾತ್ರಿಯಲ್ಲಿ ಅದ್ರೋಹಕನು ತಾನು ಹೇಳಿದಂತೆ ಮಾಡಿದನು.

೧೧೮. ಆ ಹೆಂಗಸರ ಮಧ್ಯದಲ್ಲಿ ಆ ಧಾರ್ಮಿಕನು ನಿತ್ಯವೂ ಮಲಗುತ್ತ ಧರ್ಮದಿಂದ ತನ್ನ ಹೆಂಡಿರು ಪರರ ಹೆಂಡಿರೆಂಬುದನ್ನು ತಿಳಿಯದಿದ್ದನು.

೧೧೯. ಈತನನ್ನು ಮುಟ್ಟುವುದರಿಂದ ಆ ಸ್ತ್ರೀಗೆ ಮನಸ್ಸು ಕಾಮದಲ್ಲಿ ಆಸೆ ಪಡುತ್ತಿದ್ದಿತು. ಅವನು ಅವಳ ಸ್ಪರ್ಶವಾದರೆ ಮಗಳೆಂದೇ ತಿಳಿಯುತ್ತಿದ್ದನು.

೧೨೦. ಆಕೆಯ ಸ್ತನಗಳು ಈತನ ಪೃಷ್ಟಕ್ಕೆ ಬಾರಿಬಾರಿಗೂ ತಗುಳುತ್ತಿದ್ದಿತು. ಬಾಲಕನಾದ ಮಗನು ತಿಳಿಯುವಂತೆ ತಾಯಿಯ ಮೊಲೆಗಳೆಂದೇ ತಿಳಿಯುತ್ತಿದ್ದನು.

ತಸ್ಯಾಂಗಾನಿ ತು ಚಾಂಗೇಷು ಲಗಂತಿ ಚ ಪುನಃ ಪುನಃ ।
ತತೋ ಮಾತುಶ್ಚ ಮಾತುಶ್ಚ ಸ ಚಾಮನ್ಯದ್ದಿನೇ ದಿನೇ ॥ ೧೨೧ ॥

ತಸ್ಯ ಯೋಷಾಸು ಸಂಸರ್ಗೋ ನಿವೃತ್ತಸ್ತು ಭವೇದಥ ।
ಏವಂ ಸಂವತ್ಸರಸ್ಯಾರ್ಧೇ ಪತಿಸ್ತಸ್ಯಾಗತಃ ಪುರಂ ॥ ೧೨೨ ॥

ಅಪೃಚ್ಛತ್ತಂ ಚ ಲೋಕೇಷು ತಸ್ಯಾ ವೃತ್ತಂ ಯಥೋದಿತಂ ।
ಕೇಚಿದ್ಭದ್ರಾಣಿ ಬೋಧ್ಯಂತೇ ಯುವಾನೋಽಪಿ ವಿಸಿಸ್ಮಿರೇ ॥ ೧೨೩ ॥

ಕೇಚಿದಾಹುಸ್ತ್ವಯಾ ದತ್ತ ತಯಾ ಸಾರ್ಧಂ ಸ್ವಪಿತ್ಯಸೌ ।
ಸ್ತ್ರೀಪುಂಸೋರೇಕಸಂಸರ್ಗಾಚ್ಛಾಂತತಾ ತು ಕಥಂ ಭವೇತ್ ॥ ೧೨೪ ॥

ತಸ್ಯಾಂ ಯುಸ್ಯಾಽಭಿಲಾಷೋಽಸ್ತಿ ನ ಪೃಷ್ಟಶ್ಚೋಚ್ಯತೇ ಯುವಾ ।
ಲೋಕಾನಾಂ ಕುಶ್ರುತಿರ್ವಾರ್ತಾ ತೇನ ಪುಣ್ಯಬಲಾಚ್ಛ್ರುತಾ ॥ ೧೨೫ ॥

---

೧೨೧. ಅವಳ ಅಂಗಗಳು ಇವನ ಅವಯುವಗಳಿಗೆ ತಗುಲುತ್ತವೆ. ಅವು ತಾಯಿಯದು. ತಾಯಿಯದೆಂದೇ ತಿಳಿಯುತ್ತಿದ್ದನು.

೧೨೨. ಈ ಮಧ್ಯದಲ್ಲಿ ತನ್ನ ಹೆಂಡತಿಯೊಡನೆ ಅದ್ರೋಹಕನು ಸಂಗವನ್ನು ಬಿಟ್ಟೇಬಿಟ್ಟನು. ಈ ರೀತಿ ಆರುತಿಂಗಳು ಕಳೆಯಲು ಆಕೆಯ ಗಂಡನು ಊರಿಗೆ ಬಂದನು.

೧೨೩. ಅವಳ ಸಮಾಚಾರವನ್ನು ಆತನು ಜನಗಳನ್ನು ಕೇಳಿದನು. ಕೆಲವರು ಮಂಗಳಕರವಾದ ಮಾತುಗಳನ್ನೇ ಆಡಿದರು. ಅದು ಯುವಕರಿಗೂ ಆಶ್ಚರ್ಯವಾಗಿದ್ದಿತು.

೧೨೪-೧೨೫. ಕೆಲವರು ಅಯ್ಯಾ ! ನೀನು ಆತನಿಗೆ ಆಕೆಯನ್ನು ಕೊಟ್ಟೆ. ಅವನು ಅವಳ ಸಂಗಡ ಮಲಗುತ್ತಾನೆ, ಗಂಡುಸು, ಹೆಂಗಸು, ಒಂದು ಕಡೆ ಮಲಗಿದರೆ ಸ್ವಸ್ಥತೆಯು ಹೇಗೆ ತಾನೆ ಬರುತ್ತದೆ ? ಅವಳಲ್ಲಿ ಅವನಿಗೆ ಆಸೆಯಿದೆ, ಅವನನ್ನು ಕೇಳಿದರೆ ಆತನು ಹೇಳುವುದಿಲ್ಲ. ಈ ರೀತಿ ಜನಗಳ ಕೆಟ್ಟ ಮಾತುಗಳನ್ನೂ ಅವನು ಕೇಳಿದನು.

ಜನಾಪವಾದಮೋಕ್ಷಾರ್ಥಂ ಬುದ್ಧಿಸ್ತಸ್ಯಾಭವಚ್ಛುಭಾ ।
ದಾರೂಣಿ ಸ್ವಯಮಾಹೃತ್ಯ ಜಜ್ವಾಲಾಗ್ನಿಮಯಂ ಮಹತ್ ॥ ೧೨೬ ॥

ಏತಸ್ಮಿನ್ನಂತರೇ ತಾತ ರಾಜಪುತ್ರಃ ಪ್ರತಾಪವಾನ್ ।
ಅಗಮತ್ತದ್ಗೃಹಂ ಸದ್ಯಃ ಸೋಽಪಶ್ಯತ್ತಾಂ ಚ ಯೋಷಿತಂ ॥ ೧೨೭ ॥

ಪ್ರೋತ್ಫುಲ್ಲವದನಾಂ ನಾರೀಂ ಪ್ರವಿಷಾದಗತಂ ನರಂ ।
ಅನಯೋರ್ಮಾನಸಂ ಜ್ಞಾತ್ವಾ ರಾಜಪುತ್ರೋಽವದದ್ವಚಃ ॥ ೧೨೮ ॥

॥ ರಾಜಪುತ್ರ ಉವಾಚ ॥

ಕಿಂ ನ ಸಂಭಾಷಸೇ ಮಾಂ ಚ ಮಿತ್ರಕಂ ಚಿರಮಾಗತಂ ॥ ೧೨೯ ॥

॥ ಹರಿರುವಾಚ ॥

ಅಬ್ರವೀತ್ಸೋಽಪಿ ಧರ್ಮಾತ್ಮಾ ರಾಜಪುತ್ರಮನಷ್ಟಧೀಃ ॥ ೧೩೦ ॥

---

೧೨೬. ಜನಗಳ ಅಪವಾದವನ್ನು ತಪ್ಪಿಸಿಕೊಳ್ಳಲು ಅದ್ರೋಹಕನಿಗೆ ಒಳ್ಳೆಯ ಬುದ್ಧಿಯು ಹುಟ್ಟಿತು. ಆಮೇಲೆ ಸೌದೆಗಳನ್ನು ತಂದು ಗುಡ್ಡೆ ಹಾಕಿ ಅದಕ್ಕೆ ಬೆಂಕಿ ಹಚ್ಚಿದನು.

೧೨೭. ಇಷ್ಟರಲ್ಲಿ ರಾಜಪುತ್ರನು ಆ ಅದ್ರೋಹಕನ ಮನೆಗೆ ಹೋಗಿ ಆ ಹೆಂಡತಿಯನ್ನೂ ಅದ್ರೋಹಕನನ್ನೂ ನೋಡಿದನು.

೧೨೮. ಈಕೆಯು ಸಂತೋಷ ಮುಖದಿಂದಿದ್ದಳು. ಅದ್ರೋಹಕನು ದುಃಖದಿಂದಿದ್ದನು. ಇವರ ಭಾವವನ್ನು ತಿಳಿದು ರಾಜಪುತ್ರನು ಇಂತೆಂದನು.

೧೨೯. ರಾಜಪುತ್ರನು ಹೇಳಿದನು– ಅಯ್ಯಾ ! ಬಹುಕಾಲದ ಮೇಲೆ ಬಂದ, ಮಿತ್ರನನ್ನು ಏಕೆ ಮಾತನಾಡಿಸುವುದಿಲ್ಲ ?

೧೩೦. ಹರಿಯು ಹೇಳಿದನು– ಆ ಧರ್ಮಾತ್ಮನು ಧೈರ್ಯದಿಂದಲೂ, ಬುದ್ಧಿವಂತಿಕೆಯಿಂದಲೂ ಇಂತೆಂದನು.

॥ ಅದ್ರೋಹಕ ಉವಾಚ ॥

ಯತ್ಕೃತಂ ದುಷ್ಕೃತಂ ಕರ್ಮ ಮಯಾ ತ್ವದ್ಧಿತಕಾರಣಾತ್ ।
ಸರ್ವಂ ವ್ಯರ್ಥಮಯಂ ಮನ್ಯೇ ಜನಾನಾಂ ಚ ಪ್ರವಾದತಃ ॥
ಅದ್ಯ ವಹ್ನಿಮಹಂ ಯಾಸ್ಯೇ ಪ್ರಪಶ್ಯಂತು ನರಾಃ ಸುರಾಃ ॥ ೧೩೧ ॥

॥ ಹರಿರುವಾಚ ॥

ಇತ್ಯುಕ್ತ್ವಾ ಸ ಮಹಾಭಾಗಃ ಪ್ರವಿವೇಶ ಹುತಾಶನಂ ।
ವಿಶತಸ್ತಸ್ಯ ವಹ್ನೌ ಚ ಕುಸುಮಂ ಚಿಕ್ಯುರಾಲಯೇ ॥ ೧೩೨ ॥

ನಾಂಗಮಸ್ಯಾನಲೋಽಧಾಕ್ಷೀನ್ನ ಚ ವಸ್ತ್ರಂ ನ ಕುಂತಲಂ ।
ಖೇ ಚ ದೇವಾ ಮುದಾ ಸರ್ವೇ ಸಾಧು ಸಾಧ್ವಿತಿ ಚಾವದನ್ ॥ ೧೩೩ ॥

ಅಪತನ್ಪುಷ್ಪವರ್ಷಾಣಿ ತಸ್ಯ ಮೂರ್ಧ್ನಿ ಸಮಂತತಃ ।
ಯೈರ್ಯೈಶ್ಚ ದುಷ್ಕೃತಂ ವಾಕ್ಯಂ ಗದಿತಂ ಚ ತಯೋಃ ಪ್ರತಿ ॥ ೧೩೪ ॥

ತೇಷಾಂ ಮುಖೇ ಪ್ರಜಾಯಂತೇ ಕುಷ್ಠಾನಿ ವಿವಿಧಾನಿ ಚ ।
ತತ್ರಾಗತ್ಯ ಚ ದೇವಾಶ್ಚ ವಹ್ನೇರಾಕೃಷ್ಯ ತಂ ಮುದಾ ॥ ೧೩೫ ॥

---

೧೩೧. ಅದ್ರೋಹಕನು ಹೇಳಿದನು- ಎಲೈ ರಾಜಪುತ್ರನೇ ! ನಿನಗೆ ಒಳ್ಳೆಯದನ್ನು ಮಾಡುವುದಕ್ಕೋಸ್ಕರ ನಾನು ಯಾವ ಮಿತಿಮೀರಿದ ಕೆಲಸಗಳನ್ನು ಮಾಡಿದ್ದೇನೆಯೋ, ಅವುಗಳು ಈ ಜನಗಳ ಮಾತಿನಿಂದ ವ್ಯರ್ಥವಾಯಿತು, ಎಂದು ಭಾವಿಸುತ್ತೇನೆ. ಆದಕ್ಕೋಸ್ಕರ ಈಗ ಬೆಂಕಿಯಲ್ಲಿ ಬೀಳುತ್ತೇನೆ. ನರರೂ ಸುರರೂ ನೋಡಲಿ.

೧೩೨-೧೩೩. ಹರಿಯು ಹೇಳಿದನು- ಹೀಗೆಂದು ಹೇಳಿ ಆತನು ಬೆಂಕಿಯಲ್ಲಿ ಬಿದ್ದನು. ಆಗ ಅಂತರಿಕ್ಷದಿಂದ ಪುಷ್ಪವೃಷ್ಟಿಯಾಯಿತು. ಬೆಂಕಿಯು ಇವನ ಅವಯುವವನ್ನಾಗಲಿ, ಬಟ್ಟೆಯನ್ನಾಗಲಿ, ಕೂದಲನ್ನಾಗಲಿ, ಸುಡಲಿಲ್ಲ. ಆಕಾಶದಲ್ಲಿ ದೇವತೆಗಳು ಸಂತೋಷದಿಂದ ಸಾಧು, ಸಾಧು, ಎಂದು ಹೊಗಳಿದರು.

೧೩೪-೧೩೭. ಅವನ ತಲೆಯಮೇಲೆ ಎಲ್ಲಾ ಕಡೆಯಿಂದಲೂ ಹೂ ಮಳೆ ಬಿದ್ದಿತು. ಅವನನ್ನು ಕುರಿತು ಯಾರು ಕೆಟ್ಟ ಮಾತುಗಳನ್ನಾಡಿದರೋ ಅವರ ಮುಖದಲ್ಲಿ ಕುಷ್ಠವೆದ್ದು ಕೊಳೆತು ಹುಳುಗಳು ಬಿದ್ದುವು. ಆಗ ದೇವತೆಗಳು ಅಲ್ಲಿಗೆ ಬಂದು

ಅಪೂಜಯನ್ಪುಷ್ಪೈಶ್ಚ ಮುನಯೋ ವಿಸ್ಮಯಂ ಗತಾಃ ।
ಸರ್ವೈರ್ಮುನಿವರ್ಯೈರೇವ ಮನುಷ್ಯೈರ್ವಿವಿಧೈಸ್ತದಾ ॥ ೧೩೬ ॥

ಅರ್ಚ್ಯತೇ ತು ಮಹಾತೇಜಾಃ ಸ ಚ ಸರ್ವಾನ್ಪ್ರಪೂಜಯೇತ್ ।
ಸಜ್ಜನಾದ್ರೋಹಕಂ ನಾಮ ಕೃತಂ ದೇವಾಸುರೈರ್ನೃಭಿಃ ॥ ೧೩೭ ॥

ತಸ್ಯ ಪಾದರಜಃಪೂತಾ ಸಸ್ಯಪೂರ್ಣಾ ಧರಾಽಭವತ್ ।
ಸುರಾಶ್ಚಾಽಹುಶ್ಚ ತಂ ತತ್ರ ಭಾರ್ಯಾ ತೇ ಸಂಪ್ರಗೃಹ್ಯತಾಂ ॥ ೧೩೮ ॥

ಏತಸ್ಯ ಸದೃಶೋ ಲೋಕೇ ನ ಭೂತೋ ನ ಭವಿಷ್ಯತಿ ।
ನಾಸ್ತೀತಿ ಸಾಂಪ್ರತಂ ಪೃಥ್ವ್ಯಾಂ ಕಾಮಲೋಭಾಜಿತಃ ಪುಮಾನ್ ॥ ೧೩೯ ॥

ದೇವಾಸುರಮನುಷ್ಯಾಣಾಂ ರಕ್ಷಸಾಂ ಮೃಗಪಕ್ಷಿಣಾಂ ।
ಕೀಟಾದೀನಾಂ ಚ ಸರ್ವೇಷಾಂ ಕಾಮ ಏಷ ಸುದುರ್ಜಯಃ ॥ ೧೪೦ ॥

ಕಾಮಾಲ್ಲೋಭಾತ್ತಥಾ ಕ್ರೋಧಾನ್ನಿತ್ಯಂ ಸತ್ವೇಷು ಜಾಯತೇ ।
ಸಂಸಾರಬಂಧಕಃ ಕಾಮೋ ಹ್ಯಕಾಮೋ ನ ಕ್ವಚಿದ್ಭವೇತ್ ॥ ೧೪೧ ॥

---

ಬೆಂಕಿಯಿಂದ ಅವನನ್ನು ಹೊರಕ್ಕೆಳೆದು ಪಾರಿಜಾತದ ಹೂಗಳಿಂದ ಅವನನ್ನು ಪೂಜಿಸಿದರು. ಮುನಿಗಳು ವಿಸ್ಮಿತರಾದರು. ಋಷಿಗಳು ಮನುಷ್ಯರು ಎಲ್ಲರೂ ಅವನಿಗೆ ಪೂಜೆ ಮಾಡಿದರು. ಅವನೂ ಎಲ್ಲರನ್ನೂ ಗೌರವಿಸಿದನು. ಆಗ ಎಲ್ಲರೂ ಅವನಿಗೆ ಸಜ್ಜನ ಅದ್ರೋಹಕ, ಎಂದು ಹೆಸರಿಟ್ಟರು.

೧೩೮-೧೩೯. ಆಗ ಅವನ ಪಾದಧೂಳಿಯಿಂದ ಪವಿತ್ರವಾಗಿ ಭೂಮಿಯು ಸಸ್ಯಗಳಿಂದ ಕೂಡಿಕೊಂಡಿತು. ದೇವತೆಗಳು ಆ ಕ್ಷತ್ರಿಯನನ್ನು ನಿನ್ನ ಹೆಂಡತಿಯನ್ನು ಸ್ವೀಕರಿಸೆಂದರು. ಲೋಕದಲ್ಲಿ ಇವನ ಸಮರು ಹಿಂದಿರಲಿಲ್ಲ. ಮುಂದೆ ಹುಟ್ಟುವುದೂ ಇಲ್ಲ. ಈಗಲಂತು ಕಾಮ ಲೋಭಗಳಿಲ್ಲದ ಇವನಂತಹವರಿಲ್ಲವೇ ಇಲ್ಲ

೧೪೦. ದೇವತೆಗಳು, ಅಸುರರು, ಮನುಷ್ಯರು, ರಾಕ್ಷಸರು, ಮೃಗ, ಪಕ್ಷಿಗಳು ಕೀಟಗಳು, ಇವೊಂದಕ್ಕೂ ಕಾಮವನ್ನು ಜಯಿಸಲು ಸಾಧ್ಯವಾಗುವುದಿಲ್ಲ.

೧೪೧. ಕಾಮ, ಕ್ರೋಧ, ಲೋಭಗಳಿಂದ ಎಲ್ಲರಿಗೂ ಸಂಸಾರ ಬಂಧಕವಾದ ಕಾಮವು ಹುಟ್ಟುತ್ತದೆ. ಕಾಮವಿಲ್ಲದವನು ಎಲ್ಲಿಯೂ ಇಲ್ಲವೇ ಇಲ್ಲ.

ಅನೇನೈವ ಜಿತಂ ಸರ್ವಂ ಭುವನಾನಿ ಚತುರ್ದಶ ।
ಅಮುಷ್ಯ ಹೃದಯೇ ನಿತ್ಯಂ ವಾಸುದೇವೋ ಮುದಾ ಸ್ಥಿತಃ ॥ ೧೪೨ ॥

ಏವಂ ಸ್ಪೃಷ್ಟ್ವಾಽಥ ದೃಷ್ಟ್ವಾ ತಂ ಮನುಷ್ಯಾಃ ಸರ್ವಕಲ್ಮಷಾತ್ ।
ಪ್ರೂಯಂತೇ ಹ್ಯನಘಾಶ್ಚೈವ ಲಭಂತೇ ಚಾಕ್ಷಯಂ ದಿವಂ ॥ ೧೪೩ ॥

ಏವಮುಕ್ತ್ವಾ ಗತಾ ದೇವಾ ವಿಮಾನೈಶ್ಚ ದಿವಂ ಮುದಾ ।
ಮನುಷ್ಯಾಃ ಪ್ರಯಯುಸ್ತುಷ್ಟಾ ದಂಪತೀ ಸ್ವಗೃಹಂ ತಥಾ ॥ ೧೪೪ ॥

ದಿವ್ಯಂ ಚಕ್ಷುಸ್ತದಾ ತಸ್ಯ ಸ ಚ ದೇವಾನ್ಪ್ರಪಶ್ಯತಿ ।
ತ್ರೈಲೋಕ್ಯಸ್ಯೈವ ವಾರ್ತಾಂ ಚ ಜಾನಾತಿ ಲೀಲಯಾ ಭೃಶಂ ॥ ೧೪೫ ॥

॥ ವ್ಯಾಸ ಉವಾಚ ॥

ತತಸ್ತಸ್ಯ ಚ ವೀಥ್ಯಾಂ ಚ ದೃಷ್ಟಂ ತೇನ ದ್ವಿಜೇನ ಹ ।
ಸ ಪಪ್ರಚ್ಛ ಮುದಾ ತಂ ಚ ಧರ್ಮೋದ್ದೇಶಂ ಹಿತಂ ಬಹು ॥ ೧೪೬ ॥

---

೧೪೨. ಇವನು ಹದಿನಾಲ್ಕುಲೋಕಗಳನ್ನೂ ಜಯಿಸಿದ್ದಾನೆ. ಇವನ ಹೃದಯುದಲ್ಲಿ ವಿಷ್ಣುವು ಸಂತೋಷದಿಂದ ವಾಸವಾಗಿದ್ದಾನೆ.

೧೪೩. ಈ ರೀತಿ ಅವನನ್ನು ನೋಡಿ ಮುಟ್ಟಿ ಜನರು ಪಾಪಗಳನ್ನು ಕಳೆದುಕೊಳ್ಳುತ್ತಾರೆ. ಪವಿತ್ರರಾಗಿ ಸ್ವರ್ಗವನ್ನು ಹೊಂದುತ್ತಾರೆ.

೧೪೪. ಆಗ ದೇವತೆಗಳು ಹೀಗೆಂದು ಹೇಳಿ ಸ್ವರ್ಗಕ್ಕೆ ಹೋದರು. ಮನುಷ್ಯರೂ ಆ ದಂಪತಿಗಳೂ ಸಂತೋಷಗೊಂಡು ಮನೆಗೆ ಹೋದರು.

೧೪೫. ಅವನಿಗೆ ಆಗ ದಿವ್ಯಜ್ಞಾನ ಹುಟ್ಟಿ ದೇವತೆಗಳನ್ನು ನೋಡಿದನು. ಮೂರುಲೋಕದ ವಿಷಯುಗಳನ್ನೂ ಲೀಲೆಯಿಂದ ತಿಳಿಯುವನು.

೧೪೬. ವ್ಯಾಸನು ಹೇಳಿದನು– ಆಗ ಆ ಬ್ರಾಹ್ಮಣನು ಅವನನ್ನು ಬೀದಿಯುಲ್ಲಿಯೇ ಕಂಡು ಸಂತೋಷಪಟ್ಟು ತನಗೆ ಹಿತವಾದ ಬಹಳ ವಿಷಯುಗಳನ್ನು ಕೇಳಿದನು.

॥ ಸಜ್ಜನಾದ್ರೋಹಕ ಉವಾಚ ॥

ಗಚ್ಛ ಬಾಡವ ಧರ್ಮಜ್ಞ ವೈಷ್ಣವಂ ಪುರುಷೋತ್ತಮಃ ।
ತಂ ಚ ದೃಷ್ಟ್ವಾ ತ್ವಭೀಷ್ಟಂ ತೇ ಸಾಂಪ್ರತಂ ಚ ಫಲಿಷ್ಯತಿ ॥ ೧೪೭ ॥

ಬಕಸ್ಯ ನಿಧನಂ ಯದ್ವಾ ವಸ್ತ್ರಸ್ಯಾಶೋಷಣಂ ತಥಾ ।
ಜಾನೀಷೇ ಚಾಪರಂ ಯಚ್ಚ ಕಾಮಂ ತೇಽಸ್ತಿ ಹೃದಿ ಸ್ಥಿತಂ ॥ ೧೪೮ ॥

॥ ವ್ಯಾಸ ಉವಾಚ ॥

ಏತಚ್ಛ್ರುತ್ವಾ ತು ವಚನಮಾಗತೋ ವೈಷ್ಣವಂ ಪ್ರತಿ ।
ವಿಷ್ಣುರೂಪದ್ವಿಜೇನೈವ ಸಾರ್ಧಂ ತೇನ ಮುದಾ ಯಯೌ ॥ ೧೪೯ ॥

ಅಪಶ್ಯತ್ಪುರುಷಂ ಶುದ್ಧಂ ಜ್ವಲಂತಂ ಚ ಪುರಃ ಸ್ಥಿತಂ ।
ಸರ್ವಲಕ್ಷಣಸಂಪೂರ್ಣಂ ದೀಪ್ಯಮಾನಂ ಸ್ವತೇಜಸಾ ॥ ೧೫೦ ॥

ಅಬ್ರವೀತ್ಸ ಚ ಧರ್ಮಾತ್ಮಾ ಧ್ಯಾನಸ್ಥಂ ಚ ಹರೇಃ ಪ್ರಿಯಂ ॥ ೧೫೧ ॥

॥ ವಿಪ್ರ ಉವಾಚ ॥

ವದ ನೋ ಯದ್ಯದ್ವೃತ್ತಂ ವೈ ದೂರಾತ್ತ್ವಾಂ ಚಾಽಗತೋ ಹ್ಯಹಂ ॥೧೫೨॥

---

೧೪೭. ಸಜ್ಜನಾದ್ರೋಹನು ಹೇಳಿದನು- ಎಲೈ ಬ್ರಾಹ್ಮಣನೇ ! ನೀನು ವೈಷ್ಣವನಾದ ಪುರುಷೋತ್ತಮನ ಬಳಿಗೆ ಹೋಗು. ಅವನನ್ನು ನೋಡಿದರೆ ನಿನ್ನಿಷ್ಟವು ನೆರವೇರುತ್ತದೆ.

೧೪೮. ಅವನು ಬಕದ ಸಾವನ್ನಾಗಲೀ, ಬಟ್ಟೆ ಒಣಗಿದುದನ್ನಾಗಲೀ, ಇನ್ನೂ ಮಿಕ್ಕವುಗಳನ್ನಾಗಲೀ, ಬಲ್ಲನು. ನಿನ್ನ ಇಷ್ಟಾರ್ಥವು ಕೈಗೂಡುತ್ತದೆ.

೧೪೯. ವ್ಯಾಸನು ಹೇಳಿದನು- ಈ ಮಾತನ್ನು ಕೇಳಿ ಆ ಬ್ರಾಹ್ಮಣ ವೇಷಧಾರಿಯಾದ ವಿಷ್ಣುವಿನೊಡನೆಯೇ ವೈಷ್ಣವನಲ್ಲಿಗೆ ಹೊರಟನು.

೧೫೦-೧೫೧. ಅಲ್ಲಿ ಶುದ್ಧನಾಗಿ ಎದುರಿಗೆ ಜ್ವಲಿಸುತ್ತಿರುವ ಲಕ್ಷಣವಂತನಾದ ಹರಿಗೆ ಪ್ರಿಯನಾದ, ಧ್ಯಾನಮಾಡುತ್ತಿರುವ ಆತನನ್ನು ನೋಡಿ ಇಂತೆಂದನು.

೧೫೨. ವಿಪ್ರನು ಹೇಳಿದನು- ನಮಗೆ ನಡೆದುದೆಲ್ಲವನ್ನೂ ಹೇಳು. ದೂರದಿಂದ ಬಂದಿದ್ದೇನೆ.

॥ ವೈಷ್ಣವ ಉವಾಚ ॥

ಪ್ರಸನ್ನಸ್ತೇ ಸುರಶ್ರೇಷ್ಠೋ ದಾನವಾರೀಶ್ವರಃ ಸದಾ ।
ದೃಷ್ಟ್ವಾ ತ್ವಾಂ ಚ ಮನೋಽಸ್ಮಾಕಂ ಹೃಷ್ಯತೀವಧುನಾ ದ್ವಿಜ ॥ ೧೫೩ ॥
ಕಲ್ಯಾಣಂ ಚಾತುಲಂ ತೇಽದ್ಯ ಫಲಿಷ್ಯತಿ ಮನೋರಥಃ ।
ಸುರವರ್ತ್ಮನಿ ತೇ ನಿತ್ಯಂ ಚೈಲಂ ಶುಷ್ಯತಿ ನಾನ್ಯಥಾ ॥
ದೃಷ್ಟ್ವಾ ದೇವಂ ಸುರಶ್ರೇಷ್ಠಂ ಮಮ ಗೇಹೇ ಹರಿಂ ಸ್ಥಿತಂ ॥ ೧೫೪ ॥

॥ ವ್ಯಾಸ ಉವಾಚ ॥

ಇತ್ಯುಕ್ತೇ ವೈಷ್ಣವೇ ತತ್ರ ಸ ತು ತಂ ಪುನರಬ್ರವೀತ್ ॥ ೧೫೫ ॥

॥ ವಿಪ್ರ ಉವಾಚ ॥

ಕ್ವಾಸೌ ವಿಷ್ಣುಃ ಸ್ಥಿತೋ ನಿತ್ಯಂ ದರ್ಶಯಾದ್ಯ ಪ್ರಸಾದತಃ ॥ ೧೫೬ ॥

॥ ವೈಷ್ಣವ ಉವಾಚ ॥

ಅಸ್ಮಿನ್ದೇವಗೃಹೇ ರಮ್ಯೇ ಪ್ರವಿಶ್ಯ ಪರಮೇಶ್ವರಂ ।
ತಂ ದೃಷ್ಟ್ವಾ ಕಿಲ್ಬಿಷಾದ್ಘೋರಾನ್ಮುಚ್ಯತೇ ಜನ್ಮಬಂಧನಾತ್ ॥ ೧೫೭ ॥

---

೧೫೩. ವೈಷ್ಣವನು ಹೇಳಿದನು- ಎಲೈ ಬ್ರಾಹ್ಮಣನೇ ! ನಿನಗೆ ದಾನವಾರಿಯಾದ ಆ ದೇವದೇವನು ಪ್ರಸನ್ನನಾಗಿದ್ದಾನೆ. ನಿನ್ನನ್ನು ನೋಡಿದುದರಿಂದ ನನ್ನ ಮನಸ್ಸು ಸಂತೋಷಗೊಂಡಿದೆ.

೧೫೪. ನಿನಗೆ ಬಹು ಮಂಗಳವಾಗುತ್ತದೆ. ಇಷ್ಟಾರ್ಥವು ಫಲಿಸುತ್ತದೆ. ನಿನ್ನ ಬಟ್ಟೆಗಳು ಅಂತರಿಕ್ಷದಲ್ಲಿ ಒಣಗುತ್ತವೆ. ನನ್ನ ಮನೆಯಲ್ಲಿರುವ ದೇವದೇವನಾದ ಹರಿಯನ್ನು ನೋಡು.

೧೫೫. ವ್ಯಾಸನು ಹೇಳಿದನು- ವೈಷ್ಣವನು ಇಂತೆನ್ನಲು ವಿಪ್ರನು ಮತ್ತೆ ಇಂತೆಂದನು.

೧೫೬. ವಿಪ್ರನು ಹೇಳಿದನು– ವಿಷ್ಣುವು ಎಲ್ಲಿದ್ದಾನೆ ? ದಯವಿಟ್ಟು ನನಗೆ ಅವನನ್ನು ತೋರಿಸು.

೧೫೭. ವೈಷ್ಣವನು ಹೇಳಿದನು- ಈ ಸುಂದರವಾದ ದೇವರ ಮನೆಗೆ ಹೋಗು. ಅಲ್ಲಿ ಆ ಸ್ವಾಮಿಯನ್ನು ನೋಡಿ ಪಾಪದಿಂದಲೂ, ಜರಾಮರಣಗಳಿಂದಲೂ, ಮುಕ್ತನಾಗುತ್ತೀಯೆ.

॥ ವ್ಯಾಸ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ಪ್ರವಿಶ್ಯ ಸದನಂ ಪ್ರತಿ ।
ಅಪಶ್ಯತ್ತಂ ದ್ವಿಜಂ ವಿಷ್ಣುಂ ತಿಷ್ಠಂತಂ ಪದ್ಮತಲ್ಪಕೇ ॥ ೧೫೮ ॥

ಶಿರಸೈವ ಪ್ರವಂದ್ಯಾಥ ಜಗ್ರಾಹ ಚರಣೌ ಮುದಾ ।
ಪ್ರಸಾದೀ ಭವ ದೇವೇಶ ನ ಜ್ಞಾತಸ್ತ್ವಂ ಪುರಾ ಮಯಾ ॥ ೧೫೯ ॥

ಇಹಾಮುತ್ರ ಚ ದೇವೇಶ ತವಾಹಂ ಕಿಂಕರಃ ಪ್ರಭೋ ।
ಅನುಗ್ರಹಶ್ಚ ಮೇ ದೃಷ್ಟೋ ಭವತೋ ಮಧುಸೂದನ ॥
ರೂಪಂ ತೇ ದ್ರಷ್ಟುಮಿಚ್ಛಾಮಿ ಯದಿ ಚಾಸ್ತಿ ಕೃಪಾ ಮಯಿ ॥ ೧೬೦ ॥

॥ ವಿಷ್ಣುರುವಾಚ ॥

ಅಸ್ತಿ ಮೇ ತ್ವಯಿ ಭೂದೇವ ಪ್ರಿಯತ್ವಂ ಚ ಸದೈವ ಹಿ ।
ಸ್ನೇಹಾತ್ಪುಣ್ಯವತಾಮೇವ ದರ್ಶನಂ ಕಾರಿತಂ ಮಯಾ ॥ ೧೬೧ ॥

ದರ್ಶನಾತ್ಸ್ಪರ್ಶನಾದ್ಧ್ಯಾನಾತ್ಕೀರ್ತನಾದ್ಭಾಷಣಾತ್ತಥಾ ।
ಸಕೃತ್ಪುಣ್ಯವತಾಮೇವ ಸ್ವರ್ಗಂ ಚಾಕ್ಷಯಮಶ್ನುತೇ ॥ ೧೬೨ ॥

---

೧೫೮. ವ್ಯಾಸನು ಹೇಳಿದನು- ಅವನ ಮಾತನ್ನು ಕೇಳಿ ಒಳಗೆ ಹೋಗಿ, ಪದ್ಮದ ಹಾಸಿಗೆಯಲ್ಲಿ ಬ್ರಾಹ್ಮಣನ ವೇಷದಿಂದಿರುವ ವಿಷ್ಣುವನ್ನು ನೋಡಿದನು.

೧೫೯. ಅವನನ್ನು ನಮಸ್ಕರಿಸಿ ಪಾದಗಳನ್ನು ಹಿಡಿದುಕೊಂಡು ಸ್ವಾಮಿ, ಅನುಗ್ರಹ ಮಾಡು. ಮೊದಲು ನನಗೆ ನೀನು ಗೊತ್ತಾಗಲಿಲ್ಲ.

೧೬೦. ನಿನಗೆ ನಾನು ಇಹಪರಗಳೆರಡರಲ್ಲಿಯೂ ಸೇವಕನು, ನೀನು ಈಗ ಅನುಗ್ರಹಮಾಡಿದ್ದೀಯೆಂದು ತಿಳಿಯಿತು. ದಯವಿಟ್ಟು ನಿನ್ನ ರೂಪವನ್ನು ತೋರಿಸು.

೧೬೧. ವಿಷ್ಣುವು ಹೇಳಿದನು– ಎಲೈ ಬ್ರಾಹ್ಮಣನೇ ! ನಿನ್ನಲ್ಲಿ ಯಾವಾಗಲೂ ನನಗೆ ಪ್ರೀತಿಯಿದೆ, ನಿನ್ನಲ್ಲಿರುವ ಸ್ನೇಹದಿಂದ ಪುಣ್ಯವಂತರ ದರ್ಶನವನ್ನು ಮಾಡಿಸಿದೆನು.

೧೬೨. ಪುಣ್ಯವಂತರ ದರ್ಶನ, ಮುಟ್ಟುವಿಕೆ, ಧ್ಯಾನ, ಮಾತಾಡಿಸೋಣ, ಇವುಗಳನ್ನು ಒಂದು ಬಾರಿ ಮಾಡಿದರೂ ಕೂಡ ಅಕ್ಷಯವಾದ ಸ್ವರ್ಗವು ಬರುತ್ತದೆ.

ನಿತ್ಯಮೇವ ತು ಸಂಸರ್ಗಾತ್ಸರ್ವಪಾಪಕ್ಷಯೋ ಭವೇತ್।
ಭುಕ್ತ್ವಾ ಸುಖಮನಂತಂ ಚ ಮದ್ದೇಹೇ ಪ್ರವಿಲೀಯತೇ ॥ ೧೬೩ ॥

ಸ್ನಾತ್ವಾ ಚ ಪುಣ್ಯತೀರ್ಥೇಷು ದೃಷ್ಟ್ವಾ ಶಂಭುಂ ಚ ಸರ್ವತಃ ।
ದೃಷ್ಟ್ವಾ ಪುಣ್ಯವತಾಂ ದೇಶಾನ್ಮಮ ದೇಹೇ ವಿಲೀಯತೇ ॥ ೧೬೪ ॥

ಕಥಯಿತ್ವಾ ಕಥಾಂ ಪುಣ್ಯಾಂ ಲೋಕಾನಾಮಗ್ರತಃ ಸದಾ ।
ಸ ಚೈವ ನರಶಾರ್ದೂಲ ಮದ್ದೇಹೇ ಪ್ರವಿಲೀಯತೇ ॥ ೧೬೫ ॥

ಉಪೋಷ್ಯ ವಾಸರೇಽಸ್ಮಾಕಂ ಶ್ರುತ್ವಾ ಮಚ್ಚರಿತಂ ಧ್ರುವಂ ।
ರಾತ್ರೌ ಜಾಗರಣಂ ಕೃತ್ವಾ ಮದ್ದೇಹೇ ಪ್ರವಿಲೀಯತೇ ॥ ೧೬೬ ॥

ಅತ್ಯಂತಘೋಷಣೇ ನಿತ್ಯಂ ಗೀತವಾದ್ಯಾದಿಕಾನಿ ಚ ।
ನಾಮ ಸ್ಮರನ್ದ್ವಿಜಶ್ರೇಷ್ಠ ಮದ್ದೇಹೇ ಪ್ರವಿಲೀಯತೇ ॥ ೧೬೭ ॥

ಸದಾ ಗುರುಜನೇ ಯಸ್ಯ ಮನಶ್ಚಾದ್ರೋಹತಾಂ ವ್ರಜೇತ್ ।
ತಪಸ್ವಿನಿ ತಥಾ ರಾಜ್ಞಿ ಮದ್ದೇಹೇ ಪ್ರವಿಲೀಯತೇ ॥ ೧೬೮ ॥

---

೧೬೩. ದಿನವೂ ಅವರ ಸಹವಾಸವಿದ್ದರೆ ಪಾಪವೆಲ್ಲವೂ ಹೋಗುತ್ತದೆ. ಬಹು ಸುಖವನ್ನು ಹೊಂದಿ ಅನಂತರ ನನ್ನಲ್ಲಿಯೇ ಲೀನನಾಗುತ್ತಾನೆ.

೧೬೪. ಪುಣ್ಯ ತೀರ್ಥಗಳಲ್ಲಿ ಸ್ನಾನಮಾಡಿ ಎಲ್ಲಾ ಜಾಗದಲ್ಲಿಯೂ ಶಂಭುವನ್ನು ದರ್ಶನಮಾಡಿ ಪುಣ್ಯ ದೇಶಗಳನ್ನು ನೋಡಿದರೆ ಅವನು ನನ್ನಲ್ಲಿಯೇ ಲೀನನಾಗುತ್ತಾನೆ.

೧೬೫-೧೬೬. ಜನಗಳಿಗೆ ಪುಣ್ಯಕಥೆಗಳನ್ನು ಹೇಳಿದರೆ ಅವನು ನನ್ನ ದೇಹದಲ್ಲಿ ಲೀನನಾಗುತ್ತಾನೆ. ಏಕಾದಶಿಯ ದಿನ ಉಪವಾಸ ಮಾಡಿ ನನ್ನ ಚರಿತ್ರೆಯನ್ನು ಕೇಳಿ ರಾತ್ರಿಯಲ್ಲಿ ಜಾಗರಣೆ ಮಾಡಿದವನು ನನ್ನ ದೇಹದಲ್ಲಿ ಲೀನನಾಗುತ್ತಾನೆ.

೧೬೭. ಗೀತವಾದ್ಯಾದಿಗಳಿಂದ ಶಬ್ದಮಾಡುತ್ತ ನನ್ನ ನಾಮಸ್ಮರಣೆ ಮಾಡಿದವನು ನನ್ನಲ್ಲಿ ಸೇರುತ್ತಾನೆ.

೧೬೮. ಗುರು, ತಪಸ್ವಿ, ರಾಜರಲ್ಲಿ ದ್ರೋಹಮಾಡದವನು ನನ್ನಲ್ಲಿ ಲೀನನಾಗುತ್ತಾನೆ.

ಮದ್ಭಕ್ತಸ್ತೀರ್ಥಭೂತಶ್ಚ ತ್ವಮೇವ ಬಕಮಾರಣಾತ್ ।
ಯಚ್ಛಾಪಂ ತಸ್ಯ ಮೋಕ್ಷಾಯ ಯತ್ರ ಸ್ಥಿತ್ವಾ ಉವಾಚ ಹ ॥ ೧೭೯ ॥

ಗಚ್ಛ ಮೂಕಂ ಮಹಾತ್ಮನಂ ತೀರ್ಥಂ ಪುಣ್ಯವತಾಂ ವರಂ ।
ಮೂಕಸ್ಯ ದರ್ಶನಾತ್ತಾತ ಸರ್ವಂ ದೃಷ್ಟಂ ಪ್ರಪೂಜನಂ ॥ ೧೮೦ ॥

ತೇಷಾಂ ಚ ದರ್ಶನಾದೇವ ತಥಾ ಸಂಭಾಷಣಾನ್ಮಮ ।
ಮಮ ಸಂಪರ್ಕಭಾವಾಚ್ಚ ಮದ್ಗೃಹಂ ಚಾಗತೋ ಭವಾನ್ ॥ ೧೮೧ ॥

ಜನ್ಮಕೋಟಿಸಹಸ್ರೇಭ್ಯೋ ಯಸ್ಯ ಪಾಪಕ್ಷಯೋ ಭವೇತ್ ।
ಸ ಮಾಂ ಪಶ್ಯತಿ ಧರ್ಮಜ್ಞೋ ಯಥಾ ತೇನ ಪ್ರಸನ್ನತಾ ॥ ೧೮೨ ॥

ಮಮೈವಾನುಗ್ರಹಾದ್ವತ್ಸ ಅಹಂ ದೃಷ್ಟಸ್ತ್ವಯಾಽನಘ ।
ತಸ್ಮಾನ್ಮತ್ತೋ ವರಂ ಗೃಹ್ಣ ಯತ್ತೇ ಮನಸಿ ವರ್ತತೇ ॥ ೧೮೩ ॥

---

೧೭೯. ನೀನು ಶಾಪಕೊಟ್ಟು ಒಂದು ಬಕವನ್ನು ಕೊಂದೆಯಷ್ಟೇ ? ನಿನ್ನ ಶಾಪವು ಅವನ ಮೋಕ್ಷಕ್ಕೆ ಕಾರಣವಾಯಿತು. ಅವನೇ ಅಂತರಿಕ್ಷದಲ್ಲಿ ನಿಂತು ಮಾತಾಡಿದವನು.

೧೮೦. ತೀರ್ಥಗಳಲ್ಲಿ ಮಹಿಮನಾದ ಮೂಕನ ಬಳಿಗೆ ಹೋಗೆಂದು ಹೇಳಿದನಲ್ಲವೇ ? ಮೂಕನ ದರ್ಶನದಿಂದ ಅಲ್ಲಿ ನಡೆಯುವ ಪೂಜೆಗಳನ್ನೂ ನೋಡಿದಂತಾಯಿತು.

೧೮೧. ಅವರ ಭಾಷಣದಿಂದಲೂ ಅವರೊಡನೆ ಮಾತನಾಡಿದುದರಿಂದಲೂ ನನ್ನ ಸಂಪರ್ಕ ಉಂಟಾದುದರಿಂದಲೂ ನೀನು ನನ್ನ ಮನೆಗೆ ಬಂದೆ.

೧೮೨. ಕೋಟಿ ಸಾವಿರ ಜನ್ಮಗಳ ಪಾಪಕ್ಷಯವಾದರೆ ಅವನೂ ಧರ್ಮವನ್ನು ಬಲ್ಲವನಾಗಿ ನನ್ನನ್ನು ನೀನು ನೋಡಿದಂತೆ ನೋಡಬಲ್ಲನು. ನನ್ನನ್ನು ನೋಡಿದೆ. ನಾನು ನಿನಗೆ ಪ್ರಸನ್ನನಾದೆನು.

೧೮೩. ನನ್ನ ಅನುಗ್ರಹವು ನಿನಗುಂಟಾದುದರಿಂದಲೇ ನಾನು ನಿನಗೆ ದರ್ಶನವನ್ನು ಕೊಟ್ಟೆನು. ಆದ್ದರಿಂದ ನಿನಗೆ ಬೇಕಾದ ವರವನ್ನು ಕೇಳಿಕೋ.

॥ ವಿಪ್ರ ಉವಾಚ ॥

ಅಸ್ಮಾಕಂ ಸರ್ವಥಾ ನಾಥ ಮಾನಸಂ ತ್ವಯಿ ತಿಷ್ಠತು ।
ತ್ವದೃತೇ ಸರ್ವಲೋಕೇಶ ಕದಾಚಿನ್ನಾನುರೋಚನಂ ॥ ೧೭೪ ॥

॥ ಮಾಧವ ಉವಾಚ ॥

ಯಸ್ಮಾದೇತಾದೃಶೀ ಬುದ್ಧಿಃ ಸ್ಫುರತೇ ತೇ ಸದಾಽನಘ ।
ತಸ್ಮಾನ್ಮತ್ಸದೃಶಾನ್ಭೋಗಾನ್ಮದ್ಗೃಹೇ ಸಂಪ್ರಲಪ್ಸ್ಯಸೇ ॥ ೧೭೫ ॥

ಕಿಂತು ತೌ ಪಿತರೌ ಪೂಜ್ಯೌ ಮಮಾಸ್ತೀತಿ ತವಾನಘ ।
ಪೂಜಯಿತ್ವಾ ತು ಪಿತರೌ ಪಶ್ಚಾದ್ಯಾಸ್ಯಸಿ ಮತ್ತನುಂ ॥ ೧೭೬ ॥

ತಯೋರ್ನಿಶ್ವಾಸವಾತೇನ ಮನ್ಯುನಾ ಚ ಭೃಶಂ ಪುನಃ ।
ತಪಃ ಕ್ಷರತಿ ತೇ ನಿತ್ಯಂ ತಸ್ಮಾತ್ಪೂಜಯ ತೌ ದ್ವಿಜ ॥ ೧೭೭ ॥

ಮನ್ಯುರ್ನಿಪತತೇ ಯಸ್ಮಿನ್ಪುತ್ರೇ ಪಿತ್ರೋಶ್ಚ ನಿತ್ಯಶಃ ।
ತನ್ನಿರಯಂ ನ ಬಾಧೇಽಹಂ ನ ಧಾತಾ ನ ಚ ಶಂಕರಃ ॥ ೧೭೮ ॥

---

೧೭೪. ವಿಪ್ರನು ಹೇಳಿದನು- ಸ್ವಾಮಿ! ನನ್ನ ಮನಸ್ಸು ಯಾವಾಗಲೂ ನಿನ್ನಲ್ಲಿರಲಿ. ನಿನ್ನ ಹೊರತಾಗಿ ನಮಗೆ ಸಂತೋಷವೆಂಬುದೇ ಬೇರೆ ಬೇಡವಾಗಲಿ.

೧೭೫. ಮಾಧವನು ಹೇಳಿದನು- ನಿನಗೆ ಯಾವಾಗಲೂ ಈ ರೀತಿಯಾದ ಬುದ್ಧಿಯಿರುವುದರಿಂದ ನನ್ನ ಮನೆಯಲ್ಲಿ ನನಗೆ ಸಮವಾದ ಭೋಗಗಳನ್ನೇ ಅನುಭಸುತ್ತೀರು.

೧೭೬. ನನಗೂ ನಿನಗೂ ಆ ತಾಯಿತಂದೆಗಳು ಪೂಜ್ಯರು. ಅವರನ್ನು ಪೂಜಿಸಿ ಅನಂತರ ನನ್ನಲ್ಲಿ ಐಕ್ಯವಾಗುತ್ತೀಯೆ.

೧೭೭. ಅವರ ಸಂಕಟದಿಂದಲೂ ಕೋಪದಿಂದಲೂ ನಿನ್ನ ತಪಸ್ಸು ನಾಶವಾಗುತ್ತದೆ. ಆದ್ದರಿಂದ ಅವರನ್ನು ಪೂಜಿಸು.

೧೭೮. ಯಾವ ಮಗನ ಮೇಲೆ ತಾಯಿತಂದೆಗಳು ಕೋಪ ಮಾಡುತ್ತಾರೆಯೋ ಅವನಿಗೆ ಬರತಕ್ಕ ನರಕವನ್ನು ನಾನಾಗಲಿ, ಬ್ರಹ್ಮ, ಶಂಕರರಾಗಲಿ ತಪ್ಪಿಸಲಾರೆವು.

ತಸ್ಮಾತ್ತ್ವಂ ಪಿತರೌ ಗಚ್ಛ ಕುರು ಪೂಜಾಂ ಪ್ರಯತ್ನತಃ ।
ತತಸ್ತ್ವಂ ಹಿ ತಯೋರೇವ ಪ್ರಸಾದಾನ್ಮತ್ಪದಂ ವ್ರಜ　　　　॥ ೧೭೯ ॥

॥ ವ್ಯಾಸ ಉವಾಚ ॥

ಇತ್ಯುಕ್ತೇ ತು ದ್ವಿಜಶ್ರೇಷ್ಠಃ ಪುನರಾಹ ಜಗದ್ಗುರುಂ　　　　॥ ೧೮೦ ॥

॥ ವಿಪ್ರ ಉವಾಚ ॥

ಪ್ರಸನ್ನೋ ಯದಿ ಮೇ ನಾಥ ರೂಪಂ ಸ್ವಂ ದರ್ಶಯಾಚ್ಯುತ　　॥ ೧೮೧ ॥

॥ ವ್ಯಾಸ ಉವಾಚ ॥

ತತೋ ದ್ವಿಜಪ್ರಣಯತಃ ಪ್ರಸನ್ನಹೃದಯೋ ವಶೀ ।
ರೂಪಂ ಸ್ವಂ ದರ್ಶಯಾಮಾಸ ಬ್ರಹ್ಮಣ್ಯಃ ಪುಣ್ಯಕರ್ಮಣೇ　　॥ ೧೮೨ ॥

ಶಂಖಚಕ್ರಗದಾಪದ್ಮಧಾರಿಣಂ ಪುರುಷೋತ್ತಮಂ ।
ಸರ್ವಲೋಕೈಕಕರ್ತಾರಂ ತೇಜಸಾ ಪೂರಿತಂ ಜಗತ್　　　　॥ ೧೮೩ ॥

---

೧೭೯. ಆದ್ದರಿಂದ ನೀನು ಅವರ ಬಳಿಗೆ ಹೋಗು. ಅವರನ್ನು ಸೇವಿಸು. ಅನಂತರ ಅವರ ಅನುಗ್ರಹದಿಂದ ನನ್ನ ಬಳಿಗೆ ಬಾ.

೧೮೦. ವ್ಯಾಸನು ಹೇಳಿದನು- ಹೀಗೆನ್ನಲು ಆ ಬ್ರಾಹ್ಮಣನು ಮತ್ತೆ ಸ್ವಾಮಿಯನ್ನು ಕುರಿತು ಇಂತೆಂದನು.

೧೮೧. ವಿಪ್ರನು ಹೇಳಿದನು– ನೀನು ನನಗೆ ಪ್ರಸನ್ನನಾಗಿದ್ದರೆ ನಿನ್ನ ರೂಪವನ್ನು ನನಗೆ ತೋರಿಸು.

೧೮೨. ವ್ಯಾಸನು ಹೇಳಿದನು- ಆಮೇಲೆ ಆ ಬ್ರಾಹ್ಮಣನಲ್ಲಿನ ಸ್ನೇಹದಿಂದ ಸಂತೋಷಗೊಂಡು ತನ್ನ ರೂಪವನ್ನು ತೋರಿಸಿದನು.

೧೮೩–೧೮೫. ಆ ಸ್ವಾಮಿಯು ವಿಶ್ವರೂಪವನ್ನು ತೋರಿಸಲು ಶಂಖ, ಚಕ್ರ, ಗದಾ, ಪದ್ಮಗಳನ್ನು ಹಿಡಿದಿರುವ, ಸರ್ವ ಲೋಕೇಶನಾದ, ಎಲ್ಲೆಡೆಯಲ್ಲೂ ತೇಜಸ್ಸನ್ನು

ಪ್ರಣಮ್ಯ ದಂಡವದ್ವಿಪ್ರ ಉವಾಚ ಪುನರಚ್ಯುತಂ ।
ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಚಕ್ಷುಷೀ ಶಿವೇ ॥ ೧೮೪ ॥

ಅದ್ಯ ಮೇ ಚ ಕರೌ ಶ್ಲಾಘ್ಯೌ ಧನ್ಯೋಽಹಂ ಜಗದೀಶ್ವರ ।
ಅದ್ಯ ಮೇ ಪುರುಷಾ ಯಾಂತಿ ಬ್ರಹ್ಮಲೋಕಂ ಸನಾತನಂ ॥ ೧೮೫ ॥

ನಂದಂತಿ ಬಾಂಧವಾ ಮೇಽದ್ಯ ತ್ವತ್ಪ್ರಸಾದಾಜ್ಜನಾರ್ದನ ।
ಇದಾನೀಂ ಚ ಪ್ರಸಿದ್ಧಾ ಮೇ ಸರ್ವೇ ಚೈವ ಮನೋರಥಾಃ ॥ ೧೮೬ ॥

ಕಿಂ ತು ಮೇ ವಿಸ್ಮಯೋ ನಾಥ ಮೂಕಾದೇರ್ಜ್ಞಾನಿನೋ ಭೃಶಂ ।
ಕಥಂ ಜಾನಾತಿ ಮದ್ವೃತ್ತಂ ದೇಶಾಂತರ ಉಪಸ್ಥಿತಂ ॥ ೧೮೭ ॥

ತಸ್ಯ ಗೇಹೋದರಾಕಾಶೇ ಸ್ಥಿತೋಽತಿಶೋಭನಃ ।
ತಥಾ ಪತಿವ್ರತಾಗೇಹೇ ತುಲಾಧಾರಶಿರೋರಪಿ ॥ ೧೮೮ ॥

ತಥಾ ಮಿತ್ರಾದ್ರೋಹಕಸ್ಯ ತ್ವಂ ಚ ವೈಷ್ಣವಮಂದಿರೇ ।
ಅನುಗ್ರಹಂ ಚ ಮೇ ವಿಪ್ರ ತತ್ತ್ವತೋ ವಕ್ತುಮರ್ಹಸಿ ॥ ೧೮೯ ॥

---

ಬೀರುತ್ತಿರುವ, ಆ ಸ್ವಾಮಿಯನ್ನು ನೋಡಿ ದಂಡಪ್ರಣಾಮವನ್ನು ಮಾಡಿ ಇಂತೆಂದನು. ಈಗ ನನ್ನ ಜನ್ಮವು ಸಫಲವಾಯಿತು ನನ್ನ ಕಣ್ಣುಗಳು ಮಂಗಳಕರವಾದುವು. ನನ್ನ ಕೈಗಳು ಶ್ಲಾಘ್ಯವಾದುವು. ನಾನೂ ಧನ್ಯನಾದೆನು. ಇಂದು ನನ್ನ ಪುರುಷರೆಲ್ಲರೂ ಬ್ರಹ್ಮಲೋಕವನ್ನು ಹೊಂದುತ್ತಾರೆ.

೧೮೬. ನನ್ನ ಬಂಧುಗಳೆಲ್ಲರೂ ಸಂತೋಷಪಡುತ್ತಾರೆ. ಈಗ ನನ್ನ ಇಷ್ಟಾರ್ಥಗಳೆಲ್ಲವೂ ಕೈಗೂಡಿದುವು.

೧೮೭. ಆದರೆ ನನಗೊಂದು ಆಶ್ಚರ್ಯವು ಉಂಟಾಗಿದೆ. ಈ ಮೂಕಾದಿಗಳೆಲ್ಲರೂ ಬೇರೇ ಕಡೆಯಲ್ಲಿ ನಡೆದ ವಿಷಯವನ್ನು ಹೇಗೆ ತಿಳಿದರು ?

೧೮೮–೧೮೯. ಅವನ ಮನೆಯೊಳಗೆ ಒಳ್ಳೆಯ ಬ್ರಾಹ್ಮಣನಿದ್ದನು. ಪತಿವ್ರತೆಯ ಮನೆಯಲ್ಲಿ ತುಲಾಧಾರನ ತಲೆಯ ಮೇಲೆ ಅದ್ರೋಹಕನ ಮತ್ತು ವೈಷ್ಣವ ಮಂದಿರಗಳಲ್ಲಿ ಅನಂತರ ನನಗೆ ಅನುಗ್ರಹವಾದುದರಲ್ಲಿನ ವಿಷಯಗಳನ್ನು ಸರಿಯಾಗಿ ತಿಳಿಸು.

॥ ಶ್ರೀ ಭಗವಾನುವಾಚ ॥

ಪಿತ್ರೋರ್ಭಕ್ತಃ ಸದಾ ಮೂಕಃ ಪತಿವ್ರತಾ ಶುಭಾ ಚ ಸಾ ।
ಸತ್ಯವಾದೀ ತುಲಾಧಾರಃ ಸಮಃ ಸರ್ವಜನೇಷು ಚ ॥ ೧೯೦ ॥

ಲೋಭಕಾಮಜಿತದ್ರೋಹೋ ಮದ್ಭಕ್ತೋ ವೈಷ್ಣವಃ ಸ್ಮೃತಃ ।
ಸಂಪ್ರೀತೋಽಹಂ ಗುಣೈರೇಷಾಂ ತಿಷ್ಠಾಮ್ಯಾವಸಥೇ ಮುದಾ ॥
ಭಾರತೀಕಮಲಾಭ್ಯಾಂ ಚ ಸಹಿತೋ ದ್ವಿಜಸತ್ತಮ ॥ ೧೯೧ ॥

॥ ವಿಪ್ರ ಉವಾಚ ॥

ಮಹಾಪಾತಕಿಸಂಸರ್ಗಾನ್ನರಾಶ್ಚೈವಾತಿಪಾತಕಾಃ ।
ಇತಿ ಜಲ್ಪಂತಿ ಧರ್ಮಜ್ಞಾಃ ಸ್ಮೃತಿಶಾಸ್ತ್ರೇಷು ಸರ್ವದಾ ॥
ಪುರಾಣಾಗಮವೇದೇಷು ಕಥಂ ತ್ವಂ ತಿಷ್ಠಸೇ ಗೃಹೇ ॥ ೧೯೨ ॥

॥ ಶ್ರೀಭಗವಾನುವಾಚ ॥

ಕಲ್ಯಾಣಾನಾಂ ಚ ಸರ್ವೇಷಾಂ ಕರ್ತಾ ಮೂಕೋ ಜಗತ್ತ್ರಯೇ ।
ವೃತ್ತಸ್ಥಮಪಿ ಚಾಂಡಾಲಂ ತಂ ದೇವಾ ಬ್ರಾಹ್ಮಣಂ ವಿದುಃ ॥ ೧೯೩ ॥

---

೧೯೦ ಶ್ರೀ ಭಗವಂತನು ಹೇಳಿದನು- ಆ ಮೂಕನು ಪಿತೃಭಕ್ತನು. ಆ ಪತಿವ್ರತೆಯೂ ಶುಭಳಾದವಳು. ಆ ವ್ಯಾಪಾರಿಯು ಸತ್ಯವಾದಿಯು. ಮತ್ತು ಎಲ್ಲರಲ್ಲಿಯೂ ಒಂದೇ ಸಮನಾದವನು.

೧೯೧. ಈ ಅದ್ರೋಹಕನು ಲೋಭ ಕಾಮಗಳನ್ನು ಜಯಿಸಿರುವನು. ಆ ವೈಷ್ಣವನು ನನ್ನ ಭಕ್ತನು. ಇವರ ಗುಣಗಳಿಂದ ನಾನು ಸಂತೋಷಗೊಂಡು ಅವರ ಮನೆಗಳಲ್ಲಿ ಲಕ್ಷ್ಮೀ ಸರಸ್ವತಿಯರೊಡನೆ ಇದ್ದೇನೆ.

೧೯೨. ವಿಪ್ರನು ಹೇಳಿದನು- ಮಹಾಪಾತಕಗಳ ಸಹವಾಸವಿದ್ದರೆ ಅವರು ಅತಿಪಾತಕಿಗಳೆನಿಸಿಕೊಳ್ಳುತ್ತಾರೆ. ಎಂದು ಧರ್ಮವನ್ನು ಬಲ್ಲವರೂ, ಸ್ಮೃತಿ, ಶಾಸ್ತ್ರ ಪುರಾಣ, ವೇದಗಳೂ, ಹೇಳುತ್ತಿವೆ. ಅವರ ಮನೆಯಲ್ಲಿ ನೀನು ಹೇಗಿರುವೆ?

೧೯೩. ಶ್ರೀ ಭಗವಂತನು ಹೇಳಿದನು– ಮೂರು ಲೋಕದಲ್ಲಿಯೂ ಶುಭ ಕೆಲಸಗಳನ್ನು ಆ ಮೂಕನು ಮಾಡಿರುವನು. ಚಂಡಾಲನು ಅವನ ಕೆಲಸದಲ್ಲಿ ಸರಿಯಾಗಿದ್ದರೆ ಅವನನ್ನು ಬ್ರಾಹ್ಮಣನೆಂದು ತಿಳಿಯುತ್ತಾರೆ.

ಮೂಕಸ್ಯ ಸದೃಶೋ ನಾಸ್ತಿ ಲೋಕೇಷು ಪುಣ್ಯಕರ್ಮತ।
ಪಿತ್ರೋರ್ಭಕ್ತಿಪರೋ ನಿತ್ಯಂ ಜಿತಂ ತೇನ ಜಗತ್ತ್ರಯಂ ॥ ೧೯೪ ॥

ತಯೋರ್ಭಕ್ತ್ಯಾ ತ್ವಹಂ ತುಷ್ಟಃ ಸರ್ವದೇವಗಣೈಃ ಸಹ।
ತಿಷ್ಠಾಮಿ ದ್ವಿಜರೂಪೇಣ ತಸ್ಯ ಗೇಹೋದರೇ ಚ ಖೇ ॥ ೧೯೫ ॥

ತಥಾ ಪತಿವ್ರತಾಗೇಹೇ ತುಲಾಧಾರಸ್ಯ ಮಂದಿರೇ।
ಅದ್ರೋಹಕಸ್ಯ ಭವನೇ ವೈಷ್ಣವಸ್ಯ ಚ ವೇಶ್ಮನಿ ॥ ೧೯೬ ॥

ಸದಾ ತಿಷ್ಠಾಮಿ ಸರ್ವಜ್ಞ ಮುಹೂರ್ತಂ ನ ತ್ಯಜಾಮ್ಯಹಂ।
ಯೇ ಚ ಪಶ್ಯಂತಿ ಮಾಂ ನಿತ್ಯಂ ನ ಚಾನ್ಯೇ ಪಾಪಕೃಜ್ಜನಾಃ ॥ ೧೯೭ ॥

ಪುಣ್ಯತ್ವಾಚ್ಚ ತ್ವಯಾ ದೃಷ್ಟೋ ಮಮಾನುಗ್ರಹಕಾರಣಾತ್।
ಪಿತ್ರೋರ್ಭಕ್ತಿಪರಃ ಶುದ್ಧಶ್ಚಾಂಡಾಲೋ ದೇವತಾಂ ಗತಃ ॥ ೧೯೮ ॥

ತಸ್ಮಾತ್ತೇನ ಸಹ ಪ್ರೀತ್ಯಾ ತಿಷ್ಠಾಮಿ ತಸ್ಯ ಮಂದಿರೇ।
ಪುನಃ ಪುನಃ ಕಥಾಲಾಪಂ ಕರೋಮಿ ದ್ವಿಜನಂದನ ॥ ೧೯೯ ॥

---

೧೯೪. ಪುಣ್ಯಕರ್ಮದಲ್ಲಿ ಮೂಕನಿಗೆ ಸಮವಾದವರು ಮೂರು ಲೋಕದಲ್ಲಿಯೂ ಇಲ್ಲ. ಅವನು ಪಿತೃಭಕ್ತಿ ಪರನು. ಜಿತೇಂದ್ರಿಯನು.

೧೯೫. ಅವನು ಪಿತೃಗಳಲ್ಲಿಟ್ಟಿರುವ ಭಕ್ತಿಗೋಸ್ಕರ ನಾನೂ ದೇವತೆಗಳೂ ತುಷ್ಟರಾಗಿದ್ದೇವೆ. ಆದ್ದರಿಂದ ಅವನ ಮನೆಯೊಳಗೆ ಮೇಲು ಭಾಗದಲ್ಲಿ ನಾನು ಬ್ರಾಹ್ಮಣ ರೂಪದಿಂದಿದ್ದೇನೆ.

೧೯೬-೧೯೭ ಪತಿವ್ರತೆಯ ಮನೆ, ತುಲಾಧಾರನ ಮನೆ, ಅದ್ರೋಹಕನ ಮನೆ ವೈಷ್ಣವನ ಮನೆಗಳಲ್ಲಿ ಯಾವಾಗಲೂ ಇರುತ್ತೇನೆ. ಒಂದು ಕ್ಷಣವೂ ಬಿಡಲಾರೆ. ಅಲ್ಲಿ ನನ್ನನ್ನು ಪುಣ್ಯಮಾಡಿದವರು ಹೊರತು ಪಾಪಿಗಳು ಕಾಣಲಾರರು.

೧೯೮. ಪಿತೃಭಕ್ತಿ ಪರನಾಗಿ ದೇವತೆಯಾಗಿರುವ ಆ ಚಂಡಾಲನು ದೇವತೆಯಾತದ್ದಾನೆ. ನನ್ನ ಅನುಗ್ರಹದಿಂದಲೂ, ಪುಣ್ಯದಿಂದಲೂ ನೀನು ಅವನನ್ನು ನೋಡಿದೆ.

೧೯೯. ಆದ್ದರಿಂದಲೇ ಅವನ ಮನೆಯಲ್ಲಿ ಅಲ್ಲಿದ್ದುಕೊಂಡು ಅವನೊಡನೆ ಮಾತನಾಡುತ್ತಿದ್ದೇನೆ.

**ತಸ್ಯ ವೈ ಮಾನಸೇ ನಿತ್ಯಂ ವರ್ತತೇ ಭೂತಭಾವನಃ ।**
**ಸೋಽಪಿ ಜಾನಾತಿ ತದ್ವೃತ್ತಂ ತಥಾ ಪತಿವ್ರತಾದಯಃ　　　　॥ ೨೦೦ ॥**

**ತೇಷಾಂ ವೃತ್ತಂ ಪ್ರಥಿಷ್ಯಾಮಿ ಶೃಣು ತ್ವಂ ಚಾನುಪೂರ್ವಶಃ ।**
**ಯಚ್ಛ್ರುತ್ವಾ ಸರ್ವಥಾ ಮರ್ತ್ಯೋ ಮುಚ್ಯತೇ ಜನ್ಮಬಂಧನಾತ್ ॥ ೨೦೧ ॥**

**ಪಿತುರ್ಮಾತುಃ ಪರಂ ತೀರ್ಥಂ ದೇವದೇವೇಷು ನೈವ ಹಿ ।**
**ಪಿತ್ರೋರರ್ಚಾ ಕೃತಾ ಯೇನ ಸ ಏವ ಪುರುಷೋತ್ತಮಃ　　　　॥ ೨೦೨ ॥**

**ಪಿತ್ರೋರಾಜ್ಞಾ ಚ ದೇವಸ್ಯ ಗುರೋರಾಜ್ಞಾಂ ಸಮಂ ಫಲಂ ।**
**ಆರಾಧನಾದ್ದಿವೋ ರಾಜ್ಯಂ ಬಾಧಯಾ ರೌರವಂ ವ್ರಜೇತ್　　　　॥ ೨೦೩ ॥**

**ಸ ಚಾಽಸ್ಮಾಕಂ ಹೃದಿಸ್ಥೋಽಪಿ ತಸ್ಯಾಹಂ ಹೃದಯೇ ಸ್ಥಿತಃ ।**
**ಆವಯೋರಂತರಂ ನಾಸ್ತಿ ಪರತ್ರೇಹ ಚ ಮತ್ಸಮಃ　　　　॥ ೨೦೪ ॥**

---

೨೦೦. ಹಿಂದಿನದು ಮುಂದಿನದನ್ನು ಬಲ್ಲ ನಾನು ಅವರ ಮನಸ್ಸಿನಲ್ಲಿ ಯಾವಾಗಲೂ ಇದ್ದೇನೆ. ಅವನೂ ಆ ಪತಿವ್ರತಾದಿಗಳೂ ನಿನ್ನ ವಿಷಯವನ್ನು ಯಾವಾಗಲೂ ತಿಳಿಯುತ್ತಿದ್ದಾರೆ

೨೦೧. ಅವರ ವಿಷಯವನ್ನು ಕ್ರಮವಾಗಿ ಹೇಳುತ್ತೇನೆ, ಕೇಳು. ಅದನ್ನು ಕೇಳಿದರೆ ಮನುಷ್ಯನು ಹುಟ್ಟು ಸಾವುಗಳಿಂದ ಪಾರಾಗುತ್ತಾನೆ.

೨೦೨. ತಾಯಿತಂದೆಗಳು ಉತ್ತಮವಾದ ತೀರ್ಥವು. ದೇವತೆಗಳಲ್ಲಿಯೂ ಅಂತಹವರಿಲ್ಲ. ಪಿತೃಗಳ ಆ ಸೇವೆ ಮಾಡಿದವನೇ ಪುರುಷೋತ್ತಮನು.

೨೦೩. ಪಿತೃಗಳ ಆಜ್ಞೆಯನ್ನು ನೆರವೇರಿಸಿದರೆ ಗುರುವಿನ ಆಜ್ಞೆಯನ್ನು ನೆರವೇರಿಸಿದ ಫಲವೇ ಬರುತ್ತದೆ. ಅವರ ಸೇವೆಯಿಂದ ಸ್ವರ್ಗವನ್ನೂ, ತೊಂದರೆ ಪಡಿಸುವುದರಿಂದ ನರಕವನ್ನೂ ಹೊಂದುತ್ತಾನೆ.

೨೦೪. ಅವನು ನನ್ನ ಹೃದಯದಲ್ಲಿಯೂ, ನಾನು ಅವನ ಹೃದಯದಲ್ಲಿಯೂ ಇರುತ್ತೇವೆ. ನಮ್ಮಿಬ್ಬರಿಗೂ ಭೇದವೇ ಇಲ್ಲ. ಇಹಪರಗಳಲ್ಲಿ ನಾವು ಒಂದೇ.

ಮದಗ್ರೇ ಮತ್ಪುರೇ ರಮ್ಯೇ ಸರ್ವೈಶ್ಚ ಬಾಂಧವೈಃ ಸಹ ।
ಭಜೇತ್ಸ ಚಾಕ್ಷಯಂ ಭೋಗಮಂತೇ ಚ ಲೀಯತೇ ಮಯಿ ॥ ೨೦೫ ॥

ಅತ ಏವ ಹಿ ಮೂಕೋಽಸೌ ವಾರ್ತಾಂ ತ್ರೈಲೋಕ್ಯಸಂಭವಾಂ ।
ಜಾನಾತಿ ನರಶಾರ್ದೂಲ ಏಷ ತೇ ವಿಸ್ಮಯಃ ಕುತಃ ॥ ೨೦೬ ॥

॥ ದ್ವಿಜ ಉವಾಚ ॥

ಮೋಹಾದಜ್ಞಾನತೋ ವಾಽಪಿ ನ ಕೃತ್ವಾ ಪಿತುರರ್ಚನಂ ।
ಜ್ಞಾತ್ವಾ ವಾ ಕಿಂ ಚ ಕರ್ತವ್ಯಂ ಸದಸಜ್ಜಗದೀಶ್ವರ ॥ ೨೦೭ ॥

॥ ಶ್ರೀ ಭಗವಾನುವಾಚ ॥

ದಿನೈಕಂ ಮಾಸಪಕ್ಷಂ ವಾ ಪಕ್ಷಾರ್ಧಂ ವಾಽಥ ವತ್ಸರಂ ।
ಪಿತ್ರೋರ್ಭಕ್ತಿಃ ಕೃತಾ ಯೇನ ಸ ಚ ಗಚ್ಛೇನ್ಮಮಾಲಯಂ ॥ ೨೦೮ ॥

---

೨೦೫. ನನ್ನ ಎದುರಿನಲ್ಲಿ ನನ್ನ ಮನೆಯಲ್ಲಿ ನನ್ನ ಪಟ್ಟಣದಲ್ಲಿ ಅವನು ಸರ್ವ ಬಂಧುಗಳೊಡನೆಯೂ ಅಕ್ಷಯವಾದ ಭೋಗವನ್ನು ಅನುಭವಿಸಿ ಕೊನೆಗ ನನ್ನಲ್ಲಿಯೇ ಐಕ್ಯವಾಗುತ್ತಾನೆ.

೨೦೬. ಆದ್ದರಿಂದ ಮೂಕನು ಮೂರು ಲೋಕದ ಸಮಾಚಾರಗಳನ್ನೂ ಬಲ್ಲನು. ಆದ್ದರಿಂದಲೇ ನಿನಗೆ ಆಶ್ಚರ್ಯವಾಯಿತು.

೨೦೭. ಬ್ರಾಹ್ಮಣನು ಹೇಳಿದನು- ಆಸೆಯಿಂದಲೋ ಅಜ್ಞಾನದಿಂದಲೋ ಪಿತೃಗಳ ಸೇವೆಯನ್ನು ಮಾಡದಿದ್ದು ಒಳ್ಳೆಯದು ಕೆಟ್ಟದನ್ನು ತಿಳಿದಮೇಲೆ ಏನು ಮಾಡಬೇಕು. ?

೨೦೮. ಶ್ರೀ ಭಗವಂತನು ಹೇಳಿದನು– ಒಂದು ವರ್ಷ, ಒಂದುವರೆ ತಿಂಗಳು ಒಂದು ತಿಂಗಳು, ಒಂದು ಪಕ್ಷ, ಅರ್ಧ ಪಕ್ಷ, ಕೊನೆಗೆ ಒಂದು ದಿನವಾದರೂ ತಾಯಿ ತಂದೆಗಳ ಸೇವೆ ಮಾಡಿದವನು ನನ್ನ ಮನೆಗೆ ಬರುತ್ತಾನೆ.

ಕಾರಯಿತ್ವಾ ಮನಃ ಕೃಷ್ಣಮವಶ್ಯಂ ನರಕಂ ವ್ರಜೇತ್ ।
ನ ಕೃತಾ ವಾ ಕೃತಾ ವಾಽಪಿ ಪಿತ್ರೋರರ್ಚಾ ಪರಂ ಪರಾ ॥
ವೃಷೋತ್ಸರ್ಗಂ ನರಃ ಕೃತ್ವಾ ಪಿತೃಭಕ್ತಿಫಲಂ ಲಭೇತ್ ॥ ೨೦೯ ॥

ಅನ್ನಂ ವಸ್ತ್ರಂ ತಥಾ ಗವ್ಯಂ ಮಧು ಮಾಂಸಾದಿ ಸತ್ಕೃತಂ ।
ದದ್ಯಾದಕುತ್ಸಿತಂ ಶ್ರಾದ್ಧೇ ವೃಷೋತ್ಸರ್ಗಫಲಂ ಭವೇತ್ ॥ ೨೧೦ ॥

ಶ್ರಾದ್ಧಂ ದದ್ಯಾದ್ದ್ವಿಜಾಗ್ರ್ಯಾಯ ವೇದಶಾಸ್ತ್ರಾನುಭಾವಿನೇ ।
ಶಾಂತಾಯ ವೀತರಾಗಾಯ ವೃಷೋತ್ಸರ್ಗಫಲಂ ಲಭೇತ್ ॥ ೨೧೧ ॥

ಅನ್ನಂ ಪಾನಂ ತಥಾ ಗವ್ಯಂ ಸಾಮಿಷಂ ಚ ನಿರಾಮಿಷಂ ।
ಸರ್ವಂ ಲಕ್ಷಗುಣಂ ಪ್ರೋಕ್ತಂ ಜ್ಞಾತಿಭ್ಯೋ ಯತ್ಪ್ರದೀಯತೇ ॥ ೨೧೨ ॥

---

೨೦೯. ಮನಸ್ಸನ್ನು ಕೆಟ್ಟದ್ದನ್ನಾಗಿ ಮಾಡಿದರೆ (ನೋಯಿಸಿದರೆ) ನರಕವನ್ನು ಹೊಂದುತ್ತಾನೆ ಅವರ ಸೇವೆಯನ್ನು ಮಾಡಲಿ, ಮಾಡದಿರಲಿ, ವೃಷೋತ್ಸರ್ಗವನ್ನು ಮಾಡಿದರೆ ಪಿತೃಭಕ್ತಿ ಫಲವು ಬರುತ್ತದೆ.

೨೧೦. ಅನ್ನ, ವಸ್ತ್ರ, ಹಾಲು, ಮೊಸರು, ತುಪ್ಪಗಳು, ಜೇನು, ಮಾಂಸ, ಇವುಗಳಿಂದ ಮಾಡಿದ ಉತ್ತಮವಾದ ಊಟವನ್ನು ಶ್ರಾದ್ಧದಲ್ಲಿ ಕೊಟ್ಟರೆ ವೃಷೋತ್ಸರ್ಗದ ಫಲವು ಲಭಿಸುತ್ತದೆ.

೨೧೧. ವೇದ ಶಾಸ್ತ್ರಗಳನ್ನು ಓದಿದ ಬ್ರಾಹ್ಮಣನಿಗೆ ಶ್ರಾದ್ಧದಲ್ಲಿ ದಾನಮಾಡಬೇಕು. ಅವನು ಶಾಂತನೂ, ವೈರಾಗ್ಯವಂತನೂ ಆಗಿರಬೇಕು ಹಾಗಿದ್ದರೆ ವೃಷೋತ್ಸರ್ಗದ ಫಲವು ಬರುತ್ತದೆ.

೨೧೨. ಅನ್ನ, ಪಾನೀಯಗಳು, ಹಾಲು, ಮೊಸರು, ತುಪ್ಪಗಳು, ಮಾಂಸ ವಿದ್ದರಿರಬಹುದು. ಇಲ್ಲದಿದ್ದರೂ ಇರಬಹುದು. ಇದನ್ನು ಜ್ಞಾತಿಗಳಿಗೆ ಕೊಟ್ಟರೆ ಎಲ್ಲವೂ ಬ್ರಾಹ್ಮಣನಿಗೆ ಕೊಟ್ಟುದಕ್ಕಿಂತಲೂ ಲಕ್ಷಗುಣ ಫಲವನ್ನು ಕೊಡುತ್ತವೆ.

ಸರ್ವಸ್ವೇನ ಕೃತಂ ಶ್ರಾದ್ಧಂ ಯೇನ ಪುತ್ರೇಣ ಧೀಮತಾ ।
ಜಾತಿಸ್ಮರತ್ವಮಾಪ್ನೋತಿ ಪಿತೃಭಕ್ತಿಫಲಂ ಲಭೇತ್ ॥ ೨೧೩ ॥

ಶ್ರಾದ್ಧಾತ್ಪರೋ ಮಹಾಯಜ್ಞಸ್ತ್ರೈಲೋಕ್ಯೇ ತು ನ ವಿದ್ಯತೇ ॥
ಅತ್ರ ಯದ್ದೀಯತೇ ಕಿಂಚಿತ್ಸರ್ವಂ ಚಾಕ್ಷಯಮಶ್ನುತೇ ॥ ೨೧೪ ॥

ಅನ್ಯಸ್ಮಿಂಶ್ಚಾಯುತಂ ವಿದ್ಧಿ ಜ್ಞಾತಿಭ್ಯೋ ಲಕ್ಷಮುಚ್ಯತೇ ।
ಪಿಂಡೇ ಕೋಟಿಗುಣಂ ಪ್ರೋಕ್ತಂ ದ್ವಿಜಾಯಾನಂತಮುಚ್ಯತೇ ॥ ೨೧೫ ॥

ಗಂಗಾಜಲೇ ಗಯಾಯಾಂ ಚ ಪ್ರಯಾಗೇ ಪುಷ್ಕರೇ ತಥಾ ।
ವಾರಾಣಸ್ಯಾಂ ಸಿದ್ಧಕುಂಡೇ ಗಂಗಾಸಾಗರಸಂಗಮೇ ॥ ೨೧೬ ॥

ಅನ್ನಪಿಂಡಂ ಪ್ರದದ್ಯಾದ್ಯಸ್ತಸ್ಯ ಮುಕ್ತಿರ್ಭವೇದ್ಧ್ರುವಂ ।
ಪಿತರಶ್ಚಾಕ್ಷಯಂ ಸ್ವರ್ಗಂ ಲಭಂತೇ ಜನ್ಮನಃ ಫಲಂ ॥ ೨೧೭ ॥

---

೨೧೩. ಯಾವ ಮಗನು ಸರ್ವಸ್ವವನ್ನೂ ವ್ಯಯಮಾಡಿ ಶ್ರಾದ್ಧ ಮಾಡುವನೋ ಅವನು ಪಿತೃಭಕ್ತಿಯ ಫಲವನ್ನು ಹೊಂದುತ್ತಾನಲ್ಲದೆ ಜಾತಿಸ್ಮರತ್ವವನ್ನೂ ಹೊಂದುತ್ತಾನೆ.

೨೧೪. ಶ್ರಾದ್ಧಕ್ಕಿಂತಲೂ ದೊಡ್ಡ ಯಜ್ಞವು ಮೂರು ಲೋಕದಲ್ಲಿಯೂ ಇರುವುದಿಲ್ಲ. ಇಲ್ಲಿ ಯಾವುದನ್ನು ಕೊಡುತ್ತಾನೆಯೋ ಅದನ್ನು ಅಕ್ಷಯವಾಗಿ ಪರದಲ್ಲಿ ಅನುಭವಿಸುತ್ತಾನೆ.

೨೧೫. ಬೇರೆಯವನಿಗೆ ಕೊಟ್ಟರೆ ಹತ್ತು ಸಾವಿರ ಫಲವೂ ಜ್ಞಾತಿಗೆ ಕೊಟ್ಟರೆ ಲಕ್ಷ ಫಲವೂ, ಸಪಿಂಡರಿಗೆ ಕೊಟ್ಟರೆ ಕೋಟಿ ಗುಣವೂ, ದ್ವಿಜನಿಗೆ ಕೊಟ್ಟರೆ ಅನಂತವಾದ ಗುಣವೂ, ಉಂಟಾಗುತ್ತವೆ.

೨೧೬-೨೧೭. ಗಂಗೆಯಜಲ, ಗಯೆ, ಪ್ರಯಾಗ, ಪುಷ್ಕರ, ವಾರಾಣಸಿ, ಸಿದ್ಧಕುಂಡ, ಗಂಗಾಸಮುದ್ರಗಳಸಂಗಮ, ಇವುಗಳಲ್ಲಿ ಅನ್ನಪಿಂಡವನ್ನು ಹಾಕಿದರೆ ಅವನಿಗೆ ಮುಕ್ತಿಯು ಖಂಡಿತವಾಗಿ ಬರುತ್ತದೆ. ಪಿತೃಗಳು ಅಕ್ಷಯ ಸ್ವರ್ಗವನ್ನು ಹೊಂದುತ್ತಾರೆ. ಇವನಿಗೂ ಹುಟ್ಟಿದುದಕ್ಕ ಸಾರ್ಥಕವಾಗುತ್ತದೆ.

**ಭಾಗೀರಥ್ಯಾಂ ವಿಶೇಷೇಣ ಯಸ್ತು ದದ್ಯಾತ್ತಿಲೋದಕಂ ।**
**ಮುಕ್ತಿಮಾರ್ಗಂ ಸ ಚಾಽಪ್ನೋತಿ ಪಿಂಡದಾನೇ ತು ಕಿಂ ಪುನಃ ॥ ೨೧೮ ॥**

**ನದೀತೀರೇಷು ಸಾಹಸ್ರಂ ನದ್ಯೇಽಪ್ಯಯುತಮಿಷ್ಯತೇ ।**
**ಸಾಮಾನ್ಯಫಲಸಂಸರ್ಗಾಚ್ಛ್ರಾದ್ಧಂ ಶತಗುಣಂ ಭವೇತ್ ॥ ೨೧೯ ॥**

**ಅಮಾವಾಸ್ಯಾಂ ಯುಗಾದ್ಯಾಯಾಂ ಗ್ರಹಣೇ ಚಂದ್ರಸೂರ್ಯಯೋಃ ।**
**ಪಾರ್ವಣಂ ಕುರುತೇ ಯಸ್ತು ಸೋಽಕ್ಷಯಂ ಲೋಕಮಶ್ನುತೇ ॥ ೨೨೦ ॥**

**ಪಿತರಸ್ತಸ್ಯ ತುಷ್ಯಂತಿ ಸರ್ವೇ ಸಮಾಯುತಂ ಪ್ರತಿ ।**
**ಆಶಿಷಂ ದಯಿತಂ ದತ್ವಾ ಭೋಗ್ಯಂ ಚಾನಂತಮಾತ್ಮಜೇ ॥ ೨೨೧ ॥**

**ತತಃ ಪರ್ವಣಿ ಪುತ್ರೈಶ್ಚ ಕರ್ತವ್ಯಂ ಪಾರ್ವಣಂ ಮುದಾ ।**
**ಪಿತ್ರೋರ್ಯಜ್ಞಮಿಮಂ ಕೃತ್ವಾ ಮುಚ್ಯತೇ ಸರ್ವಬಂಧನಾತ್ ॥ ೨೨೨ ॥**

---

೨೧೮. ಭಾಗೀರಥಿಯಲ್ಲಿ ತಿಲೋದಕವನ್ನು ಕೊಟ್ಟರೇನೇ ಅವನು ಮುಕ್ತಿಯನ್ನು ಹೊಂದುವನು. ಪಿಂಡವನ್ನು ಕೊಟ್ಟರಂತೂ ಹೇಳಬೇಕಾದುದೇ ಇಲ್ಲ.

೨೧೯. ನದೀ ತೀರದಲ್ಲಿ ಶ್ರಾದ್ಧ ಮಾಡಿದರೆ ಸಹಸ್ರಪಾಲು ಹೆಚ್ಚು ಗುಣವೂ, ಪಶ್ಚಿಮ ಮುಖವಾಗಿ ಹರಿಯುವ ನದಿಗಳಲ್ಲಿ ಮಾಡಿದರೆ ಹತ್ತು ಸಾವಿರದಷ್ಟು ಗುಣವೂ ಸಾಮಾನ್ಯ ಶ್ರಾದ್ಧಕ್ಕಿಂತಲೂ ಹೆಚ್ಚು ಬರುತ್ತದೆ ಸಾಮಾನ್ಯ ಕೆಲಸಗಳಿಗಿಂತಲೂ ಶ್ರಾದ್ಧವು ನೂರರಷ್ಟು ಹೆಚ್ಚು ಫಲವನ್ನು ಕೊಡುತ್ತದೆ.

೨೨೦. ಅಮಾವಸ್ಯೆ, ಯುಗಾದಿ, ಸೂರ್ಯಚಂದ್ರಗ್ರಹಣಗಳಲ್ಲಿ ಪಾರ್ವಣ ಶ್ರಾದ್ಧವನ್ನು ಮಾಡಿದರೆ ಅವನಿಗೆ ಅಕ್ಷಯಲೋಕ ಪ್ರಾಪ್ತಿಯಾಗುತ್ತದೆ.

೨೨೧. ಅವನ ಪಿತೃಗಳು ಹತ್ತು ಸಾವಿರದಷ್ಟು ಸಂತೋಷಪಟ್ಟು ಬೇಕಾದ ಆಶೀರ್ವಾದಗಳನ್ನು ಕೊಟ್ಟು ಅನಂತವಾದ ಭೋಗಗಳನ್ನು ಹೊಂದುತ್ತಾರೆ.

೨೨೨. ಆದ್ದರಿಂದ ಮಗನಾದವನು ಪರ್ವ ದಿನದಲ್ಲಿ ಶ್ರಾದ್ಧಮಾಡಬೇಕು ಈ ಪಿತೃಯಜ್ಞವನ್ನು ಮಾಡಿದರೆ ಸರ್ವ ಬಂಧನಗಳೂ ನಾಶವಾಗುತ್ತವೆ.

ಅಹನ್ಯಹನಿ ಯಚ್ಛ್ರಾದ್ಧಂ ನಿತ್ಯಶ್ರಾದ್ಧಮಿತಿ ಸ್ಮೃತಂ ।
ಶ್ರದ್ಧಯಾ ಕಾರಯೇದ್ಯಸ್ತು ಸೋಽಕ್ಷಯಂ ಲೋಕಮಶ್ನುತೇ ॥ ೨೨೩ ॥

ತಥೈವಾಪರಪಕ್ಷೇ ಚ ಕಾಮ್ಯಶ್ರಾದ್ಧಂ ವಿಧಾನತಃ ।
ಕೃತ್ವಾ ಕಾಮಂ ಸ ಚಾಽಪ್ನೋತಿ ಯದ್ವಾ ಮನಸಿ ವರ್ತತೇ ॥ ೨೨೪ ॥

ಆಷಾಢೀಮವಧಿಂ ಕೃತ್ವಾ ಯಸ್ತು ಪಕ್ಷಸ್ತು ಪಂಚಮಃ ।
ತತ್ರ ಶ್ರಾದ್ಧಂ ಪ್ರಕುರ್ವೀತ ಕನ್ಯಾಂ ಗಚ್ಛತು ವಾ ನ ವಾ ॥ ೨೨೫ ॥

ಕನ್ಯಾಗತೇ ಸವಿತರಿ ಯಾನ್ಯಹಾನಿ ತು ಷೋಡಶ ।
ಕ್ರತುಭಿಸ್ತಾನಿ ತುಲ್ಯಾನಿ ಸಮಾಪ್ತವರದಕ್ಷಿಣೈಃ ॥ ೨೨೬ ॥

ಕಾಮ್ಯಶ್ರಾದ್ಧಂ ಮಹಾಪುಣ್ಯಮಿದಂ ತಸ್ಯಾಗತಂ ಶಿವಂ ।
ಅಭಾವಾತ್ಕೃಷ್ಣಪಕ್ಷಾದೌ ತುಲಾಯಾಂ ಕರ್ತುಮರ್ಹತಿ ॥ ೨೨೭ ॥

---

೨೨೩. ನಿತ್ಯವೂ ಮಾಡುವ ಶ್ರಾದ್ಧವನ್ನು ನಿತ್ಯಶ್ರಾದ್ಧವೆನ್ನುತ್ತಾರೆ. ಅದನ್ನು ಯಾವನು ಶ್ರದ್ಧೆಯಿಂದ ಮಾಡುವನೋ ಅವನು ಅಕ್ಷಯವಾದ ಲೋಕವನು ಹೊಂದುತ್ತಾನೆ.

೨೨೪. ಅಪರ ಪಕ್ಷದಲ್ಲಿ ಕಾಮ್ಯಶ್ರಾದ್ಧವನ್ನು ವಿಧಿವತ್ತಾಗಿ ಮಾಡಿದರೆ ಮನಸ್ಸಿನ ಇಷ್ಟಾರ್ಥಗಳನ್ನು ಹೊಂದುತ್ತಾನೆ.

೨೨೫. ಆಷಾಢಮಾಸವನ್ನು ಮೊದಲು ಮಾಡಿಕೊಂಡು ಐದನೆಯ ಪಕ್ಷವಾದ ಅಪರ ಪಕ್ಷದಲ್ಲಿ ಕಾಮ್ಯಶ್ರಾದ್ಧವನ್ನು ಮಾಡಬೇಕು. ಸೂರ್ಯನು ಕನ್ಯೆಯನ್ನು ಹೊಂದಿದ್ದರೆ ಹೊಂದಿರಬಹುದು. ಇಲ್ಲದಿದ್ದರೂ ಇರಬಹುದು.

೨೨೬. ಸೂರ್ಯನು ಕನ್ಯಾಮಾಸಕ್ಕೆ ಬಂದಾಗ ಅಪರಪಕ್ಷದ ಆ ಹದಿನಾರು ದಿನಗಳು, ಒಂದೊಂದು ದಿನವೂ ಪೂರ್ತಿಯಾದ ದಕ್ಷಿಣೆಯನ್ನು ಕೊಟ್ಟು ಮಾಡಿದ ಯಾಗಕ್ಕೆ ಸಮವಾಗುತ್ತದೆ.

೨೨೭. ಕಾಮ್ಯಶ್ರಾದ್ಧವು ಮಹಾಪುಣ್ಯವು. ಮಂಗಳಕರವು. ಅದು ಸಿಕ್ಕದಿದ್ದರೆ ತುಲಾಮಾಸದ ಕೃಷ್ಣಪಕ್ಷದ ಆದಿಯಲ್ಲಿ ಕಾಮ್ಯಶ್ರಾದ್ಧವನ್ನು ಮಾಡಬಹುದು.

ಅಮೀ ವೃಶ್ಚಿಕಮಾಯಾತೇ ನಿರಾಶಾಃ ಪಿತರೋ ಗತಾಃ ।
ಪುನಃ ಸ್ವಭವನಂ ಯಾಂತಿ ಶಾಪಂ ದತ್ತ್ವಾ ಸುದಾರಣಂ ॥ ೨೨೮ ॥

ಪಿತೃಶಾಪೇನ ಪುತ್ರಸ್ಯ ನಷ್ಟಂ ಸರ್ವಮಿತಿ ಸ್ಮೃತಂ ।
ಧನಂ ಪುತ್ರಂ ಯಶಃ ಕಾಮ್ಯಮಭೀಷ್ಟಮಾಯುರೇವ ಚ ॥ ೨೨೯ ॥

ಸರ್ವಾಣ್ಯೇತಾನಿ ಲಭ್ಯಂತೇ ಜನ್ಮಜನ್ಮಸು ಮಾನವೈಃ ।
ಪಿತೄಣಾಂ ಚ ವರೇಣೈವ ತಸ್ಮಾನ್ನೈನಂ ಪರಿತ್ಯಜೇತ್ ॥ ೨೩೦ ॥

ವಿವಾಹವ್ರತಯಜ್ಞಾದೌ ಕೃತ್ವಾ ನಾಂದೀಮುಖಂ ದ್ವಿಜಃ ।
ಅಕ್ಷಯಂ ಲಭತೇ ಪುಣ್ಯಂ ಗೋತ್ರಂ ತಸ್ಯ ಪ್ರವರ್ಧತೇ ॥ ೨೩೧ ॥

ಏತದ್ವಿಪರ್ಯಯೋ ಯಸ್ಯ ಸ ಯಾತಿ ನರಕಂ ನರಃ !
ಕುಲಕ್ಷಯೋ ಭವೇತ್ತಸ್ಯ ಸ ಜೀವೇದ್ದುಃಖಿತೋ ಭುವಿ ॥ ೨೩೨ ॥

ತತಸ್ತು ಪೂಜಯೇದಗ್ರೇ ಗಣೇಶಂ ಶಂಭುನಂದನಂ ।
ಪರಂ ಷೋಡಶಮಾತೄಶ್ಚ ತತ್ಪಶ್ಚಾತ್ಪಿತೃಸಂಚಯಂ ॥ ೨೩೩ ॥

---

೨೨೮. ವೃಶ್ಚಿಕ ಮಾಸ ಬರುತ್ತಲೂ ಪಿತೃಗಳು ನಿರಾಶರಾಗಿ ಶಾಪವನ್ನು ಕೊಟ್ಟು ಅವರ ಸ್ಥಳಕ್ಕೆ ಹೊರಟು ಹೋಗುತ್ತಾರೆ.

೨೨೯. ಪಿತೃಗಳ ಶಾಪದಿಂದ ಮಗನ ವೈಭವವೆಲ್ಲವೂ ನಾಶವಾಗುತ್ತದೆ. ಧನ, ಪುತ್ರ, ಯಶಸ್ಸು, ಇಷ್ಟವಾದುದು, ಆಯುಸ್ಸು, ಎಲ್ಲವೂ ಹೋಗುತ್ತವೆ.

೨೩೦. ಪಿತೃಗಳು ತೃಪ್ತರಾಗಿ ವರ ಕೊಟ್ಟರೆ ಇವೆಲ್ಲವೂ ಜನ್ಮಜನ್ಮಕ್ಕೂ ಸಿಕ್ಕುತ್ತವೆ, ಆದ್ದರಿಂದ ಅದನ್ನು ಬಿಡಬಾರದು.

೨೩೧. ವಿವಾಹ, ವ್ರತ, ಯಜ್ಞ, ಕ್ರತುಗಳಲ್ಲಿ ನಾಂದೀ ಮುಖವನ್ನು ಮಾಡಿದರೆ ಅಕ್ಷಯವಾದ ಪುಣ್ಯವನ್ನು ಹೊಂದುತ್ತಾನೆ. ಅವನ ಗೋತ್ರವು ಬೆಳೆಯುತ್ತದೆ.

೨೩೨. ಇವನ್ನು ಮಾಡದಿದ್ದರೆ ಅವನು ನರಕವನ್ನು ಹೊಂದುತ್ತಾನೆ ಅವನ ವಂಶವೂ ಹಾಳಾಗುತ್ತದೆ, ಅವನು ಕಷ್ಟದಿಂದ ಜೀವಿಸಿರುತ್ತಾನೆ.

೨೩೩. ಮೊದಲು ಗಣೇಶನನ್ನೂ, ಅನಂತರ ಹದಿನಾರುಜನ ಮಾತೃಗಳನ್ನೂ ಅನಂತರ ಪಿತೃಗಳನ್ನೂ ಪೂಜಿಸಬೇಕು.

ನಾಂದೀಮುಖೇಷು ಸರ್ವೇಷು ಪ್ರಪಿತಾಮಹಪೂರ್ವಕಂ ।
ನಾಂದೀಮುಖೇ ದ್ವಿಜಾನ್ಸರ್ವಾನ್ಸ್ಥಾಪಯೇತ್ಪ್ರಾಂಮುಖಾನ್ಸುಧೀಃ॥೨೩೪॥

ಉಚ್ಚಾರಯೇನ್ನಮೋವಾಕ್ಯಂ ಸ್ವಧಾ ಚಾನ್ಯತ್ರ ಯೋಜಯೇತ್ ।
ಗ್ರಹಣೇ ಚಂದ್ರಸೂರ್ಯಸ್ಯ ದತ್ವಾ ಪಿಂಡೋದಕಂ ನರಃ ॥ ೨೩೫ ॥

ಅಕ್ಷಯಂ ಲಭತೇ ಸ್ವರ್ಗಂ ಪಿತೄಣಾಂ ಪುಷ್ಟಿವರ್ಧನಂ ।
ತತ್ರ ಸ್ನಾನಂ ನ ಕುರ್ಯಾದ್ಯಃ ಶಕ್ತ್ಯಾ ಪಿಂಡೋದಕಂ ನರಃ ॥ ೨೩೬ ॥

ನ ದದಾತಿ ಪಿತೄಣಾಂ ತು ಚಾಂಡಾಲತ್ವಂ ಸ ಗಚ್ಛತಿ ।
ಸರ್ವಂ ಭೂಮಿಸಮಂ ದಾನಂ ಸರ್ವೇ ವ್ಯಾಸಸಮಾ ದ್ವಿಜಾಃ ॥ ೨೩೭ ॥

ಸರ್ವಂ ಗಂಗಾಸಮಂ ತೋಯಂ ರಾಹುಗ್ರಸ್ತೇ ನಿಶಾಕರೇ ।
ಇಂದೋರ್ಲಕ್ಷಗುಣಂ ಪ್ರೋಕ್ತಂ ದಶಲಕ್ಷಂ ತು ಭಾಸ್ಕರೇ ॥ ೨೩೮ ॥

ಗಂಗಾತೋಯೇ ತು ಸಂಪ್ರಾಪ್ತೇ ಇಂದೋಃ ಕೋಟೀ ರವೇರ್ದಶ ।
ಗವಾಂ ಶತಸಹಸ್ರಸ್ಯ ಸಮ್ಯಗ್ದತ್ತಸ್ಯ ಯತ್ಫಲಂ ॥ ೨೩೯ ॥

---

೨೩೪. ನಾಂದೀಮುಖ ಶ್ರಾದ್ಧದಲ್ಲಿ ಪ್ರಪಿತಾಮಹ ಪೂರ್ವಕವಾಗಿ ಆವಾಹಿಸಬೇಕು. ನಾಂದೀಮುಖದಲ್ಲಿ ಬ್ರಾಹ್ಮಣರನ್ನು ಪೂರ್ವ ಮುಖವಾಗಿ ಕೂರಿಸಬೇಕು.

೨೩೫-೨೩೮. ನಾಂದೀಮುಖದಲ್ಲಿ ನಮಃ ಎಂಬ ಪದವುಳ್ಳ ವಾಕ್ಯವನ್ನು ಹೇಳಬೇಕು. ಸೂರ್ಯ ಚಂದ್ರ ಗ್ರಹಣಗಳಲ್ಲಿ ಪಿಂಡೋದಕವನ್ನು ಕೊಟ್ಟರೆ ಅಕ್ಷಯುವಾದ ಸ್ವರ್ಗವು ಸಿಕ್ಕುತ್ತದೆ. ಪಿತೃಗಳಿಗೆ ಪುಷ್ಟಿಯುಂಟಾಗುತ್ತದೆ. ಆ ಗ್ರಹಣದಲ್ಲಿ ಸ್ನಾನಮಾಡದೆ ಪಿಂಡೋದಕವನ್ನು ಶಕ್ತ್ಯನುಸಾರ ಕೊಡದೆ ಇರುವವನು ಚಂಡಾಲನಾಗುತ್ತಾನೆ. ಚಂದ್ರಗ್ರಹಣಕಾಲದಲ್ಲಿ ಎಲ್ಲಾ ದಾನವೂ ಭೂದಾನ ಸಮವು. ಎಲ್ಲಾ ಬ್ರಾಹ್ಮಣರೂ ವ್ಯಾಸನಿಗೆ ಸಮಾನರು. ಎಲ್ಲಾ ನೀರು ಗಂಗೆಗೆ ಸಮವು, ಚಂದ್ರಗ್ರಹಣಕಾಲದಲ್ಲಿ ಇವನ್ನು ಮಾಡಿದರೆ ಲಕ್ಷದಷ್ಟು ಹೆಚ್ಚು ಪುಣ್ಯವು ಬರುತ್ತದೆ, ಸೂರ್ಯಗ್ರಹಣದಲ್ಲಿ ಹತ್ತು ಲಕ್ಷದಷ್ಟು ಹೆಚ್ಚು ಪುಣ್ಯವು ಬರುತ್ತದೆ.

೨೩೯-೨೪೨. ಆ ಗ್ರಹಣಕಾಲದಲ್ಲಿ ಗಂಗೆಗೆ ಹೋಗಿ ಸ್ನಾನಮಾಡಿದರೆ, ಚಂದ್ರನ ಗ್ರಹಣದಲ್ಲಿ ಒಂದು ಕೋಟಿ ಪಾಲು ಗುಣವೂ, ಸೂರ್ಯನಗ್ರಹಣದಲ್ಲಿ ಹತ್ತು ಕೋಟಿಯಷ್ಟು ಗುಣವೂ, ಪುಣ್ಯವು ಅಧಿಕವು. ಚಂದ್ರಗ್ರಹಣಕಾಲದಲ್ಲಿ ಗಂಗೆ

ತತ್ಫಲಂ ಜಾಹ್ನವೀಸ್ನಾನೇ ರಾಹುಗ್ರಸ್ತೇ ನಿಶಾಕರೇ ।
ಚಂದ್ರಸೂರ್ಯಗ್ರಹೇ ಚೈವ ಅವಗಾಹತಿ ಜಾಹ್ನವೀಂ ॥ ೨೪೦ ॥

ಸ ಸ್ನಾತಃ ಸರ್ವತೀರ್ಥೇಷು ಕಿಮರ್ಥಮಟತೇ ಮಹೀಂ ।
ಸೂರ್ಯಗ್ರಹಃ ಸೂರ್ಯವಾರೇ ಸೋಮೇ ಸೋಮಗ್ರಹಸ್ತಥಾ ॥ ೨೪೧ ॥

ಚೂಡಾಮಣಿರಿತಿ ಖ್ಯಾತಸ್ತತ್ರಾನಂತಫಲಂ ಸ್ಮೃತಂ ।
ಸಮುಪೋಷ್ಯ ತಯೋಃ ಪೂರ್ವೇ ಪುಣ್ಯತೀರ್ಥೇ ತು ಯಃ ಪುಮಾನ್ ॥
ದತ್ವಾ ಪಿಂಡೋದಕಂ ದಾನಂ ಸತ್ಯಲೋಕೇ ಪ್ರತಿಷ್ಠಿತಃ ॥ ೨೪೨ ॥

॥ ದ್ವಿಜ ಉವಾಚ ॥

ಪಿತುರೇವ ಮಹಾಯಜ್ಞಃ ಶ್ರಾದ್ಧಂ ಚ ಭವತೇರಿತಂ ।
ತಾತಾಪಶ್ಚಿಮಕಾಲಾದೌ ಕಿಂ ಕರ್ತವ್ಯಂ ಸುತೇನ ಹಿ ॥ ೨೪೩ ॥

ಕಿಂ ಕೃತ್ವಾ ಚ ಪರಂ ಶ್ರೇಯೋ ಜನ್ಮಜನ್ಮಸು ಲಭ್ಯತೇ ।
ಪುತ್ರೇಣ ಧೀಮತಾ ದೇವ ಯತ್ನತೋವಕ್ತುಮರ್ಹಸಿ ॥ ೨೪೪ ॥

---

ಯಲ್ಲಿ ಸ್ನಾನಮಾಡಿದರೆ ಒಂದು ಲಕ್ಷ ಗೋದಾನ ಮಾಡಿದ ಫಲವನ್ನು ಹೊಂದುತ್ತಾನೆ. ಸೂರ್ಯಚಂದ್ರಗ್ರಹಣದಲ್ಲಿ ಗಂಗೆಯಲ್ಲಿ ಸ್ನಾನಮಾಡಿದರೆ ಸರ್ವ ತೀರ್ಥಗಳಲ್ಲಿಯೂ ಸ್ನಾನಮಾಡಿದ ಪುಣ್ಯವು ಬರುತ್ತದೆ. ಭೂಮಿಯನ್ನೆಲ್ಲಾ ಸುತ್ತಬೇಕಾದ್ದಿಲ್ಲ. ಭಾನುವಾರ ಸೂರ್ಯ ಗ್ರಹಣವೂ, ಸೋಮವಾರ ಚಂದ್ರ ಗ್ರಹಣವೂ, ಬಂದರೆ, ಚೂಡಾಮಣಿಯೆಂಬ ಯೋಗವಾಗುತ್ತದೆ. ಅದರಲ್ಲಿ ಸ್ನಾನವು ಅನಂತ ಫಲವನ್ನು ಕೊಡುತ್ತದೆ. ಆ ಗ್ರಹಣಗಳ ಹಿಂದಿನ ದಿನದಲ್ಲಿ ಉಪವಾಸವಿದ್ದು ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿ ಪಿಂಡೋದಕವನ್ನು ಕೊಟ್ಟರೆ, ಅವನಿಗೆ ಸತ್ಯಲೋಕ ಪ್ರಾಪ್ತಿಯಾಗುತ್ತದೆ.

೨೪೩. ದ್ವಿಜನು ಹೇಳಿದನು– ಪಿತೃ ಶ್ರಾದ್ಧವು ಮಹಾ ಯಜ್ಞವೆಂದು ನೀನು ಹೇಳಿದೆ. ಮಗನಿಗೆ ವಯಸ್ಸು ಬಂದಮೇಲೆ ಅವನೇನು ಮಾಡಬೇಕು ?

೨೪೪. ಮಗನು ಏನೇನು ಮಾಡಿದರೆ ಜನ್ಮ ಜನ್ಮದಲ್ಲಿಯೂ ಶ್ರೇಯಸ್ಸನ್ನು ಹೊಂದುವನು ? ಅದನ್ನು ದಯವಿಟ್ಟು ಹೇಳು.

॥ ಶ್ರೀ ಭಗವಾನುವಾಚ ॥

ಪೂರ್ವೇ ವಯಸಿ ಸಂಪ್ರಾಪ್ತೇ ಪಿತಾ ಪುತ್ರ ಇತಿ ಸ್ಮೃತಃ ।
ಉತ್ತರೇ ಚ ಸುತಸ್ತಾತಃ ಪಾಲನಾನ್ನ ತು ಪೂಜನಾತ್ ॥ ೨೪೫ ॥

ದೇವವತ್ಪೂಜಯೇತ್ತಾತಂ ಸ್ನೇಹಂ ಕುರ್ಯಾಚ್ಚ ಪುತ್ರವತ್ ।
ನ ಲಂಘಯೇದ್ವಚಸ್ತಸ್ಯ ಮನಸಾಽಪಿ ಕದಾಚನ ॥ ೨೪೬ ॥

ಆತುರಸ್ಯ ಪಿತುಃ ಪುತ್ರೋ ಯಸ್ತು ಕುರ್ಯಾತ್ಪ್ರತಿಕ್ರಿಯಾಂ ।
ಸೋಽಕ್ಷಯಂ ಲಭತೇ ಸ್ವರ್ಗಂ ಸದಾ ದೇವೈಃ ಪ್ರಪೂಜ್ಯತೇ ॥ ೨೪೭ ॥

ಮುಮೂರ್ಷೋರಪಿ ತಾತಸ್ಯ ಮೃತ್ಯುಲಕ್ಷಣಂ ಪಶ್ಯತಃ ।
ಕೃತ್ವಾ ಚ ಯಜನಂ ಪುತ್ರೋ ದೇವಾನಾಂ ತುಲ್ಯತಾಂ ವ್ರಜೇತ್ ॥ ೨೪೮ ॥

ವಿಧಿನಾಽನಶನೇನೈವ ಪಿತುಃ ಸ್ವರ್ಗಂ ದದಾತಿ ಯಃ ।
ಪುತ್ರಸ್ಯ ತಸ್ಯ ಧೀರಸ್ಯ ಶೃಣು ವಕ್ಷ್ಯಾಮಿ ಯದ್ಗುಣಂ ॥ ೨೪೯ ॥

---

೨೪೫. ಶ್ರೀ ಭಗವಂತನು ಹೇಳಿದನು– ಮುಪ್ಪುಬಾರದಿದ್ದಾಗ ತಂದೆಯೇ ಮಗನೆಂಬ ವ್ಯವಹಾರವಿರುವುದು, ಮಗನು ಪ್ರಾಪ್ತವಯಸ್ಕನಾದಮೇಲೆ ಸುತನೆಂದೂ, ತಾತನೆಂದೂ, ಎನ್ನಿಸಿಕೊಳ್ಳುತ್ತಾನೆ.

೨೪೬. ದೇವತೆಯಂತೆ ಆ ತಾತನನ್ನು ಪೂಜಿಸಬೇಕು, ಪುತ್ರನಲ್ಲಿಡುವ ಸ್ನೇಹವನ್ನು ತೋರಿಸುತ್ತಿರಬೇಕು, ಅವನ ಮಾತನ್ನು ಮನಸ್ಸಿನಿಂದಲೂ ಮೀರ ಬಾರದು.

೨೪೭. ರೋಗಿಯಾಗಿರುವ ತಂದೆಗೆ ಮಗನು ಔಷಧಾದಿಗಳನ್ನು ಮಾಡಿದರೆ ಅವನು ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾನೆ. ದೇವತೆಗಳೂ ಇವನನ್ನು ಪೂಜಿಸುತ್ತಾರೆ.

೨೪೮. ಮೃತ್ಯು ಲಕ್ಷಣಗಳನ್ನು ಹೊಂದಿ ಅಂಗವಿಕಲನಾಗಿರುವ ತಂದೆಗೆ ಶುಶ್ರೂಷೆಮಾಡಿದರೆ ಆ ಮಗನು ದೇವತೆಗಳಿಗೆ ಸಮನಾಗುತ್ತಾನೆ.

೨೪೯. ಊಟವನ್ನು ಮಾಡದೆ ತಂದೆಗೆ ಸ್ವರ್ಗ ಕ್ರಿಯೆಗಳನ್ನು ಮಾಡುವ ಮಗನಿಗೆ ಬರುವ ಫಲವನ್ನು ಹೇಳುತ್ತೇನೆ. ಕೇಳು.

**ಅಶ್ವಮೇಧಸಹಸ್ರಾಣಿ ರಾಜಸೂಯಶತಾನಿ ಚ ।**
**ಭವೇದನಶನೇ ಪುಣ್ಯಂ ತೀರ್ಥಕೋಟಿಗುಣಂ ತಯೋಃ ॥ ೨೫೦ ॥**

**ಭಾಗೀರಥ್ಯಾ ಜಲೇ ಚೈವ ಯೋ ಮೃತಃ ಪುರುಷೋತ್ತಮಃ ।**
**ಪಯೋಧರರಸಂ ಮಾತುರ್ನ ಪಿಬೇನ್ಮೋಕ್ಷಿತಾಂ ವ್ರಜೇತ್ ॥ ೨೫೧ ॥**

**ವಾರಾಣಸ್ಯಾಂ ತ್ಯಜೇದ್ಯಸ್ತು ಪ್ರಾಣಾಂಶ್ಚೈವ ಯದೃಚ್ಛಯಾ ।**
**ಅಭೀಷ್ಟಂ ಚ ಫಲಂ ಭುಕ್ತ್ವಾ ಮದ್ದೇಹೇ ಪ್ರವಿಲೀಯತೇ ॥ ೨೫೨ ॥**

**ಯಾಗತಿರ್ಯೋಗಯುಕ್ತಾನಾಂ ಮುನೀನಾಮೂರ್ಧ್ವರೇತಸಾಂ ।**
**ಸಾ ಗತಿಸ್ತ್ಯಜತಃ ಪ್ರಾಣಾನ್ಬ್ರಹ್ಮಪುತ್ರೇಷು ಸಪ್ತಸು ॥ ೨೫೩ ॥**

**ಲೋಹಿತಸ್ಯ ವಿಶೇಷೇಣ ತೀರೋತ್ತರಸಮಾಶ್ರಿತಃ ।**
**ವಿಧಿನಾ ಯಸ್ತ್ಯಜೇತ್ಪ್ರಾಣಾನ್ಸ ಚ ಮತ್ಸಮತಾಂ ವ್ರಜೇತ್ ॥ ೨೫೪ ॥**

**ತಸ್ಯೈವ ಚೋರ್ವಶೀತೀರೇ ಪುಣ್ಯತೀರ್ಥೇ ದ್ವಿಜೋತ್ತಮಃ ।**
**ಮೃತೋತ್ಪನ್ನಃ ಸಮಾಪ್ನೋತಿ ಸರ್ವಂ ದೋಷೈರ್ನ ಲಿಪ್ಯತೇ ॥ ೨೫೫ ॥**

---

೨೫೦. ಆ ತಾಯಿ ತಂದೆಗಳಿಗೆ ಉತ್ತರ ಕ್ರಿಯೆಗಳನ್ನು ಮಾಡಿದರೆ ಸಾವಿರ ಅಶ್ವಮೇಧ ಫಲಗಳನ್ನು ನೂರು ರಾಜಸೂಯಗಳ ಪುಣ್ಯವನ್ನು ಹೊಂದುತ್ತಾನೆ. ಭೋಜನಮಾಡದೆ ಮಾಡಿದರೆ ಅದಕ್ಕೆ ಕೋಟಿಯಷ್ಟು ಪುಣ್ಯವು ಹೆಚ್ಚು.

೨೫೧. ಭಾಗೀರಥಿಯ ನೀರಿನಲ್ಲಿ ಸತ್ತರೆ ಅವನಿಗೆ ಪುನರ್ಜನ್ಮವಿಲ್ಲದ ಮೋಕ್ಷವು ಸಿಕ್ಕುತ್ತದೆ.

೨೫೨. ವಾರಾಣಸಿಯಲ್ಲಿ ಪ್ರಾಣಗಳನ್ನು ಬಿಟ್ಟರೆ ಇಷ್ಟವಾದ ಫಲವನ್ನು ಅನುಭವಿಸಿ ನನ್ನ ದೇಹದಲ್ಲಿ ಐಕ್ಯನಾಗುತ್ತಾನೆ.

೨೫೩. ಬ್ರಹ್ಮಪುತ್ರಾದಿ ಏಳು ನದಿಗಳಲ್ಲಿ ಪ್ರಾಣಬಿಟ್ಟರೆ ಊರ್ಧ್ವರೇತಸ್ಕರಾದ ಯೋಗಿಗಳಿಗೆ ಬರುವ ಮುಕ್ತಿಯು ಬರುತ್ತದೆ.

೨೫೪. ಶೋಣಾ ನದಿಯ ದಡದಲ್ಲಿ ಕ್ರಮದಿಂದ ಸತ್ತರೆ ಅವನು ನನ್ನ ಸಮನಾಗುತ್ತಾನೆ.

೨೫೫. ಅಲ್ಲಿಯೇ ಇರುವ ಊರ್ವಶೀ ತೀರ್ಥದಲ್ಲಿ ಸತ್ತರೆ ಮತ್ತೆ ಹುಟ್ಟಿ ಎಲ್ಲಾ ಸುಖವನ್ನೂ ಹೊಂದಿ ದೋಷಗಳಿಂದ ಪಾರಾಗುತ್ತಾನೆ.

ಗೃಹಸ್ಯಾಭ್ಯಂತರೇ ಯಸ್ಯ ಪ್ರಾಣತ್ಯಾಗೋ ಭವೇದ್ಧ್ರುವಂ ।
ಯಾವದ್ಗ್ರಂಥಿರ್ಗೃಹೇ ತಿಷ್ಠೇತ್ತಾವದ್ಬಂಧೋ ಭವೇತ್ತನಾ ॥ ೨೫೬ ॥

ಹಾಯನೇ ಹಾಯನೇ ಚಾಪಿ ಏಕೈಕಂ ಪರಿಹೀಯತೇ ।
ಪಶ್ಯತಾಂ ಪುತ್ರಬಂಧೂನಾಂ ಬಂಧನೇ ನಾಸ್ತಿ ನಿಷ್ಕೃತಿಃ ॥ ೨೫೭ ॥

ಪರ್ವತೇ ಕಾನನೇ ದುರ್ಗೇ ಸ್ಥಾನೇ ವಾ ಜಲವರ್ಜಿತೇ ।
ಮೃತೋ ದುರ್ಗತಿಮಾಪ್ನೋತಿ ಕೀಟಾದೌ ಜಾಯತೇ ಪುನಃ ॥ ೨೫೮ ॥

ಸಂಸ್ಕಾರಶ್ಚ ಭವೇದ್ಯಸ್ತು ಮೃತಸ್ಯ ಪರವಾಸರೇ ।
ಷಷ್ಟಿವರ್ಷಸಹಸ್ರಾಣಿ ಕುಂಭೀಪಾಕೇ ಪ್ರತಿಷ್ಠತಿ ॥ ೨೫೯ ॥

ಅಸ್ಪೃಶ್ಯಸ್ಪರ್ಶನಾದೇವ ಉಚ್ಛಿಷ್ಟಪತಿತೋ ಮೃತಃ ।
ಸುಚಿರಂ ನರಕೇ ಸ್ಥಿತ್ವಾ ಮ್ಲೇಚ್ಛಜಾತಿಷು ಜಾಯತೇ ॥ ೨೬೦ ॥

ತಥೈವ ಬಹುಕೀಟೇಷು ಜಾಯತೇ ಸತ್ವಜಾತಿಷು ।
ತಸ್ಮಾನ್ನ ಚಿರಕಾಲೇಷು ಜಾನೀಯಾತ್ಪುಣ್ಯಪಾತಕಂ ॥ ೨೬೧ ॥

---

೨೫೬. ಮನೆಯಲ್ಲಿ ಪ್ರಾಣಬಿಟ್ಟರೆ ಸಂಬಂಧಪಟ್ಟ ದೇಹವು ಮನೆಯಲ್ಲಿರುವ ವರೆಗೂ ದೇಹದಲ್ಲಿ ಎಷ್ಟು ಗಂಟುಗಳಿವೆಯೋ ಅಷ್ಟು ಗಂಟುಗಳೂ, ಕರ್ತನ ದೇಹದಲ್ಲುಂಟಾಗುತ್ತದೆ.

೨೫೭. ಅನಂತರ ವರ್ಷಕ್ಕೆ ಒಂದೊಂದರಂತೆ ಹೋಗುತ್ತವೆ. ಆ ರೀತಿಯಾಗಿ ಗಂಟುಗಳು ಬಂದರೆ ಅದಕ್ಕೆ ಪ್ರತೀಕಾರವಿರುವುದಿಲ್ಲ.

೨೫೮. ಪರ್ವತ, ಕಾಡು, ದುರ್ಗ, ನೀರಿಲ್ಲದ ಜಾಗ ಇವುಗಳಲ್ಲಿ ಸತ್ತರೆ ನರಕವನ್ನು ಹೊಂದುತ್ತಾನೆ. ಕ್ರಿಮಿಗಳಲ್ಲಿ ಹುಟ್ಟುತ್ತಾನೆ.

೨೫೯. ಸತ್ತವನಿಗೆ ಮಾರನೆಯದಿನ ಸಂಸ್ಕಾರವಾಗುವ ಪಕ್ಷದಲ್ಲಿ ಅವನು ಅರವತ್ತು ಸಾವಿರ ವರ್ಷಗಳವರೆಗೆ ಕುಂಭೀಪಾಕದಲ್ಲಿ ಇರುತ್ತಾನೆ.

೨೬೦. ಮೃತನ ಶವವನ್ನು ಅಸ್ಪೃಶ್ಯರು ಮುಟ್ಟಿದರೆ ಅಥವಾ ಉಚ್ಛಿಷ್ಟವಾದರೆ ಪತಿತನಾಗಿ ಸತ್ತರೆ ಬಹುಕಾಲದವರೆಗೆ ನರಕದಲ್ಲಿದ್ದು ಮ್ಲೇಚ್ಛಜಾತಿಯಲ್ಲಿ ಹುಟ್ಟುತ್ತಾನೆ.

೨೬೧. ಅಂತೆಯೇ ಕೀಟಗಳಲ್ಲಿ ಹುಟ್ಟುತ್ತಾನೆ. ಆದ್ದರಿಂದ ಬಹುಕಾಲ ಶವವನ್ನು ಬಿಡಬಾರದು. ಪುಣ್ಯ ಪಾಪಗಳನ್ನು ತಿಳಿದುಕೊಳ್ಳಬೇಕು.

ಪುಣ್ಯಾತ್ಪುಣ್ಯಪ್ರಯೋಗೈಶ್ಚ ಸರ್ವೇಷಾಂ ಮರ್ತ್ಯವಾಸಿನಾಂ ।
ಮರಣೇ ಯಾ ಮತಿಃ ಪುಂಸಾಂ ಗತಿರ್ಭವತಿ ತಾದೃಶೀ ॥ ೨೬೨ ॥

ಪುಣ್ಯತೀರ್ಥೇ ಮೃತೋ ಯಸ್ತು ವಿಷ್ಣೋರ್ನಾಮಾನಿ ಚಿಂತಯನ್ ।
ಪಾಪಾತ್ಪೂತೋ ವ್ರಜೇತ್ಸ್ವರ್ಗಂ ಸರ್ವದೋಷೈರ್ನ ಲಿಪ್ಯತೇ ॥ ೨೬೩ ॥

ಪಿತುರ್ಮೃತಸ್ಯ ದೇಹಂ ತು ವಹೇದ್ಯಸ್ತು ಸುತೋ ಬಲೀ ।
ಪದೇ ಪದೇಽಶ್ವಮೇಧಸ್ಯ ಫಲಂ ಪ್ರಾಪ್ನೋತ್ಯಸಂಶಯಂ ॥ ೨೬೪ ॥

ಪ್ರಾಕ್ಚಿತೌ ಚ ಪಿತುರ್ದೇಹೇ ಮುಖಾಗ್ನಿಂ ಕಾರಯೇತ್ಸುತಃ ।
ವಿಧಿನಾ ಮಂತ್ರಪೂತೇನ ಪಶ್ಚಾದ್ದೇಹಂ ದಹೇತ್ಪುನಃ ॥ ೨೬೫ ॥

ಲೋಭಮೋಹಸಮಾಯುಕ್ತಂ ಪಾಪಪುಣ್ಯಸಮಾವೃತಂ ।
ದಹೇಯಂ ಸರ್ವಗಾತ್ರಾಣಿ ದಿವ್ಯಾಂಲ್ಲೋಕಾನ್ಸ ಗಚ್ಛತು ॥ ೨೬೬ ॥

---

೨೬೨. ಪುಣ್ಯಗಳಿಂದಲೂ, ಪುಣ್ಯಾಚರಣೆಗಳಿಂದಲೂ ಜನಗಳಿಗೆ ಮರಣಕಾಲದಲ್ಲಿ ಯಾವ ಬುದ್ಧಿಯಿರುವುದೋ ಕೊನೆಗೆ ಅಂತಹ ಗತಿಯೇ ಬರುತ್ತದೆ.

೨೬೩. ವಿಷ್ಣುವಿನ ನಾಮಗಳನ್ನು ಚಿಂತಿಸುತ್ತಾ ಪುಣ್ಯತೀರ್ಥದಲ್ಲಿ ಸತ್ತರೆ ಪಾಪಗಳನ್ನು ಕಳೆದುಕೊಂಡು ಸ್ವರ್ಗಕ್ಕೆ ಹೋಗುತ್ತಾನೆ

೨೬೪. ಮಗನು, ಸತ್ತ ತಂದೆಯ ದೇಹವನ್ನು ಹೊತ್ತುಕೊಂಡು ಹೋದರೆ ಹೆಜ್ಜೆ ಹೆಜ್ಜೆಗೂ ಅಶ್ವಮೇಧದ ಫಲವನ್ನು ಹೊಂದುತ್ತಾನೆ. ಸಂಶಯವಿಲ್ಲ.

೨೬೫. ಪಿತೃವಿನ ದೇಹವನ್ನು ಸುಡುವ ಚಿತೆಯಲ್ಲಿ ಮೊದಲು ಮಗನು ಬೆಂಕಿಯನ್ನು ಅಗ್ನಿಮುಖದಿಂದ ಸಂಸ್ಕಾರಮಾಡಿ ಬಾಯಿಂದ ಹತ್ತಿಸಬೇಕು ಅನಂತರ ಅದನ್ನು ಮಂತ್ರದಿಂದ ಪರಿಶುದ್ಧಮಾಡಿಕೊಂಡು ಅದರಲ್ಲಿ ಆ ದೇಹವನ್ನು ಸುಡಬೇಕು.

೨೬೬. ಲೋಭ, ಮೋಹಗಳಿಂದ, ಕೂಡಿದ ಪಾಪ ಪುಣ್ಯಗಳನ್ನು ಹೊಂದಿರುವ ಈ ದೇಹವನ್ನು ಸುಡುತ್ತೇನೆ. ಇದಕ್ಕೆ ದಿವ್ಯಲೋಕಗಳು ಬರಲೆಂದು ಹೇಳಬೇಕು.

ದಗ್ಧ್ವಾ ಚ ಲಂಘಯೇತ್ಪುತ್ರೋಽಪ್ಯಸ್ಥಿಸಂಚಯನಂ ಪ್ರತಿ ।
ದಶಾಹೇ ಸಮನುಪ್ರಾಪ್ತೇ ಚಾಂದ್ರ್ರವಸ್ತ್ರಂ ಪರಿತ್ಯಜೇತ್ ॥ ೨೬೭ ॥

ಛಿತ್ತ್ವಾ ಚ ಲೌಹಿತಂ ಚೈಲಂ ವಹ್ನೌ ಚಾಥ ಜಲೇ ಕ್ಷಿಪೇತ್ ।
ತತಶ್ಚೈಕಾದಶಾಹೇ ಚ ಶ್ರಾದ್ಧಂ ಕುರ್ಯಾದ್ವಿಚಕ್ಷಣಃ ॥ ೨೬೮ ॥

ಪ್ರೇತಸ್ಯ ದೇಹಪುಷ್ಟ್ಯರ್ಥಂ ಬ್ರಾಹ್ಮಣೈಕಂ ತು ಭೋಜಯೇತ್ ।
ದಾನಂ ದದ್ಯಾಚ್ಚ ವಿಧಿವದ್ವಸ್ತ್ರಂ ಪೀಠಂ ಚ ಪಾದುಕಾಂ ॥ ೨೬೯ ॥

ಸರ್ವೋಪಕರಣೈಸ್ತುಲ್ಯಂ ಧರಾದಿ ಗಜವಾಜಿಕಂ ।
ಕೃಷ್ಣಾಂ ಗಾಂ ಚ ಪ್ರದದ್ಯಾತ್ತು ಸರ್ವಪಾಪವಿಮುಕ್ತಯೇ ॥ ೨೭೦ ॥

ಚತುರ್ಥಾಹೇ ತ್ರಿಪಕ್ಷೇ ಚ ಷಣ್ಮಾಸೇ ಚಾಬ್ದಿಕೇ ತಥಾ ।
ದ್ವಾದಶ ಪ್ರತಿಮಾಸ್ಯಾನಿ ಶ್ರಾದ್ಧಾನ್ಯೇತಾನಿ ಷೋಡಶ ॥ ೨೭೧ ॥

---

೨೬೭. ದೇಹವನ್ನು ಸುಟ್ಟಮೇಲೆ ಅಸ್ಥಿ ಸಂಚಯನವನ್ನು ಮಾಡಬೇಕು, ಹತ್ತು ದಿನಗಳವರೆಗೂ ಒದ್ದೆಯ ಬಟ್ಟೆಯಲ್ಲಿ ಪಿತೃ ಯಜ್ಞಗಳನ್ನು ನಡೆಸಿ ಅನಂತರ ಒದ್ದೆಯ ವಸ್ತ್ರವನ್ನು ಬಿಡಬೇಕು.

೨೬೮. ಅನಂತರ ಕೆಂಪು ಬಟ್ಟೆಯನ್ನು ಹರಿದು ಬೆಂಕಿಯಲ್ಲಾಗಲೀ, ನೀರಿನಲ್ಲಾಗಲೀ, ಹಾಕಬೇಕು. ಅನಂತರ ಹನ್ನೊಂದನೆಯ ದಿನ ಶ್ರಾದ್ಧವನ್ನು ಮಾಡಬೇಕು.

೨೬೯. ಪ್ರೇತನ ದೇಹ ಪುಷ್ಟಿಗೋಸ್ಕರ ಒಬ್ಬ ಬ್ರಾಹ್ಮಣನಿಗೆ ಭೋಜನಮಾಡಿಸಬೇಕು. ವಸ್ತ್ರ. ಪೀಠ, ಪಾದುಕೆಗಳನ್ನು ವಿಧಿವತ್ತಾಗಿ ದಾನಮಾಡಬೇಕು.

೨೭೦. ಉಪಕರಣಗಳಿಂದ ಕೂಡಿದ ಆನೆ, ಕುದುರೆ, ಭೂಮಿಗಳನ್ನೂ ಪಾಪಗಳ ನಾಶಕ್ಕೋಸ್ಕರ ಕಪ್ಪಾದ ಹಸುವನ್ನೂ ದಾನಮಾಡಬೇಕು.

೨೭೧. ನಾಲ್ಕನೆಯ ದಿನ, ಮೂರನೆಯ ಪಕ್ಷದಲ್ಲಿ, ಆರನೆಯ ತಿಂಗಳಲ್ಲಿ, ವರ್ಷಾಂತ್ಯದಲ್ಲಿ, ಮತ್ತು ಹನ್ನೆರಡು ತಿಂಗಳು, ಪ್ರತಿತಿಂಗಳೂ, ಶ್ರಾದ್ಧಗಳನ್ನು ಮಾಡಬೇಕು. ಒಟ್ಟು ಶ್ರಾದ್ಧಗಳು ಹದಿನಾರು ಆಗುತ್ತವೆ.

ಯಸ್ಯೈತಾನಿ ನ ಸಂತೀಹ ಯಥಾಶಕ್ತ್ಯಾ ಚ ಶ್ರದ್ಧಯಾ ।
ಪಿಶಾಚತ್ವಂ ಸ್ಥಿರಂ ತಸ್ಯ ದತ್ತೈಃ ಶ್ರಾದ್ಧಶತೈರಪಿ ॥ ೨೭೨ ॥

ಅಬ್ದಮಂಬುಘಟಂ ದದ್ಯಾದನ್ನಂ ಚಾಮಿಷಸಂಯುತಂ ।
ನಿತ್ಯಾನಿತ್ಯಮಭಾವಾಚ್ಚ ಕ್ಷಪೆನ್ಮಾಸಂ ಸಮಾಪಯೇತ್ ॥ ೨೭೩ ॥

ಸಪಿಂಡೀಕರಣಶ್ರಾದ್ಧಂ ಗತೇ ಸಂವತ್ಸರೇ ಬುಧಃ ।
ಪಾರ್ವಣಸ್ಯ ವಿಧಾನೇನ ಕಾರಯೇದ್ದ್ವಿಜಸತ್ತಮಃ ॥ ೨೭೪ ॥

ಪಿತುರಬ್ದಮಶೌಚಂ ಸ್ಯಾನ್ಮಾತುಃ ಷಣ್ಮಾಸಮೇವ ಚ ।
ತ್ರಿಮಾಸಂ ತು ಸ್ತ್ರಿಯಾಶ್ಚೈವ ತದರ್ಧಂ ಭ್ರಾತೃಪುತ್ರಯೋಃ ॥ ೨೭೫ ॥

ಸಪಿಂಡಾನಾಮಶೌಚಂ ಸ್ಯಾದ್ಯಾವದ್ಗೇಹೇ ಸ ತಿಷ್ಠತಿ ।
ಪುತ್ರಸ್ಯ ಯನ್ನಿಷಿದ್ಧಂ ತು ಶೃಣು ತಾತ ವದಾಮ್ಯಹಂ ॥ ೨೭೬ ॥

---

೨೭೨. ಶ್ರದ್ಧೆಗನುಗುಣವಾಗಿ, ಶಕ್ತಿಗನುಗುಣವಾಗಿ, ಈ ಶ್ರಾದ್ಧಗಳನ್ನು ಮಾಡದಿದ್ದರೆ ಸತ್ತವನಿಗೆ ನೂರಾರು ಶ್ರಾದ್ಧಗಳನ್ನು ಮಾಡಿದರೂ ಪಿಶಾಚತನವು ಹೋಗುವುದಿಲ್ಲ.

೨೭೩. ವರ್ಷ ಪೂರ್ತಿಯಾಗುವವರೆಗೂ ನಿತ್ಯವೂ ಉದಕುಂಭವನ್ನು ದಾನ ಮಾಡಬೇಕು. ಮಾಂಸದಿಂದ ಕೂಡಿದ ಅನ್ನವನ್ನು ಹಾಕಬೇಕು. ನಿತ್ಯಶ್ರಾದ್ಧ, ನೈಮಿತ್ತಿಕಶ್ರಾದ್ಧಗಳನ್ನು ಕ್ಷಣಿಸಿ ಮಾಡಬೇಕು. ಈ ರೀತಿ ಮಾಡದಿದ್ದರೆ ತಿಂಗಳು ತಿಂಗಳಿಗೆ ಕ್ಷಣಿಸಿ ಮಾಸಿಕವನ್ನು ಮಾಡಬೇಕು.

೨೭೪. ವರ್ಷವಾಗುತ್ತಲೂ ಸಪಿಂಡೀಕರಣಶ್ರಾದ್ಧವನ್ನು ಮಾಡಬೇಕು. ಆ ಶ್ರಾದ್ಧವನ್ನು ಪಾರ್ವಣವಿಧಾನದಿಂದ ಮಾಡಬೇಕು.

೨೭೫. ತಂದೆಯ ಸೂತಕವು ಒಂದು ವರ್ಷವೂ, ತಾಯಿಯ ಸೂತಕವು ಆರು ತಿಂಗಳೂ, ಹೆಂಡತಿಯ ಸೂತಕವು ಮೂರು ತಿಂಗಳೂ, ಅಣ್ಣತಮ್ಮಂದಿರ ಮತ್ತು ಮಕ್ಕಳ ಸೂತಕವು ಒಂದೂವರೆ ತಿಂಗಳೂ ಇರುತ್ತವೆ.

೨೭೬. ಮನೆಯಲ್ಲಿ ಶವವಿರುವವರೆವಿಗೂ ಸಪಿಂಡರಿಗೆ ಸೂತಕವಿರುವುದು. ಮಗನಿಗೆ ನಿಷೇಧವಾದುವುಗಳನ್ನು ಹೇಳುತ್ತೇನೆ. ಕೇಳು.

ಬ್ರಹ್ಮಚಾರೀ ಸದಾಚಾರೀ ನ ಗಚ್ಛೇಚ್ಚ ಸ್ತ್ರಿಯಂ ಕ್ವಚಿತ್ ।
ಸಪ್ತಘಟ್ಯಾಃ ಪರಂ ಚೈವ ನವಘಟ್ಯಶ್ಚ ಪೂರ್ವತಃ ॥ ೨೭೭ ॥

ಸ ಕಾಲಃ ಕುತುಪೋ ಜ್ಞೇಯಃ ಪಿತೄಣಾಂ ದತ್ತಮಕ್ಷಯಂ ।
ಶ್ರಾದ್ಧೇ ತ್ರೀಣಿ ಪವಿತ್ರಾಣಿ ದೌಹಿತ್ರಂ ಕುತಪಸ್ತಿಲಾಃ ॥ ೨೭೮ ॥

ತ್ರೀಣಿ ಚಾತ್ರ ಪ್ರಶಂಸಂತಿ ಸತ್ಯಮಕ್ರೋಧಮತ್ವರಾ ।
ಸಾಯಂಸಂಧ್ಯಾಂ ಪರಾನ್ನಂ ಚ ಪುನರ್ಭೋಜನಮೈಥುನಂ ॥ ೨೭೯ ॥

ದಾನಂ ಪ್ರತಿಗ್ರಹಂ ಚೈವ ಶ್ರಾದ್ಧಂ ಕೃತ್ವಾ ವಿವರ್ಜಯೇತ್ ।
ಅಕರ್ತವ್ಯಶತಂ ಕೃತ್ವಾ ಶ್ರಾದ್ಧಂ ಕುರ್ಯಾದ್ದ್ವಿಚಕ್ಷಣಃ ॥ ೨೮೦ ॥

ತಚ್ಚ ಕರ್ತವ್ಯತಾಮೇತಿ ಸ್ವಯಮುಕ್ತಂ ವಿರಿಂಚಿನಾ ।
ಶೃಣು ಪುತ್ರ ಪುರಾವೃತ್ತಂ ಬಹೂನಾಂ ಚ ವದಾಮ್ಯಹಂ ॥ ೨೮೧ ॥

ಗುರೋರ್ಗೋರ್ಹನನಂ ಕೃತ್ವಾ ಶ್ರಾದ್ಧಂ ದದ್ಯುರ್ಯಯುರ್ದಿವಂ ।
ತೇಷಾಂ ಚ ಕೀರ್ತನಾದೇವ ಶ್ರಾದ್ಧಂ ಭವತಿ ಚಾಕ್ಷಯಂ ॥ ೨೮೨ ॥

---

೨೭೭-೨೭೮. ಮಗನು ಬ್ರಹ್ಮಚಾರಿಯಾಗಿಯೂ, ಸದಾಚಾರವುಳ್ಳವನಾಗಿಯೂ, ಇರಬೇಕು. ಸ್ತ್ರೀ ಸಂಗಮವನ್ನು ಮಾಡಬಾರದು, ಸೂರ್ಯೋದಯದಿಂದ ಏಳು ಘಳಿಗೆಯ ಮೇಲೆ ಒಂಭತ್ತು ಘಳಿಗೆಯ ಒಳಗೆ ಇರುವ ಕಾಲಕ್ಕೆ ಕುತುಪಕಾಲವೆಂದು ಹೆಸರು. ಅದರಲ್ಲಿ ಪಿತೃಗಳಿಗೆ ಕೊಟ್ಟದ್ದು ಅಕ್ಷಯವಾಗುತ್ತದೆ. ಶ್ರಾದ್ಧದಲ್ಲಿ ದೌಹಿತ್ರ, ಕುತುಪಕಾಲ, ಎಳ್ಳು, ಇವು ಮೂರು ಪವಿತ್ರಗಳು.

೨೭೯-೨೮೧. ಸತ್ಯ. ಅದ್ರೋಹ, ಅತ್ವರೀ, (ಅವಸರವಿಲ್ಲದಿರುವಿಕೆ,) ಇವನ್ನು ಉತ್ತಮವೆನ್ನುತ್ತಾರೆ. ಸಾಯಂಕಾಲದ ಸಂಧ್ಯಾವಂದನೆ, ಪರಾನ್ನ, ಎರಡನೆಯ ಬಾರಿ ಊಟಮಾಡುವುದು, ಮೈಥುನ, ದಾನಕೊಡುವುದು, ದಾನತೆಗೆದುಕೊಳ್ಳುವುದು, ಇವನ್ನು ಶ್ರಾದ್ಧಮಾಡಿದವನು ಮಾಡಬಾರದು. ಮಾಡಬಾರದ ಸಾವಿರಾರು ಕೆಲಸಗಳನ್ನಾದರೂ ಮಾಡಿ ಶ್ರಾದ್ಧವನ್ನು ಮಾಡಬೇಕು. ಎಂದು ಬ್ರಹ್ಮನೇ ಹೇಳಿದ್ದಾನೆ. ಈ ವಿಷಯದಲ್ಲಿ ಹಿಂದಿನ ಇತಿಹಾಸವನ್ನು ಹೇಳುತ್ತೇನೆ. ಕೇಳು.

೨೮೨. ಗುರುವಿನ ಗೋವನ್ನು ಕೊಂದು ಶ್ರಾದ್ಧವನ್ನು ಮಾಡಿ ಅಕ್ಷಯವಾದ ಸ್ವರ್ಗವನ್ನು ಹೊಂದಿದರು. ಅವರುಗಳ ಹೆಸರನ್ನು ಹೇಳಿದ ಮಾತ್ರಕ್ಕೆ ಶ್ರಾದ್ಧವು ಅಕ್ಷಯವಾಗುತ್ತದೆ.

ವಸಿಷ್ಠಸ್ಯ ಮುನೇಃ ಶಿಷ್ಯಾ ಬ್ರಾಹ್ಮಣಾಃ ಸಪ್ತ ಸುವ್ರತಾಃ ।
ಪಿತೃಶ್ರಾದ್ಧೇ ಸಮಾಯಾತೇ ಹೋಮೋಧೇನುಂ ಗುರೋಃ ಪ್ರಿಯಾಂ ೨೮೩

ಪ್ರಾರ್ಥಯಿತ್ವಾ ಗೃಹಂ ನೀತ್ವಾ ಸಪ್ತಭಿರ್ಭ್ರಾತೃಭಿರ್ಮುದಾ ।
ಗವ್ಯಾರ್ಥಂ ಪಿತೃಯಜ್ಞೇ ತಾಂ ಧೇನುಂ ಹತ್ವಾ ವಿಮೃಶ್ಯ ಚ ॥ ೨೮೪ ॥

ದದ್ಯುರ್ಮಾಂಸಂ ಚ ವಿಪ್ರೇ ಚ ಶೇಷಂ ವಿಪ್ರಾಂಸ್ತ್ವಭೋಜಯನ್ ।
ಸಮಾಪ್ಯ ಪಿತೃಕರ್ಮಾಣಿ ವತ್ಸಂ ಸಂಗೃಹ್ಯ ತೇ ದ್ವಿಜಾಃ ॥ ೨೮೫ ॥

ಗುರೌ ಸಮರ್ಪಯಾಮಾಸುರ್ಧೇನುರ್ವ್ಯಾಘ್ರೇಣ ಭಕ್ಷಿತಾ ।
ತತಸ್ತಪೋಬಲಾದೇವ ಜ್ಞಾತ್ವಾ ತೇಷಾಂ ಚ ಕಾರಣಂ ॥ ೨೮೬ ॥

ಸ ಶಶಾಪ ತತಃ ಶಿಷ್ಯಾಂಶ್ಚಾಂಡಾಲಾಶ್ಚ ಭವಿಷ್ಯಥ ।
ವೇಪಮಾನಾಸ್ತತೋ ವಿಪ್ರಾಃ ಕೃತಾಂಜಲಿಪುಟಾಃ ಸ್ಥಿತಾಃ ॥
ಧೇನೋರ್ಮಾಂಸಂ ಪ್ರದಾತಾರಃ ಪಿತೃಕೃತ್ಯೇ ಸದಾऽನಘ ॥ ೨೮೭ ॥

॥ ಶಿಷ್ಯಾ ಊಚುಃ ॥

ಅಕರ್ತವ್ಯಸಹಸ್ರಾಣಿ ಮಹಾಂತಿ ಪಾತಕಾನಿ ಚ ।
ಕುರ್ವಂತಃ ಪಿತೃಕಾರ್ಯೇಷು ಪಾಪಾತ್ಪೂತಾ ದಿವಂ ಗತಾಃ ॥ ೨೮೮ ॥

---

೨೮೩–೨೮೭. ವಸಿಷ್ಠನಿಗೆ ಏಳುಜನ ಶಿಷ್ಯರಿದ್ದರು ಅವರುಗಳು ಸೋದರರು. ಒಂದು ಸಾರಿ ಅವರ ತಂದೆಯ ಶ್ರಾದ್ಧವು ಬರಲು ಹಾಲು ಮೊಸರುಗಳಿಗೆ ಹಸುವು ಬೇಕೆಂದು ಕೇಳಿ ಆ ವಸಿಷ್ಠನ ಅನುಮತಿಯನ್ನು ಹೊಂದಿ ಅವನ ಹೋಮದ ಹಸುವನ್ನು ತೆಗೆದುಕೊಂಡು ಹೋದರು. ಅನಂತರ ಮನೆಗೆ ಹೋದಮೇಲೆ ಯೋಚಿಸಿ ಅದನ್ನು ಕೊಂದು ಅದರ ಮಾಂಸವನ್ನು ಬ್ರಾಹ್ಮಣರಿಗೆ ಬಡಿಸಿ ಶೇಷವನ್ನು ತಾವು ಊಟಮಾಡಿದರು. ಅನಂತರ ಅವರು ವಸಿಷ್ಠನಿಗೆ ಅದರ ಕರುವನ್ನು ತಂದು ಒಪ್ಪಿಸಿ ಹಸುವನ್ನು ಹುಲಿಯು ತಿಂದುಬಿಟ್ಟಿತೆಂದರು. ಅನಂತರ ತಪಸ್ಸಿನ ಬಲದಿಂದ ಅದರ ವಿಷಯುವನ್ನು ತಿಳಿದು ಶಿಷ್ಯರನ್ನು ಚಂಡಾಲರಾಗಿರೆಂದು ಶಪಿಸಿದನು. ಆ ಹಸುವಿನ ಮಾಂಸವನ್ನು ಶ್ರಾದ್ಧದ ದಿನ ಬ್ರಾಹ್ಮಣರಿಗೆ ಕೊಟ್ಟ ಆ ಶಿಷ್ಯರು ಅವನ ಶಾಪದಿಂದ ನಡುಗುತ್ತಾ ಕೈಮುಗಿದುಕೊಂಡು ಇಂತೆಂದರು.

೨೮೮–೨೮೯. ಶಿಷ್ಯರು ಹೇಳಿದರು- ಸಾವಿರ ಕೆಟ್ಟಕೆಲಸಗಳನ್ನಾಗಲಿ, ಮಹಾ ಪಾತಕಗಳನ್ನಾಗಲಿ ಮಾಡಿ ಪಿತೃಕಾರ್ಯವನ್ನು ಮಾಡಬೇಕು. ಹಾಗೆ ಮಾಡಿ ಬಹು

ಶ್ರುತಂ ಬಹುವಿಧಂ ನಾಥ ಮುಖಾತ್ತೇ ಚ ಪುರಾತನಂ ।
ಕ್ಷಂತುಮರ್ಹಸಿ ಧರ್ಮಜ್ಞ ಶಾಪಸ್ಯಾಂತೋ ವಿಧೀಯತಾಂ ॥ ೨೮೯ ॥

॥ ವಸಿಷ್ಠ ಉವಾಚ ॥

ಶಾಪೋ ವೋಽಥ ಯಥಾಪಾಪ್ಯ ನ ತು ಧರ್ಮವಿಚಾರಣಾತ್ ।
ಚಾಂಡಾಲಾದೌ ಸಮುತ್ಪನ್ನಾಃ ಪುರಾವೃತ್ತಂ ಸ್ಮರಿಷ್ಯಥ ॥ ೨೯೦ ॥

ನ ಚ ವೋ ಜ್ಞಾನಲೋಪಶ್ಚ ಸ್ಮೃತಿಶಾಸ್ತ್ರಮನಷ್ಟಕಂ ।
ಪಾಪಯೋನಿಂ ಸಮುತ್ತೀರ್ಯ ಪಶ್ಚಾನ್ಮೋಕ್ಷಂ ಗಮಿಷ್ಯಥ ॥ ೨೯೧ ॥

ತತಃ ಪ್ರಾಣಾನ್ಪರಿತ್ಯಜ್ಯ ಗುರುಶಾಪಾತ್ತು ತೇ ದ್ವಿಜಾಃ ।
ಜಾತಾಶ್ಚಾಂಡಾಲಯೋನೌ ತು ಸರ್ವಜ್ಞಾನಸಮನ್ವಿತಾಃ ॥ ೨೯೨ ॥

ಸ್ತನ್ಯಂ ತೈಸ್ತು ನ ಪೀತಂ ವೈ ಸ್ಮರದ್ಭಿಃ ಪೂರ್ವಜನ್ಮ ತತ್ ।
ಮೃತಾ ಜಾತಾ ಮೃಗಾಃ ಸರ್ವೇ ಚಕ್ರವಾಕಾಃ ಪುನರ್ವನೇ ॥ ೨೯೩ ॥

---

ಜನರು ಪಾಪಗಳಿಂದ ಮುಕ್ತರಾಗಿ ಸ್ವರ್ಗವನ್ನು ಹೊಂದಿದರು. ಎಂದು ಅನೇಕ ಪ್ರಕಾರ ವಾಗಿ ನೀವೇ ಹೇಳದ್ದೀರಿ. ಆದ್ದರಿಂದ ಇದನ್ನು ಕ್ಷಮಿಸಿ ಈ ಶಾಪಕ್ಕೆ ಅವಧಿಯನ್ನು ಕಾಣಿಸಿ.

೨೯೦. ವಸಿಷ್ಠನು ಹೇಳಿದನು- ಧರ್ಮ ವಿಚಾರದಿಂದ ಇದು ಕೆಟ್ಟ ಶಾಪವಾ ಗುವುದೇ ಇಲ್ಲ. ಆದರೆ ನಾನು ಕೊಟ್ಟುಬಿಟ್ಟಿರುವೆನು. ಚಂಡಾಲನ ಜಾತಿಯೇ ಮುಂತಾದುವುಗಳಲ್ಲಿ ಹುಟ್ಟಿದರೂ ಹಿಂದಿನ ಜನ್ಮಗಳ ಜ್ಞಾನವಿರಲಿ.

೨೯೧. ನಿಮ್ಮಗಳ ಜ್ಞಾನವು ನಾಶವಾಗುವುದಿಲ್ಲ. ನೀವು ಓದಿದ ಸ್ಮೃತಿ ಮುಂತಾದ ಶಾಸ್ತ್ರಗಳು ನಷ್ಟವಾಗುವುದಿಲ್ಲ. ಪಾಪ ಜನ್ಮದಿಂದ ಉತ್ತೀರ್ಣರಾಗಿ ಅನಂತರ ಮೋಕ್ಷವನ್ನು ಹೊಂದುತ್ತೀರಿ.

೨೯೨. ಆಮೇಲೆ ಅವರು ಗುರು ಶಾಪದಿಂದ ಪ್ರಾಣಗಳನ್ನು ಬಿಟ್ಟು ಚಂಡಾಲ ಜಾತಿಯಲ್ಲಿ ಹುಟ್ಟಿದರೂ ಸರ್ವ ಜ್ಞಾನವನ್ನೂ ಹೊಂದಿಯೇ ಇದ್ದರು.

೨೯೩-೨೯೪. ಆರೀತಿ ಚಂಡಾಲ ಜಾತಿಯಲ್ಲಿ ಅವರು ಹುಟ್ಟಿ ಪೂರ್ವಜನ್ಮದ ಸ್ಮರಣೆಯಿಂದ ಎದೆ ಹಾಲನ್ನು ಕುಡಿಯಲಿಲ್ಲ. ಅನಂತರ ಸತ್ತು ಮೃಗಗಳಾಗಿ ಹುಟ್ಟಿ ಅದರಿಂದಲೂ ಮುಕ್ತರಾಗಿ ಚಕ್ರವಾಕಗಳಾಗಿ ಹುಟ್ಟಿದರು. ಅನಂತರ ಬ್ರಾಹ್ಮಣರಾಗಿ

ಹಂಸಾಸ್ತು ಮಾನಸೇ ತೀರ್ಥೇ ಶುಕ್ಲಾ ಜಾತಾಃ ಪುನರ್ದ್ವಿಜಾಃ ।
ಮುಮುಕ್ಷವೋ ಮಹಾಭಾಗಾ ವೃತ್ತಾಂತೇ ತೈರಕಾರಣಾತ್ ॥ ೨೯೪ ॥

ತಸ್ಮಿನ್ಕಾಲೇ ಮಹಾರಾಜೋ ಧರ್ಮಕೇತುರಿತಿ ಸ್ಮೃತಃ ।
ಯಯೌ ಸ್ನಾತುಂ ತತಸ್ತೀರ್ಥಂ ಸದಾರಃ ಸಪರಿಚ್ಛದಃ ॥ ೨೯೫ ॥

ತತೋ ಹಂಸಾಸ್ತ್ರಯೋ ಮೋಹಾದ್ರಾಜ್ಯಂ ಭೋಗ್ಯಂ ತು ಯೋಷಿತಃ ।
ಭಕ್ಷ್ಯಾಣಿ ಚಿಂತಯಂತಶ್ಚ ಲೋಕಾಂತರಮಯುಸ್ತದಾ ॥ ೨೯೬ ॥

ಜ್ಞಾತ್ವಾ ವೇದಂ ಚ ವೇದಾಂಗಂ ಮೋಕ್ಷಂ ಯಾಸ್ಯಾಮಹೇ ವಯಂ ।
ಚಿಂತಯಂತೋ ಗತಾಃ ಸರ್ವೇ ತತೋ ಲೋಕಾಂತರಂ ಪ್ರತಿ ॥ ೨೯೭ ॥

ಅಥ ಜಾತಾಸ್ತ್ರಯೋ ರಾಜ್ಞಶ್ಚತ್ವಾರೋ ವಿಪ್ರಸತ್ತಮಾಃ ।
ಕುರುಕ್ಷೇತ್ರೇ ತತೋ ವೇದಾನ್ವೇದಾಂಗಾನಿ ಸಮಂತತಃ ॥ ೨೯೮ ॥

ತಪೋಬಲಾದ್ವಿದಂತಿ ಸ್ಮ ವಾರ್ತಾಂ ಜಾಮುತ್ರ ಚೇಹ ಚ ।
ತ್ರಯೋ ರಾಜಕುಲೇ ಜಾತಾ ರಾಜಾನೋ ಮದಮೋಹಿತಾಃ ॥ ೨೯೯ ॥

---

ಮತ್ತೆ ಹುಟ್ಟಿ ಮೋಕ್ಷವನ್ನು ಹೊಂದಿದರು ಈ ರೀತಿ ಅಕಾರಣ ಶಾಪವು ಅವರಿಗೆ ಬಂದಂತಾಯಿತು. ಶ್ರಾದ್ಧದಲ್ಲಿ ಆ ಕೆಟ್ಟ ಕೆಲಸವೂ ಯೋಗ್ಯವಾಯಿತು.

೨೯೫. ಆ ಕಾಲದಲ್ಲಿ ಧರ್ಮಕೇತುವೆಂಬ ರಾಜನು ಹೆಂಡಿರೊಡನೆಯೂ, ಪರಿವಾರದೊಡನೆಯೂ ಸ್ನಾನಮಾಡಲು ಮಾನಸ ತೀರ್ಥಕ್ಕೆ ಹೋದನು.

೨೯೬. ಇವರನ್ನು ನೋಡಿ ಆ ಏಳು ಹಂಸಗಳಲ್ಲಿ ಮೂರು ಹಂಸಗಳು ರಾಜ್ಯ ಭೋಗ, ಸ್ತ್ರೀಯರ ಸಹವಾಸ, ಭಕ್ಷ್ಯಗಳನ್ನು ಯೋಚಿಸುತ್ತಲೇ ಪ್ರಾಣಬಿಟ್ಟುವು.

೨೯೭. ಉಳಿದ ಹಂಸಗಳು ವೇದ ವೇದಾಂಗಗಳನ್ನು ಓದಿ ಮೋಕ್ಷವನ್ನು ಹೊಂದುತ್ತೇವೆಂದು ಯೋಚಿಸುತ್ತಲೇ ಪ್ರಾಣಬಿಟ್ಟವು.

೨೯೮-೨೯೯. ಅನಂತರ ಆ ರಾಜನ ರಾಜ್ಯದಲ್ಲಿಯೇ ನಾಲ್ವರು ಬ್ರಾಹ್ಮಣರು ಹುಟ್ಟಿ ಕುರುಕ್ಷೇತ್ರದಲ್ಲಿ ವೇದವೇದಾಂಗಗಳನ್ನು ಓದುತ್ತ, ಸಂಚರಿಸುತ್ತ ತಪಸ್ಸಿನ ಬಲದಿಂದ ಅಲ್ಲಿನ ವಿಷಯಗಳನ್ನು ತಿಳಿಯುತ್ತಿದ್ದರು. ಮತ್ತೆ ಮೂವರು ರಾಜನ ಮನೆಯಲ್ಲಿ ಹುಟ್ಟಿ ರಾಜರಾಗಿ ಮದದಿಂದ ಮೋಹಿತರಾದರು.

ಜ್ಞಾನಲೋಪಾತ್ಪರಂ ಲೋಕಂ ನ ಜಾನಂತಿ ಹಿತಾಹಿತಂ ।
ತೇ ಚ ವಿಪ್ರಾಶ್ಚ ಸಂದೇಹಾದಾಹೂಯ ಚೇಟಕಂ ಸ್ವಕಂ ॥ ೩೦೦ ॥

॥ ವಿಪ್ರಾ ಊಚುಃ ॥

ರಾಜ್ಞೋ ಗಚ್ಛಸ್ವ ಕಾರ್ಪಣ್ಯಂ ಪತ್ರಂ ದೇಹಿ ಚ ಸಂಭ್ರಮಾತ್ ।
ಸಪ್ತ ವ್ಯಾಧಾ ದಶಾರ್ಣೇಷು ಮೃಗಾಃ ಕಾಲಂಜರೇ ಗಿರೌ ॥ ೩೦೧ ॥

ಚಕ್ರವಾಕಾಃ ಶರದ್ವೀಪೇ ಹಂಸಾಃ ಸರಸಿ ಮಾನಸೇ ।
ತೇಽಪಿ ಜಾತಾಃ ಕುರುಕ್ಷೇತ್ರೇ ಬ್ರಾಹ್ಮಣಾ ವೇದಪಾರಗಾಃ ॥
ಪ್ರಸ್ಥಿತಾ ದೀರ್ಘಮಧ್ವಾನಂ ಯೂಯಂ ಕಿಮವಸೀದಥ ॥ ೩೦೨ ॥

॥ ಭಗವಾನುವಾಚ ॥

ಗೃಹೀತ್ವಾ ಚೇಟಕೋ ಲೇಖಂ ರಾಜ್ಞಸ್ತು ಸಮದರ್ಶಯತ್ ।
ದೃಷ್ಟ್ವಾ ಲೇಖಂ ತು ರಾಜಾನೋ ರಾಜ್ಯಂ ತ್ಯಕ್ತ್ವಾ ಯಯುರ್ದ್ವಿಜಾನ್॥೩೦೩

---

೩೦೦. ಆ ರಾಜರು ಜ್ಞಾನದ ಲೋಪದಿಂದ ಪರಲೋಕದ ವಿಷಯವನ್ನಾಗಲಿ ಹಿತಾಹಿತಗಳನ್ನಾಗಲಿ, ತಿಳಿಯದವರಾದರು. ಆಗ ಈ ನಾಲ್ಕು ಜನ ಬ್ರಾಹ್ಮಣರು ಅವರನ್ನು ನೋಡಿ ಸಂದೇಹಪಟ್ಟು ಅವರ ಆಳನ್ನು ಕರೆದು ಇಂತೆಂದರು.

೩೦೧-೩೦೨ ವಿಪ್ರರು ಹೇಳಿದರು– ನೀವು ನಮ್ರತೆಯಿಂದ ರಾಜನ ಬಳಿಗೆ ಹೋಗಿ ಜಾಗ್ರತೆಯಾಗಿ ಈ ಪತ್ರವನ್ನು ಕೊಡಿ ಎಂದು ಹೇಳಿ ಅದನ್ನು ಕೊಟ್ಟರು. ಅದರಲ್ಲಿ ಹೀಗೆ ಬರೆದಿದ್ದರು. ದಶಾರ್ಣದೇಶದಲ್ಲಿ ಏಳು ಮಂದಿ ವ್ಯಾಧರಾಗಿಯೂ ಕಾಳಂಜರದಲ್ಲಿ ಮೃಗಗಳಾಗಿಯೂ ಶರದ್ವೀಪದಲ್ಲಿ ಚಕ್ರವಾಕಗಳಾಗಿಯೂ, ಮಾನಸಸರೋವರದಲ್ಲಿ ಹಂಸಗಳಾಗಿಯೂ, ಹುಟ್ಟಿದರು. ಈಗ ನಾವು ಕುರುಕ್ಷೇತ್ರದಲ್ಲಿ ಬ್ರಾಹ್ಮಣರಾಗಿ ಹುಟ್ಟಿ ವೇದಪಾರಂಗರಾಗಿ ಮೋಕ್ಷ ಭಾಗಿಗಳಾಗಿದ್ದೇವೆ. ನೀವೇಕೆ ಈ ರೀತಿ ದುಃಖ ಪಡುತ್ತಿದ್ದೀರಿ, ಎಂದಿದ್ದಿತು.

೩೦೩. ಭಗವಂತನು ಹೇಳಿದನು– ಆ ಆಳು ಆ ಕಾಗದವನ್ನು ರಾಜನಿಗೆ ಕೊಡಲು ಅವರು ಆ ಕಾಗದವನ್ನು ನೋಡಿ ರಾಜ್ಯವನ್ನು ಬಿಟ್ಟು ಬ್ರಾಹ್ಮಣರ ಬಳಿಗೆ ಹೋದರು.

ಶ್ರುತ್ವಾ ವಾಕ್ಯಂ ತತಸ್ತೇಷಾಂ ಗತಾಸ್ತೇ ಚ ತಪೋಧನಾಃ ।
ಅಚಿರೇಣೈವ ಕಾಲೇನ ಮೋಕ್ಷಂ ಯಾತಾಶ್ಚ ತೈಃ ಸಹ　　॥ ೩೦೪ ॥
ಯ ಇದಂ ಶೃಣುಯಾಚ್ಛ್ರಾದ್ಧೇ ಸಪ್ತವ್ಯಾಧಾದಿಕಂ ದ್ವಿಜ ।
ಅಕ್ಷಯಂ ಚಾನ್ನಪಾನಂ ಚ ಪಿತೄಣಾಮುಪತಿಷ್ಠತಿ　　॥ ೩೦೫ ॥

॥ ದ್ವಿಜ ಉವಾಚ ॥

ವಿತ್ತಹೀನಸ್ಯ ವಿಪ್ರಸ್ಯ ಪಿತೃಕಾರ್ಯಂ ಕಥಂ ಭವೇತ್ ।
ತಪಸ್ವಿನೋ ವನಸ್ಥಸ್ಯ ಗೃಹಸ್ಥಸ್ಯ ಚ ಕೇಶವ　　॥ ೩೦೬ ॥

॥ ಶ್ರೀ ಭಗವಾನುವಾಚ ॥

ತೃಣಕಾಷ್ಠಾರ್ಜನಂ ಕೃತ್ವಾ ಪ್ರಾರ್ಥಯಿತ್ವಾ ವರಾಟಕಂ ।
ಕರೋತಿ ಪಿತೃಕಾರ್ಯಾಣಿ ತತೋ ಲಕ್ಷಗುಣಂ ಭವೇತ್　　॥ ೩೦೭ ॥

ಅಕೀರ್ತವ್ಯಶತಂ ಕೃತ್ವಾ ಪಿತೃಶ್ರಾದ್ಧಂ ಕರೋತಿ ಯಃ ।
ಸರ್ವಪಾಪಕ್ಷಯಸ್ತಸ್ಯ ಸ್ವರ್ಗಂ ಯಾತಿ ಚ ಮಾನವಃ　　॥ ೩೦೮ ॥

---

೩೦೪. ಅವರುಗಳ ಮಾತನ್ನು ಕೇಳಿ ಅವರೊಡನೆ ಸೇರಿ ಹೊರಟುಹೋದರು ಅನಂತರ ಸ್ವಲ್ಪ ದಿನಗಳಲ್ಲಿಯೇ ಅವರೆಲ್ಲರೂ ಮೋಕ್ಷವನ್ನು ಹೊಂದಿದರು.

೩೦೫ ಈ ಸಪ್ತ ವ್ಯಾಧರೇ ಮುಂತಾದ ಜನ್ಮತಾಳಿದ ಇವರ ಕಥೆಯನ್ನು ಶ್ರಾದ್ಧದಲ್ಲಿ ಯಾವನು ಸ್ಮರಿಸುತ್ತಾನೆಯೋ ಅವನು ಮಾಡಿದ ಶ್ರಾದ್ಧವು ಅಕ್ಷಯವಾಗಿ ಪಿತೃಗಳಿಗೆ ಸೇರುತ್ತದೆ.

೩೦೬. ದ್ವಿಜನು ಹೇಳಿದನು– ಹಣವಿಲ್ಲದೆ ತಪಸ್ವಿಯಾಗಿ ವನದಲ್ಲಿರುವ ಬ್ರಾಹ್ಮಣನ ಪಿತೃಕಾರ್ಯಗಳು ಹೇಗೆ ನಡೆಯಬೇಕು ?

೩೦೭. ಶ್ರೀ ಭಗವಂತನು ಹೇಳಿದನು– ಹುಲ್ಲು ಕಟ್ಟಿಗೆಗಳನ್ನು ಸಂಪಾದಿಸಿ ಎಲ್ಲಾದರೂ ಸ್ವಲ್ಪ ಕಾಸುಗಳನ್ನು ಯಾಚಿಸಿಕೊಂಡು ಪಿತೃ ಕಾರ್ಯಗಳನ್ನು ಮಾಡಿದರೆ ಸರಿಯಾಗಿ ಆಟ್ಟಹಾಸದಿಂದ ಮಾಡಿದುದಕ್ಕಿಂತಲೂ ಲಕ್ಷದಷ್ಟು ಹೆಚ್ಚು ಗುಣವುಳ್ಳದ್ದಾಗಿರುತ್ತದೆ.

೩೦೮. ಯಾವನು ಅನೇಕ ಕೆಟ್ಟ ಕೆಲಸಗಳನ್ನಾದರೂ ಮಾಡಿ ಶ್ರಾದ್ಧ ಮಾಡುವನೋ, ಅವನು ಪಾಪಗಳೆಲ್ಲವನ್ನೂ ಕಳೆದುಕೊಂಡು ಸ್ವರ್ಗವನ್ನು ಹೊಂದುತ್ತಾನೆ.

ಸರ್ವಾಭಾವೇ ಪಿತೃತಿಥೌ ಗೋಭ್ಯೋ ಘಾಸಂ ದದಾತಿ ಯಃ ।
ಫಲಂ ಚ ಪಿಂಡದಾನಸ್ಯ ಸಂಪ್ರಾಪ್ನೋತ್ಯಧಿಕಂ ನರಃ ॥ ೩೦೯ ॥

ಪುರಾ ವೈರಾಟವಿಷಯೇ ರುರೋದಾತೀವ ದೀನಕಃ ।
ಪಿತೃತಿಥೌ ಸ್ವಯಂ ಪ್ರಾಪ್ತೇ ಸರ್ವಾಭಾವಚ್ಚ ರೋದಿತಿ ॥
ರುದಿತ್ವಾ ಸುಚಿರಂ ಸೋಽಪಿ ಪಪ್ರಚ್ಛ ಕೋವಿದಂ ದ್ವಿಜಂ ॥ ೩೧೦ ॥

॥ ದೀನ ಉವಾಚ ॥

ಬ್ರಹ್ಮನ್ಪಿತೃತಿಥಾವದ್ಯ ಕಿಂಸ್ವಿತ್ಕೃತ್ವಾ ಹಿತಂ ಭವೇತ್ ।
ವರಾಟಕಶ್ಚ ಮೇ ನಾಸ್ತಿ ಧನಂ ಬ್ರಹ್ಮವಿದಾಂ ವರ ॥
ಉಪದೇಶಂ ಚ ಮೇ ದೇಹಿ ಯೇನ ಧರ್ಮೇ ಸ್ಥಿತೋ ಹ್ಯಹಂ ॥ ೩೧೧ ॥

॥ ದ್ವಿಜ ಉವಾಚ ॥

ಗಚ್ಛ ಶೀಘ್ರಂ ವನೇ ತಾತ ಮುಹೂರ್ತಂ ಕುತಪೇಽಧುನಾ ।
ಘಾಸಂ ಪಿತರಮುದ್ದಿಶ್ಯ ಗವೇ ದೇಹೀತಿ ಸತ್ವರಂ ॥ ೩೧೨ ॥

---

೩೦೯. ಏನೂ ಸಿಕ್ಕದಿದ್ದರೆ ಪಿತೃ ತಿಥಿ ದಿನದಲ್ಲಿ ಗೋವುಗಳಿಗೆ ಹುಲ್ಲನ್ನಾದರೂ ಕೊಡಬೇಕು. ಹಾಗೆ ಮಾಡಿದರೆ ಪಿಂಡದಾನದ ಫಲಕ್ಕಿಂತ ಹೆಚ್ಚು ಫಲವು ಬರುತ್ತದೆ.

೩೧೦. ಪೂರ್ವದಲ್ಲಿ ವಿರಾಟನ ರಾಜ್ಯದಲ್ಲಿ ಪಿತೃ ತಿಥಿಯ ದಿನ ಏನೂ ಸಿಕ್ಕದಿದ್ದುದರಿಂದ ದೀನಕನೆಂಬುವನು ಬಹುವಾಗಿ ಅತ್ತನು, ಪಿತೃ ತಿಥಿಯಲ್ಲಿ ಏನೂ ಸಿಕ್ಕದಿದ್ದರೆ ಅಳಬೇಕು. ಬಹು ಹೊತ್ತು ಆತನು ಅತ್ತು ಆಮೇಲೆ ಒಬ್ಬ ಬುದ್ಧಿವಂತನಾದವನನ್ನು ಕೇಳಿದನು.

೩೧೧. ದೀನನು ಹೇಳಿದನು– ಎಲೈ ಬ್ರಾಹ್ಮಣನೇ ! ಈ ದಿನದ ನನ್ನ ಪಿತೃ ತಿಥಿಯಲ್ಲಿ ಏನು ಮಾಡಿದರೆ ಹಿತವಾಗುತ್ತದೆ ? ನನ್ನಲ್ಲಿ ಒಂದು ಕವಡೆಯೂ ಇಲ್ಲ. ಈ ವಿಷಯದಲ್ಲಿ ಧರ್ಮಕ್ಕೆ ಲೋಪ ಬಾರದಂತೆ ಉಪದೇಶ ಮಾಡು.

೩೧೨. ದ್ವಿಜನು ಹೇಳಿದನು– ಅಪ್ಪ ! ಜಾಗ್ರತೆಯಾಗಿ ಕಾಡಿಗೆ ಹೋಗು. ಈ ಕುತುಪು ಮುಹೂರ್ತದಲ್ಲಿ ಹುಲ್ಲನ್ನು ತಂದು ನಿನ್ನ ತಂದೆಯನ್ನುದ್ದೇಶಿಸಿ ಹಸುಗಳಿಗೆ ಅದನ್ನು ಕೊಡು.

॥ ಶ್ರೀ ಭಗವಾನುವಾಚ ॥

ತತಸ್ತಸ್ಯೋಪದೇಶೇನ ಗೃಹೀತ್ವಾ ಘಾಸಪೂಲಕಂ ।
ಗವೇ ದತ್ವಾ ಯಥಾ ಹೃಷ್ಟಃ ಪುಷ್ಟ್ಯರ್ಥಂ ಪಿತುರೇವ ಚ ॥ ೩೧೩ ॥

ಏತತ್ಪುಣ್ಯಪ್ರಸಾದೇನ ಗತೋಽಸೌ ಸುರಮಂದಿರಂ ।
ಸುಚಿರಂ ಚ ಸ್ವಯಂ ಭುಕ್ತ್ವಾ ಉತ್ಪನ್ನೋ ಧನಿನಾಂ ಕುಲೇ ॥ ೩೧೪ ॥

ಧನವಾನ್ಸ ಪುರಾಪುಣ್ಯಾತ್ಪಿತೃಯಜ್ಞಸ್ಯ ಕಾರಣಾತ್ ।
ಸ ದದಾತಿ ಪಿತುಃ ಪಿಂಡಂ ಸರ್ವಸ್ವೇನ ಧನೇನ ಚ ॥ ೩೧೫ ॥

ತತ್ರೈಕಜನ್ಮನೋಽಭ್ಯಾಸಾದ್ಗತೋಽಸೌ ವಿಷ್ಣುಮಂದಿರಂ ।
ಭುಕ್ತ್ವಾಽನಂತಸುಖಂ ತತ್ರ ಸಾರ್ವಭೌಮೋಽಭವನ್ನೃಪಃ ॥ ೩೧೬ ॥

ಪಿತೃಯಜ್ಞಾತ್ಪರೋ ಯಸ್ಮಾದ್ಧರ್ಮೋ ನಾಸ್ತಿ ಕಥಂಚನ ।
ತಸ್ಮಾತ್ಸರ್ವಪ್ರಯತ್ನೇನ ಶಕ್ತ್ಯಾ ಕುರ್ಯಾದಮತ್ಸರಃ ॥ ೩೧೭ ॥

---

೩೧೩. ಶ್ರೀ ಭಗವಂತನು ಹೇಳಿದನು- ಅನಂತರ ಆ ಬ್ರಾಹ್ಮಣನ ಹೇಳಿಕೆಯಂತೆ ಹುಲ್ಲು ಹೊರೆಯನ್ನು ತಂದು ಪಿತೃಗಳಿಗೆ ಪುಷ್ಟಿಯಾಗಲೆಂದು ಗೋವಿಗೆ ಕೊಟ್ಟನು.

೩೧೪ ಈ ಪುಣ್ಯ ಪ್ರಭಾವದಿಂದ ಸ್ವರ್ಗವನ್ನು ಹೊಂದಿದನು. ಅಲ್ಲಿ ಬಹಳ ಕಾಲವಿದ್ದು ಅನಂತರ ಧನವಂತರ ಮನೆಯಲ್ಲಿ ಹುಟ್ಟಿದನು.

೩೧೫. ಪೂರ್ವದಲ್ಲಿ ಮಾಡಿದ ಪಿತೃ ಯಜ್ಞದ ಕಾರಣದಿಂದ ಧನಿಕನಾಗಿ ಹುಟ್ಟಿ ಸರ್ವಸ್ವದಿಂದಲೂ ವೈಭವದಿಂದ ಪಿಂಡವನ್ನು ಹಾಕುತ್ತಿದ್ದನು.

೩೧೬. ಇಲ್ಲಿ ಒಂದು ಜನ್ಮದಲ್ಲಿ ಹೀಗೆ ಮಾಡಿದುದರಿಂದ ವೈಕುಂಠಕ್ಕೂ ಹೋದನು. ಅಲ್ಲಿ ಅನಂತ ಸುಖವನ್ನು ಅನುಭವಿಸಿ ಚಕ್ರವರ್ತಿಯಾಗಿ ಹುಟ್ಟಿದನು.

೩೧೭. ಪಿತೃ ಯಜ್ಞಕ್ಕಿಂತಲೂ ಉತ್ತಮವಾದ ಧರ್ಮವು ಮತ್ತೊಂದಿಲ್ಲ. ಆದ್ದರಿಂದ ಸರ್ವ ಪ್ರಯತ್ನದಿಂದಲೂ ಶಕ್ತ್ಯನುಗುಣವಾಗಿ ಒಳ್ಳೆಯ ಮನಸ್ಸಿನಿಂದ ಶ್ರಾದ್ಧವನ್ನು ಮಾಡಬೇಕು.

ಯಃ ಪಠೇದ್ಧರ್ಮಸಂತಾನಂ ಜನಾನಾಮಗ್ರತೋ ನರಃ ।
ವಿಷ್ಣುಪದ್ಯಾ ಜಲೇ ಸ್ನಾನಂ ಪ್ರತಿಲೋಕಂ ಚ ಲಭ್ಯತೇ ॥ ೩೧೮ ॥

ಜನ್ಮಜನ್ಮ ಕೃತೋ ಯೇನ ಮಹಾಪಾತಕಸಂಚಯಃ ।
ಸ ಸರ್ವಃ ಪ್ರಲಯಂ ಯಾತಿ ಸಕೃದುಚ್ಚರಿತೇ ಶ್ರುತೇ ॥ ೩೧೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪಂಚಾಖ್ಯಾನೇ ಪಿತೃಭಕ್ತಿ ನಿರೂಪಣಂ ನಾಮ ಸಪ್ತಚತ್ವಾರಿಂಶತ್ತಮೋಽಧ್ಯಾಯಃ

---

೩೧೮. ಈ ಧರ್ಮವನ್ನು ಓದುವವನು, ಜನಗಳಿಗೆ ತಿಳಿಸುವವನು, ಒಬ್ಬೊಬ್ಬನೂ ಒಂದೊಂದು ಗಂಗೆಯ ಸ್ನಾನದ ಫಲವನ್ನು ಹೊಂದುತ್ತಾನೆ, ಮತ್ತು ಒಳ್ಳೆಯ ಲೋಕಗಳನ್ನು ಹೊಂದುತ್ತಾನೆ.

೩೧೯. ಎಷ್ಟು ಜನ್ಮದಲ್ಲಿಯಾದರೂ ಮಹಾ ಪಾಪಗಳನ್ನು ಮಾಡಿದ್ದರೂ ಅವುಗಳೆಲ್ಲವೂ ಒಂದು ಬಾರಿ ಇದನ್ನು ಉಚ್ಚರಿಸಿದರೆ ಅಥವಾ ಕೇಳಿದರೆ ನಾಶವಾಗುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದ ಪಂಚಾಖ್ಯಾನದಲ್ಲಿ ಪಿತೃಭಕ್ತಿ ನಿರೂಪಣವೆಂಬ ನಾಲ್ವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಅಷ್ಟಚತ್ವಾರಿಂಶೋಽಧ್ಯಾಯಃ ॥



॥ ನರೋತ್ತಮ ಉವಾಚ ॥

ತ್ರಿದಶಾನಾಂ ಚ ದೇವಾನಾಮನ್ಯೇಷಾಂ ಜಗದೀಶ್ವರಃ ।
ಪ್ರಭುಃ ಕರ್ತಾ ಚ ಹರ್ತಾ ಚ ಗೋಪ್ತಾ ಭರ್ತಾ ಪಿತಾ ಪ್ರಸೂಃ ॥ ೧ ॥

ಅಸ್ಮಾಕಂ ವಾಕ್ಶ್ರಮೋ ವಿಷ್ಣೋಃ ಕಥನೇನೈವ ಯುಜ್ಯತೇ ।
ಕಿಂ ತು ಕೌತೂಹಲಂ ಮೇಽಸ್ತಿ ಪಿಪಾಸಾ ವಾ ಕ್ಷುಧಾಪಿ ವಾ ॥ ೨ ॥

ಕೃತಂ ಪೃಚ್ಛತಿ ಯೇನೈವ ವಕ್ತವ್ಯಂ ತತ್ಪ್ರಿಯೇಣ ಹಿ ।
ಅತೀತಂ ಚೈವ ಜಾನಾತಿ ಕಥಂ ನಾಥ ಪತಿವ್ರತಾ ॥
ಕಿಂ ವಾ ತಸ್ಯಾಃ ಪ್ರಭಾವಂ ಚ ವಕ್ತುಮರ್ಹಸ್ಯಶೇಷತಃ ॥ ೩ ॥

---

## ನಾಲ್ವತ್ತೆಂಟನೆಯ ಅಧ್ಯಾಯವು

೧. ನರೋತ್ತಮನು ಹೇಳಿದನು- ಜಗದೀಶ್ವರನಾದ ವಿಷ್ಣುವು ದೇವತೆಗಳಿಗೂ, ಇತರರಿಗೂ, ಪ್ರಭುವು, ಕರ್ತೃವು, ನಾಶಕನು, ಕಾಪಾಡುವವನು, ತಂದೆಯು ತಾಯಿಯೂ, ಆಗಿರುವನು.

೨. ನನಗೆ ವಿಷ್ಣುವಿನ ಅಂಶವನ್ನು (ವಿಷಯವನ್ನು) ಕೇಳುವುದರಿಂದ ಶ್ರಮವಾಗುವುದೇ ಇಲ್ಲ. ಆದರೆ ಕುತೂಹಲವು ಬೇಕಾದಷ್ಟಿದೆ. ಅದೇ ಹಸಿವು ಬಾಯಾರಿಕೆಯಾಗಿದೆ. ಬೇರೆಯಾದ ಹಸಿವು ಬಾಯಾರಿಕೆಗಳೇ ಇಲ್ಲ.

೩. ಯಾವನಾದರೂ ಏನಾದರೂ ಮಾಡಿದುದನ್ನು ಕೇಳಿದರೆ ಅವನಿಗೆ ಹಿತಕಾರಿಯಾದವನು ಅದನ್ನು ಅವನಿಗೆ ಸ್ನೇಹದಿಂದ ಹೇಳಬೇಕು. ಆ ಪತಿವ್ರತೆಯು ಭೂತಭವಿಷ್ಯಗಳನ್ನು ಹೇಗೆ ತಿಳಿಯುತ್ತಿದ್ದಳು ? ಅವಳ ಪ್ರಭಾವವೇನು ? ದಯವಿಟ್ಟು ನನಗೆ ತಿಳಿಸು.

॥ ಶ್ರೀ ಭಗವಾನುವಾಚ ॥

**ಕಥಿತಂ ಮೇ ಪುರಾ ವತ್ಸ ಪುನಃ ಕೌತೂಹಲಂ ದ್ವಿಜ ।**
**ಕಥಯಿಷ್ಯಾಮಿ ತತ್ಸರ್ವಂ ಯತ್ತೇ ಮನಸಿ ವರ್ತತೇ ॥ ೪ ॥**

**ಪತಿವ್ರತಾ ಪತಿಪ್ರಾಣಾ ಸದಾ ಪತ್ಯುರ್ಹಿತೇ ರತಾ ।**
**ದೇವಾನಾಮಪಿ ಸಾರಾಧ್ಯಾ ಮುನಿನಾಂ ಬ್ರಹ್ಮವಾದಿನಾಂ ॥ ೫ ॥**

**ಧವಸ್ಯೈಕಸ್ಯ ಯಾ ನಾರೀ ಲೋಕೇ ಪೂಜ್ಯತಮಾ ಸ್ಮೃತಾ ।**
**ತಸ್ಯಾಪಮಾನನೇ ಗುರ್ವೀ ನಿಭೃತಾ ನ ಭವಿಷ್ಯತಿ ॥ ೬ ॥**

**ಮಧ್ಯದೇಶೇ ಪುರಾ ತಾತ ನಗರೀ ಚಾತಿಶೋಭನಾ ।**
**ತಸ್ಯಾಂ ಚ ಬ್ರಹ್ಮಜಾತೀಯಾ ಸೈವ್ಯಾ ನಾಮ್ನೀ ಪತಿವ್ರತಾ ॥ ೭ ॥**

**ಧವಸ್ತಸ್ಯಾಭವತ್ಕುಷ್ಠೀ ಪೂರ್ವಕರ್ಮವಿರೋಧತಃ ।**
**ಗಳದ್ವ್ರಣಸ್ಯ ಪತ್ಯುಶ್ಚ ನಿತ್ಯಂ ಚರ್ಯಾಪರಾಯಣಾ ॥ ೮ ॥**

---

೪. ಶ್ರೀ ಭಗವಂತನು ಹೇಳಿದನು- ಎಲೈ ವತ್ಸನೇ ! ಮೊದಲು ಎಲ್ಲವನ್ನೂ ಹೇಳಿದೆ. ಮತ್ತೆಯೂ ನಿನಗೆ ಆಸೆಯಿದೆಯೆಂದು ಹೇಳುತ್ತೀಯೆ. ಹಾಗಾದರೆ ನಿನ್ನ ಮನಸ್ಸಿನಲ್ಲಿರುವುದನ್ನೆಲ್ಲಾ ಹೇಳುತ್ತೇನೆ, ಕೇಳು.

೫. ಪತಿವ್ರತೆಯು ಯಾವಾಗಲೂ ಪತಿಯನ್ನೇ ಪ್ರಾಣಗಳೆಂದು ತಿಳಿದಿರಬೇಕು ಪತಿಯ ಹಿತದಲ್ಲಿಯೇ ಆಸಕ್ತಳಾಗಿರಬೇಕು. ಆಕೆಯು ದೇವತೆಗಳಿಗೂ ಮುನಿಗಳಿಗೂ ಕೂಡ ಪೂಜ್ಯಳು.

೬. ಆಕೆಯು ಗಂಡನೊಬ್ಬನನ್ನೇ ಪೂಜಿಸತಕ್ಕವಳು. ಅವನಿಗೆ ಅವಮಾನವಾದರೆ ಆಕೆಯು ಬದುಕಿರಲಾರಳು.

೭. ಮಧ್ಯದೇಶದಲ್ಲಿ ಪೂರ್ವದಲ್ಲಿ ಒಂದು ಊರಿದ್ದಿತು. ಅದರಲ್ಲಿ ಬ್ರಾಹ್ಮಣ ಜಾತಿಯವಳಾದ ಸೈವ್ಯಾ ಎಂಬ ಹೆಸರುಳ್ಳ ಒಬ್ಬ ಪತಿವ್ರತೆಯಿದ್ದಳು.

೮. ಅವಳ ಗಂಡನಿಗೆ ಕೊಳೆಯುವ ಕುಷ್ಠರೋಗವು ಇದ್ದಿತು. ಅವನಿಗೆ ಆಕೆಯು ಯಾವಾಗಲೂ ಶುಶ್ರೂಷೆಮಾಡುತ್ತ ಅವನ ಹಿತದಲ್ಲೇ ಆಸಕ್ತಳಾಗಿದ್ದಳು.

ಯದ್ಯನ್ಮನೋರಥಂ ತಸ್ಯ ಶಕ್ತ್ಯಾ ಸಾ ಕುರತೇ ಧ್ರುವಂ ।
ಅರ್ಜಯೇದ್ದೇವವನ್ನಿತ್ಯಂ ಸ್ನೇಹಂ ಕುರ್ಯಾದಮತ್ಸರಾ ॥ ೯ ॥

ಕದಾಚಿತ್ಪಥಿ ಗಚ್ಛಂತೀಂ ವೇಶಾಂ ಪರಮಸುಂದರೀಂ ।
ದೃಷ್ಟ್ವಾತೀವಾಭವನ್ಮೋಹಾನ್ಮನ್ಮಥಾವಿಷ್ಟಚೇತನಃ ॥ ೧೦ ॥

ನಿಶ್ಶ್ವಸ್ಯ ಸುತರಾಂ ದೀರ್ಘಂ ತತಸ್ತು ವಿಮನಾಭವತ್ ।
ಶ್ರುತ್ವಾ ಗೃಹಾದ್ವಿನಿಸ್ಸೃತ್ಯ ಸಾಧ್ವೀ ಪಪ್ರಚ್ಛ ತಂ ಪತಿಂ ॥ ೧೧ ॥

॥ ಸಾಧ್ವ್ಯುವಾಚ ॥

ಉನ್ಮನಾಸ್ತ್ವಂ ಕಥಂ ನಾಥ ನಿಶ್ವಾಸಸ್ತೇ ಕಥಂ ವಿಭೋ ।
ಬ್ರೂಹಿ ಮೇ ಯಚ್ಚ ಕರ್ತವ್ಯಮಕರ್ತವ್ಯಂ ಚ ಯತ್ಪ್ರಿಯಂ ॥ ೧೨ ॥

ದಯಿತಂ ತೇ ಕರಿಷ್ಯಾಮಿ ಮೇ ತ್ವಮೇಕೋ ಗುರುಃ ಪ್ರಿಯಃ ।
ಅಭೀಷ್ಟಂ ವದ ಮೇ ನಾಥ ಯಥಾಶಕ್ತ್ಯಾ ಕರೋಮ್ಯಹಂ ॥ ೧೩ ॥

---

೯. ಅವನ ಇಷ್ಟಗಳನ್ನು ತನ್ನ ಕೈಲಾದಮಟ್ಟಿಗೂ ನೆರವೇರಿಸಿಕೊಡುವಳು ದಿನವೂ ದೇವರಂತೆ ಸ್ನೇಹದಿಂದ ಪೂಜಿಸುತ್ತಿದ್ದಳು.

೧೦. ಒಂದು ಸಾರಿ ದಾರಿಯಲ್ಲಿ ಹೋಗುತ್ತಿದ್ದ ಒಬ್ಬಳು ಸುಂದರಿಯಾದ ವೇಶ್ಯೆಯನ್ನು ನೋಡಿ ಅವಳಲ್ಲಿ ಮನಸ್ಸು ಬಹುವಾಗಿ ಆಸಕ್ತವಾಯಿತು.

೧೧. ಅವನು ದೀರ್ಘವಾಗಿ ನಿಟ್ಟುಸಿರು ಬಿಟ್ಟು ದುಃಖಗೊಂಡನು. ಆಗ ಆ ಪತಿವ್ರತೆಯು ಮನೆಯಿಂದ ಹೊರಗೆ ಬಂದು ಗಂಡನನ್ನು ಕುರಿತು ಕೇಳಿದಳು.

೧೨. ಸಾಧ್ವಿಯು ಹೇಳಿದಳು— ಎಲೈ ನಾಥನೇ! ನಿನಗೆ ದುಃಖವೇಕೆ ಬಂದಿತು? ನಿಟ್ಟುಸಿರನ್ನೇಕೆ ಬಿಟ್ಟೆ? ನಾನು ಏನು ಮಾಡಬೇಕೆಂಬುದನ್ನು ಹೇಳು? ಅದು ಒಳ್ಳೆಯದಾಗಲಿ, ಕೆಟ್ಟದಾಗಲಿ ಹೇಳು. ನಿನಗೆ ಹಿತವಾದುದನ್ನು ಮಾಡುತ್ತೇನೆ.

೧೩. ನಿನಗೆ ಬೇಕಾದುದನ್ನು ಮಾಡಿಕೊಡುತ್ತೇನೆ. ನಿನೊಬ್ಬನೇ ನನಗೆ ಪ್ರೀತಿಪಾತ್ರನೂ, ಗುರುವೂ ಆಗಿದ್ದೀಯೆ. ಇಷ್ಟವಾದುದನ್ನು ಹೇಳು. ಕೈಲಾದ ಮಟ್ಟಿಗೂ ಮಾಡಿಕೊಡುತ್ತೇನೆ.

॥ ಶ್ರೀ ಭಗವಾನುವಾಚ ॥

ಇತ್ಯುಕ್ತೇ ತಾಮುವಾಚೇದಂ ವೃಥಾ ತ್ವಂ ಭಾಷಸೇ ಪ್ರಿಯೇ ।
ನ ಶಕ್ತಾ ತ್ವಂ ನ ಚೈವಾಹಂ ಮೋಘಂ ವಕ್ತುಂ ನ ಯುಜ್ಯತೇ ॥ ೧೪ ॥

ಪ್ರಷ್ಟುಂ ನಾಧಿಕರೋಷೀತಿ ಯಥಾ ದೀರ್ಘತರೋಃ ಫಲಂ ।
ಭೂಮೌ ಸ್ಥಿತ್ವಾ ತು ಖರ್ವಾತ್ಮಾ ಸಮುದ್ಧರ್ತುಂ ಪ್ರವಾಂಛತಿ ॥ ೧೫ ॥

ಯಥಾ ಮೇ ರಮಣೀದೋಷಾನ್ಮೋಹಾದ್ಯದಭಿವಾಂಛಿತಂ ।
ದಂಪತ್ಯೋರಪಿ ದುಸ್ಸಾಧ್ಯಮುಪಯಾನಂ ವದಾಮ್ಯಹಂ ॥ ೧೬ ॥

॥ ಪತಿವ್ರತೋವಾಚ ॥

ಜ್ಞಾತ್ವಾ ತು ತನ್ಮನೋವೃತ್ತಂ ಶಕ್ತಾಹಂ ಕಾರ್ಯಸಾಧನೇ ।
ಆದೇಶಂ ಕುರು ಮೇ ನಾಥ ಕರ್ತವ್ಯಂ ಯೇನ ಕೇನಚಿತ್ ॥ ೧೭ ॥

---

೧೪. ಭಗವಂತನು ಹೇಳಿದನು– ಆಕೆಯು ಹೀಗೆನ್ನಲು ಇವನು ಪ್ರಿಯೆಯೆ! ನೀನು ಸುಮ್ಮನೆ ಕೇಳುತ್ತೀಯಷ್ಟೆ! ಆ ಕೆಲಸವನ್ನು ಮಾಡಲು ನಿನ್ನ ಕೈಯಲ್ಲಿಯೂ ಸಹ ಆಗುವುದಿಲ್ಲ. ನನ್ನ ಕೈಯಲ್ಲಿಯೂ ಆಗುವುದಿಲ್ಲ. ವ್ಯರ್ಥವಾದ ಮಾತನ್ನಾಡ ಬಾರದು.

೧೫. ನೀನು ಕೇಳಿ ಉಪಯೋಗವಿಲ್ಲ. ಕುಳ್ಳನಾದವನು ದೊಡ್ಡ ಮರದ ಮೇಲುಗಡೆಯಲ್ಲಿರುವ ಹಣ್ಣನ್ನು ನೆಲದಮೇಲೆ ನಿಂತು ಅಪೇಕ್ಷಿಸಿದಂತಾಗುತ್ತದೆ.

೧೬. ರಮಣಿಯಲ್ಲಿರುವ ದೋಷದಿಂದ ನಾನು ಮೋಹದಿಂದ ಅಪೇಕ್ಷಿಸಿರು ವೆನು. ಅದನ್ನು ಹೆಂಡತಿಯಿದ್ದವನೂ ಬಿಡಲಾರನು. ಅಂತಹ ಅಸಾಧ್ಯವಾದ ಕೆಟ್ಟ ದ್ದನ್ನು ಹೇಗೆ ಹೇಳಲಿ?

೧೭. ಪತಿವ್ರತೆಯು ಹೇಳಿದಳು– ನಿನ್ನ ಮನಸ್ಸಿನಲ್ಲಿರುವುದನ್ನು ತಿಳಿದು ಆ ಕೆಲಸವನ್ನು ನಾನು ಮಾಡಿಕೊಡುತ್ತೇನೆ ಅಪ್ಪಣೆಯನ್ನು ಕೊಡು ಹೇಗಾದರೂ ಮಾಡಿ ಆ ಕೆಲಸವನ್ನು ನೆರವೇರಿಸುತ್ತೇನೆ.

ಯದಿ ತೇ ದುರ್ಲಭಂ ಕಾರ್ಯಂ ಕರ್ತುಂ ಶಕ್ನೋಮಿ ಯತ್ನತಃ ।
ತದಾ ಮೇ ತ್ವತಿಕಲ್ಯಾಣಂ ಫಲಿಷ್ಯತಿ ಪರೇ ಇಹ ॥ ೧೮ ॥

॥ ಭಗವಾನುವಾಚ ॥

ಇತ್ಯುಕ್ತೇ ಪರಮಪ್ರೀತಃ ಸ್ಥಿತೋವಚನಮಬ್ರವೀತ್ ।
ಪಾಪಾಭ್ಯಾಸಾಚ್ಚ ಪಾಪ್ಮಾನಂ ಪ್ರೋಚ್ಛತೀತಿ ವಿನಿಶ್ಚಯಃ ॥ ೧೯ ॥

॥ ಕುಷ್ಠ್ಯುವಾಚ ॥

ಪಥ್ಯಸ್ಮಿನ್ಸಂಪ್ರಗಚ್ಛಂತೀಂ ವೇಶ್ಯಾಂ ಪರಮಸುಂದರೀಂ ।
ಸರ್ವತಶ್ಚಾನವದ್ಯಾಂಗೀಂ ದೃಷ್ಟ್ವಾ ಮೇ ದಹ್ಯತೇ ಮನಃ ॥ ೨೦ ॥

ಯದಿ ತಾಂ ತ್ವತ್ಪ್ರಸಾದಾಚ್ಚ ಪ್ರಾಪ್ನೋಮಿ ನವಯೌವನಾಂ ।
ತದಾ ಮೇ ಸಫಲಂ ಜನ್ಮ ಕುರು ಸಾಧ್ವಿ ಹಿತಂ ಮಮ ॥ ೨೧ ॥

---

೧೮. ನಿನಗೆ ದುರ್ಲಭವಾದುದನ್ನೂ ಮಾಡಿಕೊಟ್ಟರೆ ಆಗ ನನಗೆ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಮಂಗಳವಾಗುತ್ತದೆ.

೧೯. ಭಗವಂತನು ಹೇಳಿದನು- ಆಕೆಯು ಹಾಗೆನ್ನಲು ಈತನು ಬಹು ಸಂತೋಷಪಟ್ಟು ಇಂತೆಂದನು. ಲೋಕದಲ್ಲಿ ಪಾಪಕೆಲಸವನ್ನೇ ಅನುಸರಿಸಿ ಅದರ ಅಭ್ಯಾಸದಿಂದ ಮತ್ತೊಬ್ಬನನ್ನು ಆ ಪಾಪಕೆಲಸದಲ್ಲಿ ಪ್ರೇರಿಸುತ್ತಾನೆ. ಎಂಬುದು ನಿಶ್ಚಯವು.

೨೦. ಕುಷ್ಠಿಯು ಹೇಳಿದನು- ಈ ದಾರಿಯಲ್ಲಿ ಹೋಗುತ್ತಿದ್ದ ಪರಮಸುಂದರಿಯಾದ ಒಬ್ಬಳು ಸೂಳೆಯನ್ನು ನೋಡಿದೆನು. ಆಗಿನಿಂದ ನನ್ನ ಮನಸ್ಸು ಬೇಯುತ್ತಿದೆ.

೨೧. ನಿನ್ನ ಅನುಗ್ರಹದಿಂದ ಆ ನವಯೌವನಳನ್ನು ನಾನು ಹೊಂದಿದರೆ ಆಗ ನನ್ನ ಜನ್ಮವು ಸಾರ್ಥಕವಾಗುತ್ತದೆ. ಅಷ್ಟನ್ನು ಮಾಡಿಕೊಡು.

ಯದಿ ಮಾಂ ಕುಷ್ಠಿನಂ ದೀನಂ ಪೂತಗಂಧಿಂ ನವಂ ವ್ರಣಂ ।
ನ ಗಚ್ಛತಿ ವರಾರೋಹ ತದಾ ಮೇ ನಿಧನಂ ಹಿತಂ ॥ ೨೨ ॥

॥ ಭಗವಾನುವಾಚ ॥

ಶ್ರುತ್ವಾ ತೇನೇರಿತಂ ವಾಕ್ಯಂ ಸಾಧ್ವೀ ವಚನಮಬ್ರವೀತ್ ॥ ೨೩ ॥

॥ ಪತಿವ್ರತೋವಾಚ ॥

ಯಥಾಶಕ್ತ್ಯಾ ಕರಿಷ್ಯಾಮಿ ಸ್ಥಿರೀಭವ ಪ್ರಭೋಧುನಾ ॥ ೨೪ ॥

॥ ಭಗವಾನುವಾಚ ॥

ಮನಸಾಥ ಸಮಾಲೋಕ್ಯ ಕ್ಷಪಾಂತೇಪ್ಯುಷಸಿ ದ್ರುತಂ ।
ಗೋಮಯಂ ಶೋಧನೀಸಾರ್ಧಂ ಗೃಹೀತ್ವಾ ಸಾ ಯಯೌ ಮುದಾ ॥೨೫॥

ಸಂಪ್ರಾಪ್ಯ ಗುಣಿಕಾಗೇಹಂ ಶೋಧಯಿತ್ವಾ ಚ ಚತ್ವರಂ ।
ಪ್ರತೋಳೀಂ ವೀಥಿಕಾಂ ಚೈವ ಗೋಮಯಂ ಪ್ರದದೌ ಮುದಾ ॥ ೨೬ ॥

---

೨೨. ಕುಷ್ಠಿಯಾದ, ನೋಡಲು ಚೆನ್ನಾಗಿಲ್ಲದ, ಹುಣ್ಣಿನಿಂದ ನಾರುತ್ತಿರುವ, ಹೊಸಹೊಸದಾಗಿ ಹುಣ್ಣು ಹುಟ್ಟುತ್ತಿರುವ ನನ್ನ ಬಳಿಗೆ ಆಕೆಯು ಬರದೆ ಹೋದರೆ ಆಗ ನಾನು ಸಾಯುವುದೇ ಮೇಲು.

೨೩. ಭಗವಂತನು ಹೇಳಿದನು–ಆತನು ಹೇಳಿದುದನ್ನು ಆ ಸಾಧ್ವಿಯು ಕೇಳಿ ಇಂತೆಂದಳು.

೨೪. ಪತಿವ್ರತೆಯು ಹೇಳಿದಳು- ಕೈಲಾದಮಟ್ಟಿಗೂ ಪ್ರಯತ್ನಪಟ್ಟು ಸಾಧಿಸುತ್ತೇನೆ. ಸಮಾಧಾನವಾಗಿರು.

೨೫. ಭಗವಂತನು ಹೇಳಿದನು- ಆಕೆಯು ಅನಂತರ ಮನಸ್ಸಿನಲ್ಲಿಯೇ ಯೋಚಿಸಿಕೊಂಡು ರಾತ್ರಿ ಕಳೆದು ಬೆಳಗಾಗುತ್ತಲೂ ಸಗಣಿಯನ್ನೂ ಬರಲನ್ನೂ ತೆಗೆದುಕೊಂಡು ಸಂತೋಷದಿಂದ ಹೊರಟಳು.

೨೬. ಅವಳ ಮನೆಗೆ ಹೋಗಿ ಅಂಗಳವನ್ನೆಲ್ಲಾ ಗುಡಿಸಿ ಹೊಸಲಿಗೂ, ಬೀದಿಯ ಮುಂಭಾಗಗಳಿಗೂ ಸಗಣಿಯನ್ನು ಹಾಕಿ ಸಾರಿಸಿದಳು.

ಸಾ ತೂರ್ಣಮಾಗತಾ ಗೇಹಂ ಜನಸ್ಯಾಲೋಕನೇ ಭಯಾತ್ ।
ಏವಂಕ್ರಮೇಣ ಸಾ ಸಾಧ್ವೀ ಚರಂತೀತಿ ದಿನತ್ರಯಂ ॥ ೨೭ ॥

ಅಥ ಸಾ ವಾರಮುಖ್ಯಾ ಚ ಚೇಟಿಕಾಶ್ಚೇಟಿಕಾನಪಿ ।
ಅಪೃಚ್ಛತ್ಕಸ್ಯ ಕರ್ಮಾಣಿ ಶೋಭನಾನಿ ಚ ಚತ್ವರೇ ॥ ೨೮ ॥

ಮಯಾ ನೋಕ್ತೇಪ್ಯುಷಃಕಾಲೇ ಕಸ್ಯ ಮತ್ಪ್ರಿಯಕಾರಣಾತ್ ।
ರುಚ್ಯಕರ್ಮಾಣಿ ದೀಪ್ಯಂತೆ ರಥ್ಯಾ ಚತ್ವರವೀಥಿಕಾಃ ॥
ಪರಸ್ಪರೇಣ ಸಂಚಿಂತ್ಯ ಪಾರಮುಖ್ಯಾಂ ಚ ತೇಬ್ರುರ್ವ ॥ ೨೯ ॥

॥ ಚೇಟಿಕಾ ಊಚುಃ ॥

ಅಸ್ಮಾಭಿರ್ನಕೃತಂ ಭದ್ರೇ ಕರ್ಮ ಚೈತತ್ಪ್ರಮಾರ್ಜನಂ ॥ ೩೦ ॥

॥ ಭಗವಾನುವಾಚ ॥

ಅಥ ಸಾ ವಿಸ್ಮಯಂ ಗತ್ವಾ ಸಂಚಿಂತ್ಯ ರಜನೀಕ್ಷಯೇ ।
ತಯಾವಲೋಕಿತಾ ಸಾ ಚ ತಥೈವ ಪುನರಾಗತಾ ॥ ೩೧ ॥

---

೨೭. ಜನರು ನೋಡಿಯಾರೆಂಬ ಭಯದಿಂದ ಮನೆಗೆ ಜಾಗ್ರತೆ ಬಂದು ಬಿಡುವಳು. ಈ ರೀತಿಯಾಗಿ ಆಕೆಯು ಮೂರು ದಿನಗಳವರೆಗೂ ಮಾಡಿದಳು.

೨೮. ಅನಂತರ ಆ ಸೂಳೆಯು ತನ್ನ ಚೇಟಚೇಟಿಯರನ್ನೂ ಅಂಗಳದಲ್ಲಿ ಮಾಡಿರುವ ಈ ಉತ್ತಮವಾದ ಅಲಂಕಾರವನ್ನು ಯಾರು ಮಾಡಿದರು ? ಎಂದು ಕೇಳಿದಳು.

೨೯. ನಾನು ಹೇಳದಿದ್ದರೂ, ಬೆಳಗ್ಗೆ ನನಗೆ ಸಂತೋಷವಾಗಲೆಂದು ಈ ಅಂಗಳ. ಬೀದಿಬಾಗಿಲು, ಹೊಸಲುಗಳನ್ನು ಸಾರಿಸಿ ರಂಗೋಲೆಯನ್ನು ಇಟ್ಟವರಾರೆನ್ನಲು ಆ ಚೇಟಚೇಟಿಯರು ಒಬ್ಬರಿಗೊಬ್ಬರು ಯೋಚಿಸಿ ಆಕೆಯನ್ನು ಕುರಿತು ಇಂತೆಂದರು.

೩೦. ಅಮ್ಮಾ ! ನಾವ್ಯಾರೂ ಈ ಸಾರಿಸುವಿಕೆಯನ್ನಾಗಲಿ, ಅಲಂಕಾರವನ್ನಾಗಲಿ ಮಾಡಲಿಲ್ಲ.

೩೧. ಭಗವಂತನು ಹೇಳಿದನು– ಆಗ ಆ ಸೂಳೆಯು ಆಶ್ಚರ್ಯಪಟ್ಟು ಬೆಳಗಿನ ಜಾವದಲ್ಲಿ ನೋಡುತ್ತಿರಲು ಆಕೆಯು ಮತ್ತೆ ಬರಲು ಸೂಳೆಯು ನೋಡಿದಳು.

ದೃಷ್ಟ್ವಾ ತಾಂ ಮಹತೀಂ ಸಾಧ್ವೀಂ ಬ್ರಾಹ್ಮಣೀಂ ಚ ಪತಿವ್ರತಾಂ ।
ದಧಾರ ಚರಣೇ ತಸ್ಯಾ ಹಾ ಕ್ಷಮಸ್ವೇತಿ ಭಾಷಿಣೀ ॥ ೩೨ ॥

॥ ಗಣಿಕೋವಾಚ ॥

ಆಯುರ್ದೇಹಂ ಚ ಸಂಪತ್ತಿರ್ಯಶೋಽಥ ಕೀರ್ತಿರೇವ ಚ ।
ಏತಾಸಾಂ ಮೇ ವಿನಾಶಾಯ ಸ್ಫುರಸೀತಿ ಪತಿವ್ರತೇ ॥ ೩೩ ॥

ಯದ್ಯತ್ಪ್ರಾರ್ಥಯಸೇ ಸಾಧ್ವಿ ನಿತ್ಯಂ ದಾಸ್ಯಾಮಿ ತದ್ಧ್ರುವಂ ।
ಸುವರ್ಣಂ ಮಣಿರತ್ನಂ ವಾ ಚೈಲಂ ವಾ ಯನ್ಮನೋಗತಂ ॥ ೩೪ ॥

॥ ಭಗವಾನುವಾಚ ॥

ತಾಮುವಾಚ ತತಸ್ಸಾಧ್ವೀ ನಮೇ ಚಾರ್ಥೇ ಪ್ರಯೋಜನಂ ।
ಅಸ್ತಿ ಕಾರ್ಯಂ ಚ ತೇ ಕಿಂಚಿದ್ವದಾಮಿ ಕುರುಷೇ ಯದಿ ॥
ತದಾ ಮೇ ಹೃದಿ ಸಂತೋಷಂ ಕೃತಂ ಸರ್ವಂ ತ್ವಯಾಧುನಾ ॥ ೩೫ ॥

---

೩೨ ಪತಿವ್ರತೆಯೂ, ಸಾಧ್ವಿಯೂ, ಬ್ರಾಹ್ಮಣಳೂ ಆದ ಆಕೆಯನ್ನು ನೋಡಿ ಆಕೆಯ ಪಾದಗಳನ್ನು ಹಿಡಿದುಕೊಂಡು ಕ್ಷಮಿಸೆಂದು ಕೂಗಿಕೊಂಡಳು.

೩೩. ಸೂಳೆಯು ಹೇಳಿದಳು- ನೀನು ಹೀಗೆ ಮಾಡಿದರೆ ನನ್ನ ಆಯುಸ್ಸು, ಸಂಪತ್ತು, ಯಶಸ್ಸು, ಕೀರ್ತಿ ಇವುಗಳೆಲ್ಲವೂ ನಾಶವಾಗುತ್ತವೆ. ಖಂಡಿತವು.

೩೪. ಚಿನ್ನವನ್ನಾಗಲಿ, ಮಣಿರತ್ನವನ್ನಾಗಲಿ, ಬಟ್ಟೆಯನ್ನಾಗಲಿ ನಿನ್ನ ಮನಸ್ಸಿಗೆ ಬಂದುದನ್ನು ಯಾವುದನ್ನು ಕೇಳುತ್ತೀಯೋ ಅದನ್ನೆಲ್ಲಾ ನಿತ್ಯವೂ ಕೊಡುತ್ತೇನೆ. ಖಂಡಿತ.

೩೫. ಭಗವಂತನು ಹೇಳಿದನು- ಆಗ ಆ ಸಾಧ್ವಿಯು ಅಮ್ಮಾ ! ನನಗೆ ಹಣದಿಂದ ಯಾವ ಪ್ರಯೋಜನವೂ ಇಲ್ಲ. ನನ್ನ ಮನಸ್ಸಿನಲ್ಲಿರುವುದನ್ನು ನೀನು ಮಾಡಿಕೊಡುವೆಯಾದರೆ ಆಗ ಹೇಳುತ್ತೇನೆ. ನನ್ನ ಮನಸ್ಸಿಗೆ ಸಂತೋಷವಾಗುವುದು. ಆಗ ನೀನು ನನಗೆ ಎಲ್ಲವನ್ನೂ ಕೊಟ್ಟಂತಾಗುವುದು.

॥ ಗಣಿಕೋವಾಚ ॥

ಸತ್ಯಂ ಸತ್ಯಂ ಕರಿಷ್ಯಾಮಿ ದ್ರುತಂ ವದ ಪತಿವ್ರತೇ ।
ಕುರು ಮೇ ರಕ್ಷಣಂ ಮಾತರ್ದುರ್ಗತಂ ಕೃತ್ಯಂ ಚ ಮೇ ವದ ॥ ೩೬ ॥

॥ ಭಗವಾನುವಾಚ ॥

ತ್ರಪಯಾನಿಕೃತಂ ವಾಕ್ಯಂ ತಯಾ ಚೋಕ್ತಂ ವರಂ ಪ್ರಿಯಂ ।
ಕ್ಷಣಂ ವಿಮೃಶ್ಯ ಸಾ ವೇಶ್ಯಾ ಕರ್ತವ್ಯಂ ಚಾರ್ತಿಮೇವಚ ॥
ಕುಷ್ಠಿನಃ ಪೂತಿಗಂಧಸ್ಯ ಸಂಪರ್ಕಂ ದುಃಖಿತಾ ಭೃಶಂ ॥ ೩೭ ॥

॥ ಗಣಿಕೋವಾಚ ॥

ದಿನೈಕಂ ಚ ಕರಿಷ್ಯಾಮಿ ಯದ್ಯಾಗಚ್ಛತಿ ಮದ್ಗೃಹಂ ॥ ೩೮ ॥

॥ ಪತಿವ್ರತೋವಾಚ ॥

ಆಗಮಿಷ್ಯಾಮಿ ತೇ ಗೇಹಮದ್ಯ ರಾತ್ರೌ ಚ ಸುಂದರಿ ।
ಭುಕ್ತ್ವಭೋಗ್ಯಂ ಪತಿಂ ಹೃಷ್ಟಂ ಪುನರ್ನೇಷ್ಯಾಮಿ ಮದ್ಗೃಹಂ ॥ ೩೯ ॥

---

೩೬. ಸೂಳೆಯು ಹೇಳಿದಳು- ಸತ್ಯವಾಗಿಯೂ ಮಾಡುತ್ತೇನೆ. ಬೇಗ ಹೇಳು. ನನ್ನನ್ನು ಕಾಪಾಡು. ನಿನಗೆ ಆಗಬೇಕಾದುದನ್ನು ಹೇಳು.

೩೭. ಭಗವಂತನು ಹೇಳಿದನು- ಆಗ ಆ ಲಜ್ಜಾಕರವಾದ ಮಾತನ್ನು ಕೊಂಚ ಹೊತ್ತು ಯೋಚಿಸಿ ದುಃಖಕರವೂ, ತನಗೆ ಕರ್ತವ್ಯವೂ ಆದ, ಆ ನಾತಬಡುಕನೂ, ಕುಷ್ಠಿಯೂ ಆದ ಆತನ ಸಂಪರ್ಕವನ್ನು ಕುರಿತು ಹೇಳಿದಳು

೩೮. ಗಣಿಕೆಯು ಹೇಳಿದಳು- ಅವನು ನನ್ನ ಮನೆಗೆ ಬಂದರೆ ಒಂದು ದಿನ ಅವನ ಸಂಗವನ್ನು ಮಾಡುತ್ತೇನೆ.

೩೯. ಪತಿವ್ರತೆಯು ಹೇಳಿದಳು- ಸುಂದರಿ! ಹಾಗಾದರೆ ಈ ರಾತ್ರಿ ನಿನ್ನ ಮನೆಗೆ ಬರುತ್ತೇನೆ. ನನ್ನ ಗಂಡನು ಭೋಗಪಟ್ಟಮೇಲೆ ಮತ್ತೆ ಮನೆಗೆ ಕರೆದು ಕೊಂಡು ಹೋಗುತ್ತೇನೆ.

॥ ಗಣಿಕೋವಾಚ ॥

ಗಚ್ಛ ಶೀಘ್ರಂ ಮಹಾಭಾಗೇ ಸ್ವಗೃಹಂ ಚ ಪತಿವ್ರತೇ ।
ಪತಿಸ್ತೇ ಚಾರ್ಧರಾತ್ರೌ ಚ ಆಗಚ್ಛತುಚ ಮದ್ಗೃಹಂ ॥ ೪೦ ॥

ಬಹವೋ ಮೇ ಪ್ರಿಯಾಸ್ಸಂತಿ ರಾಜಾನಸ್ತತ್ಸಮಾಶ್ಚ ಯೇ ।
ಏಕೈಕೋ ಮದ್ಗೃಹೇ ನಿತ್ಯಂ ತಿಷ್ಠತೀತಿ ನಿರಂತರಂ ॥ ೪೧ ॥

ಅದ್ಯಾಹಂ ಮೇ ಗೃಹಂ ಶೂನ್ಯಂ ಕರಿಷ್ಯಾಮಿ ಚ ತದ್ಭಯಾತ್ ।
ಸ ಚಾಗಚ್ಛತು ತೇ ಭರ್ತಾ ಸ ಚಾಸ್ಮಾನ್ಪ್ರಾಪ್ಯ ಗಚ್ಛತು ॥ ೪೨ ॥

॥ ಭಗವಾನುವಾಚ ॥

ಏತಚ್ಛ್ರುತ್ವಾ ಚ ಸಾ ಸಾಧ್ವೀ ಗತಾ ಸಾ ಸ್ವಗೃಹಂ ತದಾ ।
ಪತ್ಯೌ ನಿವೇದಯಾಮಾಸ ಕೃತ್ಯಂ ತೇ ಫಲಿತಂ ಪ್ರಭೋ ॥ ೪೩ ॥

ಅದ್ಯ ರಾತ್ರೌ ಚ ತದ್ಗೇಹಂ ಗನ್ತುಂ ಖ್ಯಾತಿಂ ಕರೋತಿ ಸಾ ।
ಪ್ರಭೂತಾ ಪತಯಸ್ತಸ್ಯಾಸ್ತವಕಾಮೋ ನ ವಿದ್ಯತೇ ॥ ೪೪ ॥

---

೪೦. ಗಣಿಕೆಯು ಹೇಳಿದಳು- ಎಲೈ ಪತಿವ್ರತೆಯೇ! ನೀನು ಮನೆಗೆ ಹೋಗು. ನಿನ್ನ ಗಂಡನನ್ನು ಅರ್ಧರಾತ್ರಿಯಲ್ಲಿ ನನ್ನ ಮನೆಗೆ ಕರೆದುಕೊಂಡು ಬಾ.

೪೧. ರಾಜರು ಅವರಿಗೆ ಸಮನಾದವರು ಬಹಳ ಜನರು ನನ್ನ ಪ್ರಿಯರಿರುತ್ತಾರೆ. ಒಬ್ಬೊಬ್ಬರೂ ನಿತ್ಯವೂ ನನ್ನ ಮನೆಯಲ್ಲಿ ಯಾವಾಗಲೂ ಇರುತ್ತಾರೆ.

೪೨. ನಿನ್ನ ಹೆದರಿಕೆಯಿಂದ ಇಂದು ನನ್ನ ಮನೆಗೆ ಯಾರೂ ಬರದಂತೆ ಮಾಡುತ್ತೇನೆ. ಆ ನಿನ್ನ ಗಂಡನು ಬರಲಿ. ಬಂದು ನನ್ನಲ್ಲಿ ರಮಿಸಿ ಹೋಗಲಿ.

೪೩. ಭಗವಂತನು ಹೇಳಿದನು- ಈ ಮಾತನ್ನು ಆ ಸಾಧ್ವಿಯು ಕೇಳಿ ಸಂತೋಷದಿಂದ ಮನೆಗೆ ಹೋದಳು. ಗಂಡನಿಗೆ ಎಲೈ ಪತಿಯೇ! ನಿನ್ನ ಇಷ್ಟಾರ್ಥವು ಕೈಗೂಡಿತು ಎಂದಳು.

೪೪. ಈ ದಿನ ರಾತ್ರಿಯಲ್ಲಿ ಅವಳ ಮನೆಗೆ ಹೋಗಲು ಹೇಳಿದ್ದಾಳೆ. ಅವಳಿಗೆ ಬಹಳ ಜನ ಪ್ರಿಯರಿರುವರು. ಅನಂತರ ಅವಳಿಗೆ ಅವಕಾಶವಿರುವುದಿಲ್ಲ. ನಿನ್ನ ಇಷ್ಟಾರ್ಥವೂ ನೆರವೇರುವುದಿಲ್ಲ.

॥ ವಿಪ್ರ ಉವಾಚ ॥

ಕಥಂ-ಯಾಸ್ಯಾಮಿ ತದ್ಗೇಹಂ ಮಯಾ ಗಂತುಂ ನ ಶಕ್ಯತೇ ।
ಏತದ್ಜ್ಞಾತ್ವಾ ಕುತಃ ಕ್ಷಾಂತಿಃ ಕೃತಂ ಕಾರ್ಯಂ ಕಥಂ ಭವೇತ್ ॥ ೪೫ ॥

॥ ಪತಿವ್ರತೋವಾಚ ॥

ಸ್ವಪೃಷ್ಠಸ್ಥಮಹಂ ಕೃತ್ವಾ ನೇಷ್ಯಾಮಿ ತದ್ಗೃಹಂ ಪ್ರತಿ ।
ಸಿದ್ಧೇ ಹ್ಯರ್ಥೇ ನಯಿಷ್ಯಾಮಿ ಪುನಸ್ತೇನೈವ ವರ್ತನಾ ॥ ೪೬ ॥

॥ ದ್ವಿಜ ಉವಾಚ ॥

ಕಲ್ಯಾಣಿತ್ವತ್ಕೃತೇನೈವ ಸರ್ವಂ ಮೇ ಕೃತ್ಯಮೇಷ್ಯತಿ ।
ಇದಾನೀಂ ಯತ್ಕೃತಂ ಕರ್ಮ ಸ್ತ್ರೀಜನೈರಪಿ ದುಸ್ಸಹಂ ॥ ೪೭ ॥

॥ ಭಗವಾನುವಾಚ ॥

ತಸ್ಮಿಂಶ್ಚ ನಗರೇ ರಮ್ಯೇ ನಿತ್ಯಂ ಚ ಧನಿನೋ ಗೃಹೇ ।
ಚೌರೈಶ್ಚ ಪ್ರಚುರಂ ವಿತ್ತಂ ಹೃತಂ ರಾಜ್ಞಾ ಶ್ರುತಂ ತದಾ ॥
ಶ್ರುತ್ವಾ ಸರ್ವಾನ್ನಿಶಾಚಾರಾನಾಹೂಯ ನೃಪತೀ ರುಷಾ ॥ ೪೮ ॥

---

೪೫. ಬ್ರಾಹ್ಮಣನು ಹೇಳಿದನು- ಅವಳ ಮನೆಗೆ ಹೇಗೆ ಹೋಗಲಿ? ನನ್ನ ಕೈಯಲ್ಲಿ ಹೋಗಲು ಆಗುವುದಿಲ್ಲವಲ್ಲ. ಈ ವಿಷಯವನ್ನು ತಿಳಿದಮೇಲಂತೂ ನನಗೆ ಸುಮ್ಮನಿರಲು ಸಾಧ್ಯವೇ ಇಲ್ಲ. ಕೆಲಸವನ್ನು ಹೇಗೆ ಆಗುಮಾಡಿಕೊಳ್ಳಲಿ? ಎಂದು ಹೇಳಿದನು.

೪೬. ಪತಿವ್ರತೆಯು ಹೇಳಿದಳು- ನಿನ್ನನ್ನು ನನ್ನ ಬೆನ್ನಿನ ಮೇಲೆ ಕೂರಿಸಿ ಕೊಂಡು ಅವಳ ಮನೆಗೆ ಹೋಗುತ್ತೇನೆ. ಅಲ್ಲಿ ನಿನ್ನ ಕೆಲಸವಾದ ಮೇಲೆ ಮತ್ತೆ ಅದೇ ದಾರಿಯಿಂದ ಹಾಗೆಯೇ ಕೂರಿಸಿಕೊಂಡು ಬರುತ್ತೇನೆ.

೪೭. ಬ್ರಾಹ್ಮಣನು ಹೇಳಿದನು- ಎಲೈ ಮಂಗಳೆಯೇ! ನಿನ್ನ ಸಾಹಸ ದಿಂದಲೇ ನನ್ನ ಕೆಲಸಗಳು ನೆರವೇರಬೇಕು. ನೀನು ಮಾಡಿದ ಕೆಲಸವು ಹೆಂಗಸರಿಗೆ ಅಸಹ್ಯವೂ ಅಸಾಧ್ಯವೂ ಆದುದು.

೪೮. ಭಗವಂತನು ಹೇಳಿದನು- ಆ ಉತ್ತಮವಾದ ಪಟ್ಟಣದಲ್ಲಿ ನಿತ್ಯವೂ ಧನವಂತರ ಮನೆಯಲ್ಲಿ ಕಳ್ಳತನವಾಗುತ್ತಿದ್ದುದನ್ನು ರಾಜನು ಕೇಳಿ ರಾತ್ರಿಯ ಕಾವಲು ಗಾರರನ್ನೆಲ್ಲಾ ಕರೆದು ಕೋಪದಿಂದ ಇಂತೆಂದನು.

॥ ನೃಪತಿರುವಾಚ ॥

ಜೀವಿತುಂ ಯದಿ ವೋ ವಾಂಛಾ ಚೌರಂ ಮಾಮದ್ಯದಾಸ್ಯಥ ॥ ೪೯ ॥

॥ ಭಗವಾನುವಾಚ ॥

ಗೃಹೀತ್ವಾ ತು ನೃಪಸ್ಯಾಜ್ಞಾಂ ಯಾತಾ ಜಿಘೃಕ್ಷಯಾಕುಲಾಃ ।
ಚಾರೈಶ್ಚೌರೋ ಗೃಹೀತಸ್ತೈರ್ಬಲಾಚ್ಚೈವ ನೃಪಾಜ್ಞಯಾ ॥ ೫೦ ॥

ನಗರೋಪಾನ್ತದೇಶೇ ಚ ವೃಕ್ಷಮೂಲೇ ಘನೇ ವನೇ ।
ಸಮಾಧಿಸ್ಥೋ ಮಹಾತೇಜಾ ಮಾಂಡವ್ಯೋ ಮುನಿಪುಂಗವಃ ॥ ೫೧ ॥

ವ್ಯಾತಿಷ್ಠದ್ವಹ್ನಿಸಂಕಾಶೋ ಯೋಗಿನಾಂ ಪ್ರವರೋ ಮುನಿಃ ।
ಅಂತರ್ನಾಡಿಗತೋ ವಾಯುಃ ಕಿಂಚಿನ್ನ ಪ್ರತಿಭಾತಿ ಚ ॥ ೫೨ ॥

ತಂ ಬ್ರಹ್ಮಸದೃಶಂ ತತ್ರ ದೃಷ್ಟ್ವಾ ದುಷ್ಟಾ ಮಹಾಮುನಿಂ ।
ಚೌರೋಽಯಮದ್ಭುತಾಕಾರೋ ಧೂರ್ತಸ್ತಿಷ್ಠತಿ ಕಾನನೇ ॥ ೫೩ ॥

---

೪೯. ರಾಜನು ಹೇಳಿದನು- ನಿಮಗೆ ಪ್ರಾಣದ ಮೇಲೆ ಆಸೆಯಿದ್ದರೆ ಕಳ್ಳನನ್ನು ಹಿಡಿದು ನನಗೆ ಒಪ್ಪಿಸಿ.

೫೦. ಭಗವಂತನು ಹೇಳಿದನು- ರಾಜನ ಅಪ್ಪಣೆಯನ್ನು ಹೊಂದಿ ಅವನನ್ನು ಹಿಡಿಯುವುದರಲ್ಲಿ ಆಸಕ್ತರಾಗಿ ಆ ಚಾರರು ರಾಜನ ಅಪ್ಪಣೆಯಂತೆ ಕಳ್ಳನನ್ನು ಬಲಾತ್ಕಾರದಿಂದ ಹಿಡಿದರು.

೫೧. ಆ ನಗರದ ಸಮೀಪದಲ್ಲಿ ಒಂದು ದಟ್ಟವಾದ ಕಾಡಿನಲ್ಲಿ ಒಂದು ಮರದ ಬುಡದಲ್ಲಿ ಮಾಂಡವ್ಯನೆಂಬ ಋಷಿಯು ಸಮಾಧಿಯಲ್ಲಿದ್ದನು.

೫೨. ಬೆಂಕಿಯಂತಿರುವ ಆ ಯೋಗಿಯು ಯೋಗದಲ್ಲಿರಲು ಪ್ರಾಣವಾಯುವು ನಾಡಿಯ ಒಳಭಾಗವನ್ನು ಹೊಂದಿ ಸ್ವಲ್ಪವೂ ಮಿಡಿಯುತ್ತಲೇ ಇರಲಿಲ್ಲ.

೫೩. ಬ್ರಹ್ಮನಿಗೆ ಸಮನಾದ ಅವನನ್ನು ನೋಡಿ ಆ ದುಷ್ಟರು ಇವನೇ ಅದ್ಭುತಾಕಾರವುಳ್ಳ ಕಳ್ಳನು. ಧೂರ್ತನು. ಈ ಕಾಡಿನಲ್ಲಿ ಬಂದಿದ್ದಾನೆ.

ಏವಮುಕ್ತ್ವಾ ತು ತಂ ಪಾಪಾ ಬಬಂಧುರ್ಮುನಿಸತ್ತಮಂ ।
ಸೋಽಕ್ತಂ ಚ ನೇಕ್ಷಿತಂ ತೇನ ಪುರುಷಾನತಿದಾರುಣಾನ್ ॥ ೫೪ ॥

ತತೋ ರಾಜಾ ಉವಾಚೇದಂ ಸಂಪ್ರಾಪ್ತಸ್ತಸ್ಕರೋ ಮಯಾ ।
ಉಪಾಂತೇ ಚ ಪಥಿ ದ್ವಾರೇ ಚೌರದಂಡಂ ಕುರುಷ್ವ ತಂ ॥ ೫೫ ॥

ಮಾಂಡವ್ಯಶ್ಚ ಮುನಿಸ್ತತ್ರ ಪಥೇ ಶೂಲೇ ಚ ಕೀಲಕೇ ।
ಪಾಯುದೇಶೇ ಚ ತೈರ್ದತ್ತಃ ಶೂಲಮಾಮಸ್ತಕಂ ಗತಂ ॥ ೫೬ ॥

ವ್ಯಥಾಂ ಸ ಚ ನ ಜಾನಾತಿ ಶೂಲವಿದ್ಧತಸುರ್ಯಮಾತ್ ।
ಅನ್ಯೇಷಾಂ ವಿಕೃತೋ ದಂಡಃ ಕೃತಸ್ತೈಸ್ತು ಮನೋಽಹಿತಃ ॥ ೫೭ ॥

ಏತಸ್ಮಿನ್ನಂತರೇ ರಾತ್ರಾವಂಧಕಾರೇ ಘನೋನ್ನತೇ ।
ಪತಿವ್ರತಾಯಾಂ ಗಚ್ಛನ್ತ್ಯಾಂ ಕೃತ್ವಾ ವೈ ಪೃಷ್ಠತಃ ಪತಿಂ ॥ ೫೮ ॥

---

೫೪. ಹೀಗೆಂದು ಹೇಳಿ ಆ ಪಾಪಿಗಳು ಆ ಋಷಿಯನ್ನು ಕಟ್ಟಿಹಾಕಿದರು. ಅವನು ಆ ದಾರುಣನಾದ ರಾಜಪುರುಷನನ್ನು ಯೋಗದಲ್ಲಿದ್ದುದರಿಂದ ತಿಳಿಯಲಿಲ್ಲ ಅವನಿಗೆ ಗೊತ್ತಾಗಲೂ ಇಲ್ಲ.

೫೫. ಆಗ ರಾಜನು ಕಳ್ಳನು ಸಿಕ್ಕಿದನು. ಹತ್ತಿರದಲ್ಲಿರುವ ಹೆಬ್ಬಾಗಿಲಿನಲ್ಲಿ ಈ ಕಳ್ಳನಿಗೆ ಶಿಕ್ಷೆಯನ್ನು ವಿಧಿಸಿರಿ. ಎಂದು ಹೇಳಿದನು.

೫೬. ಆ ದಾರಿಯಲ್ಲಿ ಒಂದು ಶೂಲವನ್ನು ನೆಟ್ಟು ಅದಕ್ಕೆ ಆ ಮಾಂಡವ್ಯನ ಗುದಪ್ರದೇಶದಿಂದ ತಲೆಯವರೆಗೂ ಬರುವಂತೆ ಚುಚ್ಚಿದರು.

೫೭. ಶೂಲದಲ್ಲಿ ಚುಚ್ಚಿದರೂ ಕೂಡ ಯೋಗದಲ್ಲಿದ್ದುದರಿಂದ ಅವನಿಗೆ ಅದರ ಯಾತನೆಯು ತಿಳಿಯಲೇ ಇಲ್ಲ ಇತರರಿಗೆ ತಮ್ಮ ಇಷ್ಟಬಂದಂತೆ ಮಾಡುತ್ತಿದ್ದ ವಿಕಾರವಾದ ದಂಡವನ್ನು ಅವನಿಗೂ ವಿಧಿಸಿದರು.

೫೮. ಮೇಘಗಳು ಬಂದಿರುವುದರಿಂದ ಆ ದಿನ ರಾತ್ರಿಯ ಕತ್ತಲೆಯು ಹೆಚ್ಚಾಗಿರಲು ಆ ದಿನವೇ ಈ ಪತಿವ್ರತೆಯು ಗಂಡನನ್ನು ಹೆಗಲಮೇಲೆ ಕೂರಿಸಿ ಕೊಂಡು ಹೋಗುತ್ತಿದ್ದಳು.

ಮಾಂಡವ್ಯಸ್ಯ ತನೌ ತತ್ರ ಕುಷ್ಠಿನೋಂಗಂ ಲಲಾಗ ತತ್ ।
ಭಗ್ನಸ್ಸಮಾಧಿಸ್ತಸ್ಯೈವಂ ಕುಷ್ಠಿಸಂಸರ್ಗತೋ ಧ್ರುವಂ ॥ ೫೯ ॥

॥ ಮಾಂಡವ್ಯ ಉವಾಚ ॥

ಯೇನ ಮೇ ಚಾಧುಕ್ಷಿಪ್ರಂ ಕಾರಿತಂ ಗಾಢವೇದನಂ ।
ಸ ಏವ ಭಸ್ಮತಾಂ ಯಾತು ಪ್ರೋದಿತೇ ಚ ವಿರೋಚನೇ ॥ ೬೦ ॥

॥ ಭಗವಾನುವಾಚ ॥

ಇತ್ಯುಕ್ತೇ ಸ ಚ ಮಾಂಡವ್ಯೇ ಪಪಾತ ಧರಣೀತಲೇ ।
ತತಃ ಪತಿವ್ರತಾ ಪ್ರಾಹ ಬ್ರಧ್ನೋ ನೋದಯಿತು ಧ್ರುವಂ ॥ ೬೧ ॥

ದಿನತ್ರಯಂ ಗೃಹಂ ನೀತ್ವಾ ಶಾಪಾದ್ವೇಶ್ಮಗತಾ ತತಃ ।
ಶಯನೀಯೇ ಸ್ಥಿತಂ ರಮ್ಯೇ ಧೃತ್ವಾತಿಷ್ಠತ್ಪತಿವ್ರತಾಃ ॥ ೬೨ ॥

ಶಪ್ತ್ವಾ ತಂ ಚ ಮುನಿಶ್ರೇಷ್ಠೋ ಗತೋ ದೇಶಮಭೀಪ್ಸಿತಂ ।
ಸೂರ್ಯೋ ನೋದಯತೇ ಲೋಕೇ ಯಾವಚ್ಚೈವ ದಿನತ್ರಯಂ ॥ ೬೩ ॥

---

೫೯. ಈಕೆಯು ಈತನನ್ನು ತೆಗೆದುಕೊಂಡು ಹೋಗುತ್ತಿದ್ದಾಗ ಈ ಕುಷ್ಠನ ಅಂಗಕ್ಕೆ ಆತನ ಅಂಗವು ತಗುಲಿತು. ಕುಷ್ಠರೋಗಿಯ ಸಂಗದಿಂದ ಆತನ ಸಮಾಧಿಯು ಭಗ್ನವಾಯಿತು.

೬೦. ಮಾಂಡವ್ಯನು ಹೇಳಿದನು- ಯಾವನು ನನಗೆ ಹೆಚ್ಚಾದ ನೋವನ್ನು ಉಂಟುಮಾಡಿದನೋ ಅವನು ಸೂರ್ಯನು ಹುಟ್ಟುವ ಹೊತ್ತಿಗೆ ಭಸ್ಮವಾಗಲಿ. ಎಂದನು.

೬೧. ಭಗವಂತನು ಹೇಳಿದನು- ಈ ಮಾಂಡವ್ಯನು ಹೀಗೆ ಶಪಿಸಲು ಆ ಕುಷ್ಠಿಯು ಕೆಳಗೆ ಬಿದ್ದುಬಿಟ್ಟನು. ಇದನ್ನು ನೋಡಿ ಆ ಪತಿವ್ರತೆಯು ಸೂರ್ಯನು ಹುಟ್ಟಲೇಬೇಡವೆಂದು ಹೇಳಿದಳು.

೬೨. ಒಡನೆಯೇ ಮನೆಗೆ ಕರೆದುಕೊಂಡು ಹೋಗಿ ಒಳ್ಳೆಯ ಹಾಸಿಗೆಯಲ್ಲಿ ಮಲಗಿಸಿಕೊಂಡು ಮೂರುದಿನಗಳವರೆಗೂ ಇದ್ದಳು.

೬೩. ಈ ಋಷಿಯು ಹೀಗೆ ಶಪಿಸಿ ಶೂಲದಿಂದ ಬಿಡಿಸಿಕೊಂಡು ತನ್ನಿಷ್ಟಕ್ಕೆ ತಾನು ಹೊರಟುಹೋದನು. ಅನಂತರ ಮೂರು ದಿನದವರೆಗೂ ಸೂರ್ಯನು ಹುಟ್ಟಲೇ ಇಲ್ಲ

ನಿಖಿಲಂ ವ್ಯಥಿತಂ ದೃಷ್ಟ್ವಾ ತ್ರೈಲೋಕ್ಯಂ ಸಚರಾಚರಂ ।
ಶತಕ್ರತುಂ ಪುರಸ್ಕೃತ್ಯ ಗತಾ ದೇವಾಃ ಪಿತಾಮಹಂ ॥
ವೃತ್ತಂ ನ್ಯವೇದಯನ್ಸರ್ವಂ ಪದ್ಮಯೋನೌ ದಿವೌಕಸಃ ॥ ೬೪ ॥

॥ ದೇವಾ ಊಚುಃ ॥

ಕಾರಣಂ ಚ ನ ಜಾನೀಮಸ್ತ್ವಂ ತು ಯೋಗ್ಯಂ ವಿಧೇಹಿ ನಃ ॥ ೬೫ ॥

॥ ಬ್ರಹ್ಮೋವಾಚ ॥

ಪತಿವ್ರತಾಯಾ ಯದ್ವೃತ್ತಂ ಮಾಂಡವ್ಯಸ್ಯ ಮುನೇಶ್ಚಯತ್ ।
ಯಥಾ ನೋದಯತೇ ಬ್ರಧ್ನೋ ಧಾತಾ ದೇವೇಷ್ವವೇದಯತ್ ॥ ೬೬ ॥

ತತೋ ದೇವಾ ವಿಮಾನೈಶ್ಚ ಪುರಸ್ಕೃತ್ಯ ಪ್ರಜಾಪ್ರತಿಂ ।
ಗತಾಸ್ತಸ್ಯಾಂತಿಕಂ ವಿಪ್ರ ತೂರ್ಣಂ ಸರ್ವೇ ಚ ಭೂತಲಂ ॥ ೬೭ ॥

ತೇಷಾಂ ಶ್ರಿಯಾ ವಿಮಾನಾನಾಂ ಮುನೀನಾಂ ಕಿರಣೈಸ್ತಥಾ ।
ಶತಸೂರ್ಯ ಇವಾಭಾತಿ ನಾನ್ಯತ್ರ ಚ ಗೃಹೋದರೇ ॥ ೬೮ ॥

---

೬೪. ಇದರಿಂದ ಚರಾಚರವಾದ ಪ್ರಪಂಚವು ದುಃಖಗೊಂಡಿತು. ಇದನ್ನು ನೋಡಿ ದೇವತೆಗಳೂ ಇಂದ್ರನೂ ಬ್ರಹ್ಮನ ಬಳಿಗೆ ಹೋಗಿ ಅವನಲ್ಲಿ ವಿಷಯವನ್ನು ವಿಜ್ಞಾಪಿಸಿದರು.

೬೫. ದೇವತೆಗಳು ಹೇಳಿದರು- ಬ್ರಹ್ಮನೇ! ಕಾರಣವನ್ನು ತಿಳಿಯೆವು. ಸೂರ್ಯನು ಹುಟ್ಟಲೇ ಇಲ್ಲ. ಏನು ಬೇಕೋ ಅದನ್ನು ಮಾಡು.

೬೬. ಬ್ರಹ್ಮನು ಹೇಳಿದನು- ಪತಿವ್ರತೆಯ ವಿಷಯವನ್ನೂ, ಮಾಂಡವ್ಯನ ವಿಷಯವನ್ನೂ, ಆದರದಿಂದ ಸೂರ್ಯನು ಹುಟ್ಟದಿರುವುದನ್ನು ಬ್ರಹ್ಮನು ದೇವತೆಗಳಿಗೆ ತಿಳಿಸಿದನು.

೬೭. ಅನಂತರ ದೇವತೆಗಳು ಬ್ರಹ್ಮನನ್ನು ಕರೆದುಕೊಂಡು ಅವರಿರುವ ಜಾಗಕ್ಕೆ ಬಂದರು.

೬೮. ದೇವರ ವಿಮಾನದ ಕಾಂತಿಯಿಂದಲೂ, ಮುನಿಗಳ ಕಾಂತಿಯಿಂದಲೂ, ಆಕೆಯ ಮನೆಯಲ್ಲಿ ನೂರು ಜನ ಸೂರ್ಯರು ಹುಟ್ಟಿದಂತೆ ಕಾಣಿಸಿತು. ಮತ್ತೆಲ್ಲಿಯೂ ಇಲ್ಲ

॥ ಪತಿವ್ರತೋವಾಚ ॥

ಹಾ ಹತಾಸ್ಮಿ ಕಥಂ ಸೂರ್ಯೋ ಮದ್ಗೃಹೇ ಸಮುಪಸ್ಥಿತಃ ॥ ೧೯ ॥

॥ ಭಗವಾನುವಾಚ ॥

ಅದೃಶ್ಯಂತ ತಯಾ ದೇವಾ ವಿಮಾನೈರ್ಹಂಸಸನ್ನಿಭೈಃ ।
ಏತಸ್ಮಿನ್ನಂತರೇ ಸುಪ್ತಾಂ ತಾಮುವಾಚ ಪತಿವ್ರತಾಂ ॥ ೨೦ ॥

॥ ಬ್ರಹ್ಮೋವಾಚ ॥

ಅಖಿಲಾನಾಂ ಚ ದೇವಾನಾಂ ದ್ವಿಜಾನಾಂ ಚ ಗವಾದಿನಾಂ ।
ಯತ್ಥೈವ ನಿಧನಂ ತೇಷಾಂ ಕಥಂ ತೇ ಪರಿರೋಚತೇ ॥ ೨೧ ॥

ಮಾತಃ ಕ್ರೋಧಂ ತ್ಯಜಸ್ವಾದ್ಯ ಸೂರ್ಯಸ್ಯೋದಯನಂ ಪ್ರತಿ ॥ ೨೨ ॥

॥ ಪತಿವ್ರತೋವಾಚ ॥

ಸರ್ವಲೋಕಾನತಿಕ್ರಮ್ಯ ಪತಿರೇಕೋ ಗುರುರ್ಮಮ ।
ಅಸ್ಯ ಮೃತ್ಯುರ್ಮನೇಶ್ಯಾಪಾದುದಿತೇ ಚ ವಿರೋಚನೇ ॥ ೨೩ ॥

---

೧೯. ಪತಿವ್ರತೆಯು ಹೇಳಿದಳು- ಅಯ್ಯೋ ಕೆಟ್ಟೆನಲ್ಲ. ಸೂರ್ಯನು ನನ್ನ ಮನೆಗೇ ಬಂದನಲ್ಲ.

೨೦. ಭಗವಂತನು ಹೇಳಿದನು- ಆಗ ಆ ದೇವತೆಗಳು ಆ ವಿಮಾನದಲ್ಲಿ ಕಾಣಿಸಿಕೊಂಡು ಹಾಸಿಗೆಯಲ್ಲಿ ಮಲಗಿರುವ ಆಕೆಯನ್ನು ಕುರಿತು ಇಂತೆಂದರು

೨೧-೨೨. ಬ್ರಹ್ಮನು ಹೇಳಿದನು- ಎಲೈ ಪತಿವ್ರತೆಯೇ! ದೇವತೆಗಳು, ಬ್ರಾಹ್ಮಣರು, ಗೋವುಗಳು, ಇವರೆಲ್ಲರ ನಾಶವು ನಿನಗೆ ಇಷ್ಟವಾಗಿದೆಯೆ? ಆದ್ದರಿಂದ ಕೋಪವನ್ನು ಬಿಡು. ಸೂರ್ಯನು ಹುಟ್ಟಲಿ.

೨೩. ಪತಿವ್ರತೆಯು ಹೇಳಿದಳು- ಎಲ್ಲಾ ಪ್ರಾಣಿಗಿಂತಲೂ ನನಗೆ ಗಂಡನೇ ಮೇಲು. ಅವನೇ ನನಗೆ ಗುರುವು. ಇಂತಹ ಗಂಡನು ಸೂರ್ಯನು ಹುಟ್ಟಿದರೆ ಸಾಯುವನು.

ತೇನೈವ ಕಾರಣೇನೈವ ಮಯಾ ಶಪ್ತೋ ದಿವಾಕರಃ ।
ನ ಕೋಪಾನ್ನ ಚ ಮೋಹಾಚ್ಚ ಲೋಭಾತ್ಕಾಮಾನ್ನ ಮತ್ಸರಾತ್ ॥ ೭೪ ॥

॥ ಬ್ರಹ್ಮೋವಾಚ ॥

ಏಕಸ್ಯ ನಿಧನೇನೈವ ತ್ರೈಲೋಕ್ಯಸ್ಯ ಹಿತಂ ಭವೇತ್ ।
ತತಸ್ತೇ ಚಾಧಿಕಂ ಪುಣ್ಯಂ ಮಾತರೇವಂ ಭವಿಷ್ಯತಿ ॥ ೭೫ ॥

॥ ಭಗವಾನುವಾಚ ॥

ಸಾ ಪ್ರೋವಾಚ ವಿಧಿಂ ತತ್ರ ದೇವಾನಾಮಗ್ರತಸ್ಸತೀ ॥ ೭೬ ॥

॥ ಪತಿವ್ರತೋವಾಚ ॥

ಪತಿಂ ತ್ಯಕ್ತ್ವಾ ಚ ಮೇ ಸತ್ಯಂ ಶಿವಂ ತೇ ನಾನುರೋಚತೇ ॥ ೭೭ ॥

॥ ಬ್ರಹ್ಮೋವಾಚ ॥

ಉದಿತೇ ಚ ಖಗೇ ಸೌಮ್ಯೇ ಪತ್ಯೌ ತೇ ಭಸ್ಮತಾಂ ಗತೇ ।
ಸ್ವಸ್ಥೇ ಭೂತೇ ಚ ತ್ರೈಲೋಕ್ಯೇ ಕರಿಷ್ಯಾಮಿ ಹಿತಂ ತವ ॥ ೭೮ ॥

---

೭೪. ಈ ಕಾರಣದಿಂದ ಸೂರ್ಯನನ್ನು ಶಪಿಸಿದೆನು ಕೋಪ, ಮೋಹ, ಲೋಭ, ಕಾಮ, ಮಾತ್ಸರ್ಯಗಳಿಂದೊಂದರಿಂದಲೂ ಅಲ್ಲ.

೭೫. ಬ್ರಹ್ಮನು ಹೇಳಿದನು- ಒಬ್ಬನು ಸತ್ತರೆ ಮೂರುಲೋಕಕ್ಕೂ ಒಳ್ಳೆಯ ದಾಗುತ್ತದೆ. ಆದ್ದರಿಂದ ನಿನಗೆ ಹೆಚ್ಚು ಪುಣ್ಯವು ಬರುತ್ತದೆ.

೭೬. ಭಗವಂತನು ಹೇಳಿದನು- ಆಗ ಆಕೆಯು ದೇವತೆಗಳೆದುರಿಗೆ ಬ್ರಹ್ಮ ನನ್ನು ಕುರಿತು ಇಂತೆಂದಳು.

೭೭. ಪತಿವ್ರತೆಯು ಹೇಳಿದಳು- ನನಗೆ ಗಂಡನನ್ನು ಹೊರತು ನಿಮಗೆ ಒಳ್ಳೆಯುದನ್ನು ಮಾಡಲು ತೋರುವುದಿಲ್ಲ.

೭೮. ಬ್ರಹ್ಮನು ಹೇಳಿದನು- ಸೂರ್ಯನು ಹುಟ್ಟಲಿ. ನಿನ್ನ ಗಂಡನು ಭಸ್ಮ ವಾಗಲಿ. ಮೂರು ಲೋಕವು ಸುಖವನ್ನು ಹೊಂದಲಿ. ಅನಂತರ ನಿನಗೆ ಒಳ್ಳೆಯದನ್ನು ಮಾಡುತ್ತೇನೆ.

ಭಸ್ಮನಃ ಪುರುಷೋ ಭಾವ್ಯಃ ಕಾಮದೇವಸಮಪ್ರಭಃ ।
ಗುಣೈಸ್ಸರ್ವೈರ್ಯುತೋ ಭರ್ತಾ ರತಿವತ್ತ್ವಂ ಚ ಸರ್ವದಾ ॥ ೭೯ ॥

ಯಥಾ ಪೂಜ್ಯೋ ಹರಿರ್ದೇವೈರ್ಯಥಾ ಲಕ್ಷ್ಮೀಶ್ಚ ಪೂಜಿತಾ ।
ತಥೈವ ದಂಪತೀ ಸ್ವರ್ಗೇ ತಸ್ಮಾನ್ಮದ್ವಚನಂ ಕುರು ॥ ೮೦ ॥

॥ ಪತಿವ್ರತೋವಾಚ ॥

ಪತ್ಯುರ್ಮೇ ನಿಧನೇ ಬ್ರಹ್ಮನ್ವಿಧವಾ ಲೋಕನಿಂದಿತಾ ।
ಕಾಂಸ್ತು ಲೋಕಾನ್ಗಮಿಷ್ಯಾಮಿ ಭಗ್ನಾಚಾರಾ ಮಲೀಮಸಾ ॥ ೮೧ ॥

॥ ಬ್ರಹ್ಮೋವಾಚ ॥

ಅತಸ್ತೇ ನಾಸ್ತಿ ದೋಷೋ ವೈ ನ ಮೃತಸ್ತೇಧವೋಽಧುನಾ ।
ಅಸ್ಮಾಕಂ ವಚನೇನೈವ ಕುಷ್ಠೀ ಮನ್ಮಥತಾಂ ವ್ರಜೇತ್ ॥ ೮೨ ॥

॥ ಭಗವಾನುವಾಚ ॥

ಏವಮುಕ್ತೇ ತು ವಿಧಿನಾ ವಿಮೃಶ್ಯ ಕ್ಷಣಮೇವ ಚ ।
ಬಾಢಮುಕ್ತವತೀ ಸಾ ಚ ತತಸ್ಸೂರ್ಯೋದಯೋಽಭವತ್ ॥ ೮೩ ॥

---

೭೯. ಅನಂತರ ಆ ಕಾಮುನಿಗೆ ಸಮನಾದ ಎಲ್ಲಾ ಗುಣಗಳಿಂದ ಕೂಡಿದ ಗಂಡನು ಆ ಬೂದಿಯಿಂದ ಬರುವನು. ನೀನು ರತಿಯಂತಾಗುತ್ತೀಯೆ.

೮೦. ನಿನ ಗಂಡನನ್ನು ಹರಿಯಂತೆಯೂ, ನಿನ್ನನ್ನು ಲಕ್ಷ್ಮಿಯಂತೆಯೂ ಸ್ವರ್ಗದಲ್ಲಿ ಪೂಜಿಸುತ್ತಾರೆ. ಆದ್ದರಿಂದ ನನ್ನ ಮಾತನ್ನು ಕೇಳು.

೮೧. ಪತಿವ್ರತೆಯು ಹೇಳಿದಳು– ಎಲೈ ಬ್ರಹ್ಮನೇ! ನನ್ನ ಗಂಡನು ಸತ್ತ ಮೇಲೆ ನಾನು ವಿಧವೆಯಾಗಿ ಲೋಕದಲ್ಲಿ ನಿಂದಿತೆಯಾಗುವೆನು. ಆಚಾರವೇ ನನಗಿಲ್ಲ. ಪಾಪಿಯಾಗುವೆನು. ಆಗ ನಾನು ಯಾವ ಲೋಕವನ್ನು ಹೊಂದಲಿ?

೮೨. ಅದರಿಂದ ನಿನಗೆ ದೋಷಬರುವುದಿಲ್ಲ. ನಿನ್ನ ಗಂಡನು ಈಗ ಸತ್ತಿಲ್ಲ. ನಮ್ಮ ಮಾತಿನಿಂದ ಕುಷ್ಠರೋಗವುಳ್ಳವನು ಮನ್ಮಥನಂತೆ ಆಗುವನು

೮೩. ಭಗವಂತನ- ಹೇಳಿದನು- ಬ್ರಹ್ಮನು ಹೀಗೆನ್ನಲು ಈಕೆಯು ಕ್ಷಣಕಾಲ ಯೋಚಿಸಿ ಹಾಗೇ ಆಗಲೆಂದಳು. ಆಗ ಸೂರ್ಯನು ಹುಟ್ಟಿದನು.

ಅಭವದ್ಭಸ್ಮ ಏವಾಸೌ ಮುನಿಶಾಪೇನ ಪೀಡಿತಃ ।
ಭಸ್ಮನೋ ಮಧ್ಯತೋ ಜಾತೋ ದ್ವಿಜೋ ಮನ್ಮಥಪೀಡಿತಃ ॥ ೮೪ ॥

ದೃಷ್ಟ್ವಾ ವಿಸ್ಮಯಮಾಪನ್ನಾಃ ಸರ್ವೇ ತೇ ಪುರವಾಸಿನಃ ।
ಮುದಿತಾ ದೇವವೃಂದಾಶ್ಚ ಜನಃ ಸ್ವಸ್ಥತರೋಭವತ್ ॥ ೮೫ ॥

ವಿಮಾನೇನಾರ್ಕವರ್ಣೇನ ಸ್ವರ್ಲೋಕಾದಾಗತೇನ ಚ ।
ಪತಿನಾ ಸಹ ಸಾ ಸಾಧ್ವೀ ಸುರೈಸಾರ್ಧಂ ಗತಾ ದಿವಂ ॥ ೮೬ ॥

ಏವಂ ಪತಿವ್ರತಾ ಯಾ ಚ ಶುಭಾ ಚೈವ ತು ಮತ್ಸಮಾ ।
ತೇನ ವೃತ್ತಂ ಚ ಜಾನಾತಿ ಭೂತಂ ಭವ್ಯಂ ಪ್ರವರ್ತನಂ ॥ ೮೭ ॥

ಯ ಇದಂ ಶ್ರಾವಯೇಲ್ಲೋಕೇ ಪುಣ್ಯಾಖ್ಯಾನಮನುತ್ತಮಂ ।
ತಸ್ಯ ಪಾಪಂ ಕ್ಷಯಂ ಯಾತಿ ಜನ್ಮ ಜನ್ಮ ಕೃತಂ ಚ ಯತ್ ॥ ೮೮ ॥

---

೮೪. ಆಗ ಮುನಿಶಾಪದಿಂದ ಆತನು ಭಸ್ಮವಾದನು. ಆಗ ಆ ಭಸ್ಮದ ಮಧ್ಯದಿಂದ ಮನ್ಮಥನಂತಿರುವ ಒಬ್ಬ ಬ್ರಾಹ್ಮಣನು ಹುಟ್ಟಿದನು.

೮೫. ಆ ಊರಿನವರೆಲ್ಲರೂ ಅದನ್ನು ನೋಡಿ ಆಶ್ಚರ್ಯಪಟ್ಟರು. ದೇವತೆಗಳು ಸಂತೋಷಗೊಂಡರು. ಜನಗಳು ಸುಖವನ್ನು ಹೊಂದಿದರು.

೮೬. ಸೂರ್ಯನಂತಿರುವ ವಿಮಾನವು ಸ್ವರ್ಗದಿಂದ ಬರಲು ಗಂಡನೊಡನೆ ಅದರಲ್ಲಿ ಕುಳಿತುಕೊಂಡು ದೇವತೆಗಳೊಡನೆ ಸ್ವರ್ಗಕ್ಕೆ ಹೋದಳು.

೮೭. ಈ ರೀತಿ ಪತಿವ್ರತೆಯು ಶುದ್ಧಳು. ನನಗೆ ಸಮವಾಗಿರುವವಳು. ಆದರಿಂದಲೇ ಲೋಕದ ಭೂತಭವಿಷ್ಯತ್ತುಗಳನ್ನೂ ತಿಳಿಯುತ್ತಾಳೆ.

೮೮. ಇದನ್ನು ಜನಗಳಿಗೆ ಹೇಳತಕ್ಕವನ ಜನ್ಮ ಜನ್ಮಾಂತರಗಳ ಪಾಪವೆಲ್ಲವೂ ಹೋಗುತ್ತವೆ.

ಅಕ್ಷಯಂ ಲಭತೇ ಸ್ವರ್ಗಂ ವಿಬುಧೈಸ್ಸಂಪ್ರಯುಜ್ಯತೇ ।
ಬ್ರಾಹ್ಮಣೋ ಲಭತೇ ವೇದಂ ಜನ್ಮ ಜನ್ಮಸು ಬಾಡಬ ॥ ೮೯ ॥

ಸಕೃಚ್ಛೃಣೋತಿ ಯಃ ಪ್ರೂತೋ ದುಷ್ಕೃತೌಘಾದ್ವಿಮುಚ್ಯತೇ ।
ಸುರಾಲಯಮವಾಪ್ನೋತಿ ಸ್ವರ್ಗಾದ್ಭ್ರಷ್ಟೋ ಧನೀ ಭವೇತ್ ॥ ೯೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪತಿವ್ರತೋಪಾಖ್ಯಾನಂ
॥ ನಾಮ ಅಷ್ಟಚತ್ವಾರಿಂಶೋಽಧ್ಯಾಯಃ ॥

---

೮೯. ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾನೆ. ದೇವತೆಗಳು ಪೂಜಿಸುತ್ತಾರೆ. ಬ್ರಾಹ್ಮಣನು ಜನ್ಮಜನ್ಮದಲ್ಲಿಯೂ ವೇದವನ್ನು ಹೊಂದುತ್ತಾನೆ

೯೦. ಒಂದು ಬಾರಿ ಈ ಕಥೆಯನ್ನು ಕೇಳಿದರೂ, ಪಾಪಗಳನ್ನು ಕಳೆದುಕೊಳ್ಳುತ್ತಾನೆ. ಸ್ವರ್ಗವನ್ನು ಹೊಂದುತ್ತಾನೆ. ಸ್ವರ್ಗದಿಂದ ಬಂದಮೇಲೆ ಧನಿಕನಾಗಿ ಹುಟ್ಟುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಪತಿವ್ರತೆಯ ಮಹಿಮೆಯೆಂಬ
ನಾಲ್ವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಏಕೋನಪಂಚಾಶತ್ತಮೋಽಧ್ಯಾಯಃ ॥



॥ ದ್ವಿಜ ಉವಾಚ ॥

ಮಾಂಡವ್ಯಸ್ಯ ಮುನೇರ್ವಿಷ್ಣೋ ಶೂಲಘಾತಃ ಕಥಂ ತನೌ ।
ಪತ್ಯುಃ ಪತಿವ್ರತಾಯಾಶ್ಚ ಕಥಂ ಕುಷ್ಠಂ ಕಳೇಬರೇ ॥ ೧ ॥

॥ ಹರಿರುವಾಚ ॥

ಶಿಶುಭಾವಾಚ್ಚ ಮಾಂಡವ್ಯೋ ಝುಲ್ಲಿಕಾಯಾಮಭಾನತಃ ।
ಬಸ್ತಿದೇಶೇ ತೃಣಂ ದತ್ವಾ ಮೋಹಾತ್ಸ ಚ ಮುಮೋಚ ತಾಂ ॥ ೨ ॥

ತೇನಾಪವಾದದೋಷೇಣ ಧರ್ಮಸ್ಯಾಜ್ಞಾತುರೇವ ಚ ।
ಅಹೋರಾತ್ರಂ ವ್ಯಥಾ ಕೃಚ್ಛ್ರಾತ್ ಭುಕ್ತಾ ತೇನ ದ್ವಿಜನ್ಮನಾ ॥ ೩ ॥

---

## ನಾಲ್ವತ್ತೊಂಭತ್ತನೆಯ ಅಧ್ಯಾಯವು

೧. ಬ್ರಾಹ್ಮಣನು ಹೇಳಿದನು- ಎಲೈ ವಿಷ್ಣುವೇ ! ಮಾಂಡವ್ಯ ಋಷಿಗೆ ಶೂಲದ ಏಟು ದೇಹದಲ್ಲಿ ಬೀಳಲು ಕಾರಣವೇನು ? ಪತಿವ್ರತೆಯ ಗಂಡನಿಗೆ ಕುಷ್ಠ ರೋಗವು ಬರುವುದಕ್ಕೂ ಸಹ ಕಾರಣವೇನು ?

೨. ಹರಿಯು ಹೇಳಿದನು- ಮಾಂಡವ್ಯನು ಚಿಕ್ಕವನಾಗಿದ್ದಾಗ ಹುಡುಗಾಟದಿಂದ ರೆಕ್ಕೆಯುಳ್ಳ ಇರುವೆಯ ಪೃಷ್ಠ ಪ್ರದೇಶದಲ್ಲಿ ಹುಲ್ಲನ್ನು ಚುಚ್ಚಿ ಬಿಟ್ಟು ಬಿಟ್ಟನು.

೩. ಆ ರೀತಿಯಾದ ಪಾಪದಿಂದ ಯಮಧರ್ಮನ ಅಪ್ಪಣೆಯಂತೆ ಒಂದು ಹಗಲು ಒಂದು ರಾತ್ರೆಯೂ ಕೂಡ ಬಹುಕಷ್ಟದಿಂದ ಆ ಕಷ್ಟವನ್ನು ಅನುಭವಿಸಿದನು.

ಸಮಾಧಿನಾ ತೇನ ಕಿಂ ತು ನ ಜ್ಞಾತಂ ಶೂಲಸಂಭವಂ ।
ಕೃಚ್ಛ್ರಂ ತತ್ ಮುನಿನಾ ಕೃತ್ಸ್ನಂ ಯೋಗಾಭ್ಯಾಸಾದ್ಧ್ರುಶಾದಪಿ ॥ ೪ ॥

ಕುಷ್ಠಿನೋ ಬ್ರಹ್ಮಣೋ ಘಾತಾದಜಿತೇಂದ್ರಿಯಕಾರಣಾತ್ ।
ಪೂತಿಗಂಧಂ ತನೌ ಕುಷ್ಠಂ ಸಂಜಾತಂ ದ್ವಿಜಸತ್ತಮ ॥ ೫ ॥

ಪುರಾ ವಿಪ್ರಾಯ ತೇನೈವ ದತ್ತಂ ಗೌರೀಚತುಷ್ಟಯಂ ।
ಕನ್ಯಕಾತ್ರಿತಯಂ ವಿಪ್ರ ತೇನ ತಸ್ಯ ಪತಿವ್ರತಾ ॥ ೬ ॥

ಅಸ್ಯಾಸ್ತು ಕಾರಣಾದೇವ ಸ ಚ ಮತ್ಸಮತಾಂ ವ್ರಜೇತ್ ।
ಅತ್ರ ತೇ ವಿಸ್ಮಯಃ ಕುತ್ರ ವೇದಕರ್ಮಪುರಾತನಂ ॥ ೭ ॥

॥ ದ್ವಿಜ ಉವಾಚ ॥

ಕೃತ್ಯಾ ನಾರೀ ನ ಯಸ್ಯೈವ ತಸ್ಯ ಸ್ವರ್ಗೋ ಭವೇದ್ಧ್ರುವಂ ।
ಯದ್ಯೇತಚ್ಚರಿತಂ ನಾಥ ಸರ್ವೇಷಾಂ ಶಿವಮಿಷ್ಯತೇ ॥ ೮ ॥

---

೪-೫. ಆತನು ಯೋಗಾಭ್ಯಾಸದಲ್ಲಿದ್ದು ಸಮಾಧಿಯಲ್ಲಿದ್ದುದರಿಂದ ಶೂಲದ ನೋವು ಆತನಿಗೆ ಗೊತ್ತಾಗಲಿಲ್ಲ. ಈ ಪತಿವ್ರತೆಯ ಗಂಡನು ಪೂರ್ವದಲ್ಲಿ ಒಬ್ಬ ಕುಷ್ಠರೋಗದವನನ್ನು ಹೊಡೆದುದರಿಂದಲೂ ಇವನಿಗೆ ಇಂದ್ರಿಯನಿಗ್ರಹವಿಲ್ಲದುದರಿಂದಲೂ ಇವನ ದೇಹದಲ್ಲಿ ನಾತದ ಕುಷ್ಠರೋಗವು ಉಂಟಾಯಿತು.

೬. ಇವನೇನೇ ಪೂರ್ವದಲ್ಲಿ ಮೂರು ಜನ ಗೌರೀ ಎಂಬ ಹೆಣ್ಣುಮಕ್ಕಳನ್ನು ದಾನಮಾಡಿದನು. ಆದರಿಂದ ಅವನಿಗೆ ಈ ಪತಿವ್ರತೆಯು ಸಿಕ್ಕಿದಳು.

೭. ಗೌರಿ ಎಂಬ ಮಕ್ಕಳನ್ನು ದಾನಮಾಡಿದ ಈ ಕಾರಣದಿಂದಲೇ ಅವನು ನನಗೆ ಸಮವಾದವನಾಗಿ ಆದನು. ಈ ವಿಷಯದಲ್ಲಿ ಆಶ್ಚರ್ಯಪಡಬೇಕಾದುದಿಲ್ಲ. ಹಿಂದಿನ ಕರ್ಮವು ಈರೀತಿಯಾದುದು.

೮. ಬ್ರಾಹ್ಮಣನು ಹೇಳಿದನು- ಯಾವನ ಹೆಂಡತಿಯು ಮಾಟದ ಗೊಂಬೆಯಲ್ಲವೋ ಅವನಿಗೆ ಸ್ವರ್ಗವು ಖಂಡಿತವಾಗಿ ಸಿಕ್ಕುತ್ತದೆ. ಮತ್ತು ಈ ಚರಿತ್ರೆಯೂ ಕೂಡ ಎಲ್ಲರಿಗೂ ಮಂಗಳವನ್ನುಂಟುಮಾಡತ್ತದೆ.

॥ ಹರಿರುವಾಚ ॥

ಸಂತಿ ಕೃತ್ಯಾಃ ಸ್ತ್ರಿಯಃ ಕಾಶ್ಚಿತ್ಪುಂಸಃ ಸರ್ವಸ್ವದಸ್ಯ ಚ ।
ತತ್ರಾಪ್ಯರಕ್ಷಣೀಯಾಂ ಚ ಮನಸಾಪಿ ನ ಧಾರಯೇತ್ ॥ ೯ ॥

ನ ಸ್ತ್ರೀಣಾಮಪ್ರಿಯಃ ಕಶ್ಚಿತ್ಪ್ರಿಯೋ ವಾಪಿ ನ ವಿದ್ಯತೇ ।
ಗಾವಸ್ತೃಣಮಿವಾರಣ್ಯೇ ಪ್ರಾರ್ಥಯಂತಿ ನವಂ ನವಂ ॥ ೧೦ ॥

ಪುಮಾಂಸಂ ವಿತ್ತಹೀನಂ ಚ ವಿರೂಪಂ ಗುಣವರ್ಜಿತಂ ।
ಅಕುಲೀನಂ ಚ ಭೃತ್ಯಂ ಚ ಕಾಮಿನೀ ಭಜತೇ ಧ್ರುವಂ ॥ ೧೧ ॥

ಭರ್ತಾರಂ ಚ ಗುಣೋಪೇತಂ ಕುಲೀನಂ ಚ ಮಹಾಧನಂ ।
ಸುಂದರಂ ರತಿದಕ್ಷಂ ಚ ತ್ಯಕ್ತ್ವಾ ನೀಚಂ ಭಜೇದ್ವಧೂಃ ॥ ೧೨ ॥

ಉಮಾನಾರದಸಂವಾದಮಾಖ್ಯಾನಂ ವೇದ ಭೂಸುರ ।
ಯತ್ಸವೇದ ಸ್ತ್ರಿಯಾಶ್ಚೇಷ್ಟಾ ವಿದ್ಯತೇ ಕಷ್ಟತೋ ದ್ವಿಜಃ ॥ ೧೩ ॥

---

೯. ಹರಿಯು ಹೇಳಿದನು- ಕೆಲವರು ಅಯೋಗ್ಯರಾದ ಸ್ತ್ರೀಯರಿರುವರು. ಪುರುಷನು ಏನು ಕೊಟ್ಟರೂ ಅವರಿಗೆ ಸಾಲದು. ಇವರಲ್ಲಿಯೂ ಕಾಪಾಡಲು ಆಗದವಳನ್ನು ಮನಸ್ಸಿನಿಂದಲೂ ಸ್ಮರಿಸಬಾರದು.

೧೦. ಹೆಂಗಸರಿಗೆ ದ್ವೇಷಿಯೂ ಒಬ್ಬನೂ ಇಲ್ಲ ಪ್ರೀತಿಪಾತ್ರನೂ ಒಬ್ಬನೂ ಇಲ್ಲ. ಅರಣ್ಯದಲ್ಲಿ ಹಸುಗಳು ಹೊಸ ಹೊಸ ಹುಲ್ಲನ್ನೇ ಹುಡುಕುವಂತೆ ಈ ಹೆಂಗಸರು ಹೊಸ ಹೊಸಬರನ್ನು ಹುಡುಕುತ್ತಿರುತ್ತಾರೆ.

೧೧. ಕಾಮದಿಂದ ಕೂಡಿದ ಹೆಂಗಸರು ಹಣವಿಲ್ಲದ ಕುರೂಪಿಯಾದ ಗುಣಲೇಶವೂ ಇಲ್ಲದ ಒಳ್ಳೆಯ ಕುಲದಲ್ಲಿ ಹುಟ್ಟಿದ ಇತರರ ಸೇವಕನನ್ನಾದರೂ ರಮಿಸುತ್ತಾರೆ. ನಿಶ್ಚಯವು

೧೨. ಗುಣಿಯೂ, ಕುಲೀನನೂ, ಧನಿಯೂ, ಸುಂದರನೂ, ರಮಿಸುವುದರಲ್ಲಿ ದಕ್ಷನೂ ಆದ ಗಂಡನಿದ್ದರೂ ಆ ಹೆಂಗಸರು ನೀಚನನ್ನು ಹೊಂದಿ ರಮಿಸುತ್ತಾರೆ ನಿಶ್ಚಯವು.

೧೩. ಉಮೆ ನಾರದರ ಸಂವಾದರೂಪವಾದ ಕಥೆಯನ್ನು ತಿಳಿದಿದ್ದೀಯೆ. ಅದನ್ನು ತಿಳಿದಿದ್ದರೆ ಸ್ತ್ರೀಯರ ಚೇಷ್ಟೆಗಳನ್ನೂ ಅವನು ಬಹು ಕಷ್ಟದಿಂದ ತಿಳಿಯಬಲ್ಲನು.

ಸ್ವಭಾವನ್ನಾರದೋ ವಿಪ್ರ ವಿಶ್ವಜಿಜ್ಞಾಸಕೋ ಮುನಿಃ ।
ಸ್ವಾಂತೇ ವಿಮೃಶ್ಯಾಥ ಗತಃ ಕೈಲಾಸಂ ಗಿರಿಮುತ್ತಮಂ ॥ ೧೪ ॥

ವೃಷಕೇತುಸದಾಖ್ಯಾನಂ ಸಂಪ್ರವಿಷ್ಟೋ ಹಿಮೋ ಗಿರೌ
ಪ್ರಣಿಪತ್ಯ ಮಹಾತ್ಮಾ ವೈ ಪ್ರಪಚ್ಛ ಪಾರ್ವತೀಂ ಮುನಿಃ ॥ ೧೫ ॥

॥ ನಾರದ ಉವಾಚ ॥

ದೇವಿ ಸೀಮಂತಿನೀನಾಂ ತು ದುಶ್ಚೇಷ್ಟಾಂ ಜ್ಞಾತುಮುತ್ಸಹೇ ।
ಕೌತುಕೇನ ತ್ವಯಾಶ್ಚರ್ಯಂ ಬಹೂನಾಂ ಸಂಪ್ರಯುಜ್ಯತೇ ॥ ೧೬ ॥

ಸರ್ವಾಸಾಮಪಿ ನಾರೀಣಾಂ ಸ್ವಾಂತಂ ಜಾನಾಸಿ ತತ್ವತಃ ।
ತನ್ಮೇ ಕಥಯ ಸರ್ವೇಷು ವಿನೀತಂ ಅಜ್ಞಮೇವ ಚ ॥ ೧೭ ॥

॥ ದೇವ್ಯುವಾಚ ॥

ಯುವತೀನಾಂ ಸದಾ ಚಿತ್ತಂ ಪುಂಸು ತಿಷ್ಠತ್ಯಸಂಶಯಂ ।
ಅಸ್ಮಿನ್ಯೋನೌ ಸುಸಂಯೋಗ್ಯೇ ಸಂಗತೇ ವಾಪ್ಯಸಂಗತೇ ॥ ೧೮ ॥

---

೧೪. ಆ ನಾರದನು ಸ್ವಭಾವವಾಗಿಯೂ, ಪ್ರಪಂಚದ ವಿಷಯಗಳನ್ನು ತಿಳಿಯಲು ಇಚ್ಛೆಯುಳ್ಳವನು. ಒಂದುಸಾರಿ ಮನಸ್ಸಿನಲ್ಲಿ ಇದನ್ನು ಯೋಚಿಸುತ್ತ ಕೈಲಾಸಪರ್ವತಕ್ಕೆ ಹೋದನು

೧೫. ಆ ಕೈಲಾಸದಲ್ಲಿ ಕುಳಿತಿದ್ದ ಪಾರ್ವತಿಯನ್ನು ನಮಸ್ಕರಿಸಿ ಆ ಮಹಾತ್ಮನು ವೃಷಕೇತುವಿನ ಕಥೆಯನ್ನು ಕೇಳಿದನು.

೧೬. ನಾರದನು ಹೇಳಿದನು- ಎಲೈ ದೇವಿಯೇ! ಹೆಂಗಸರ ಕೆಟ್ಟ ಚೇಷ್ಟೆಗಳನ್ನು ಕೇಳಲು ಅಪೇಕ್ಷೆಯಿದೆ ಅನೇಕ ಜನರು ಅನೇಕ ರೀತಿಯಲ್ಲಿ ನಡೆಯುವುದರಿಂದ ಆಶ್ಚರ್ಯವಾಗಿದೆ.

೧೭. ಎಲ್ಲಾ ಸ್ತ್ರೀಯರ ಮನಸ್ಸನ್ನೂ ನೀನು ಸರಿಯಾಗಿ ತಿಳಿದಿದ್ದೀಯೆ ವಿನೀತನಾಗಿಯೂ, ಅಜ್ಞನಾಗಿಯೂ ಇರುವ ನನಗೆ ಅದೆಲ್ಲವನ್ನೂ ಹೇಳು.

೧೮ ದೇವಿಯು ಹೇಳಿದಳು– ಯುವತಿಯರ ಮನಸ್ಸು ಯಾವಾಗಲೂ, ಗಂಡಸಿನಮೇಲೆಯೇ ಇರುತ್ತದೆ. ಖಂಡಿತ. ಯೋಗ್ಯವಾಗಿರಲಿ ಅಯೋಗ್ಯವಾಗಿರಲಿ ಈ ಯೋನಿಗೆ ಎಲ್ಲವೂ ಯೋಗ್ಯವೆಂದೇ ಭಾವಿಸುತ್ತಾರೆ.

ಸುವೇಷಂ ಪುರುಷಂ ದೃಷ್ಟ್ವಾ ಭ್ರಾತರಂ ಯದಿ ವಾ ಸುತಂ ।
ಯೋನಿಃ ಕ್ಲಿದ್ಯತಿ ನಾರೀಣಾಂ ಸತ್ಯಂ ಸತ್ಯಂ ಹಿ ನಾರದ ॥ ೧೯ ॥

ಸ್ಥಾನಂ ನಾಸ್ತಿ ಕ್ಷಣಂ ನಾಸ್ತಿ ನಾಸ್ತಿ ಪ್ರಾರ್ಥಯಿತಾ ನರಃ ।
ತೇನ ನಾರದ ನಾರೀಣಾಂ ಸತೀತ್ವಮುಪಜಾಯತೇ ॥ ೨೦ ॥

ಘೃತಕುಂಭಸಮಾ ನಾರೀ ತಪ್ತಾಂಗಾರಸಮಃ ಪುಮಾನ್ ।
ತಸ್ಮಾದ್ಘೃತಂ ಚ ವಹ್ನಿಂ ಚ ನೈಕಸ್ಥಾನೇ ಚ ಧಾರಯೇತ್ ॥ ೨೧ ॥

ಯಥೈವ ಮತ್ತಮಾತಂಗಂ ಸೃಣಿಮುದ್ಗರಯೋಗತಃ ।
ಸ್ವವಶಂ ಕುರುತೇ ಯಂತಾ ತಥಾ ಸ್ತ್ರೀಣಾಂ ಪ್ರರಕ್ಷಕಃ ॥ ೨೨ ॥

ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ।
ಪುತ್ರಾಶ್ಚ ಸ್ಥಾವರೇ ಭಾವೇ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥ ೨೩ ॥

---

೧೯. ಒಳ್ಳೆಯ ಸುಂದರನೂ, ಸುವೇಷನೂ, ಆಗಿರುವ ಸಹೋದರನೇ ಆಗಿರಲಿ, ಕೊನೆಗೆ ಮಗನೇ ಆಗಿರಲಿ ಅಂತಹ ಗಂಡಸನ್ನು ನೋಡಿದರೆ ಸ್ತ್ರೀಯರಿಗೆ ಯೋನಿಯು ದ್ರವಿಸುತ್ತದೆ. ಇದು ಖಂಡಿತವು. ಸತ್ಯವು.

೨೦. ಅವರಿಗೆ ಸ್ಥಳ ಸಿಕ್ಕುವುದಿಲ್ಲ. ಹೊತ್ತು ಸಿಕ್ಕುವುದಿಲ್ಲ. ಅಪೇಕ್ಷಿಸುವವನು ಸಿಕ್ಕುವುದಿಲ್ಲ. ಆದ್ದರಿಂದ ಹೆಂಗಸರಿಗೆ ಪಾತಿವ್ರತ್ಯವು ಉಂಟಾಗುತ್ತದೆ.

೨೧. ಹೆಂಗಸು ತುಪ್ಪದ ಗಡಿಗೆಗೆ ಸಮಾನಳೂ, ಗಂಡಸು ಬೆಂಕಿಯ ಗಡಿಗೆಗೆ ಸಮಾನನೂ ಆಗಿರುತ್ತಾರೆ. ಆದ್ದರಿಂದ ಬೆಂಕಿಯನ್ನೂ, ತುಪ್ಪವನ್ನೂ ಒಂದೆಡೆಯಲ್ಲಿ ಇಡಬಾರದು.

೨೨. ಮಾವಟಿಗನು ಮದ್ದಾನೆಯನ್ನು ಅಂಕುಶ ದೊಣ್ಣೆಗಳ ಏಟಿನಿಂದ ಹೇಗೆ ತಾನು ಹೇಳಿದಂತೆ ಕೇಳುವಹಾಗೆ ಮಾಡಿಕೊಳ್ಳುತ್ತಾನೆಯೋ ಹಾಗೆ ಯಜಮಾನನು ಸ್ತ್ರೀಯರನ್ನು ತಮ್ಮ ವಶನನ್ನಾಗಿ ಮಾಡಿಕೊಳ್ಳಬೇಕು.

೨೩. ಚಿಕ್ಕತನದಲ್ಲಿ ತಂದೆಯೂ, ಪ್ರಾಯಬಂದಾಗ ಗಂಡನೂ, ಮುಪ್ಪಿನಲ್ಲಿ ಮಕ್ಕಳೂ ಕಾಪಾಡುತ್ತಾರೆ. ಸ್ತ್ರೀಯರಿಗೆ ಯಾವಾಗಲೂ ಸ್ವಾತಂತ್ರ್ಯವಿರಕೂಡದು.

ತತಸ್ಸ್ವಾತಂತ್ರ್ಯಭಾವಾಚ್ಚ ಸ್ವೇಚ್ಛಯಾ ಚ ವರಾಂಗನಾ ।
ಪುರುಷೇಣಾರ್ಥಿತಾ ಧೀರಾ ಪ್ರೇರಣಾದಿಚರೀ ಭವೇತ್ ॥ ೨೪ ॥

ಅರಕ್ಷಣಾದ್ಯಥಾ ಪಾಕಃ ಶ್ವಕಾಕವಶಗೋ ಭವೇತ್ ।
ತಥೈವ ಯುವತೀ ನಾರೀ ಸ್ವಚ್ಛಂದಾದ್ದುಷ್ಟತಾಂ ವ್ರಜೇತ್ ॥ ೨೫ ॥

ಪುನರೇವ ಕುಲಂ ದುಷ್ಟಂ ತಸ್ಯಾಸ್ಸಂಸರ್ಗತೋ ಭವೇತ್ ।
ಪರಬೀಜೇ ನರೋ ಜಾತಃ ಸ ಚ ಸ್ಯಾದ್ವರ್ಣಸಂಕರಃ ॥ ೨೬ ॥

ಜಾರಜಸ್ಸಂಕರಃ ಪಾಪೋ ನರಕೇ ನಿಯತಂ ವಸೇತ್ ।
ಕೀಟಜಾತೌ ಗತಾ ಜಾತಾಃ ಪುನಸ್ಸರ್ವೇ ಮಹೀತಲೇ ॥ ೨೭ ॥

ತತೋ ಮ್ಲೇಚ್ಛಮುಪಾನೀತಂ ಕುಲಂ ಸ್ಯಾದ್ದ್ವಿಜನಂದನ ।
ಕುಲಕ್ಷಯೋ ಭವೇದ್ಯಸ್ಮಾತ್ತಸ್ಮಾದ್ದುಷ್ಟಾಂ ನ ಧಾರಯೇತ್ ॥ ೨೮ ॥

---

೨೪. ಹೆಂಗಸಿಗೆ ಸ್ವಾತಂತ್ರ್ಯ ಬಂದರೆ ಆಗ ಸ್ವೇಚ್ಛೆಯಿಂದ ವರ್ತಿಸುತ್ತಾಳೆ. ಆಗ ಪುರುಷರು ಸಂಗಮವನ್ನು ಯಾಚಿಸಿದರೆ ಅಥವಾ ಪ್ರೇರಿಸಿದರೆ ಅದರಿಂದ ಕೆಟ್ಟು ಹೋಗುತ್ತಾರೆ.

೨೫. ಅಡಿಗೆಯನ್ನು ಕಾಪಾಡದಿದ್ದರೆ ಅದು ಹೇಗೆ ಕಾಗೆ ನಾಯಿಗಳ ಪಾಲಾಗುತ್ತದೆಯೋ ಅದರಂತೆಯೇ ಹೆಂಗಸನ್ನು ಸ್ವತಂತ್ರವಾಗಿ ಬಿಟ್ಟರೆ ಕೆಟ್ಟು ಹೋಗುತ್ತಾಳೆ.

೨೬. ಆಕೆಯ ನಡತೆಯಿಂದ ಕುಲವು ದೋಷಭಾಗಿಯಾಗುತ್ತದೆ. ಪರರ ಬೀಜದಿಂದ ಮಕ್ಕಳಾಗುತ್ತವಾದ್ದರಿಂದ ವರ್ಣಸಂಕರವುಂಟಾಗುತ್ತದೆ.

೨೭. ಜಾರನಿಂದ ಹುಟ್ಟಿದವನು ಪಾಪಿಯು. ನರಕದಲ್ಲಿಯೇ ಅವನಿಗೆ ವಾಸವು. ಅನಂತರ ಕೀಟಾದಿಗಳಲ್ಲಿ ಮತ್ತೆ ಭೂಮಿಯಲ್ಲಿ ಹುಟ್ಟುತ್ತಾನೆ.

೨೮. ಅನಂತರ ಕುಲವೆಲ್ಲವೂ ಮ್ಲೇಚ್ಛರಂತೆ ಆಗಿಹೋಗಿ ಕುಲವೇ ನಾಶವಾಗಿ ಹೋಗುತ್ತದೆ. ಆದ್ದರಿಂದ ದುಷ್ಟಳಾದವಳನ್ನು ಇಟ್ಟುಕೊಳ್ಳಬಾರದು.

ಜ್ಞಾತ್ವೈವ ಯೋಷಿತಾಂ ದೋಷಂ ಕ್ಷಮತೇ ಯೋ ನರಾಧಮಃ ।
ಸ ತಿಷ್ಠೇನ್ನಿರಯೇ ಘೋರೇ ರೌರವೇ ಪಿತೃಭಿಸ್ಸಹ ॥ ೨೯ ॥

ಕಾಚಿತ್ಪಾತಯತೇ ನಾರೀ ಕಾಚಿದುದ್ಧರತೇ ಕುಲಂ ।
ತಸ್ಮಾತ್ಸರ್ವಪ್ರಯತ್ನೇನ ಕುಲಜಾಮುದ್ಧರೇದ್ಬುಧಃ ॥ ೩೦ ॥

ಕುಲದ್ವಯಂ ಸಮಾ ನಾರೀ ಸಮುಯಿತ್ವಾ ತು ತಿಷ್ಠತಿ ।
ಸಾಧ್ವೀ ತಾರಯತೇ ವಂಶಾನ್ದುಷ್ಟಾ ಪಾತಯತೇ ಧ್ರುವಂ ॥ ೩೧ ॥

ದಾರೇಷ್ವಧೀನಂ ಸ್ವರ್ಗಂ ಚ ಕುಲಂ ಪಂಕಂ ಯಶೋಽಯಶಃ ।
ಪುತ್ರಂ ದುಹಿತರಂ ಮಿತ್ರಂ ಸಂಸಾರೇ ಕಥಯಂತಿ ಚ ॥ ೩೨ ॥

ತಸ್ಮಾದೇಕಾಂ ದ್ವಿತೀಯಾಂ ವಾ ವಾಮಾಮುದ್ವಾಹಯೇದ್ಬುಧಃ ।
ಸಂತಾನಾರ್ಥಾನುಕಾಮಾಚ್ಚ ಬಹುದೋಷಾಶ್ರಿತಾ ಚ ಸಾ ॥ ೩೩ ॥

---

೨೯. ಹೆಂಗಸಿನ ಈ ದೋಷವನ್ನು ತಿಳಿದು ಯಾವನು ಕ್ಷಮಿಸುತ್ತಾನೆಯೋ ಅವನು ಪಿತೃಗಳೊಡನೆ ಘೋರವಾದ ರೌರವ ನರಕದಲ್ಲಿ ವಾಸಿಸುತ್ತಾನೆ.

೩೦. ಕೆಲವು ಹೆಂಗಸರು ಕುಲವನ್ನು ನಾಶಮಾಡುತ್ತಾರೆ. ಕೆಲವರು ಉದ್ಧಾರ ಮಾಡುತ್ತಾರೆ. ಆದ್ದರಿಂದ ಸರ್ವಪ್ರಯತ್ನದಿಂದಲೂ ಒಳ್ಳೆಯ ಕುಲದಲ್ಲಿ ಹುಟ್ಟಿದ ಸ್ತ್ರೀಯನ್ನು ಮದುವೆಮಾಡಿಕೊಳ್ಳಬೇಕು.

೩೧. ಹೆಂಗಸು ತಂದೆಯ ಮತ್ತು ಗಂಡನ ಕುಲವನ್ನು, ಕೆಟ್ಟರೆ ಒಂದೇ ರೀತಿ ಕೆಡಿಸಿಯೂ, ಉದ್ಧರಿಸಿದರೆ ಉದ್ಧರಿಸಿಯೂ ಬಿಡುತ್ತಾಳೆ. ಪತಿವ್ರತೆಯು ವಂಶಗಳನ್ನು ಉದ್ಧಾರಮಾಡುತ್ತಾಳೆ. ದುಷ್ಟಳು ವಂಶವನ್ನು ನಾಶಮಾಡುತ್ತಾಳೆ. ಖಂಡಿತವು.

೩೨. ಸ್ವರ್ಗ, ಕುಲ, ಕೀರ್ತಿ, ಅಪವಾದಗಳು ಮಗ, ಮಗಳು ಮಿತ್ರರು, ಇವರು ಸಂಸಾರದಲ್ಲಿ ಹೆಂಡತಿಯ ಅಧೀನರು. ಎಂದು ಹೇಳುತ್ತಾರೆ.

೩೩. ಆದ್ದರಿಂದ ಸಂತಾನಕ್ಕೋಸ್ಕರ ಒಬ್ಬಳು ಅಥವಾ ಇಬ್ಬರು ಹೆಂಗಸರನ್ನು ಹೆಂಡತಿಯರನ್ನಾಗಿ ವರಿಸಬೇಕು. ಹೆಂಗಸು ಬಹು ದೋಷಕ್ಕೆ ಒಳಗಾದವಳು.

ರಜಸ್ವಲಾಂ ಚ ವನಿತಾಂ ನಾವಗಚ್ಛತಿ ಯಃ ಪತಿಃ ।
ಬ್ರಹ್ಮಹಾ ಭ್ರೂಣಹಾ ಸೋಽಪಿ ದುರ್ಗತಿಂ ಚಾಧಿಗಚ್ಛತಿ ॥ ೩೪ ॥

ಯೋ ಮೋಹಾದ್ದುರ್ಭಗಾಂ ಕೃತ್ವಾ ಸಾಧ್ವೀಂ ತ್ಯಜತಿ ಪಾಪಕೃತ್ ।
ತಸ್ಯಾ ವಧೇನ ಯತ್ಪಾಪಂ ತದ್ಭುಕ್ತ್ವಾ ನರಕಂ ವ್ರಜೇತ್ ॥ ೩೫ ॥

ಪರದಾರಾನ್ಬಲಾದ್ಗತ್ವಾ ಧನೈರ್ವಾ ಸಂಪ್ರಲೋಭಯನ್ ।
ಸ ಯಾತಿ ನರಕಂ ಘೋರಂ ಪ್ರೇತ್ಯೇಹ ಚ ಕಳತ್ರಹಾ ॥ ೩೬ ॥

ಕಿಯದ್ಭುಕ್ತಂ ಚ ಭೋಕ್ತುಂ ಚ ಭುಂಜತೇ ಚಾತಿ ಸಾಂಪ್ರತಂ ।
ಯೋಷಿತಂ ವಿಘಸಂ ತಸ್ಯ ಭುಕ್ತ್ವಾ ಚೋಚ್ಛಿಷ್ಟತಾಂ ವ್ರಜೇತ್ ॥ ೩೭ ॥

ವನಿತಾಹರಣಂ ಕೃತ್ವಾ ಚಾಂಡಾಲಕುಲತಾಂ ವ್ರಜೇತ್ ।
ತಥೈವ ವಿಘಸಾಹಾರಾತ್ಪತಿತೋ ಜಾಯತೇ ನರಃ ॥ ೩೮ ॥

---

೩೪. ಮುಟ್ಟಾದ ಹೆಂಗಸನ್ನು ಯಾವ ಗಂಡನು ರಮಿಸುವುದಿಲ್ಲವೋ ಅವನು ಬ್ರಹ್ಮಹತ್ಯೆಯನ್ನೂ, ಭ್ರೂಣಹತ್ಯೆಯನ್ನೂ ಹೊಂದಿ ನರಕವನ್ನು ಹೊಂದುತ್ತಾನೆ.

೩೫. ಯಾವನು ಅಜ್ಞಾನದಿಂದ ಸಾಧ್ವಿಯಾದ ಹೆಂಗಸನ್ನು ತಿರಸ್ಕರಿಸಿ, ಬಿಟ್ಟುಬಿಡುತ್ತಾನೆಯೋ ಅವನಿಗೆ ಅವಳನ್ನು ಕೊಂದ ಸ್ತ್ರೀಹತ್ಯೆಯು ಬರುತ್ತದೆ ನರಕಕ್ಕೆ ಹೋಗುತ್ತಾನೆ.

೩೬. ಪರರ ಹೆಂಡಿರನ್ನು ಬಲಾತ್ಕಾರದಿಂದ ಹೊಂದಿದರೂ, ಹಣ ಮುಂತಾದುವುಗಳಿಂದ ಆಸೆ ತೋರಿಸಿ ರಮಿಸಿದರೂ, ಅವನಿಗೆ ಹೆಂಡತಿಯನ್ನು ಕೊಂದಷ್ಟು ಪಾಪ ಬರುತ್ತದೆ. ಸತ್ತಮೇಲೆ ನರಕಕ್ಕೆ ಹೋಗುತ್ತಾನೆ.

೩೭. ಎಷ್ಟನ್ನು ಭೋಗಿಸಿರುವನೋ, ಈಗ ಭೋಗಿಸುತ್ತಿರುವನೋ, ಮುಂದೆ ಎಷ್ಟನ್ನು ಅನುಭವಿಸುತ್ತಾನೆಯೋ ಅಷ್ಟು ಜನರು ತಂಗಳಾಗುತ್ತಾರೆ. ಅವರನ್ನು ಅನುಭವಿಸಿದ ಈತನೂ ಅಯೋಗ್ಯನಾಗಿ ನರಕವನ್ನು ಹೊಂದುವುದಲ್ಲದೆ ಯಾವ ಕೆಲಸಕ್ಕೂ ಅನರ್ಹನು.

೩೮. ಸ್ತ್ರೀಯನ್ನು ಕದ್ದರೆ ಚಂಡಾಲನಾಗಿ ಹುಟ್ಟುತ್ತಾನೆ. ಹಾಗೆಯೇ ತಂಗಳನ್ನು ತಿಂದರೆ ಪತಿತನಾಗಿ ಕೆಟ್ಟಕುಲದಲ್ಲಿ ಹುಟ್ಟುತ್ತಾನೆ.

ರಾಮಾಂ ವಿನ್ಯಸ್ಯ ಸ್ಕಂಧೇ ಚ ಚಿರಂ ಯಮಪುರೇ ವಸೇತ್ ।
ಮಲಮೂತ್ರಂ ಶಿರೋದೇಶೇ ನಿತ್ಯಂ ತಸ್ಯ ಚ ಸಂಪತೇತ್ ॥ ೩೯ ॥

ಏವಂ ವರ್ಷಸಹಸ್ರಾಣಿ ಭಾರಂ ವಹತಿ ದುರ್ಮತಿಃ ।
ಪುನರ್ಯಾವಂತಿ ಲೋಮಾನಿ ತಾವತ್ಸ ರೌರವಂ ವ್ರಜೇತ್ ॥ ೪೦ ॥

ಪುನಃ ಕೀಟೇಷು ಸಂಕೀರ್ಣೆ ತದಾ ಮಾನುಷತಾಂ ವ್ರಜೇತ್ ।
ತತಶ್ಚ ಕಲಹಂ ಶೋಕಂ ಪ್ರಾಪ್ನೋತಿ ಪೂರ್ವಕಲ್ಮಷಾತ್ ॥ ೪೧ ॥

ಏವಂ ಜನ್ಮತ್ರಯಂ ಪ್ರಾಪ್ಯ ಮುಚ್ಯತೇ ಪಾತಕಾನ್ನರಃ ।
ತತ್ಕಾಲಂ ನರಕಂ ಭುಕ್ತ್ವಾ ಸಾ ತು ಕಾಕೀ ತು ವಂಚಕೀ ॥ ೪೨ ॥

ಉಚ್ಛಿಷ್ಟಂ ಪೂತಿಕಂ ಭುಕ್ತ್ವಾ ಮಾನುಷೀ ವಿಧವಾ ಭವೇತ್ ।
ಯಃ ಪುನಶ್ಚಾನ್ತ್ಯಜಾಂಗಚ್ಛೇನ್ಮ್ಲೇಚ್ಛಾಂ ವಾ ಪುಕ್ಕಸಾಂ ನರಃ ॥ ೪೩ ॥

---

೩೯. ಆತನು ಯಮಪುರದಲ್ಲಿ ಹೆಂಗಸನ್ನು ಹೆಗಲಿನಮೇಲೆ ಕೂರಿಸಿಕೊಂಡು ಇರುತ್ತಾನೆ. ಮತ್ತು ಆಕೆಯ ಮಲಮೂತ್ರಗಳು ಅವನ ತಲೆಯಮೇಲೆ ಯಾವಾಗಲೂ ಬೀಳುತ್ತಿರುವುದು.

೪೦. ಹೀಗೆ ಸಾವಿರ ವರ್ಷಗಳವರೆಗೂ ತಲೆಯಮೇಲೆ ಭಾರವನ್ನು ಹೊತ್ತುಕೊಂಡಿರುತ್ತಾನೆ. ಮತ್ತು ರೌರವ ನರಕದಲ್ಲಿ ಅವನ ದೇಹರೋಮಗಳೆಷ್ಟಿವೆಯೋ ಅಷ್ಟು ವರ್ಷಗಳಿರುತ್ತಾನೆ.

೪೧. ಅನಂತರ ಕೀಟಗಳಲ್ಲಿ ಜನ್ಮತಾಳಿ ಮತ್ತೆ ಮನುಷ್ಯನಾಗಿ ಹುಟ್ಟುತ್ತಾನೆ. ಆ ಮನುಷ್ಯಜನ್ಮದಲ್ಲಿಯೂ, ಜಗಳ ದುಃಖವನ್ನೇ ಹಿಂದಿನ ಪಾಪ ಶೇಷದಿಂದ ಹೊಂದುತ್ತಾನೆ.

೪೨-೪೬. ಈ ರೀತಿ ಮೂರು ಜನ್ಮಗಳನ್ನು ಹೊಂದಿದ ಮೇಲೆ ಆ ಮನುಷ್ಯನು ಪಾಪದಿಂದ ಪಾರಾಗುತ್ತಾನೆ. ಆಕೆಯೂ ಕೂಡ ಹಿಂದೆ ಹೇಳಿದಷ್ಟು ದಿವಸಗಳು ನರಕವನ್ನು ಅನುಭವಿಸಿ ಕಾಗೆಯಾಗಿಯೋ ನರಿಯಾಗಿಯೋ ಹುಟ್ಟುತ್ತಾಳೆ. ಅದರಲ್ಲಿ ಎಂಜಲು ದುರ್ಗಂಧದ ಪದಾರ್ಥಗಳನ್ನು ತಿನ್ನುತ್ತಾಳೆ. ಅನಂತರ ಮನುಷ್ಯಜಾತಿಯಲ್ಲಿ ಹುಟ್ಟಿ ವಿಧವೆಯಾಗಿ ಆಗುತ್ತಾಳೆ. ಯಾವನು ಮ್ಲೇಚ್ಛಜಾತಿಯವಳನ್ನೇ

ದ್ವಿತ್ರಿಚತುರ್ಗುರ್ಣಾಂ ಭುಕ್ತ್ವಾ ತತ್ರ ಸಂಚೀರ್ಣವಂಚಕಃ ।
ಮಾತರಂ ಗುರುಭಾರ್ಯಾಂ ಚ ಬ್ರಾಹ್ಮಣೀಂ ಮಹಿಷೀಂ ತಥಾ ॥ ೪೪ ॥

ಅನ್ಯಾಂ ವಾ ಪ್ರಭುಪತ್ನೀಂ ಚ ಗತ್ವಾ ಯಾತ್ಯಪುನರ್ಭವಂ ।
ಭಗಿನೀಂ ತತ್ಪುತ್ರಭಾರ್ಯಾಂ ತಥಾ ದುಹಿತರಂ ಸ್ನುಷಾಂ ॥ ೪೫ ॥

ಪಿತೃವ್ಯಾಂ ಮಾತುಲಾನೀಂ ತು ತಥೈವ ಚ ಪಿತೃಷ್ವಸಾಂ ।
ಮಾತೃಷ್ವಸ್ರಾದಿಕಾಮನ್ಯಾಂ ಗತ್ವಾ ನಾಸ್ತಿ ಚ ನಿಷ್ಕೃತಿಃ ॥ ೪೬ ॥

ಬ್ರಹ್ಮಹಾ ಸಭವೇದಂಧೋ ವಚಸಾ ಜಡತಾಂ ವ್ರಜೇತ್ ।
ಕರ್ಣಯೋರ್ಬಧಿರೋ ಜಾತಃ ಸ್ರವತೇ ನಾಸ್ತಿ ನಿಷ್ಕೃತಿಃ ॥
ಉಕ್ತ್ವಾ ಅಶ್ಲೀಲಮತ್ಯರ್ಥಮಖಿಲಂ ಸ್ತ್ರೀಕೃತೇನ ಹಿ ॥ ೪೭ ॥

॥ ದ್ವಿಜ ಉವಾಚ ॥

ಏತದ್ದುಷ್ಕೃತಮಾಸಾದ್ಯ ಕಥಂ ಮೋಕ್ಷೋ ಭವೇತ್ಪುನಃ ।
ತತ್ಸಮಾಚಕ್ಷ್ವ ಭಗವನ್ಶ್ರೋತುಮಿಚ್ಛಾಮಿ ತತ್ವತಃ ॥ ೪೮ ॥

---

ಆಗಲಿ ಚಾಂಡಾಲಿಯನ್ನೇ ಆಗಲಿ ಹೊಂದಿ ರಮಿಸುತ್ತಾನೆಯೋ, ಅವನಿಗೆ ಪರಭಾರ್ಯೆಗೆ ಹೇಳಿದ ಮೂರು ನಾಲ್ಕರಷ್ಟು ನರಕಗಳೂ, ಜನ್ಮಗಳೂ ಸಿಕ್ಕುತ್ತವೆ. ಅನಂತರ ನರಿಯಾಗಿ ಹುಟ್ಟುತ್ತಾನೆ. ತಾಯಿ, ಗುರುವಿನ ಹೆಂಡತಿ, ಬ್ರಾಹ್ಮಣ ಸ್ತ್ರೀ, ಪ್ರಭುವಿನ ಹೆಂಡತಿ ಇವರನ್ನು ಹೊಂದಿ ರಮಿಸಿದರೆ, ಜನ್ಮವಿಲ್ಲದ ನರಕವನ್ನು ಹೊಂದುತ್ತಾನೆ. ಸೋದರಿ, ಸೋದರಿಯರ ಸೊಸೆ, ಮಗಳು, ತನ್ನ ಸೊಸೆ, ಚಿಕ್ಕಮ್ಮ, ದೊಡ್ಡಮ್ಮಂದಿರು, ಸೋದರತ್ತೆಯರು, ತಾಯಿಯ ಅಕ್ಕತಂಗಿಯರು, ಇವರಲ್ಲಿ ರಮಿಸಿದರೆ ಪ್ರಾಯಶ್ಚಿತ್ತವೇ ಇರುವುದಿಲ್ಲ.

೪೭ ಅವನು ಬ್ರಹ್ಮಹತ್ಯೆಯನ್ನು ಮಾಡಿದ ಪಾಪವನ್ನು ಹೊಂದಿ ಕುರುಡುತನ, ಮೂಗತನ, ಕಿವುಡುತನಗಳನ್ನು ಹೊಂದಿ ಕೊಳೆತು ಹರಿಯುತ್ತಾನೆ ಇವೆಲ್ಲಕ್ಕೂ ಪಾತ್ರಳಾದ ಹೆಂಗಸಿನ ವಿಷಯದಲ್ಲಿ ಹೇಳಬಾರದುದನ್ನು ಹೇಳಿ ಪ್ರಯೋಜನವಿಲ್ಲ, ಅಂತಹ ಕೆಟ್ಟವಳು.

೪೮. ಬ್ರಾಹ್ಮಣನು ಹೇಳಿದನು- ಎಲೈ ಸ್ವಾಮಿಯೇ ! ಈ ರೀತಿಯಾದ ಕೆಟ್ಟ ಕೆಲಸಗಳನ್ನು ಮಾಡಿ ಕೊನೆಗೆ ಅವನಿಗೆ ಮೋಕ್ಷವು ಸಿಕ್ಕುವುದು ಹೇಗೆ ? ಇದನ್ನು ಹೇಳು ? ಕೇಳಬೇಕು.

॥ ಭಗವಾನುವಾಚ ॥

ತಾಸಾಂ ಚ ಗಮನಂ ಕೃತ್ವಾ ತಪ್ತಾಂ ಲೋಹಸ್ಯ ಪುತ್ತಲೀಂ ।
ಸಮಾಲಿಂಗ್ಯ ತ್ಯಜೇತ್ಪ್ರಾಣಾ॥ ಶುಚಿರ್ಲೋಕಾಂತರಂ ವ್ರಜೇತ್ ॥ ೪೯ ॥

ಯೋ ವೈ ಗೃಹಾಶ್ರಮಂ ತ್ಯಕ್ತ್ವಾ ಮಚ್ಚಿತ್ತೋ ಜಾಯತೇ ನರಃ ।
ನಿತ್ಯಂ ಸ್ಮರತಿ ಗೋವಿಂದಂ ಸರ್ವಪಾಪಕ್ಷಯೋ ಭವೇತ್ ॥ ೫೦ ॥

ಬ್ರಹ್ಮಹತ್ಯಾಯುತಂ ತೇನ ಕೃತಂ ಗುರ್ವಂಗನಾಗಮಃ ।
ಶತಂ ಶತಸಹಸ್ರಂ ಚ ಪೈಷ್ಟೀಮದ್ಯಸ್ಯ ಭಕ್ಷಣಂ ॥ ೫೧ ॥

ಸ್ವರ್ಣಾದೇರ್ಹರಣಂ ಚೈವ ತೇಷಾಂ ಸಂಸರ್ಗಕಶ್ಚಿರಂ ।
ಏತಾನ್ಯನ್ಯಾನಿ ಪಾಪಾನಿ ಮಹಾಂತಿ ಪಾತಕಾನಿ ಚ ॥ ೫೨ ॥

ಅಗ್ನಿಂ ಪ್ರಾಪ್ಯ ಯಥಾ ತೂಲಂ ತೃಣಮಾಶು ಪ್ರಣಶ್ಯತಿ ।
ತಸ್ಮಾನ್ಮನ್ನಾಮ ಗೋವಿಂದಂ ಸ್ಮೃತ್ವಾ ಪೂತೋ ಭವೇನ್ನರಃ ॥ ೫೩ ॥

---

೪೯. ಭಗವಂತನು ಹೇಳಿದನು- ಇವರುಗಳಲ್ಲಿ ರಮಿಸಿದರೆ ಲೋಹದ ಸ್ತ್ರೀ ಪ್ರತಿಮೆಯನ್ನು ಚೆನ್ನಾಗಿ ಕಾಸಿ ಅದನ್ನಾಲಂಗಿಸಿಕೊಂಡು ಪ್ರಾಣವನ್ನು ಬಿಟ್ಟರೆ ಆಗ ಶುಚಿಯಾಗಿ ಬೇರೆ ಒಳ್ಳೆಯ ಲೋಕಗಳಿಗೆ ಹೋಗುತ್ತಾನೆ.

೫೦. ಗೃಹಸ್ಥಾಶ್ರಮವನ್ನೇ ಬಿಟ್ಟು ನನ್ನನ್ನೇ ಮನಸ್ಸಿನಲ್ಲಿಟ್ಟುಕೊಂಡು ಗೋವಿಂದನೆಂಬುದಾಗಿ ನಿತ್ಯವೂ ಸ್ಮರಿಸುತ್ತಾನೆಯೋ ಅವನ ಪಾಪಗಳೆಲ್ಲವೂ ಹೋಗುತ್ತವೆ.

೫೧-೫೩ ಮನುಷ್ಯನು ಸಾವಿರ ಬ್ರಹ್ಮಹತ್ಯೆಗಳನ್ನು ಮಾಡಿರಲಿ, ಗುರು ಸ್ತ್ರೀಯಲ್ಲಿ ರಮಿಸಿರಲಿ, ನೂರಾರು ಬಾರಿ ಹಿಟ್ಟಿನಿಂದ ಒರುವ ಮದ್ಯವನ್ನು ಕುಡಿದಿರಲಿ, ಚಿನ್ನವನ್ನು ಕದ್ದಿರಲಿ, ಅವರ ಜೊತೆಯಲ್ಲಿ ಸೇರಿರಲಿ, ಇವನ್ನೂ, ಇನ್ನೂ ಅನೇಕ ವಾದ ಮಹಾಪಾಪಗಳನ್ನು ಮಾಡಿರಲಿ, ಅವೆಲ್ಲವೂ ಹತ್ತಿಯಾಗಲಿ, ಹುಲ್ಲಾಗಲಿ, ಅಗ್ನಿಯನ್ನು ಹೊಂದಿ ನಾಶವಾಗುವಂತೆ ಗೋವಿಂದನ ಸ್ಮರಣೆಯನ್ನು ಮಾಡಿದರೆ ವಾಗುತ್ತವೆ.

ಯೋ ವಾ ಗೃಹಾಶ್ರಮೋ ತಿಷ್ಠೇನ್ನಿತ್ಯಂ ಗೋವಿಂದಘೋಷಣಂ ।
ಕೃತ್ವಾ ಚ ಪೂಜಯಿತ್ವಾ ಚ ಸ ಪಾಪಾತ್ಸಂತರೋ ಭವೇತ್ ॥ ೫೪ ॥

ಭಾಗೀರಥೀತಟೇ ರಮ್ಯೇ ಖಗಸ್ಯ ಗ್ರಹಣೇ ಶಿವೇ ।
ಗವಾಂ ಕೋಟಿಪ್ರದಾನೇನ ಯತ್ಫಲಂ ಲಭತೇ ನರಃ ॥ ೫೫ ॥

ತತ್ಫಲಂ ಸಮವಾಪ್ನೋತಿ ಸಹಸ್ರಂ ಚಾಧಿಕಂ ಚ ಯತ್ ।
ಗೋವಿಂದಕೀರ್ತನೇ ತಾತ ಮತ್ಪುರೇ ಚಾಕ್ಷಯಂ ವಸೇತ್ ॥ ೫೬ ॥

ಕಾಮಾತ್ಸ ಭವನೇ ಸ್ಥಿತ್ವಾ ಸಾರ್ವಭೌಮೋ ಭವೇನ್ನರಃ ।
ಪುರಾಣೇ ಮತ್ಕಥಾಂ ಶ್ರುತ್ವಾ ಮತ್ಸಾದೃಶಂ ಲಭೇನ್ನರಃ ॥ ೫೭ ॥

ಕಥಯಿತ್ವಾ ಪುರಾಣಂ ಚ ವಿಷ್ಣುಸಾಯುಜ್ಯತಾಂ ವ್ರಜೇತ್ ।
ತಸ್ಮಾನ್ನಿತ್ಯಂ ಚ ಶ್ರೋತವ್ಯಂ ಪುರಾಣಂ ಧರ್ಮಸಂಚಯಂ ॥ ೫೮ ॥

---

೫೪. ಗೃಹಸ್ಥಾಶ್ರಮದಲ್ಲಿದ್ದರೂ, ನಿತ್ಯವೂ ಗೋವಿಂದ ಸ್ಮರಣೆಯನ್ನು ಮಾಡುತ್ತಿದ್ದು ಅವನನ್ನು ಪೂಜಿಸಿದರೆ ಪಾಪದಿಂದ ಬಿಡಲ್ಪಡುತ್ತಾನೆ.

೫೫-೫೬. ಸೂರ್ಯಗ್ರಹಣಕಾಲದಲ್ಲಿ ಭಾಗೀರಥಿಯ ದಡದಲ್ಲಿ ಕೋಟಿ ಗೋದಾನವನ್ನು ಮಾಡಿದರೆ ಬರುವ ಫಲವು ಗೋವಿಂದನ ಕೀರ್ತನದಿಂದ ಬರುವುದಲ್ಲದೆ ಸಾವಿರದಷ್ಟು ಹೆಚ್ಚಾಗಿಯೂ ಬರುತ್ತದೆ. ಅಕ್ಷಯವಾದ ಗೋವಿಂದ ಲೋಕವೂ (ವೈಕುಂಠವೂ) ಸಿಕ್ಕುತ್ತದೆ.

೫೭. ನನ್ನನ್ನು ಸ್ಮರಿಸುತ್ತಾ ಮನೆಯಲ್ಲಿದ್ದರೆ ಚಕ್ರವರ್ತಿಯಾಗುತ್ತಾನೆ ಪುರಾಣದಲ್ಲಿ ನನ್ನ ಕಥೆಯನ್ನು ಕೇಳಿದರೆ ನನಗೆ ಸಮನೇ ಆಗುತ್ತಾನೆ.

೫೮. ಪುರಾಣವನ್ನು ಹೇಳಿದರೆ ವಿಷ್ಣುವಿನ ಸಮವಾಗುತ್ತಾನೆ. ಆದ್ದರಿಂದ ಧರ್ಮವ ಸ. ಕೂಡಿಹಾಕುವ ಪುರಾಣವನ್ನು ನಿತ್ಯವೂ ಕೇಳಬೇಕು.

ಶ್ರಾವಿತವ್ಯಂ ಪ್ರಯತ್ನೇನ ಲೋಕೇ ವಿಷ್ಣುತನುಂ ವ್ರಜೇತ್ ।
ಅನ್ಯದ್ವಾ ಸ್ತ್ರೀಕೃತೇ ದೋಷೇ ಯಥಾ ಯೋಗಂ ಭವೇದ್ಧ್ರುವಂ ॥ ೫೯ ॥

ನಿಶಾಮಯ ಪ್ರವಕ್ಷ್ಯಾಮಿ ತತ್ವತೋ ದ್ವಿಜನಂದನ ।
ಸರ್ವಬೀಜಸ್ಯ ದಾನೇನ ಸಾಂಬುಕುಂಭಂ ಮಹಾಫಲಂ ॥ ೬೦ ॥

ದದ್ಯಾದ್ವಿಪ್ರಾಯ ಪುಣ್ಯಾಹೇ ಸದ್ಯಃ ಪೂತೋ ಭವೇತ್ಕ್ಷಣಾತ್ ।
ಸರ್ವಂ ಧಾನ್ಯಾಧಿಕಂ ಬೀಜಂ ಕಾಲೇ ದದ್ಯಾದ್ದ್ವಿಜಾತಯೇ ॥ ೬೧ ॥

ಸರ್ವಪಾಪಕ್ಷಯಂ ಕೃತ್ವಾ ಅಕ್ಷಯಂ ಸ್ವರ್ಗಮಶ್ನುತೇ ।
ಗುಣಂ ವಕ್ಷ್ಯಾಮಿ ವಿಪ್ರರ್ಷೆ ಸತೀನಾಂ ಯಾದೃಶಂ ದೃಢಂ ॥ ೬೨ ॥

ಶುದ್ಧವಂಶೋ ಭವೇತ್ತಸ್ಯಾ ನಿತ್ಯಂ ಲಕ್ಷ್ಮೀಃ ಪ್ರವರ್ತತೇ ।
ಉಭಯೋರ್ವಂಶಯೋಸ್ಸ್ವರ್ಗಃ ಭರ್ತುರಾತ್ಮನ ಏವ ಚ ॥ ೬೩ ॥

ಪತಿವ್ರತಾಗುಣಂ ವಿಪ್ರ ವಿಸ್ಮೃತಂ ಪೃಚ್ಛತಸ್ತವ ।
ಪುನರ್ವಕ್ಷ್ಯಾಮಿ ಯೋಷಾಣಾಂ ಸರ್ವಲೋಕಹಿತಂ ಶುಭಂ ॥ ೬೪ ॥

---

೫೯-೬೨. ಈ ರೀತಿ ನಿತ್ಯವೂ ಪುರಾಣವನ್ನು ಹೇಳಿದರೆ ವಿಷ್ಣುವಿನಲ್ಲಿಯೇ ಐಕ್ಯವಾಗುತ್ತಾನೆ. ಅಲ್ಲದೆ ಹೆಂಗಸಿನ ವಿಷಯದಲ್ಲಿ ಪಾಪವಿನಾಶಕವಾದ ಮತ್ತೆ ಕೆಲವನ್ನು ಹೇಳುತ್ತೇನೆ. ಕೇಳು. ಪುಣ್ಯದಿನಗಳಲ್ಲಿ ಬ್ರಾಹ್ಮಣನಿಗೆ ಬೀಜಗಳ ದಾನದಿಂದಲೂ, ಉದಕುಂಭವನ್ನು ದಾನಮಾಡುವುದರಿಂದಲೂ ಪಾಪಗಳು ಹೋಗುತ್ತವೆ. ಆಯಾಯ ಕಾಲದಲ್ಲಿ ಆಯಾಯ ಧಾನ್ಯಗಳನ್ನು ಕೊಟ್ಟರೆ ಸರ್ವಪಾಪಗಳೂ ಹೋಗುತ್ತವೆ. ಅಕ್ಷಯವಾದ ಸ್ವರ್ಗವೂ ಸಿಕ್ಕುತ್ತದೆ. ಎಲೈ ನಾರದನೇ! ಹೆಂಗಸರಿಗಿರುವ ದೃಢವಾದ ಗುಣಗಳನ್ನು ಹೇಳುತ್ತೇನೆ. ಕೇಳು.

೬೩. ಅವಳು ಒಳ್ಳೆಯ ವಂಶದಲ್ಲಿ ಹುಟ್ಟಿದ್ದರೆ ಗಂಡನಲ್ಲಿ ಯಾವಾಗಲೂ ಲಕ್ಷ್ಮಿ ಇದ್ದು ಎರಡುಕಡೆಯ ವಂಶಕ್ಕೂ ಗಂಡಹೆಂಡರಿಗೂ ಸ್ವರ್ಗವು ಸಿಕ್ಕುತ್ತದೆ.

೬೪. ಇದನ್ನು ಕೇಳುತ್ತ ಪತಿವ್ರತೆಯ ಗುಣವನ್ನು ಕೇಳುವುದನ್ನೇ ಮರೆತಿದ್ದೀಯೆ ಲೋಕಹಿತವಾದ ಆ ಪತಿವ್ರತೆಯ ಗುಣಗಳನ್ನು ಹೇಳುತ್ತೇನೆ.

ಉಷಿತ್ವಾ ಪೂರ್ವಕಾಲಂ ಚ ಪುಣ್ಯಾ ಪುಣ್ಯೇನ ಯೋಷಿತಃ ।
ಪಶ್ಚಾತ್ಪತಿವ್ರತಾಯಾಶ್ಚ ತಾಶ್ಚ ಗಚ್ಛಂತಿ ಮದ್ಗತಿಂ ॥ ೬೫ ॥

ಷಣ್ಮಾಸಂ ವಾಥ ವರ್ಷಂ ವಾ ಅಧಿಕಂ ಚ ಪ್ರಶಸ್ಯತೇ ।
ಪತಿವ್ರತಾ ಭವೇದ್ಯಾ ಚ ಯಾವತ್ಪೂತಾ ವ್ರಜೇದ್ದಿವಂ ॥ ೬೬ ॥

ಸುರಾಪಂ ವಿಪ್ರಹನ್ತಾರಂ ಸರ್ವಪಾಪಯುತಂ ಪತಿಂ ।
ಪಂಕಾತ್ಪೂತಂ ನಯೇತ್ಸ್ವರ್ಗಂ ಭರ್ತಾರಂ ಯಾನುಗಚ್ಛತಿ ॥ ೬೭ ॥

ಪಶ್ಚಾನ್ಮೃತಂ ಪತಿಂ ಗಚ್ಛೇತ್ತಸ್ಯಾಃ ಸ್ವರ್ಗಸ್ಯ ನಿಶ್ಚಯಃ ।
ತಿಸ್ರಃ ಕೋಟ್ಯೋರ್ಧಕೋಟೀ ಚ ಯಾವಲ್ಲೋಮಾನಿ ಮಾನುಷೇ ॥೬೮॥

ತಾವತ್ಕಾಲೇ ವಸೇತ್ಸ್ವರ್ಗೇ ಭರ್ತಾರಂ ಯಾನುಗಚ್ಛತಿ ।
ಕಂದರ್ಪಸದೃಶೋ ಭರ್ತಾ ಸಾ ರತೀವ ಮನೋರಮಾ ॥ ೬೯ ॥

ಜಿಷ್ಣೋರೇವ ಚಿರಂ ಲೋಕೇ ಭುಂಕ್ತೇಽನಂತಮಯಂ ಸುಖಂ ।
ಪತಿವ್ರತಾ ಬಲಾದ್ಯಾ ಚ ವಿದೂರೇ ಸ್ವಾಮಿಪಾತನೇ ॥ ೭೦ ॥

---

೬೫. ಪತಿವ್ರತೆಯರಾದವರು ಪುಣ್ಯದಿಂದ ಮೊದಲು ಪುಣ್ಯವಂತರೊಡನೆ ಭೋಗಗಳನ್ನು ಅನುಭವಿಸುತ್ತಿದ್ದು ಅನಂತರ ನನ್ನ ಸಮೀಪಕ್ಕೆ ಬರುತ್ತಾರೆ.

೬೬. ಪತಿವ್ರತೆಯಾದವಳು ಅಯೋಗ್ಯನಾದ ಗಂಡನೊಡನೆ ಆರು ತಿಂಗಳು ಅಥವಾ ಒಂದು ವರ್ಷ ಇಲ್ಲವೇ ಇನ್ನೂ ಹೆಚ್ಚು ದಿನಗಳು ಇದ್ದರೆ ಆ ಗಂಡನನ್ನು ಉದ್ಧಾರಮಾಡಿ ತಾನೂ ಸ್ವರ್ಗಕ್ಕೆ ಹೋಗುತ್ತಾಳೆ.

೬೭. ಗಂಡನು ಸುರಾಪಾನ ಮಾಡುತ್ತಿರಲಿ, ಬ್ರಹ್ಮಹತ್ಯೆ ಮಾಡಿರಲಿ, ಎಲ್ಲಾ ಪಾಪಗಳಿಂದಲೂ ಕೂಡಿರಲಿ, ಅವನನ್ನು ಆ ಪಾಪಗಳಿಂದ ತೊಳೆದು ಪ್ರತಿವತೆಯು ಜೊತೆಯಲ್ಲಿ ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಾಳೆ.

೬೮-೭೩. ಅನಂತರ ಗಂಡನು ಸತ್ತಮೇಲೆ ಜೊತೆಯಲ್ಲಿಯೇ ಸಹಗಮನ ಮಾಡಿ ಪ್ರಾಣಬಿಡಬೇಕು. ಹಾಗೆ ಮಾಡಿದರೆ ಮೂರೂವರೆ ಕೋಟಿ ವರ್ಷಗಳು ಸ್ವರ್ಗದಲ್ಲಿ ಸುಖಿಸುತ್ತಾಳೆ. ಆಕೆಯು ರತಿಯಂತೆಯೂ, ಗಂಡನು ಮನ್ಮಥನಂತೆಯೂ ಸುಂದರನಾಗಿ ವಿಷ್ಣುವಿನ ಲೋಕದಲ್ಲಿ ಬಹುಕಾಲ ಸುಖವನ್ನು ಅನುಭವಿಸುತ್ತಾರೆ. ಸ್ವಾಮಿಯು ದೂರದಲ್ಲಿ ಸತ್ತರೆ ಪತಿವ್ರತೆಯಾದವಳು. ಅವನ ಚಿಹ್ನೆಯನ್ನು ಹಿಡಿದು

ಚಿಹ್ನಂ ಲಬ್ಧ್ವಾ ಮೃತಾ ವಹ್ನೌ ಪಾಪಾದುದ್ಧರತೇ ಪತಿಂ ।
ಪತಿವ್ರತಾ ಚ ಯಾ ನಾರೀ ಪತೌ ದೇಶಾಂತರೇ ಮೃತೇ ॥ ೭೧ ॥

ಸಾ ಭರ್ತುಶ್ಚಿಹ್ನಮಾದಾಯ ವಹ್ನೌ ಸುಪ್ತ್ವಾ ದಿವಂ ವ್ರಜೇತ್ ।
ಯಾ ಸ್ತ್ರೀ ಬ್ರಾಹ್ಮಣಜಾತೀಯಮ್ಮೃತಂ ಪತಿಮನುವ್ರಜೇತ್ ॥ ೭೨ ॥

ಸಾ ಸ್ವರ್ಗಮಾತ್ಮಘಾತೇನ ನಾತ್ಮಾನಂ ನ ಪತಿಂ ನಯೇತ್ ।
ನ ಮ್ರಿಯೇತ ಸಮಂ ಭರ್ತ್ರಾ ಬ್ರಾಹ್ಮಣೀ ಬ್ರಹ್ಮಶಾಸನಾತ್ ॥
ಪ್ರವ್ರಜ್ಯಾಗತಿಮಾಪ್ನೋತಿ ಮರಣಾದಾತ್ಮಘಾತಿನೀ ॥ ೭೩ ॥

॥ ನರೋತ್ತಮ ಉವಾಚ ॥

ಸರ್ವಾಸಾಮಪಿ ಜಾತೀನಾಂ ಬ್ರಾಹ್ಮಣಃ ಶಸ್ಯ ಇಷ್ಯತೇ ।
ಪುಣ್ಯಂ ಚ ದ್ವಿಜಮುಖ್ಯೇನ ಅತ್ರ ಕಿಂ ವಾ ವಿಪರ್ಯಯಃ ॥ ೭೪ ॥

॥ ಭಗವಾನುವಾಚ ॥

ಬ್ರಾಹ್ಮಣ್ಯಾಸ್ಸಾಹಸಂ ಕರ್ಮ ನೈವ ಯುಕ್ತಂ ಕದಾಚನ ।
ನಿಶ್ಶೇಷೇಸ್ಯಾವಧಂ ಕೃತ್ವಾ ಸ ನರೋ ಬ್ರಹ್ಮಹಾ ಭವೇತ್ ॥ ೭೫ ॥

---

ಬೆಂಕಿಯಲ್ಲಿ ಪ್ರಾಣಬಿಡಬೇಕು. ಆಗ ಗಂಡನನ್ನು ಉದ್ಧಾರಮಾಡುತ್ತಾಳೆ. ತಾನೂ ಒಳ್ಳೆಯ ಗತಿಯನ್ನು ಹೊಂದುತ್ತಾಳೆ. ಆ ಗಂಡನು ಬೇರೆ ದೇಶದಲ್ಲಿ ಸತ್ತರೂ, ಪತಿವ್ರತೆಯಾದವಳು ಗಂಡನ ಚಿಹ್ನೆಯನ್ನು ಹೊಂದಿ ಬೆಂಕಿಯಲ್ಲಿ ಬಿದ್ದು ಸತ್ತರೆ ಸ್ವರ್ಗವನ್ನು ಹೊಂದುತ್ತಾಳೆ. ಬ್ರಾಹ್ಮಣಳಾದ ಸ್ತ್ರೀಯು ಗಂಡನು ಸತ್ತರೆ ಆಗ ತಾನೂ ಜೊತೆಯಲ್ಲಿ ಸತ್ತರೆ ಅವಳು ತಾನೂ ಸ್ವರ್ಗವನ್ನು ಹೊಂದದೆ ಗಂಡನಿಗೂ ಸ್ವರ್ಗವನ್ನು ಹೊಂದಿಸುವುದಿಲ್ಲ. ಆಕೆಗೆ ಆತ್ಮಘಾತದೋಷವು ಬರುತ್ತದೆ.

೭೩. ಬ್ರಾಹ್ಮಣಸ್ತ್ರೀಯು ಬ್ರಹ್ಮನ ಅಪ್ಪಣೆಯಂತೆ ಗಂಡನೊಡನೆ ಸಾಯದೆ ಯತಿಯಂತಿರಬೇಕು. ಜೊತೆಯಲ್ಲಿ ಸತ್ತರೆ ಆತ್ಮಹತ್ಯೆದೋಷವು ಬರುತ್ತದೆ.

೭೪. ನರೋತ್ತಮನು ಹೇಳಿದನು- ಎಲ್ಲಾ ಜಾತಿಗಳಲ್ಲಿಯೂ ಬ್ರಾಹ್ಮಣನು ಶ್ರೇಷ್ಠನೆನಿಸಿಕೊಂಡಿದ್ದಾನೆ. ಪುಣ್ಯವು ಬರಬೇಕಾದರೆ ಬ್ರಾಹ್ಮಣಶ್ರೇಷ್ಠನಿಂದಲೇ ಈ ವಿಷಯದಲ್ಲೇಕೆ ಸಹಗಮನಮಾಡಬಾರದು ?

೭೫. ಭಗವಂತನು ಹೇಳಿದನು- ಬ್ರಾಹ್ಮಣ ಸ್ತ್ರೀಯು ಸಾಹಸಕರ್ಮವನ್ನು ಯಾವಾಗಲೂ ಮಾಡಬಾರದು. ಇವಳನ್ನು ಕೊಂದರೂ, ಇವಳು ಜೊತೆಯಲ್ಲಿ ಸತ್ತರೂ ಆತನಿಗೆ ಬ್ರಹ್ಮಹತ್ಯೆ ಬರುತ್ತದೆ.

ತಸ್ಮಾದ್ಬ್ರಾಹ್ಮಣಜಾತೀಯಾ ವಿಪ್ರ ಯಾ ಚ ವ್ರತಂ ಚರೇತ್ ।
ಪ್ರವಕ್ಷ್ಯಾಮಿ ಯಥಾ ತಥ್ಯಂ ಶೃಣು ವಿಪ್ರ ಯಥಾರ್ಥತಃ ॥ ೭೬ ॥

ಆಪಣಾನ್ತರಮಾಮಿಷ್ಯಂ ಭಕ್ಷಯೇನ್ನ ಕದಾಚನ ।
ಅಶ್ವಮೇಧಸಹಸ್ರಾಣಾಂ ಹಾಯನೇ ಫಲಮಾಪ್ನುಯಾತ್ ॥ ೭೭ ॥

ಅರ್ಚಣಂ ಚೇಷ್ಟದೇವಸ್ಯ ಹರೇರ್ವ್ರತಮನುತ್ತಮಂ ।
ಸ್ವಾಮಿನೋಽಪ್ಯಂಜಲಿಂ ಪಿಂಡಂ ಸಂಪ್ರದದ್ಯಾದಮತ್ಸರಾತ್ ॥ ೭೮ ॥

ಯುಗಕೋಟಿಸಹಸ್ರಾಣಿ ಯುಗಕೋಟಿ ಶತಾನಿ ಚ ।
ಪತಿನಾ ಸಹಸಾ ಸಾಧ್ವೀ ವಿಷ್ಣುಲೋಕೇ ಯುತಾ ಭವೇತ್ ॥ ೭೯ ॥

ತತೋ ಮಹಾವ್ರತಂ ಪ್ರಾಪ್ಯ ನಿರಯೇ ಬ್ರಾಹ್ಮಣೀ ವಧೂಃ ।
ಉದ್ಧರೇದುಭಯೋರ್ವಂಶಾನ್ಯತಶೋಽಥ ಸಹಸ್ರಶಃ ॥ ೮೦ ॥

ಅತೋ ಬಂಧುಜನೈರೇವ ಪುತ್ರೈರ್ಭ್ರಾತ್ರಾದಿಭಿರ್ಬುಧೈಃ ।
ವಿನಿಯಮ್ಯ ಸದಾ ತಸ್ಯಾ ವ್ರತಲೋಪಂ ನ ಕಾರಯೇತ್ ॥ ೮೧ ॥

---

೭೬. ಬ್ರಾಹ್ಮಣ ಜಾತಿಯವಳು ವ್ರತವನ್ನು ಮಾಡುತ್ತಾಳೆ. ಆದ್ದರಿಂದ ಅವಳು ಸಾಯಕೂಡದು. ಅವಳ ವ್ರತಗಳನ್ನು ಯಥಾರ್ಥವಾಗಿ ಹೇಳುತ್ತೇನೆ. ಕೇಳು.

೭೭. ಅಂಗಡಿಯಲ್ಲಿರುವ ಸಿಹಿ ಪದಾರ್ಥಗಳನ್ನು ತಂದು ತಿನ್ನಕೂಡದು. ಹೀಗಿದ್ದರೆ ಒಂದು ವರ್ಷದಲ್ಲಿ ಸಾವಿರ ಅಶ್ವಮೇಧಗಳ ಫಲವು ಬರುತ್ತದೆ.

೭೮. ಇಷ್ಟ ದೇವರಿಗೆ ಪೂಜೆಮಾಡಬೇಕು. ಹರಿಯು ವ್ರತಗಳನ್ನು ಮಾಡುತ್ತಿರಬೇಕು. ಗಂಡನಿಗೆ ತರ್ಪಣ ಪಿಂಡಗಳನ್ನು ವಿಶ್ವಾಸದಿಂದ ಕೊಡಬೇಕು.

೭೯. ಅನಂತರ ಸತ್ತಮೇಲೆ ವಿಷ್ಣುಲೋಕದಲ್ಲಿ ಕೋಟಿಸಾವಿರ ಯುಗಗಳು ಮತ್ತು ಕೋಟಿನೂರು ಯುಗಗಳವರೆಗೂ ಅಲ್ಲಿ ಸುಖಿಸುತ್ತಾಳೆ.

೮೦. ಮಹಾವ್ರತವನ್ನು ಹೊಂದಿದ ಈ ಸ್ತ್ರೀಯು ನರಕದಲ್ಲಿರುವ ಎರಡು ವಂಶಗಳನ್ನೂ ಸಾವಿರಗಟ್ಟಲೆಯಲ್ಲಿ ಉದ್ಧಾರಮಾಡುತ್ತಾಳೆ.

೮೧. ಆದ್ದರಿಂದ ಬಂಧುಗಳೂ, ಮಕ್ಕಳೂ, ಅಣ್ಣ ತಮ್ಮಂದಿರೂ, ಯಾರೇ ಆಗಲಿ ಅವಳನ್ನು ಅಂಕೆಯಲ್ಲಿರಿಸಿ ವ್ರತಲೋಪವಾಗದಂತೆ ನೋಡಿ ಕಾಪಾಡಬೇಕು.

ಹರೇಶ್ಚ ವಾಸರಂ ಪ್ರಾಪ್ಯ ವಿಧವಾ ನ ವ್ರತಂ ಚರೇತ್ ।
ಪುನರ್ವೈಧವ್ಯತಾಮೇತಿ ಜನ್ಮಜನ್ಮನಿ ದುರ್ಭಗಾ ॥ ೮೨ ॥

ಭೋಜನಾನ್ಮತ್ಸ್ಯಮಾಂಸಸ್ಯ ವ್ರತಾನಾಂ ವಿಪ್ರಯೋಗತಃ ।
ಚಿರಂ ನಿರಯಮಾಸಾದ್ಯ ಶುನೀ ಭವತಿ ನಿಶ್ಚಿತಂ ॥ ೮೩ ॥

ದುಷ್ಟಾ ಯಾ ಮೈಥುನಂ ಗಚ್ಛೇದ್ವಿಧವಾ ಕುಲನಾಶಿನೀ ।
ನರಕಾನನುಭೂಯಾಥ ಗೃಧ್ರಿಣೀ ದಶ ಜನ್ಮಸು ॥ ೮೪ ॥

ದ್ವಿಜನ್ಮಫೇರವಾ ಭೂತ್ವಾ ತತೋ ಮಾನುಷತಾಂ ವ್ರಜೇತ್ ।
ತತ್ರೈವಬಾಲವೈಧವ್ಯಾದ್ದಾಸೀತ್ವಮುಪಗಚ್ಛತಿ ॥ ೮೫ ॥

॥ ದ್ವಿಜ ಉವಾಚ ॥

ಕನ್ಯಾದಾನಫಲಂ ಬ್ರೂಹಿ ವದ ದಾಸ್ಯಾಃ ಫಲಂ ಚ ಯತ್ ।
ವಿಧಾನಂ ಚ ಯಥೋಕ್ತಂ ಚ ಯದಿತೇನುಗ್ರಹಃ ಪ್ರಭೋ ॥ ೮೬ ॥

---

೮೨. ಹರಿವಾಸರ, ಏಕಾದಶಿ ಮುಂತಾದುವುಗಳಲ್ಲಿ ತಿನ್ನುತ್ತ ವ್ರತಲೋಪಗಳನ್ನು ಮಾಡಿಕೊಂಡರೆ ಆ ವಿಧವೆಯು ಮತ್ತೆ ಜನ್ಮ ಜನ್ಮದಲ್ಲಿಯೂ, ವೈಧವ್ಯವನ್ನು ಹೊಂದಿ ದುಃಖವನ್ನು ಪಡುತ್ತಾಳೆ.

೮೩. ಮೀನು, ಮಾಂಸ ಮುಂತಾದುವುಗಳನ್ನು ತಿನ್ನುತ್ತಾ ವ್ರತಲೋಪಗಳನ್ನು ಮಾಡಿಕೊಂಡಿದ್ದರೆ ಬಹುದಿವಸ ನರಕದಲ್ಲಿದ್ದು ಅನಂತರ ನಾಯಿಯಾಗಿ ಹುಟ್ಟುತ್ತಾಳೆ.

೮೪. ವಿಧವೆಯಾದವಳು ಮೈಥುನವನ್ನು ಹೊಂದಿದರೆ ಅನಂತರ ಅವಳು ನರಕವನ್ನು ಅನುಭವಿಸಿ ಹತ್ತು ಜನ್ಮಗಳವರೆಗೂ ಹದ್ದಾಗಿ ಹುಟ್ಟುತ್ತಾಳೆ.

೮೫. ಎರಡು ಜನ್ಮಗಳವರೆಗೆ ನರಿಯಾಗಿ ಹುಟ್ಟಿ ಅನಂತರ ಮನುಷ್ಯಳಾಗಿ ಅದರಲ್ಲಿಯೂ ಬಾಲ್ಯದಲ್ಲಿಯೇ ವಿಧವೆಯಾಗಿ ಆಳಾಗಿ ಇರುತ್ತಾಳೆ.

೮೬. ದ್ವಿಜನು ಹೇಳಿದನು– ಕನ್ಯಾದಾನದ ಫಲವೇನು? ದಾಸಿಯ ಫಲವೇನು? ಅದರ ವಿಧಾನಗಳನ್ನು ಕ್ರಮವಾಗಿ ಹೇಳು.

॥ ಶ್ರೀ ಭಗವಾನುವಾಚ ॥

ರೂಪಾಢ್ಯೇ ಗುಣಸಂಪನ್ನೇ ಕುಲೀನೇ ಯೌವನಾನ್ವಿತೇ ।
ಸಮೃದ್ಧೇ ವೃತ್ತಸಂಪೂರ್ಣೇ ಕನ್ಯಾದಾನಫಲಂ ಶೃಣು ॥ ೮೭ ॥

ಸರ್ವಾಭರಣಸಂಯುಕ್ತಾಂ ಕನ್ಯಕಾಂ ಯೋ ದದಾತಿ ಚ ।
ತೇನ ದತ್ತಾ ಧರಾ ಸರ್ವಾ ಸಶೈಲವನಕಾನನಾ ॥ ೮೮ ॥

ಅರ್ಧಾಭರಣದಾನೇನ ಫಲಂ ದಾತುರ್ಭವೇದ್ಧ್ರುವಂ ।
ಅನಾಭರಣಕನ್ಯಾಯಾಃ ಪಾದೈಕಸ್ಯ ಫಲಂ ಭವೇತ್ ॥ ೮೯ ॥

ಯಃ ಪುನಶ್ಶುಲ್ಕಮಶ್ನಾತಿ ಸ ಯಾತಿ ನರಕೇ ನರಃ ।
ವಿಕ್ರೀತ್ವಾ ಚಾತ್ಮಜಾಂ ಮೂಢೋ ನರಕಾನ್ನನಿವರ್ತತೇ ॥ ೯೦ ॥

ಲೋಭಾದಸದೃಶೇ ಪುಂಸಿ ಕನ್ಯಾಂ ಯಸ್ತು ಪ್ರಯಚ್ಛತಿ ।
ರೌರವಂ ನರಕಂ ಪ್ರಾಪ್ಯ ಚಾಂಡಾಲತ್ವಂ ಚ ಗಚ್ಛತಿ ॥ ೯೧ ॥

---

೮೭. ಭಗವಂತನು ಹೇಳಿದನು- ರೂಪವಂತ, ಗುಣವಂತ, ಕುಲೀನ, ಯುವಕ ಎಲ್ಲವನ್ನೂ ಉಳ್ಳವನು. ಸುಚರಿತ್ರೆಯುಳ್ಳವನು. ಇತರರಿಗೆ ಕನ್ಯಾ ದಾನವನ್ನು ಮಾಡಿದರೆ ಬರುವ ಫಲವನ್ನು ಹೇಳುತ್ತೇನೆ. ಕೇಳು.

೮೮. ಆಭರಣಗಳಿಂದ ಕೂಡಿದ ಕನ್ನಿಕೆಯನ್ನು ದಾನಮಾಡಿದರೆ ಬೆಟ್ಟ, ವನ ಕಾಡುಗಳಿಂದ ಕೂಡಿದ ಭೂಮಿಯನ್ನು ದಾನಮಾಡಿದ ಫಲವು ಬರುತ್ತದೆ.

೮೯. ಆಭರಣಗಳನ್ನು ತೊಡಿಸಿ ದಾನಮಾಡಿದರೆ ದಾತೃವಿಗೆ ಫಲವು ಬರುತ್ತದೆ. ಆಭರಣವಿಲ್ಲದ ಕನ್ಯೆಯನ್ನು ದಾನಮಾಡಿದರೆ ಕಾಲುಪಾಲು ಫಲವು ಬರುತ್ತದೆ.

೯೦. ಕನ್ಯಾದಕ್ಷಿಣೆಯನ್ನು ತೆಗೆದುಕೊಂಡರೆ ನರಕ ಪ್ರಾಪ್ತಿಯಾಗುತ್ತದೆ. ಮಗಳನ್ನು ಮಾರಿದರೆ ಅವನು ನರಕದಿಂದ ಹೊರಗೆ ಬರುವುದೇ ಇಲ್ಲ.

೯೧. ಏನೋ ಆಸೆಯಿಂದ ಅಯೋಗ್ಯನಾದವನಿಗೆ ಮಗಳನ್ನು ದಾನಮಾಡಿ ದರೆ ರೌರವನರಕವನ್ನು ಹೊಂದಿ ಹುಟ್ಟಿದರೆ ಚಂಡಾಲಜಾತಿಯಲ್ಲಿ ಹುಟ್ಟುತ್ತಾನೆ.

ಅತ ಏವ ಹಿ ಶುಲ್ಕಂ ಚ ಜಾಮಾತುರ್ನ ಕದಾಚನ ।
ಗೃಹ್ಣಾತಿ ಮನಸಾ ಪ್ರಾಜ್ಞೋ ಯದ್ದತ್ತಂ ತಸ್ಯ ಚಾಕ್ಷಯಂ ॥ ೯೨ ॥

ಭೂಮಿಂ ಗಾಂ ಚ ಹಿರಣ್ಯಂ ಚ ಧನಂ ವಸ್ತ್ರಂ ಚ ಧಾನ್ಯಕಂ ।
ಜಾಮಾತು ರ್ಯೌತಕಂ ದತ್ವಾ ಸರ್ವಂ ಭವತಿ ಚಾಕ್ಷಯಂ ॥ ೯೩ ॥

ವಿವಾಹಸಮಯೇ ವತ್ಸ ಸಗೋತ್ರಪರಗೋತ್ರಜೈಃ ।
ಯೌತಕಂ ದೀಯತೇ ಕಿಂಚಿತ್ತತ್ಸರ್ವಂ ಅಕ್ಷಯಂ ಭವೇತ್ ॥ ೯೪ ॥

ದಾತಾ ನ ಸ್ಮರತೇ ದಾನಂ ಪ್ರತಿಗ್ರಾಹೀ ನ ಯಾಚತೇ ।
ಉಭೌ ತೌ ನರಕಂ ಯಾತಶ್ಛಿನ್ನರಜ್ಜುರ್ಘಟೋ ಯಥಾ ॥ ೯೫ ॥

ಅವಶ್ಯಂ ಯೌತಕಂ ದಾನಂ ದಾತವ್ಯಂ ಸಾತ್ವಿಕೇನ ಹಿ ।
ಅದತ್ವಾ ನರಕಂ ಪ್ರಾಪ್ಯ ದಾಸೀತ್ವಮುಪಗಚ್ಛತಿ ॥ ೯೬ ॥

---

೯೨. ಅಳಿಯನೂ ಕೂಡ ಕುಶನ್ಯಾಲ್ಕವನ್ನು ತೆಗೆದುಕೊಳ್ಳಕೂಡದು. ದಾತೃವು ಒಂದು ವೇಳೆ ಕೊಟ್ಟರೆ ಅದಕ್ಕೆ ಅಕ್ಷಯ ಫಲವು ಬರುತ್ತದೆ.

೯೩. ಭೂಮಿ, ಗೋವು, ಸುವರ್ಣ, ಧನ, ವಸ್ತ್ರ, ಧಾನ್ಯ ಇವುಗಳನ್ನು ಏನನ್ನು ಅಳಿಯನಿಗೆ ಕೊಟ್ಟರೂ ಅಕ್ಷಯ ಫಲವು ಬರುತ್ತದೆ.

೯೪. ಸಗೋತ್ರದವರಾಗಲಿ, ಪರಗೋತ್ರದವರಾಗಲಿ, ಮದುವೆಯ ಸಮಯದಲ್ಲಿ ವರಕನ್ನಿಕೆಯರಿಗೆ ಏನನ್ನು ಕೊಟ್ಟರೂ ಅದು ಅಕ್ಷಯ ಫಲವನ್ನು ಕೊಡುತ್ತದೆ

೯೫. ದಾನಮಾಡುವವನು ದಾನವನ್ನು ಕೊಟ್ಟನೆಂದು ಎನ್ನಬಾರದು. ತೆಗೆದುಕೊಳ್ಳುವವನು ಯಾಚಿಸಬಾರದು ಹಾಗೆ ಮಾಡಿದರೆ ಇಬ್ಬರೂ ಹಗ್ಗದಿಂದ ಕಳಚಿ ಹೋದ ಬಿಂದಿಗೆಯು ಕೆಳಗೆ ಬೀಳುವಂತ ನರಕದಲ್ಲಿ ಬೀಳುತ್ತಾರೆ.

೯೬. ಆದ್ದರಿಂದ ವಿವಾಹಸಮಯದಲ್ಲಿ ಕನ್ಯಾದಾನ ಮಾಡುವವನು ಖಂಡಿತವಾಗಿ ಅವನಿಗೆ ದಾನಮಾಡಬೇಕು ಹಾಗೆ ಮಾಡದಿದ್ದರೆ ದಾಸರಾಗುತ್ತಾರೆ.

ಅತ್ಯಶನೇ ವಿದೂರಸ್ಥೇ ಅನಾಢ್ಯೇಚಾತಿದುರ್ಜನೇ ।
ಕುಲಹೀನೇ ಚ ಮೂರ್ಖೇ ಚ ಷಟ್ಸು ಕನ್ಯಾ ನ ದೀಯತೇ ॥ ೯೭ ॥

ಅತಿವೃದ್ಧೇ ಚಾತಿದೀನೇ ರೋಗಿಣೇ ದೇಶವಾಸಿನಿ ।
ಅತಿಕ್ರುದ್ಧೇಪ್ಯಸಂತುಷ್ಟೇ ಷಟ್ಸು ಕನ್ಯಾ ನ ದೀಯತೇ ॥ ೯೮ ॥

ಏತೇಭ್ಯಃ ಕನ್ಯಕಾಂ ದತ್ವಾ ನರಕಂ ಚಾಧಿಗಚ್ಛತಿ ।
ಲೋಭಾತ್ಸಂಮಾನಲಾಭಾಚ್ಚ ಕನ್ಯಕಾಪರಿವರ್ತನಾತ್ ॥ ೯೯ ॥

ಮುನೀನಾಂ ಪ್ರೇಯಸೀಂ ನಾರೀಂ ಯುವತೀಂ ರೂಪಶಾಲಿನೀಂ ।
ಸಾಲಂಕಾರಾಂ ಸ ಶಯ್ಯಾಂ ಚ ದತ್ವಾನಂತಫಲಂ ಲಭೇತ್ ॥ ೧೦೦ ॥

ಅನಯೋಶ್ಚ ಫಲಂ ತುಲ್ಯಂ ಯುವತೀ ಕನ್ಯಯೋರಪಿ ।
ಏಕಾ ವರಾಯ ದಾತವ್ಯಾ ಅಪರಾ ಬ್ರಾಹ್ಮಣಾಯ ತು ॥ ೧೦೧ ॥

---

೯೭. ಬಹು ತಿನ್ನುವವರಿಗೆ, ದೂರದಲ್ಲಿರುವವನಿಗೆ, ಬಡವನಿಗೆ, ದುಷ್ಟನಿಗೆ, ಕುಲಹೀನನಿಗೆ, ಮೂರ್ಖನಿಗೆ, ಈ ಆರು ಜನಗಳಿಗೂ, ಮಗಳನ್ನು ದಾನ ಮಾಡಬಾರದು.

೯೮. ಬಹು ಮುದುಕ, ಬಹು ದುಃಖಿ, ರೋಗಿಯಾಗಿರುವವನು, ಯಾವಾಗಲೂ ಸಂಚಾರಶೀಲನು, ಬಹುಕೋಪಿ, ಸಂತೋಷವಿಲ್ಲದವನು, ಈ ಆರು ಜನರಿಗೂ ಮಗಳನ್ನು ದಾನಮಾಡಬಾರದು.

೯೯-೧೦೦. ಆಸೆಯಿಂದಲಾಗಲಿ, ಹಟಕ್ಕೋಸ್ಕರವಾಗಲಿ ಹೆಣ್ಣನ್ನು ಕೊಟ್ಟು ಅದಕ್ಕೆ ಬದಲನ್ನು ತರುವುದಕ್ಕಾಗಿ ಉದ್ದೇಶಪಟ್ಟು ಇವರಿಗೆ ಕನ್ಯಾದಾನವನ್ನು ಮಾಡಿದರೆ ನರಕವನ್ನು ಹೊಂದುತ್ತಾನೆ. ಮುನಿಗಳಿಗೆ ಇಷ್ಟಳಾದ ಯುವತಿಯೂ, ಸುಂದರಿಯೂ. ಆದ ಕನ್ಯೆಯನ್ನೇ ಅಲಂಕರಿಸಿ ಹಾಸಿಗೆಯನ್ನೂ ಜೊತೆಯಲ್ಲಿ ದಾನ ಮಾಡಿದರೆ ಅನಂತವಾದ ಫಲವನ್ನು ಹೊಂದುತ್ತಾನೆ.

೧೦೧. ಯುವತಿ ಕನ್ಯೆಯರನ್ನು, ದಾನಮಾಡಿದರೆ ಇಬ್ಬರಿಗೂ ಒಂದೇ ಬಗೆಯಾದ ಫಲವು ಬರುತ್ತದೆ. ಕನ್ಯೆಯನ್ನು ವರನಿಗೆ ಕೊಡಬೇಕು. ಯುವತಿಯನ್ನು ಬ್ರಾಹ್ಮಣನಿಗೆ ಕೊಡಬೇಕು.

ಕ್ರೀತಾ ದೇವಾಯ ದಾತವ್ಯಾ ಧೀರೇಣಾಕ್ಲಿಷ್ಟಕರ್ಮಣಾ ।
ಕಲ್ಪಕಾಲಂ ಭವೇತ್ಸ್ವರ್ಗೋ ನೃಪೋ ವಾ ತೌ ಮಹಾಧನೀ　　॥ ೧೦೨ ॥
ಜನ್ಮ ಜನ್ಮನಿ ಸ ಲಭೇತ್ಸುಪತ್ನೀಂ ವರವರ್ಣಿನೀಂ ।
ಯ ಇದಂ ಶೃಣುಯಾನ್ನಿತ್ಯಂ ಪುಣ್ಯಾಖ್ಯಾನಮನುತ್ತಮಂ　　॥ ೧೦೩ ॥
ಸರ್ವಪಾಪಕ್ಷಯಸ್ತಸ್ಯ ಸರ್ವಶಾಸ್ತ್ರಾರ್ಥಪಾರಗಃ ।
ಲಭತೇ ಚಾಕ್ಷಯಂ ಸ್ವರ್ಗಂ ನಾರೀಣಾಂ ವಲ್ಲಭೋ ಭವೇತ್　　॥ ೧೦೪ ॥
ಕ್ಷತ್ರಿಯೋ ವಿಜಯಂ ಪ್ರಾಪ್ಯ ಲೋಕಾನಾಥೋ ಭವೇದ್ಧ್ರುವಂ ।
ಶ್ರುತಂ ಹರತಿ ಪಾಪಾನಿ ಜನ್ಮ ಜನ್ಮಕೃತಾನಿ ಚ ।
ಸೌಭಾಗ್ಯಂ ಲಭತೇ ಲೋಕೇ ತಥೈವ ಚ ವರಾಂಗನಾಃ　　॥ ೧೦೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪಂಚಾಖ್ಯಾನೆ ಸ್ತ್ರೀಣಾ
॥ ಮಾಖ್ಯಾನಂ ನಾಮ ಪಂಚಾಶತ್ತಮೋಽಧ್ಯಾಯಃ ॥

---

೧೦೨. ಬೆಲೆಗೆ ತೆಗೆದುಕೊಂಡವಳನ್ನು ದೇವರಿಗೆ ಬಿಡಬೇಕು! ಅದರಿಂದ ಕಲ್ಪಕಾಲದವರೆಗೂ ಸ್ವರ್ಗದಲ್ಲಿದ್ದು ಭೂಮಿಯಲ್ಲಿ ರಾಜನಾಗಿಯಾಗಲಿ, ಧನಿಕನಾಗಿಯಾಗಲಿ ಹುಟ್ಟುತ್ತಾನೆ

೧೦೩-೧೦೪. ಜನ್ಮಜನ್ಮದಲ್ಲಿಯೂ ಅವನು ಸುಂದರಿಯಾದ ಒಳ್ಳೆಯ ಹೆಂಡತಿಯನ್ನು ಹೊಂದುತ್ತಾನೆ. ಯಾವನು ಈ ಅತಿ ಪವಿತ್ರವಾಗಿಯೂ, ಪುಣ್ಯಾಖ್ಯಾನವಾಗಿಯೂ, ಇರುವ ಕಥೆಯನ್ನು ಕೇಳುತ್ತಾನೆಯೋ ಅವನು ಸಮಸ್ತವಾದ ಪಾಪಗಳನ್ನೂ ಕಳೆದುಕೊಂಡು ಎಲ್ಲಾ ಶಾಸ್ತ್ರ ಮತ್ತು ಶಾಸ್ತ್ರಾರ್ಥಗಳಲ್ಲಿ ಪಾರಗನಾಗಿ ನಾಶರಹಿತವಾದ ಸ್ವರ್ಗಲೋಕವನ್ನೂ ಹೊಂದಿ ಅಲ್ಲಿರುವ ಅಪ್ಸರಸ್ತ್ರೀಯರೇ ಮೊದಲಾದ ನಾರಿಯರಿಗೆಲ್ಲಾ (ಹೆಂಗಸರಿಗೆ) ವಲ್ಲಭನಾಗುತ್ತಾನೆ.

೧೦೫. ಕ್ಷತ್ರಿಯನು ಕೇಳಿದ ಪಕ್ಷದಲ್ಲಿ ಅವನು ವಿಜಯವನ್ನು ಹೊಂದಿ ಲೋಕನಾಥನಾಗುತ್ತಾನೆ. ನಿಶ್ಚಯವು. ಇದನ್ನು ಕೇಳಿದರೆ ಜನ್ಮಜನ್ಮದಲ್ಲಿ ಮಾಡಿದ ಪಾಪಗಳು ನಾಶವಾಗುತ್ತವೆ. ಸೌಭಾಗ್ಯವನ್ನು ಹೊಂದುತ್ತಾನೆ. ಮತ್ತು ಉತ್ತಮರಾದ ಸ್ತ್ರೀಯರನ್ನೂ ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದ ಪಂಚಾಖ್ಯಾನದಲ್ಲಿ ಸ್ತ್ರೀಯರ ಆಖ್ಯಾನವೆಂಬ ನಾಲ್ವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
## ॥ ಪಂಚಾಶತ್ತಮೋಽಧ್ಯಾಯಃ ॥



॥ ದ್ವಿಜ ಉವಾಚ ॥

ತುಲಾಧಾರಸ್ಯ ಚರಿತಂ ಪ್ರಭಾವಮತುಳಂ ಪ್ರಭೋ ।
ವಕ್ತುಮರ್ಹಸ್ಯಶೇಷೇಣ ಯದಿ ಮಯ್ಯಪ್ಯನುಗ್ರಹಃ ॥ ೧ ॥

॥ ಭಗವಾನುವಾಚ ॥

ಸತ್ಯಭಾವಾದಲೋಭಾಚ್ಚ ದದ್ಯಾದೇವಂ ತ್ವನುತ್ಸರಾತ್ ।
ನಿತ್ಯಂ ಯಜ್ಞಶತಂ ತಸ್ಯ ಸುನಿಷ್ಪನ್ನಂ ಸುದಕ್ಷಿಣಂ ॥ ೨ ॥

ಸತ್ಯೇನೋದಯತೇ ಸೂರ್ಯೋ ವಾತಿ ವಾತಸ್ತಥೈವ ಚ ।
ನ ಲಂಘಯೇತ್ಸಮುದ್ರಸ್ತು ಕೂರ್ಮೇಣ ಧರಣೀ ಯಥಾ ॥ ೩ ॥

---

### ಐವತ್ತನೆಯ ಅಧ್ಯಾಯವು

೧. ಬ್ರಾಹ್ಮಣನು ಹೇಳಿದನು- ಎಲೈ ಸ್ವಾಮಿಯೇ ! ನನ್ನಲ್ಲಿ ಅನುಗ್ರಹವಿದ್ದರೆ ತುಲಾಧಾರನ ಚರಿತ್ರೆಯನ್ನು ಪೂರ್ತಿಯಾಗಿ ಹೇಳು.

೨. ಸತ್ಯವನ್ನು ಪುರಸ್ಕರಿಸಿಕೊಂಡು ಲೋಭಮೋಹಗಳಿಲ್ಲದೆ ಯಾವನು ಹೀಗೆ ಕನ್ಯಾದಾನಮಾಡುವನೋ ಅವನಿಗೆ ಪೂರ್ತಿ ದಕ್ಷಿಣೆಯೊಡನೆ ಕೂಡಿದ ನೂರು ಯಜ್ಞಗಳ ಫಲವು ಬರುತ್ತದೆ.

೩. ಸತ್ಯದಿಂದಲೇ ಸೂರ್ಯನು ಹುಟ್ಟುತ್ತಾನೆ. ಸತ್ಯದಿಂದಲೇ ಗಾಳಿಯು ಬೀಸುತ್ತದೆ. ಸಮುದ್ರವು ಸತ್ಯದಿಂದಲೇ ಎಲ್ಲೆಯನ್ನು ಮೀರುತ್ತಿಲ್ಲ. ಆಮೆಯು ಕೂಡ ಸತ್ಯದಿಂದಲೇ ಭೂಮಿಯನ್ನು ಹೊತ್ತುಕೊಂಡಿದೆ.

ಸತ್ಯೇನ ಲೋಕಾಸ್ತಿಷ್ಠಂತಿ ಸರ್ವೇ ಚ ವಸುಧಾಧರಾಃ ।
ಸತ್ಯಾದ್ಭ್ರಷ್ಟೋಥ ಯಸ್ಸತ್ಯೋಽಸ್ಯಧೋವಾಸೀ ಭವೇದ್ಧ್ರುವಂ ॥ ೪ ॥

ಸತ್ಯವಾಚಿ ರತೋ ಯಸ್ತು ಸತ್ಯಕಾರ್ಯರತಸ್ಸದಾ ।
ಸಶರೀರೇಣ ಸ್ವರ್ಲೋಕಮಾಗತ್ಯಾಚ್ಯುತತಾಂ ವ್ರಜೇತ್ ॥ ೫ ॥

ಸತ್ಯೇನ ಮುನಯಸ್ಸರ್ವೇ ಮಾಂ ಚ ಗತ್ವಾ ಸ್ಥಿರಾಸ್ಸ್ಥಿತಾಃ ।
ಸತ್ಯಾದ್ಯುಧಿಷ್ಠಿರೋ ರಾಜಾ ಸಶರೀರೋ ದಿವಂ ಗತಃ ॥ ೬ ॥

ಸರ್ವಂ ಶತ್ರುಗಣಂ ಜಿತ್ವಾ ಲೋಕೇ ಧರ್ಮೇಣ ಪಾಲಿತಃ ।
ಅಕರೋಚ್ಚ ಮಖಂ ಶುದ್ಧಂ ರಾಜಸೂಯಂ ಸುದುರ್ಲಭಂ ॥ ೭ ॥

ಚತುರಶೀತಿಸಹಸ್ರಾಣಿ ಬ್ರಾಹ್ಮಣಾನಾಂ ಚ ನಿತ್ಯಶಃ ।
ಭೋಜಯೇದ್ರುಕ್ಮಪಾತ್ರೇಷು ರಾಜೋಪಕರಣೇಷು ಚ ॥ ೮ ॥

ಭೋಜಯಿತ್ವೋಪಕರಣಾಂಸ್ತೇಭ್ಯೋ ದತ್ವಾ ವಿಸರ್ಜಯೇತ್ ।
ಯದಭೀಷ್ಟಂ ದ್ವಿಜಾತೀನಾಮತೋಽನ್ಯದ್ದಾಪಯೇದ್ಧನಂ ॥ ೯ ॥

---

೪. ಸತ್ಯದಿಂದಲೇ ಲೋಕಗಳೆಲ್ಲವೂ ನಿಂತಿವೆ. ಬೆಟ್ಟಗಳೂ ಕೂಡ ಸತ್ಯದಿಂದಲೇ ನಿಂತಿವೆ. ಸತ್ಯದಿಂದ ಚ್ಯುತವಾದ ಪ್ರಾಣಿಯು ನರಕಕ್ಕೆ ಬೀಳುತ್ತದೆ.

೫ ಸತ್ಯವನ್ನೇ ಆಡುತ್ತ ಸತ್ಯವಾದ ಕೆಲಸವನ್ನೇ ಮಾಡುತ್ತ ಬಂದರೆ ಅವನು ಇದೇ ಶರೀರದಿಂದ ಸ್ವರ್ಗಲೋಕಕ್ಕೆ ಹೋಗಿ ಅಲ್ಲಿ ಶಾಶ್ವತವಾಗಿರುತ್ತಾನೆ.

೬. ಸತ್ಯದಿಂದಲೇ ಋಷಿಗಳೆಲ್ಲರೂ ನನ್ನನ್ನು ಹೊಂದಿ ಸ್ಥಿರವಾಗಿದ್ದಾರೆ. ಸತ್ಯದಿಂದಲೇ ಯುಧಿಷ್ಠಿರನು ಸಶರೀರ ಸ್ವರ್ಗವನ್ನು ಹೊಂದಿದನು.

೭. ಎಲ್ಲಾ ಶತ್ರುಗಳನ್ನೂ ಜಯಿಸಿ ಲೋಕವನ್ನು ಧರ್ಮದಿಂದ ಪಾಲಿಸಿ ದುರ್ಲಭವಾದ ರಾಜಸೂಯಯಾಗವನ್ನೂ ಮಾಡಿದನು.

೮. ದಿನವೂ ಎಂಭತ್ತುನಾಲ್ಕುಸಾವಿರ ಜನ ಬ್ರಾಹ್ಮಣರನ್ನು ರಾಜ ಭೋಜನದಿಂದ ಚಿನ್ನದ ಪಾತ್ರೆಯಲ್ಲಿ ಸತ್ಯದಿಂದಲೇ ಊಟಮಾಡಿಸುತ್ತಿದ್ದನು.

೯. ಊಟಮಾಡಿಸಿ ಅವರಿಗೆ ಬೇಕಾದುದನ್ನು ಕೊಟ್ಟು ಕಳುಹಿಸುತ್ತಿದ್ದನು. ಬ್ರಾಹ್ಮಣರಿಗೆ ಅವರು ಕೇಳಿದುದಕ್ಕಿಂತ ಹೆಚ್ಚು ಹಣವನ್ನು ಕೊಟ್ಟು ಕಳುಹಿಸುತ್ತಿದ್ದನು.

ಅದರಿದ್ರಂ ತತೋ ಜ್ಞಾತ್ವಾ ದ್ವಿಜವ್ಯೂಹಂ ಪರಿತ್ಯಜೇತ್ ।
ತಥೈವ ಸ್ನಾತಕಾನಾಂ ತು ಸಹಸ್ರಾಣಿ ತು ಷೋಡಶ ॥ ೧೦ ॥

ಇತ್ಥಂ ಸಂಭೋಜಯೇದ್ರಾಜಾ ಸತ್ಯೇನೈವ ತ್ವಮತ್ಸರಃ ।
ಅತಿಷ್ಠಂಶ್ಚ ಗೃಹೇ ಪೂರ್ವಂ ಚಿರಂ ತಸ್ಯ ಜಿಗೀಷಯಾ ॥ ೧೧ ॥

ಜಿತಂ ತೇನ ಜಗತ್ಸರ್ವಂ ಪ್ರಾಣಾನುಗ್ರಹಕಾರಣಾತ್ ।
ಸತ್ಯೇನ ಚಾಸುರೋ ರಾಜಾ ಬಲಿರಿಂದ್ರೋ ಭವಿಷ್ಯತಿ ॥ ೧೨ ॥

ಪಾತಾಳಸ್ಥಸ್ಯ ತಸ್ಯೈವ ಭೂಯತ್ತಿಷ್ಠಾಮಿ ವೇಶ್ಮನಿ ।
ನಿರಂತರಂ ಚ ತಿಷ್ಠಾಮಿ ಸ್ವಾಂತೇ ಪುಣ್ಯೈಕಕರ್ಮಣಃ ॥ ೧೩ ॥

ಯದ್ವಾ ಮಯಾ ಪುರಾ ಬದ್ಧೋ ದೈತ್ಯಯೋನೇರ್ವಿಮೋಕ್ಷಣಾತ್ ।
ತಲಂ ಚೈಮಾವರತ್ವಂ ಹಿ ಶಕ್ರತ್ವಂ ಪ್ರದದಾಮ್ಯಹಂ ॥ ೧೪ ॥

ಹರಿಶ್ಚಂದ್ರೋ ನೃಪಸ್ಸತ್ಯಾತ್ಸವಾಹನಪರಿಚ್ಛದಃ ।
ಸಶರೀರೇಣ ಶುದ್ಧೇನ ಸತ್ಯಲೋಕೇ ಪ್ರತಿಷ್ಠಿತಃ ॥ ೧೫ ॥

---

೧೦-೧೩. ಬ್ರಾಹ್ಮಣರ ಗುಂಪು ದಾರಿದ್ರ್ಯವನ್ನು ಬಿಟ್ಟು ತುಷ್ಟರಾದರೆಂದು ತೋರಿದರೆ ಅವರನ್ನು ಬಿಟ್ಟುಬಿಡುತ್ತಿದ್ದನು. ಹದಿನಾರುಸಾವಿರ ಜನ ಸ್ನಾತಕರು ಅವನ ಜೊತೆಯಲ್ಲಿದ್ದು ಭೋಜನಮಾಡುತ್ತಿದ್ದರು. ಇವರು ಅವನನ್ನು ಸತ್ಯದಿಂದ ಜಯಿಸಬೇಕೆಂದೇ ಇದ್ದರು. ಆದರೂ ಅವನು ಸತ್ಯದಿಂದಲೇ ಎಲ್ಲವನ್ನೂ ನಡೆಸುತ್ತಿದ್ದನು. ಸತ್ಯದಿಂದಲೇ ದಾನವನಾದ ಬಲಿಯು ಇಂದ್ರನಾದನು. ಸತ್ಯದಿಂದಲೇ ಪಾತಾಳದಲ್ಲಿರುವ ಅವನ ಮನೆಯಲ್ಲಿ ನಾನು ಇರುವೆನು. ಯಾವನು ಪುಣ್ಯಕರ್ಮಪುಳ್ಳವನೋ ಅವನ ಮನಸ್ಸಿನಲ್ಲಿ ನಾನು ಯಾವಾಗಲೂ ಇರುತ್ತೇನೆ.

೧೪. ಸತ್ಯದಿಂದಲೇ ಅವನನ್ನು ಪೂರ್ವದಲ್ಲಿ ನಿಬಂಧನದಲ್ಲಿಟ್ಟಿದ್ದು ದೈತ್ಯಜನ್ಮವನ್ನು ಬಿಡಿಸಿ ಪಾತಾಳಲೋಕವನ್ನು ಅವನಿಗೆ ಕೊಟ್ಟದ್ದು. ಅನಂತರ ಇಂದ್ರಪದವಿಯನ್ನು ಅವನಿಗೆ ಕೊಡುತ್ತೇನೆ.

೧೫. ಸತ್ಯದಿಂದಲೇ ಹರಿಶ್ಚಂದ್ರನು ಪರಿವಾರದೊಡನೆ ಈ ಭೌತಿಕವಾದ ಶರೀರದಿಂದಲೇ ಸತ್ಯಲೋಕವನ್ನು ಹೊಂದಿದನು.

ರಾಜಾನೋ ಬಹವಶ್ಚಾನ್ಯೇ ಯೇ ಚ ಸಿದ್ಧಾ ಮಹರ್ಷಯಃ ।
ಜ್ಞಾನಿನೋ ಯಜ್ಞಿಯಾಶ್ಚೈವ ಸರ್ವೇ ಸತ್ಯೇಚ್ಯುತಾಭವನ್ ॥ ೧೬ ॥

ತಸ್ಮಾತ್ಸತ್ಯರತೋ ಲೋಕೇ ಸಂಸಾರೋದ್ಧರಣಕ್ಷಮಃ ।
ತುಲಾಧಾರೋ ಮಹಾತ್ಮಾ ವೈ ಸತ್ಯವಾಕ್ಯೇ ಪ್ರತಿಷ್ಠಿತಃ ॥ ೧೭ ॥

ಲೋಕೇ ತತ್ಸದೃಶೋ ನಾಸ್ತಿ ಸತ್ಯವಾಕ್ಯಸ್ಯಕಾರಣಾತ್ ।
ಅಶ್ವಮೇಧಸಹಸ್ರೇಣ ಸತ್ಯೇನ ತುಲಯಾ ಧೃತಂ ॥ ೧೮ ॥

ಅಶ್ವಮೇಧಸಹಸ್ರಾದ್ಧಿ ಸತ್ಯಮೇವ ವಿಶಿಷ್ಯತೇ ।
ಸರ್ವಂ ಸತ್ಯಂ ಭವೇಚ್ಛ್ರೇಷ್ಠ್ಯಂ ಸತ್ಯೋ ಹಿ ದುರತಿಕ್ರಮಃ ॥ ೧೯ ॥

ಸತ್ಯವಾಕ್ಯೇನ ಸಾ ಧೇನುರ್ಬಹುಳಾ ಸ್ವರ್ಗಗಾಮಿನೀ ।
ಸರ್ವರಾಷ್ಟ್ರಂ ಸಮಾದಾಯ ಪುನರಾವೃತ್ತಿದುರ್ಲಭಾ ॥ ೨೦ ॥

---

೧೬. ಅನೇಕಜನ ರಾಜರೂ, ಸಿದ್ಧರೂ, ಮಹರ್ಷಿಗಳೂ, ಜ್ಞಾನಿಗಳೂ, ಯಾಜ್ಞಿಕರೂ ಕೂಡ ಸತ್ಯದಿಂದಲೇ ಮೋಕ್ಷವನ್ನು ಹೊಂದಿದರು.

೧೭. ಆದ್ದರಿಂದ ಸತ್ಯಸಂಧನಾದವನು ಲೋಕದಲ್ಲಿ ಸಂಸಾರದಿಂದ ಪಾರಾಗುತ್ತಾನೆ. ಈ ತುಲಾಧಾರನೂ ಸತ್ಯವಾಕ್ಯವನ್ನು ಮೀರುತ್ತಿಲ್ಲ.

೧೮-೧೯. ಸತ್ಯಕ್ಕಿಂತ ಉತ್ತಮವಾದುದಾಗಲಿ ಅದರ ಸಮವಾದುದಾಗಲಿ ಲೋಕದಲ್ಲಿ ಯಾವುದೂ ಇಲ್ಲ. ಸಾವಿರ ಅಶ್ವಮೇಧಯಾಗವನ್ನೂ, ಸತ್ಯವನ್ನೂ ತೂಕಕ್ಕೆ ಹಾಕಿದರೆ ಆ ಸಾವಿರ ಅಶ್ವಮೇಧಗಳಿಗಿಂತಲೂ ಸತ್ಯವೇ ಭಾರವಾದುದು. ಉತ್ತಮವಾದುದು. ಎಲ್ಲದರಲ್ಲಿಯೂ ಸತ್ಯವೇ ಜಯಿಸುತ್ತದೆ ಸತ್ಯವನ್ನು ಮೀರಲು ಆಗುವುದೇ ಇಲ್ಲ

೨೦-೨೧. ಆ ಕಾಮಧೇನುವೂ ಕೂಡ ಸತ್ಯದಿಂದಲೇ ತನ್ನ ಸಮೂಹವನ್ನೆಲ್ಲಾ ಕರೆದುಕೊಂಡು ಶಾಶ್ವತ ಸ್ವರ್ಗವನ್ನು ಹೊಂದಿತು. ಅದೇ ರೀತಿ ಈ ಸತ್ಯವೂ ಒಂದು ಸಾಕ್ಷಿಯು. ಸುಳ್ಳೆಂಬುದು ಇದರಲ್ಲಿ ಇಲ್ಲವೇ ಇಲ್ಲ. ಕೊಳ್ಳುವುದರಲ್ಲಾಗಲಿ

ತಥಾಯಂ ಸರ್ವದಾ ಸಾಕ್ಷೀ ಮೃಷಾ ನಾಸ್ತಿ ಕದಾಚನ ।
ಬಹ್ವರ್ಘಂ ಸ್ವಲ್ಪಮರ್ಘಂ ಚ ಕ್ರಯವಿಕ್ರಯಣೇ ಸುಧೀಃ ॥ ೨೦ ॥

ಸತ್ಯವಾಕ್ಯಂ ಪ್ರಶಸ್ತಂ ಚ ವಿಶೇಷೇ ಸಾಕ್ಷಿಣೋ ಭವೇತ್ ।
ಸಾಕ್ಷಿಣಸ್ಸತ್ಯಮುಕ್ತ್ವಾ ಚ ಅಕ್ಷಯಂ ಸ್ವರ್ಗಮಾಪ್ನುಯುಃ ॥ ೨೨ ॥

ನಾವದೂಕಸ್ಸಭಾಂ ಪ್ರಾಪ್ಯ ಸತ್ಯಂ ವದತಿ ನಾಕ್ಪತಿಃ ।
ಸ ಯಾತಿ ಬ್ರಹ್ಮಣೋ ಗೇಹಂ ಯಜ್ಞೈರನ್ಯೈಶ್ಚ ದುರ್ಲಭಂ ॥ ೨೩ ॥

ಸಭಾಯಾಂ ಯೋ ವದೇತ್ಸತ್ಯಮಶ್ವಮೇಧಫಲಂ ಲಭೇತ್ ।
ಲೋಭಾದ್ದ್ವೇಷಾನ್ಮೃಷೋಕ್ತ್ಯಾ ಚ ರೌರವಂ ನರಕಂ ವ್ರಜೇತ್ ॥ ೨೪ ॥

ಸರ್ವಸಾಕ್ಷೀ ತುಲಾಧಾರೋ ಜನಾನಾಂ ಸೂರ ಏವ ಸಃ ।
ವಿಶೇಷೇ ಲೋಭಸಂತ್ಯಾಗಾನ್ನಾಕೇ ನಿರ್ಜರತಾಂ ವ್ರಜೇತ್ ॥ ೨೫ ॥

---

ಮಾರುವುದರಲ್ಲಾಗಲಿ, ಸ್ವಲ್ಪವಾಗಲಿ, ಹೆಚ್ಚಾಗಿಲಿ, ಯಾವುದರಲ್ಲಾಗಲಿ, ಸತ್ಯವು ಯೋಗ್ಯವಾದುದು. ಸಂದೇಹ ಬಂದರೆ ಆಗ ಸಾಕ್ಷಿಗಳನ್ನು ಕರೆಯಬೇಕು. ಸಾಕ್ಷಿಗಳು ಸತ್ಯವನ್ನು ಹೇಳಿದರೆ ಸ್ವರ್ಗವನ್ನು ಹೊಂದುವರು.

೨೩. ನ್ಯಾಯವಂತನೂ ಯಜಮಾನನೂ ಆದವನು (ಜಡ್ಜಿಯು) ಸಭೆಯಲ್ಲಿ ಸತ್ಯವನ್ನು ಹೇಳಬೇಕು. ಹಾಗೆ ಮಾಡಿದರೆ ಯಜ್ಞಮಾಡಿದವರೂ ಕೂಡ ಹೊಂದಲಾಗದ ಉತ್ತಮವಾದ ಬ್ರಹ್ಮನ ಸ್ಥಾನವನ್ನು ಅವನು ಹೊಂದುತ್ತಾನೆ.

೨೪. ಸಭೆಯಲ್ಲಿ ಸತ್ಯವನ್ನು ಹೇಳಿದರೆ ಅಶ್ವಮೇಧದ ಫಲವು ಲಭಿಸುತ್ತದೆ. ಮೋಹದಿಂದಲೋ, ದ್ವೇಷದಿಂದಲೋ, ಸುಳ್ಳನ್ನು ಹೇಳಿದವನು ರೌರವ ನರಕವನ್ನು ಹೊಂದುತ್ತಾನೆ.

೨೫. ಈ ತುಲಾಧಾರನು ಜನಗಳಿಗೆ ಸತ್ಯವನ್ನು ಹೇಳುತ್ತ ಸರ್ವಸಾಕ್ಷಿಯಾದ ಸೂರ್ಯನೇ ಆಗಿರುವನು. ಹೆಚ್ಚಿಗೆಯಲ್ಲಿ ಆಸೆಯನ್ನು ಬಿಟ್ಟಿರುವುದರಿಂದ ಸ್ವರ್ಗದಲ್ಲಿ ದೇವತೆಯೇ ಆಗುತ್ತಾನೆ.

ಕಶ್ಚಿಚ್ಛೂದ್ರೋ ಮಹಾಭಾಗೋ ನ ಲೋಭೇ ವರ್ತತೇ ಕ್ವಚಿತ್ ।
ವೃತ್ತಿಶ್ಶಾಕೇನ ದುಃಖೇನ ತಯಾ ಶೀಲೋಂಛಯಾ ಭೃಶಂ ॥ ೨೬ ॥

ಜರ್ಜರಂ ವಸ್ತ್ರಯುಗ್ಮಂ ಚ ಕರೌ ಪಾತ್ರೇ ಚ ಸರ್ವದಾ ।
ಸದಾಪಿ ಲಾಭ ವಿರಹೋ ನ ಪರಸ್ವಂ ಗೃಹೀತವಾನ್ ॥ ೨೭ ॥

ತಸ್ಯ ಜಿಜ್ಞಾಸನಾಯೇತಿ ಗೃಹೀತ್ವಾ ವಸ್ತ್ರಯುಗ್ಮಕಂ ।
ಅವಕೋಣೇ ನದೀತೀರೇ ಸ್ಥಿತ್ವಾ ಸಂಸ್ಥಾಪ್ಯ ಸಾದರಂ ॥ ೨೮ ॥

ಸ ದೃಷ್ಟ್ವಾ ವಸ್ತ್ರಯುಗ್ಮಂ ತನ್ನ ಲೋಭೇ ಕುರುತೇ ಮನಃ ।
ಇತರಸ್ಯ ಪರಿಜ್ಞಾಯ ತತ್ ಕ್ಷಾನ್ತ್ಯಾ ಸ್ವಗೃಹಂ ಯಯೌ ॥ ೨೯ ॥

ತತೋ ಹಿ ಚಿಂತಯಿತ್ವಾ ತು ಹೃದಾ ಸ್ವಲ್ಪಮಿತಿ ದ್ವಿಜ ।
ಉದುಂಬರಂ ಹೇಮಗರ್ಭಂ ಮಯಾ ತತ್ರೈವ ಪಾತಿತಂ ॥ ೩೦ ॥

---

೨೬-೨೭. ಒಬ್ಬ ಶೂದ್ರನಿದ್ದನು. ಅವನು ಲೋಭಕ್ಕೆ ಆಸ್ಪದವನ್ನೇ ಕೊಡುತ್ತಿರಲಿಲ್ಲ. ಕಾಯಿ, ಗೆಡ್ಡೆ, ಗೆಣಸುಗಳಿಂದಲೂ, ಕಾಳುಗಳನ್ನು ಆಯ್ದುಕೊಂಡು ಅದರಿಂದಲೂ ಜೀವನಮಾಡುತ್ತಿದ್ದನು ಎರಡು ಹರಕು ಬಟ್ಟೆಗಳನ್ನು ಧರಿಸಿಕೊಂಡು ಇರುತ್ತಿದ್ದನು. ಕೈಗಳನ್ನು ಯಾವಾಗಲೂ ಪಾತ್ರರಲ್ಲಿ ನೀಡುತ್ತಿದ್ದನು. ಯಾವಾಗಲೂ ಲಾಭದ ಆಸೆಯನ್ನೇ ಬಿಟ್ಟಿದ್ದನು. ಪರರ ಸ್ವತ್ತನ್ನು ಮುಟ್ಟುತ್ತಲೇ ಇರಲಿಲ್ಲ.

೨೮. ಅವನನ್ನು ಪರೀಕ್ಷೆ ಮಾಡಲು ಎರಡು ಬಟ್ಟೆಗಳನ್ನು ತೆಗೆದುಕೊಂಡು ನದಿಯ ದಡದಲ್ಲಿ ಒಂದು ಮೂಲೆಯಲ್ಲಿಟ್ಟು ನೋಡುತ್ತಿದ್ದನು.

೨೯. ಆತನು ಆ ಬಟ್ಟೆಗಳನ್ನು ನೋಡಿ ಮನಸ್ಸಿನಲ್ಲಿ ಆಸೆಯನ್ನು ಹೊಂದಲಿಲ್ಲ. ಅದು ಇತರರದೆಂದು ತಿಳಿದು ಶಾಂತಿಯಿಂದ ಮನೆಗೆ ಬಂದುಬಿಟ್ಟನು

೩೦. ಆಗ ನಾನು ಇದು ಅತ್ಯಲ್ಪವಾದುದೆಂದು ಭಾವಿಸಿ ಅತ್ತಿಹಣ್ಣಿನಲ್ಲಿ ಚಿನ್ನದ ನಾಣ್ಯಗಳನ್ನು ಸೇರಿಸಿ ಅವನೆದುರಿಗೆ ಕೆಡಗಿದೆನು.

ಕೀಕಟೇ ಚ ನದೀತೀರೇ ವಿಕೋಣೇ ಜನವರ್ಜಿತೇ ।
ತಸ್ಯ ಯಾತಸ್ಯ ದೇಶೇ ತು ದೃಷ್ಟಂ ತೇನ ತದದ್ಭುತಂ ॥ ೩೧ ॥

ಅಲಂ ನಿಧಾನಮೇತತ್ತು ಕೃತ್ರಿಮಂ ಚೋಪಲಕ್ಷ್ಯತೇ ।
ಗ್ರಹಣೇ ವಾಧುನಾಚಾಸ್ಯ ಅಲೋಭಂ ನಷ್ಟಮೇವ ಮೇ ॥ ೩೨ ॥

ಅಸ್ಯೈವರಕ್ಷಣೇ ಕಷ್ಟಮಹಂಕಾರಪದಂ ತ್ವಿದಂ ।
ಯತೋ ಲಾಭಸ್ತತೋ ಲೋಭೋ ಲಾಭಾಲ್ಲೋಭಃ ಪ್ರವರ್ತತೇ ॥ ೩೩ ॥

ಲೋಭಗ್ರಸ್ತಸ್ಯ ಪುಂಸಶ್ಚ ಶಾಶ್ವತೋ ನಿರಯೋ ಭವೇತ್ ।
ಯದಿ ನೋ ವಿಗುಣಂ ವಿತ್ತಂ ಯದಾವೇಶ್ಮನಿ ತಿಷ್ಠತಿ ॥ ೩೪ ॥

ತದಾ ಮೇ ದಾರಪುತ್ರಾಣಾಮುನ್ಮಾದೋಽಪ್ಯುಪಪದ್ಯತೇ ।
ಉನ್ಮಾದಾತ್ಕಾಮಸಂಜಾತವಿಕಾರಾನ್ಮತಿವಿಭ್ರಮಃ ॥ ೩೫ ॥

---

೩೧. ಅವನು ಹೋಗುತ್ತಿರುವ ಪ್ರತ್ಯೇಕ ಜಾಗದ ಮಡುವಿನ ಬಳಿ ಜನಗಳಿಲ್ಲದಿರುವಾಗ ಅವನು ಹೋಗುತ್ತಿರುವಾಗ ಮರದಿಂದ ಬಿದ್ದಂತೆ ಕಾಣುವಹಾಗೆ ಆ ಕಾಯಿಗಳನ್ನು ಕಂಡನು ಆತನು ಆ ಆಶ್ಚರ್ಯವನ್ನು ನೋಡಿದನು.

೩೨. ಈ ವಿಷಯವು ಕೃತಿಕ್ರಮದಿಂದ ನಡೆದಿರುವಂತೆ ಕಾಣುತ್ತದೆ. ಇದನ್ನು ನಾನು ತೆಗೆದುಕೊಂಡರೆ ನನ್ನ ಆ ಲೋಭವು ನಾಶವಾಗುತ್ತದೆ.

೩೩ ಈ ಚಿನ್ನವನ್ನು ಕಾಪಾಡುವುದರಲ್ಲೇ ಕಷ್ಟವಿದೆ. ಇದು ಅಹಂಕಾರಕ್ಕೆ ಕಾರಣವಾದುದು ಎಲ್ಲಿ ಲಾಭವಿದೆಯೋ ಅಲ್ಲಿ ಲೋಭವಿರುವುದು. ಲಾಭದಿಂದಲೇ ಲೋಭವು ಹುಟ್ಟತಕ್ಕದ್ದು.

೩೪-೩೫. ಲೋಭವಿಂದ ಕೂಡಿದವನಿಗೆ ಖಂಡಿತವಾಗಿಯೂ ನರಕವು ಬರುತ್ತದೆ. ಈ ಅಯೋಗ್ಯವಾದ ಹಣವು ನನ್ನ ಮನೆಯಲ್ಲಿ ನಿಂತರೆ ಆಗ ನನ್ನ ಹೆಂಡಿರು ಮಕ್ಕಳಿಗೆಲ್ಲಾ ನಾನು ಹೆಚ್ಚೆಂಬ ಜಂಭವುಂಟಾಗುತ್ತದೆ. ಅದರಿಂದ ಆಸೆಯು ಹುಟ್ಟುತ್ತವೆ ಆ ಆಸೆಯಿಂದ ಬುದ್ಧಿಯೇ ಬದಲಾವಣೆ ಹೊಂದುತ್ತದೆ.

ಭ್ರಮಾನ್ಮೋಹೋಸ್ತ್ಯಹಂಕಾರಃ ಕ್ರೋಧಲೋಭಾವತಃ ಪರಂ ।
ಏಷಾಂ ಪ್ರಚುರಭಾವಾಚ್ಚ ತಪಃ ಕ್ಷಯಂ ಗಮಿಷ್ಯತಿ ॥ ೩೬ ॥

ಕ್ಷೀಣೇ ತಪಸಿ ವರ್ತಂತೇ ಪಂಕಾಶ್ಚಿತ್ತಪುರೋಹತಾಃ ।
ತೈಶ್ಚ ಶೃಂಖಲಯೋಗ್ಯೈಶ್ಚ ಬದ್ಧೋ ನೈವೋದ್ಧತಿಂ ಪ್ರಜೇತ್ ॥ ೩೭ ॥

ಏತದ್ವಿಮೃಶ್ಯ ಶೂದ್ರೋಽಸೌ ಪರಿತ್ಯಕ್ತ್ವಾ ಗೃಹಂ ಗತಃ ।
ಸ್ವಸ್ಥಾ ದೇವಾ ಮುದಾ ತತ್ರ ಸಾಧು ಸಾಧ್ವಿತಿ ಚಾಬ್ರುವನ್ ॥ ೩೮ ॥

ನಿರ್ಗ್ರಂಥಿರೂಪಮಾದಾಯ ತಸ್ಯಾಂತಿಕೆಗೃಹಂ ತಥಾ ।
ಗತ್ವಾಹಂ ದೈವಸಂವಾದಮುವದಂ ಭೂತವರ್ತನಂ ॥ ೩೯ ॥

ತತೋಽಭ್ಯಾಸಪ್ರಸಂಗಾಚ್ಚ ಜನಾನಾಂ ಚ ಪರಿಪ್ಲವಾತ್ ।
ತಸ್ಯ ಯೋಷಾ ತದಾಗತ್ಯ ಪಪ್ರಚ್ಛ ದೈವಕಾರಣಂ ॥ ೪೦ ॥

---

೩೬. ಆ ಭ್ರಮೆಯಿಂದ ಮೋಹವೂ, ಅದರಿಂದ ಅಹಂಕಾರವೂ ಹುಟ್ಟಿ ಅವುಗಳಿಂದಕ್ರೋಧಲೋಭಗಳೂ ಹುಟ್ಟುತ್ತವೆ. ಇವು ಮನುಷ್ಯನಿಗೆ ಹೆಚ್ಚಿದ ಮೇಲೆ ತಪಸ್ಸು ಕ್ಷೀಣಿಸುತ್ತದೆ.

೩೭. ತಪಸ್ಸು ನಾಶವಾದಮೇಲೆ ಮನಸ್ಸನ್ನು ನಾಶಪಡಿಸುವ ಪಾಪಗಳು ಅಂಟಿಕೊಳ್ಳುತ್ತವೆ. ಈ ಸರಪಣಿಗಳ ಕಟ್ಟಿನಿಂದ ಕಟ್ಟುಬಿದ್ದವನು ಮೇಲಕ್ಕೇಳು ಪಂತೆಯೇ ಇಲ್ಲ

೩೮. ಆ ಶೂದ್ರನು ಈ ರೀತಿ ವಿಚಾರಮಾಡಿ ನಿರ್ಧರಿಸಿ ಆ ಚಿನ್ನದ ನಾಣ್ಯಗಳಿಂದ ತುಂಬಿದ ಅತ್ತಿ ಹಣ್ಣುಗಳನ್ನು ಬಿಟ್ಟು ಹೊರಟುಹೋದನು. ಆಗ ಅಲ್ಲಿದ್ದ ದೇವತೆಗಳು ಸಾಧು ಸಾಧು ಎಂದು ಹೊಗಳಿದರು.

೩೯- ಆಗ ನಾನು ವಿರಕ್ತನಾದ ಬೌದ್ಧ ಸನ್ಯಾಸಿರೂಪವನ್ನು ಹೊಂದಿ ಅವನ ಅಕ್ಕಪಕ್ಕದವರ ಮನೆಗಳವರಿಗೆ ಹಿಂದಿನ ಮುಂದಿನ ಅದೃಷ್ಟವನ್ನು ಹೇಳತೊಡಗಿದನು.

೪೦. ಹೀಗೆಯೇ ಜನಗಳಲ್ಲಿ ಹರಡಿ ಜನರು ಬಂದು ಹೋಗುತ್ತಿರುವುದನ್ನು ನೋಡಿ ಆ ಶೂದ್ರನ ಹೆಂದತಿಯೂ ನನ್ನ ಬಳಿಗೆ ಬಂದು ತನ್ನ ಬಡತನಕ್ಕೆ ಅದೃಷ್ಟದ ಕಾರಣವನ್ನು ಕೇಳಿದಳು.

ತತೋऽಹಮುವದಂ ತಸ್ಯ ಯದ್ವಾ ಚೇತೋऽಗತಂ ದ್ರುತಂ ।
ನಿಭೃತೋऽಥ ನಿನಾದಸ್ಯ ಕಾರಣಂ ಕಥಿತಂ ಮಯಾ ॥ ೪೧ ॥

ಹೃದ್ಗತಂ ಪತಿನಾ ತೇದ್ಯ ವಿಧಿನಾ ದತ್ತಮಜ್ಞವತ್ ।
ಪರಿತ್ಯಕ್ತಂ ಮಹಾಭಾಗೇ ಪುನರ್ನಾಸ್ತೀತಿ ತೇ ವಸು ॥ ೪೨ ॥

ಯಾವಜ್ಜೀವತಿ ದೌರ್ವಿಧ್ಯಂ ತಸ್ಯ ಭೋಕ್ತಾ ನ ಸಂಶಯಃ ।
ಗಚ್ಛ ಮಾತರ್ಗೃಹಂ ತೂರ್ಣಮಲಬ್ಧಂ ತತ್ಪ್ರಪೃಚ್ಛ ತಂ ॥ ೪೩ ॥

ಶ್ರುತ್ವಾ ತದ್ವೈ ಶಿವಂ ಸಾ ಚ ವಚನಂ ಪತ್ಯುರಂತಿಕಂ ।
ಗತ್ವಾ ಪ್ರೋವಾಚ ದುರ್ವೃತ್ತಂ ತಚ್ಛ್ರುತ್ವಾ ವಿಸ್ಮಯಂ ಗತಃ ॥ ೪೪ ॥

ಸ ವಿಚಿಂತ್ಯ ತಯಾ ಸಾರ್ಧಮಾಗತೋऽಸೌ ಮಮಾಂತಿಕಂ ।
ನಿಭೃತಂ ಮಾಮುವಾಚೇದಂ ಕ್ಷಪಣ ತ್ವಂ ಚ ಕೀರ್ತಯ ॥ ೪೫ ॥

---

೪೧. ಆಗ ಅವಳ ಮನಸ್ಸಿನಲ್ಲಿರುವುದನ್ನು ಅಥವಾ ಅವನ ವಿಷಯವನ್ನೇ ಆದೆಂದು ತಿಳಿದು ಆಕೆಯ ಮನಸ್ಸಿನ ಧ್ವನಿಗೆ ಕಾರಣವನ್ನು ಗುಟ್ಟಾಗಿ ತಿಳಿಸಿದೆನು.

೪೨. ಅಮ್ಮಾ ! ನಿನ್ನ ಮನಸ್ಸಿನಲ್ಲಿರುವುದನ್ನು ದೇವರು ಕೊಟ್ಟನು. ನಿನ್ನ ಗಂಡನು ಅದನ್ನು ತಿರಸ್ಕರಿಸಿ ಬಿಟ್ಟುಬಿಟ್ಟನು. ಮತ್ತೆ ಆ ಹಣವು ಸಿಕ್ಕುವಂತಿಲ್ಲ.

೪೩. ಆ ದುರದೃಷ್ಟವು ಅವನಲ್ಲಿರುವವರೆಗೆ ಅವನು ಅದನ್ನು ಅನುಭವಿಸ ಬೇಕು. ಸಂಶಯವಿಲ್ಲ. ಬೇಕಾದರೆ ಮನೆಗೆ ಬೇಗಹೋಗಿ ನಿಧಿಯು ಸಿಕ್ಕಿರಲಿಲ್ಲವೆ ? ಎಂದು ಆತನನ್ನು ಕೇಳು.

೪೪. ನಾನು ಹೇಳಿದ ಈ ಆನಂದಕರವಾದ ಮಾತನ್ನು ಗಂಡನ ಬಳಿಗೆ ಹೋಗಿ ಹೇಳಿದಳು. ಆತನು ಆ ಕೆಟ್ಟ ಸಮಾಚಾರವನ್ನು ಕೇಳಿ ಆಶ್ಚರ್ಯಪಟ್ಟನು.

೪೫. ಆತನೂ ಹೆಂಡತಿಯೂ ಯೋಚಿಸಿ ಅನಂತರ ಆತನು ನನ್ನ ಬಳಿಗೆ ಬಂದು ಎಲೈ ಸನ್ಯಾಸಿಯೇ ! ನನಗೆ ಇದನ್ನು ಗುಟ್ಟಾಗಿ ಹೇಳೆಂದು ಕೇಳಿದನು.

॥ ಕ್ಷಪಣಕ ಉವಾಚ ॥

ಚಾಕ್ಷುಷಂ ಚಿರಸಂಶುದ್ಧಂ ಹೇಲಯಾ ತೃಣವತ್ಕಥಂ ।
ತ್ವಯಾ ತ್ಯಕ್ತಂ ಯತಸ್ತಾತ ನಾಸ್ತಿ ಭೋಗ್ಯಮಕಂಟಕಂ ॥ ೪೬ ॥

ಐಶ್ವರ್ಯಮತುಳಂ ಶೌರ್ಯಂ ಶೀರ್ಯತೇ ಭಾವ್ರುಕಂ ಪುನಃ ।
ಸ್ವಬಂಧೂನಾಮ್ಮಹದ್ದುಃಖಮಾಜನ್ಮಮರಣಾಂತಿಕಂ ॥ ೪೭ ॥

ದ್ರಕ್ಷ್ಯಸೇ ಚಾತ್ಮನಾ ನಿತ್ಯಂ ಮೃತಾನಾಂ ಯಾ ಗತಿರ್ಧ್ರುವಂ ।
ತಸ್ಮಾತ್ತದ್ಗೃಹ್ಯತಾಂ ತೂರ್ಣಂ ಭುಂಕ್ಷ್ವ ಭೋಗ್ಯಮಕಂಟಕಂ ॥ ೪೮ ॥

ಐಶ್ವರ್ಯಮತುಲಂ ಶೌರ್ಯಂ ಲೋಕಾನಾಂ ವಿಸ್ಮಯಂ ಪರಂ ॥ ೪೯ ॥

॥ ಶೂದ್ರ ಉವಾಚ ॥

ನ ಮೇ ವಿತ್ತೇ ಸ್ಪೃಹಾ ಚಾಸ್ತಿ ಧನಂ ಸಂಸಾರವಾಗುರಾ ।
ಯದ್ವಿಧೌ ಪತಿತೋ ಮರ್ತ್ಯೋ ನ ಪುನರ್ಮೋಕ್ಷಕಂ ವ್ರಜೇತ್ ॥ ೫೦ ॥

---

೪೬. ಕ್ಷಪಣಕನು ಹೇಳಿದನು- ಅಯ್ಯಾ ! ಶುದ್ಧವಾದುದು ಕಣ್ಣಿಗೆ ಕಂಡಿದೆ. ಅಂತಹುದನ್ನು ಹುಲ್ಲಿನಂತೆ ಕಂಡು ಬಿಟ್ಟುಬಿಟ್ಟೆಯಲ್ಲ ! ಆದ್ದರಿಂದಲೇ ತೊಂದರೆಯಿಲ್ಲದಿರುವ ಪದಾರ್ಥವನ್ನು ಅನುಭವಿಸುವ ಯೋಗವು ನಿನಗಿಲ್ಲ.

೪೭. ಬಹುವಾದ ಐಶ್ವರ್ಯವೂ ಪರಾಕ್ರಮವೂ ಸಂಸಾರಿಗಳಲ್ಲಿ ವೈರಾಗ್ಯವನ್ನು ಹುಟ್ಟಿಸಿದರೆ ಅದು ಅವನಿಗೂ ಅವನ ಬಂಧುಗಳಿಗೂ ಹುಟ್ಟಿದ ಮೊದಲುಗೊಂಡು ಸಾಯುವವರೆಗೂ ಬಹು ದುಃಖವನ್ನೇ ಕೊಡುತ್ತದೆ.

೪೮-೪೯. ಸತ್ತನಂತರ ಜನಗಳಿಗೆ ಬರುವ ಸ್ಥಿತಿಯನ್ನೂ ನೀನು ತಿಳಿದೇ ಇದ್ದೀಯೆ. ಆದ್ದರಿಂದ ಆ ಹಣವನ್ನು ಬೇಗ ತೆಗೆದುಕೊಂಡು ಸುಖವಾಗಿ ಅದನ್ನು ಅನುಭವಿಸು. ಹೆಚ್ಚಾದ ಐಶ್ವರ್ಯವೂ, ಪರಾಕ್ರಮವೂ ಜನಗಳಿಗೆ ಆಶ್ಚರ್ಯವನ್ನುಂಟುಮಾಡುತ್ತವೆ.

೫೦. ಶೂದ್ರನು ಹೇಳಿದನು– ನನಗೆ ಹಣದಲ್ಲಿ ಆಸೆಯಿಲ್ಲ. ಹಣವು ಸಂಸಾರದ ಬಂಧನಕ್ಕೆ ಬಲೆಯು. ಆದರ ವಿಷಯಕ್ಕೆ ಮನಸ್ಸು ಕೊಟ್ಟ ಮನುಷ್ಯನು ಭ್ರಷ್ಟನಾಗಿ ಮೋಕ್ಷವನ್ನು ಹೊಂದುವಂತೆಯೇ ಇಲ್ಲ.

ಶೃಣು ವಿತ್ತಸ್ಯ ಯೋ ದೋಷಃ ಇಹಲೋಕೇ ಪರತ್ರ ಚ ।
ಭಯಂ ಚೌರಾಚ್ಚ ಜ್ಞಾತಿಭ್ಯೋ ರಾಜಭ್ಯಸ್ತಸ್ಕರಾದಪಿ ॥ ೫೦ ॥

ಸರ್ವೇ ಜಿಘಾಂಸವೋ ಮರ್ತ್ಯಾ ಪಶುಮತ್ಸ್ಯವಿವಿಷ್ಕಿರಾಃ ।
ತಥಾ ಧನವತಾಂ ನಿತ್ಯಂ ಕಥಮರ್ಥಾಸ್ಸುಖಾವಹಾಃ ॥ ೫೨ ॥

ಪ್ರಾಣಸ್ಯಾಂತಕರೋ ಹ್ಯರ್ಥಃ ಸಾಧಕೋ ದುರಿತಸ್ಯ ಚ ।
ಕಾಲಾದೀನಾಂ ಪ್ರಿಯಂ ಗೇಹಂ ನಿದಾನಂ ದುರ್ಗತೇಃ ಪರಂ ॥ ೫೩ ॥

॥ ಕ್ಷಪಣಕ ಉವಾಚ ॥

ಯಸ್ಯಾರ್ಥಾಸ್ತಸ್ಯ ಮಿತ್ರಾಣಿ ಯಸ್ಯಾರ್ಥಾಸ್ತಸ್ಯ ಬಾಂಧವಾಃ ।
ಕುಲಂ ಶೀಲಂ ಚ ಪಾಂಡಿತ್ಯಂ ರೂಪಂ ಭೋಗ್ಯಂ ಯಶಸ್ಸುಖಂ ॥ ೫೪ ॥

ಧನೇನ ತು ವಿಹೀನಸ್ಯ ಪುತ್ರದಾರೋಜ್ಝಿತಸ್ಯ ಚ ।
ಕಥಂ ಮಿತ್ರಂ ಕಥಂ ಧರ್ಮಃ ದೀನಾನಾಂ ಜನ್ಮನಃ ಕಥಂ ॥ ೫೫ ॥

---

೫೧. ಧನದ ವಿಷಯದಲ್ಲಿ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ, ಇರುವ ದೋಷಗಳನ್ನು ಕೇಳು. ಕಳ್ಳರು, ಜ್ಞಾತಿಗಳು, ರಾಜರು, ಇವರು ಕದ್ದಾರೆಂಬ ಹೆದರಿಕೆಯು ಇರುತ್ತದೆ.

೫೨. ಮೃಗಗಳು, ಮೀನುಗಳು, ಹಕ್ಕಿಗಳು ಇವೆಲ್ಲವನ್ನೂ ಜನಗಳು ಹೇಗೆ ಕೊಲ್ಲಬೇಕೆಂದೆನ್ನುತ್ತಾರೆಯೋ ಹಾಗೆಯೇ ಧನವಂತರನ್ನೂ ಕೊಲ್ಲಬೇಕೆಂದೆನ್ನುತ್ತಾರೆ. ಹಣವು ಅದು ಹೇಗೆ ಸುಖಕರವು ?

೫೩. ಹಣವು ಪ್ರಾಣನಾಶಕವಾದು- ಪಾಪಕ್ಕೆ ಕಾರಣವಾದುದು. ಯಮಮೊಂತಾದ ದುಷ್ಟರಿಗೆ ಪ್ರಿಯವಾದ ಮನೆಯು. ನರಕಕ್ಕೆ ಕಾರಣವಾದುದು.

೫೪. ಕ್ಷಪಣಕನು ಹೇಳಿದನು- ಹಣವಿರುವವನಿಗೆ ಮಿತ್ರರು, ಬಂಧುಗಳು, ಕುಲವು, ಶೀಲವು, ಪಾಂಡಿತ್ಯವು, ರೂಪವು, ಭೋಗವು, ಯಶಸ್ಸು, ಸುಖವು ಎಲ್ಲವೂ ಇರುತ್ತದೆ.

೫೫. ಹಣವು ಹೆಂಡಿರು ಮಕ್ಕಳೂ ಇಲ್ಲದವರಿಗೆ ಮಿತ್ರರೆಲ್ಲಿರುವರು ? ಧರ್ಮ ಎಲ್ಲಿಂದ ಬಂದೀತು ? ಹುಟ್ಟುದರಿದ್ರರಿಗೆ ಇವೆಲ್ಲವೂ ಎಲ್ಲಿ ಸಾಧ್ಯ ?

ಸತ್ವಾದಿಕ್ರತುಕಾರ್ಯಂ ಚ ಪುಷ್ಕರಿಣ್ಯುಪಕಾರಕಂ ।
ದಾನಂ ಲೋಕಸ್ಯ ಸೋಪಾನಂ ನಿಸ್ಸತ್ವಸ್ಯ ಚ ನ ಸಿದ್ಧ್ಯತಿ ॥ ೫೬ ॥

ವ್ರತಕಾರ್ಯಸ್ಯ ರಕ್ಷಾ ಚ ಧರ್ಮಾದಿಶ್ರವಣಂ ಭೃಶಂ ।
ಪಿತೃಯಜ್ಞಾದಿತೀರ್ಥಂ ಚ ನಿರ್ವಿತ್ತಸ್ಯ ನ ಸಿದ್ಧ್ಯತಿ ॥ ೫೭ ॥

ತಥಾ ರೋಗ ಪ್ರತೀಕಾರಃ ಪಥ್ಯಮೌಷಧಸಂಚಯಂ ।
ರಕ್ಷಣಂ ವಿಗ್ರಹಸ್ಯೈವ ಶತ್ರೂಣಾಂ ವಿಜಯೋ ಧ್ರುವಂ ॥ ೫೮ ॥

ಸ್ತ್ರೀಣಾಂ ಚ ಜನ್ಮನಾ ವಾರ್ತಾ ವಸುಯೋಗೇನ ಲಭ್ಯತೇ ।
ಭೂತಭವ್ಯಪ್ರವೃತ್ತಾನಾಂ ಸುಕೃತಂ ದುಷ್ಕೃತಂ ಚ ಯತ್ ॥ ೫೯ ॥

ಯಸ್ಯ ತಸ್ಮಾದ್ಬಹುವಸು ತಸ್ಯ ಭೋಗ್ಯಂ ಯದೃಚ್ಛಯಂ ।
ಸ್ವರ್ಗಂ ವಿತರಣಾದೇವ ಲಪ್ಸ್ಯಸೇ ನಾಚಿರಾದಿತಃ ॥ ೬೦ ॥

---

೫೬. ದಾನ, ಯಾಗ, ತೀರ್ಥ, ಸೇನೆ ಇವೆಲ್ಲವೂ ಹಣದಿಂದ ಉಂಟಾಗುತ್ತದೆ. ದಾನವು ಜನಗಳಿಗೆ ಮೇಲೆ ಹೋಗಲು ಸೋಪಾನವು ದರಿದ್ರನಿಗೆ ಇದು ಸಿದ್ಧಿಸುವುದಲ್ಲ.

೫೭. ವ್ರತಗಳನ್ನು ಉದ್ದಕ್ಕೂ ಮಾಡುತ್ತ ಬರುವುದು, ಧರ್ಮಶ್ರವಣಮಾಡುವುದು, ಪಿತೃಗಳ ಶ್ರಾದ್ಧ ಮುಂತಾದುವು, ತೀರ್ಥಗಮನವು, ಹಣವಿಲ್ಲದವನಿಗೆ ಸಾಧ್ಯವಿಲ್ಲ.

೫೮. ರೋಗಗಳಿಗೆ ಪ್ರತಿಕ್ರಿಯೆಮಾಡುವುದು, ಪಥ್ಯವು. ಔಷಧಿಗಳನ್ನು ಸೇರಿಸಿಕೊಳ್ಳುವುದು, ಜಗಳವನ್ನು ತಪ್ಪಿಸಿಕೊಳ್ಳುವುದು, ಶತ್ರುಗಳ ವಿಜಯ, ಇವೆಲ್ಲವೂ ಹಣದಿಂದಲೇ ಸಾಧ್ಯವು.

೫೯ ಹಣವಿದ್ದರೇ ಹೆಂಗಸಿನ ವಿಷಯವೂ ಲಭಿಸುತ್ತದೆ. ಹಿಂದಿನ ಮುಂದಿನ ಸಮಾಚಾರಗಳೂ, ಒಳ್ಳೆಯ ಕೆಟ್ಟ ಕೆಲಸಗಳ ವಿಷಯವೂ ಹಣವಿದ್ದರೇ ಗೊತ್ತಾಗುವುದು.

೬೦. ಬಹು ಹಣವು ಯಾವನಿಗಿರುವುದೋ ಅವನು ಕಾಣದ್ದನ್ನೂ, ಕೇಳದ್ದನ್ನೂ ಅನುಭವಿಸುವನು. ಸ್ವರ್ಗವೂ ಕೂಡ ದಾನದಿಂದಲೇ ಬೇಗ ಸಿಕ್ಕುತ್ತದೆ.

॥ ಶೂದ್ರ ಉವಾಚ ॥

ಅಕಾಮಾಚ್ಚ ವ್ರತಂ ಸರ್ವಮಕ್ರೋಧಾತ್ತೀರ್ಥಸೇವನಂ ।
ದಯಾ ಜಪ್ಯಸಮಾ ಶುದ್ಧಂ ಸಂತೋಷೋ ಧನಮೇವಚ ॥ ೬೧ ॥

ಅಹಿಂಸಾ ಪರಮಾ ಸಿದ್ಧಿಃ ಶೀಲೋಂಛವೃತ್ತಿರುತ್ತಮಾ ।
ಶಾಕಾಹಾರಸ್ಸುಧಾತುಲ್ಯಃ ಉಪವಾಸಃ ಪರಂತಪಃ ॥ ೬೨ ॥

ಸಂತೋಷೋ ಮೇ ಮಹಾಭೋಗ್ಯಂ ಮಹಾದಾನಂ ವರಾಟಿಕಂ ।
ಮಾತೃವತ್ಪರದಾರಾಶ್ಚ ಪರದ್ರವ್ಯಂ ಚ ಲೋಷ್ಟವತ್ ॥ ೬೩ ॥

ಪರದಾರಾ ಭುಜಂಗಾಭಾಃ ಸರ್ವಂ ಯಜ್ಞ ಇದಂ ಮಮ ।
ತಸ್ಮಾದೇನಂ ನ ಗೃಹ್ಣಾಮಿ ಸತ್ಯಂ ಸತ್ಯಂ ಗುಣಾಕರ ।
ಲಗ್ನೇ ಪ್ರಕ್ಷಾಳನಾತ್ಪಂಕೇ ದೂರಾದಸ್ಪರ್ಶನಂ ವರಂ ॥ ೬೪ ॥

---

೬೧-೬೨. ಶೂದ್ರನು ಹೇಳಿದನು- ಆಸೆಯಿಲ್ಲದಿರುವುದೇ ನನಗೆ ಎಲ್ಲಾ ವ್ರತಗಳೂ ಆಗಿವೆ. ಕ್ರೋಧವಿಲ್ಲದಿರುವಿಕೆಯೇ ತೀರ್ಥಸೇವೆಯು ದಯೆಯೇ ಶುದ್ಧವಾದ ಜಪಕ್ಕೆ ಸಮಾನವು. ಸಂತೋಷವೇ ಧನವು. ಅಹಿಂಸೆಯೇ ಸಿದ್ಧಿಯು ಶೀಲವೇ ಆಯ್ದು ಜೀವಿಸುವ ಉತ್ತಮವಾದ ಜೀವನವು. ಕಾಯಿ, ಗೆಡ್ಡೆ ಗೆಣಸು ಹಣ್ಣುಗಳನ್ನು ತಿನ್ನುವುದೇ ಅಮೃತಕ್ಕೆ ಸಮಾನವು. ಉಪವಾಸವೇ ಉತ್ತಮವಾದ ತಪಸ್ಸು.

೬೩-೬೪. ಸಂತೋಷವೇ ನನಗೆ ಮಹಾಭೋಗವು. ಒಂದು ಕವಡೆಯನ್ನು ಕೊಟ್ಟರೆ ಅದೇ ಮಹಾದಾನವು. ಪರರ ಹೆಂಗಸರನ್ನು ತಾಯಿಯರಂತೆಯೂ, ಪರರ ಪದಾರ್ಥವನ್ನು ಮಣ್ಣಿನ ಹೆಂಟೆಯಂತೆಯೂ, ತಿಳಿಯುತ್ತೇನೆ. ಅಲ್ಲದೆ ಪರರ ಹೆಂಡಿರನ್ನು ನೋಡಿದರೆ ಹಾವಿನಂತೆ ಅಂಜುವೆನು. ಇವೇ ನನ್ನ ಯಜ್ಞಗಳು ಆದ್ದರಿಂದ ಸುವರ್ಣದಿಂದ ತುಂಬಿದ ಅತ್ತಿ ಹಣ್ಣುಗಳನ್ನು ತೆಗೆದುಕೊಳ್ಳುವುದಿಲ್ಲ ಸತ್ಯವು, ಖಂಡಿತ. ಕೆಸರನ್ನು ತುಳಿದು ತೊಳೆದುಕೊಳ್ಳುವುದಕ್ಕಿಂತಲೂ, ಮುಟ್ಟದೆ ದೂರದಲ್ಲಿರುವುದೇ ಉತ್ತಮವಲ್ಲವೆ !

॥ ಭಗವಾನುವಾಚ ॥

ಇತ್ಯುಕ್ತೇ ತು ನರಶ್ರೇಷ್ಠ ಪುಷ್ಪವರ್ಷಂ ಪಪಾತ ಪ ।
ಮೂರ್ಧ್ನಿ ದೇಶೇ ತನೌ ತಸ್ಯ ಸರ್ವದೇವೇರಿತಂ ದ್ವಿಜಂ ॥ ೬೫ ॥

ದೇವದುಂದುಭಯೋ ನೇದುರ್ನೃತ್ಯಂತ್ಯಪ್ಸರಸಾಂ ಗಣಾಃ ।
ಜಗುರ್ಗಂಧರ್ವಪತಯೋ ವಿಮಾನಂ ಚಾಪತದ್ದಿವಃ ॥ ೬೬ ॥

ಊಚುರ್ದೇವಗಣಾಸ್ತತ್ರ ವಿಮಾನಮಿದಮಾರುಹ ।
ಸತ್ಯಲೋಕಂ ಸಮಾಸಾದ್ಯ ಭುಂಕ್ಷ್ವ ಭೋಗ್ಯಂ ಮಹೇಂದ್ರವತ್ ॥ ೬೭ ॥

ಸಂಖ್ಯಾ ತೇ ನಾಪಿ ವರ್ತೇತ ಭೋಗ್ಯಕಾಲಸ್ಯ ಧಾರ್ಮಿಕ ।
ಇತ್ಯುಕ್ತೇಷು ಚ ದೇವೇಷು ಶೂದ್ರೋ ವಚನಮಬ್ರವೀತ್ ॥ ೬೮ ॥

॥ ಶೂದ್ರ ಉವಾಚ ॥

ಕಥಂ ನಿರ್ಗ್ರಂಥಿಕಸ್ಯಾಸ್ಯ ಜ್ಞಾನಂ ಚೇಷ್ಟಾಸ್ಯ ಭಾಷಣಂ ।
ಕಿಂ ವಾ ಹರಿಹರೌ ಬ್ರಹ್ಮಾ ಕಿಂ ವಾ ಶಕ್ರೋ ಬೃಹಸ್ಪತಿಃ ।
ಕಿಂ ವಾ ಮಚ್ಛಲನಾದೇವ ಸಾಕ್ಷಾದ್ಧರ್ಮ ಇಹಾಗತಃ ॥ ೬೯ ॥

---

೬೫. ಭಗವಂತನು ಹೇಳಿದನು- ಆತನು ಹೀಗೆ ಹೇಳಲು ದೇವತೆಗಳು ಅವನ ತಲೆಯಮೇಲೆ ಮೈಮೇಲೆಲ್ಲಾ ಹೂಮಳೆಯನ್ನು ಸುರಿಸಿದರು.

೬೬. ದೇವತೆಗಳ ದುಂದುಭಿಗಳು ಧ್ವನಿಮಾಡಿದುವು ಅಪ್ಸರಸ್ತ್ರೀಯರು ಕುಣಿದರು. ಗಂಧರ್ವರು ಹಾಡಿದರು. ಅಂತರಿಕ್ಷದಿಂದ ವಿಮಾನವು ಬಂದಿತು.

೬೭. ಆಗ ದೇವತೆಗಳು ಈ ವಿಮಾನವನ್ನು ಹತ್ತಿ ಕುಳಿತುಕೋ. ಸತ್ಯಲೋಕಕ್ಕೆ ಹೋಗಿ ಇಂದ್ರನಂತೆ ಬೇಕಾದ ಭೋಗಗಳನ್ನ ಅನುಭವಿಸು.

೬೮. ಎಲೈ ಧಾರ್ಮಿಕನೇ! ನೀನು ಅನುಭವಿಸುವ ಕಾಲಕ್ಕೆ ಮಿತಿಯೇ ಇಲ್ಲ. ಎಂದು ದೇವತೆಗಳು ಹೇಳಲು ಆಗ ಶೂದ್ರನು ಇಂತೆಂದನು.

೬೯. ಶೂದ್ರನು ಹೇಳಿದನು- ಈ ಸನ್ಯಾಸಿಮಾತ್ರದವನಿಗೆ ಈ ರೀತಿ ನಡತೆ ಈರೀತಿ ಮಾತುಗಳು ಬರಲು ಕಾರಣವೇನು ? ಸನ್ಯಾಸಿಯು ವಿರಕ್ತನಲ್ಲವೇ ? ಅಥವಾ ನನ್ನನ್ನು ಮೋಸಪಡಿಸಲು ಹರಿಯೋ ಹರನೋ, ಇಂದ್ರನೋ, ಬೃಹಸ್ಪತಿಯೋ, ಧರ್ಮನೋ ಯಾರಾದರೂ ಪ್ರತ್ಯಕ್ಷರಾಗಿ ಈ ರೀತಿಯ ವೇಷದಿಂದ ಬಂದಿರಬಹುದೇ?

॥ ಶ್ರೀ ಭಗವಾನುವಾಚ ॥

ಇತ್ಯುಕ್ತೇ ಕ್ಷಪಣಶ್ಚಾಸೌ ಸ್ಮಿತೇ ವಚನಮಬ್ರವೀತ್ ॥ ೭೦ ॥

॥ ಕ್ಷಪಣಕ ಉವಾಚ ॥

ವಿಜ್ಞಾತುಂ ಚೈವ ವೋ ಧರ್ಮಮಹಂ ವಿಷ್ಣುರಿಹಾಗತಃ ।
ವಿಮಾನೇನ ದಿವಂ ಗಚ್ಛ ಸಕುಟುಂಬೋ ಮಹಾಮುನೇ ॥ ೭೧ ॥

ಮತ್ಪ್ರಸಾದಾಚ್ಚ ಯುಷ್ಮಾಕಂ ಸದೈವ ನವಯೌವನಂ ।
ಭವಿಷ್ಯತಿ ಮಹಾಪ್ರಾಜ್ಞ ಭಾಗ್ಯಾನಂತ್ಯಂ ಪ್ರಲಪ್ಸ್ಯಥ ॥ ೭೨ ॥

॥ ಶ್ರೀ ಭಗವಾನುವಾಚ ॥

ದಿವ್ಯಾಭರಣಸಂಯುಕ್ತಾ ದಿವ್ಯವಸ್ತ್ರೋಪಶೋಭಿತಾಃ ।
ಗತಾಸ್ತೇ ಸಹಸಾ ನಾಕಂ ಸರ್ವೈರ್ಬಂಧುಜನೈರ್ವೃತಾಃ ॥ ೭೩ ॥

ಏವಂ ದ್ವಿಜವರಶ್ರೇಷ್ಠ ಲೋಭತ್ಯಾಗಾದ್ಯಯುರ್ದಿವಂ ।
ತುಲಾಧಾರಸ್ತಥಾ ಧೀಮಾನ್ಸತ್ಯಧರ್ಮಪ್ರತಿಷ್ಠಿತಃ ॥ ೭೪ ॥

---

೭೦. ಭಗವಂತನು ಹೇಳಿದನು- ಈ ಶೂದ್ರನು ಹೀಗೆಂದು ಹೇಳುತ್ತಲೂ, ಆ ಬೌದ್ಧಸನ್ಯಾಸಿಯು ನಗುತ್ತ ಇಂತೆಂದನು.

೭೧. ಕ್ಷಪಣಕನು ಹೇಳಿದನು- ಎಲೈ ಮುನಿಯೇ ! ನಿನ್ನ ಧರ್ಮವನ್ನು ತಿಳಿಯಲು ನಾನು ಬಂದೆನು ನಾನು ವಿಷ್ಣುವು. ನೀನು ಕುಟುಂಬದೊಡನೆ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋಗು.

೭೨. ನನ್ನ ಅನುಗ್ರಹದಿಂದ ನಿಮಗೆ ಯಾವಾಗಲೂ ಹೊಸ ಯೌವನವಿರಲಿ. ಅನಂತವಾದ ಭಾಗ್ಯವನ್ನು ಅನುಭವಿಸಿರಿ.

೭೩. ಭಗವಂತನು ಹೇಳಿದನು - ಅವರು ದಿವ್ಯವಾದ ಆಭರಣಗಳನ್ನು ತೊಟ್ಟು ಉತ್ತಮವಾದ ಬಟ್ಟೆಗಳನ್ನೂ ಸಹ ಉಟ್ಟು ಬಂಧು ಜನಗಳೊಡನೆ ಸ್ವರ್ಗಕ್ಕೆ ಹೋದರು.

೭೪. ಎಲೈ ಬ್ರಾಹ್ಮಣನೇ ! ಈ ರೀತಿ ಲೋಭವನ್ನು ಬಿಟ್ಟದರಿಂದ ಸ್ವರ್ಗವನ್ನು ಹೊಂದಿದ್ದಾರೆ. ತುಲಾಧಾರನು ಅದೇ ರೀತಿಯಾಗಿ ಧಾರ್ಮಿಕನಾಗಿ ಸತ್ಯಧರ್ಮದಲ್ಲಿಯೇ ನಿಂತಿದ್ದಾನೆ.

ತೇನ ಜಾನಾತಿ ತದ್ವೃತ್ತಂ ದೇಶಾಂತರಸಮುದ್ಭವಂ ।
ತುಲಾಧಾರಸಮೋ ನಾಸ್ತಿ ಸುರಲೋಕೇ ಪ್ರತಿಷ್ಠಿತಃ ॥ ೭೫ ॥

ತಸ್ಮಾತ್ತ್ವಮಪಿ ಭೂದೇವ ಶಮಂ ಗತ್ವಾ ದಿವಂ ವ್ರಜ ।
ಯ ಇಮಂ ಶೃಣುಯಾನ್ಮರ್ತ್ಯಃ ಸರ್ವಧರ್ಮಪ್ರತಿಷ್ಠಿತಃ ॥ ೭೬ ॥

ಜನ್ಮಜನ್ಮಾರ್ಜಿತಂ ಪಾಪಂ ತತ್ಕ್ಷಣಾತ್ತಸ್ಯ ನಶ್ಯತಿ ।
ಸಕೃತ್ಪಠನಮಾತ್ರೇಣ ಸರ್ವಯಜ್ಞಫಲಂ ಲಭೇತ್ ।
ಲೋಕಾನಾಂ ಪುರತೋ ವಿಪ್ರ ದೇವಾನಾಮರ್ಚ್ಯತಾಂ ವ್ರಜೇತ್ ॥ ೭೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪಂಚಾಖ್ಯಾನೇ
ಕ್ಷಪಣಕ ಸಂವಾದೇ ಶೂದ್ರಸ್ಯಾಲೋಭಾಖ್ಯಾನಂನಾಮ
ಪಂಚಾಶತ್ತಮೋಽಧ್ಯಾಯಃ

---

೭೫. ಆದರಿಂದಲೇ ಅವನು ಬೇರೇದೇಶದ ವಿಷಯಗಳನ್ನು ತಿಳಿಯಲು ಬಲ್ಲನು. ತುಲಾಧಾರನಿಗೆ ಸಮಾನನು ಇಲ್ಲವೇ ಇಲ್ಲ. ಅವನು ಸ್ವರ್ಗದಲ್ಲಿಯೇ ಇರತಕ್ಕವನು.

೭೬-೭೭. ಆದ್ದರಿಂದ ಎಲೈ ಬ್ರಾಹ್ಮಣನೇ! ನೀನು ಶಾಂತಿಯನ್ನು ಹೊಂದಿ ಸ್ವರ್ಗವನ್ನು ಹೊಂದು. ಇದನ್ನು ಕೇಳಿದವನು ಸರ್ವ ಧರ್ಮವನ್ನೂ ಹೊಂದಿದವನಾಗಿ ಜನ್ಮಾಂತರಗಳ ಪಾಪಗಳನ್ನು ಒಡನೆಯೇ ಕಳೆದುಕೊಳ್ಳುತ್ತಾನೆ. ಒಂದಾವರ್ತಿ ಓದುವುದರಿಂದಲೇ ಎಲ್ಲಾ ಯಜ್ಞಗಳ ಫಲವನ್ನೂ ಹೊಂದುತ್ತಾನೆ ಜನಗಳ ಎದುರಿಗೇನೇ ದೇವತೆಗಳು ಇವನನ್ನು ಗೌರವಿಸುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದ ಪಂಚಾಖ್ಯಾನದ
ಕ್ಷಪಣಕ ಸಂವಾದದಲ್ಲಿ ಶೂದ್ರನ ಅಲೋಭಕಥನವೆಂಬ
ಐವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಏಕಪಂಚಾಶತ್ತಮೋಽಧ್ಯಾಯಃ ॥



॥ ಶ್ರೀ ಭಗವಾನುವಾಚ ॥

ಅದ್ರೋಹಕಸ್ಯ ಚಾಖ್ಯಾತೋ ಮಹಿಮಾ ಲೋಕದುಸ್ಸಹಃ ।
ಏಕತಲ್ಪೇ ಗತಾಂ ವಾಮಾಂ ಕ್ಷಾನ್ತ್ವಾ ಸರ್ವಜಿತೋಽಭವತ್ ॥ ೧ ॥

ಜ್ಞಾನಿನಾಮಪಿ ದುಸ್ಸಾಧ್ಯಂ ಮುನೀನಾಂ ಬ್ರಹ್ಮವಾದಿನಾಂ ।
ಸುರಾಸುರಮನುಷ್ಯಾಣಾಂ ಪಶೂನಾಂ ಪಕ್ಷಿಣಾಂ ತಥಾ ॥ ೨ ॥

ಸ್ವಭಾವಾದ್ವಿಷಮಂ ಕಾಮಂ ಜೇತುಂ ಕಃ ಪುರುಷಃ ಕ್ಷಮಃ ।
ಅದ್ರೋಹಕಮೃತೇ ವಿಪ್ರ ಸ ಏವ ಭವಜಿತ್ಪುಮಾನ್ ॥ ೩ ॥

---

### ಐವತ್ತೊಂದನೆಯ ಅಧ್ಯಾಯವು

೧. ಭಗವಂತನು ಹೇಳಿದನು- ಅದ್ರೋಹಕನ ಮಹಿಮೆಯು ಬಹು ಕಠಿಣವಾದುದು. ಲೋಕದಲ್ಲಿ ಆಚರಿಸಲು ಕಷ್ಟವು. ಅದನ್ನು ಹೇಳಿದ್ದೇನೆ. ಒಂದೇ ಹಾಸಿಗೆಯಲ್ಲಿ ಸುಂದರಿಯು ಮಲಗಿದ್ದರೂ ಕ್ಷಮೆಯಿಂದಿದ್ದು ಎಲ್ಲವನ್ನೂ ಜಯಿಸಿದ ಲೋಕಪೂಜ್ಯನು. ಬಹು ಇಂದ್ರಿಯ ನಿಗ್ರಹಿಯು.

೨-೩. ಈ ರೀತಿಯಾದ ಇಂದ್ರಿಯ ಜಯವು ಜ್ಞಾನಿಗಳಿಗೂ ಸಾಧ್ಯವಿಲ್ಲ. ಬ್ರಹ್ಮಜ್ಞರಾದ ಮುನಿಗಳಿಗೂ ಸಾಧ್ಯವಿಲ್ಲ. ಸುರರು, ಅಸುರರು, ಮನುಷ್ಯರು, ಪಶುಪಕ್ಷಿಗಳು ಇವುಗಳಿಗೂ ಕೂಡ, ಸ್ವಭಾವದಿಂದಲೇ ಕಾಮನು ಜಯಿಸಲಶಕ್ಯನು. ಅಂತಹವನನ್ನು ಅದ್ರೋಹನೊಬ್ಬನು ಹೊರತಾಗಿ ಯಾವನು ತಾನೆ ಜಯಿಸಬಲ್ಲನು ? ಆ ಅದ್ರೋಹಕನೊಬ್ಬನೇ ಸಂಸಾರವನ್ನು ಜಯಿಸಿರುವನು.

ಅಹಲ್ಯಾಹರಣಾದೇವ ಸುರೇಶಶ್ಯ ಭಗಾಂಕತಾ ।
ಪುನರ್ದೇವ್ಯಾಃ ಪ್ರಸಾದಾಚ್ಚ ಸಹಸ್ರಾಕ್ಷೇತಿ ವಿಶ್ರುತಃ ॥
ವಿದಿತಂ ಸರ್ವಲೋಕೇ ಚ ತ್ರೈಲೋಕ್ಯೇ ಸಚರಾಚರೇ ॥ ೪ ॥

॥ ದ್ವಿಜ ಉವಾಚ ॥

ಕಥಂ ಚ ದೇವದೇವಸ್ಯ ಅಹಲ್ಯಾಹರಣಂ ಪ್ರಭೋ ।
ಭಗಾಂಕತ್ವಂ ಚ ಸಂಪ್ರಾಪ್ತಃ ಸಹಸ್ರಾಕ್ಷಸ್ಸುರಾಧಿಪಃ ॥ ೫ ॥

ನಗಾಂಕೋಪಿ ಭಗಾಂಕತ್ವಂ ಸಂಪ್ರಾಪ್ಯ ಸುರರಾಟ್ಕಥಂ ।
ದುಶ್ಶ್ರುತಂ ಸುರವೈಕಲ್ಯಂ ಶ್ರೋತುಮಿಚ್ಛಾಮಿ ತತ್ತ್ವತಃ ॥ ೬ ॥

॥ ಶ್ರೀ ಭಗವಾನುವಾಚ ॥

ಪುರಾ ಸ್ವಾಂತೋದ್ಭವಾಂ ಕನ್ಯಾಂ ಲೋಕೇಶಸ್ಯ ಮಹಾತ್ಮನಃ ।
ಗೌತಮಾಯ ದದೌ ಧಾತಾ ಲೋಕಪಾಲಾಗ್ರತೋ ಮುದಾ ॥ ೭ ॥

---

೪. ಇಂದ್ರನೂ ಕೂಡ ಅಂತಹ ಕಾಮನನ್ನು ಜಯಿಸಲಾರದೆ ಅಹಲ್ಯೆಯಲ್ಲಿ ರಮಿಸಿದುದರಿಂದ ಮೈಯೆಲ್ಲವೂ ಯೋನಿಯ ಗುರುತಾಯಿತು. ಪಾರ್ವತಿದೇವಿಯ ಅನುಗ್ರಹದಿಂದ ಅವು ಕಣ್ಣುಗಳಂತೆ ಇತರರಿಗೆ ಕಾಣುತ್ತಾ ಸಹಸ್ರಾಕ್ಷನೆನಿಸಿಕೊಂಡನು. ಈ ವಿಷಯವು ಲೋಕಕ್ಕೆಲ್ಲವೂ ಗೊತ್ತಿದೆ.

೫. ದ್ವಿಜನು ಹೇಳಿದನು- ದೇವದೇವನಾದ ಇಂದ್ರನು ಅಹಲ್ಯೆಯಲ್ಲಿ ಕಳ್ಳತನದಿಂದ ಹೇಗೆ ರಮಿಸಿದನು ? ಯೋನಿಯ ಗುರುತನ್ನು ಹೊಂದಿ ಅನಂತರ ಆತನು ಸಹಸ್ರಾಕ್ಷನಾದುದು ಹೇಗೆ ?

೬. ಆ ಇಂದ್ರನು ಪರ್ವತಶತ್ರುವೆಂದು ಬಿರುದನ್ನು ಹೊಂದಿದ್ದರೂ ಯೋನಿಯ ಗುರುತಿನಿಂದ ಅಪಖ್ಯಾತಿಯನ್ನು ಹೇಗೆ ಹೊಂದಿದನು ? ಇಂದ್ರನ ಈ ಹೀನಸ್ಥಿತಿಯನ್ನು ಕೇಳಬೇಕೆಂದಿದ್ದೇನೆ. ಹೇಳು ?

೭. ಶ್ರೀ ಭಗವಂತನು ಹೇಳಿದನು- ಬ್ರಹ್ಮನು ಪೂರ್ವದಲ್ಲಿ ತನ್ನ ಮಾನಸಿಯಾದ ಪುತ್ರಿಯನ್ನು ಲೋಕಪಾಲಕರ ಎದುರಿಗೆ ಗೌತಮನಿಗೆ ಮದುವೆಮಾಡಿ ಕೊಟ್ಟನು.

ತತಸ್ತು ಲೋಕಪಾಲಾನಾಂ ಮನ್ಮಥಾವಿಷ್ಟಚೇತಸಾಂ ।
ಶಚೀಪತೇಸ್ತು ಸಮ್ಮೋಹೋ ಹೃದಿ ಶಲ್ಯ ಇವ ಸ್ಥಿತಃ ॥ ೮ ॥

ಲೋಕಪಾಲಾನತಿಕ್ರಮ್ಯ ಸುವೇಶಾ ವರವರ್ಣಿನೀ ।
ದ್ವಿಜಾಯ ರತ್ನಭೂತ್ಯೈಷಾ ದತ್ತಾ ಕಿಂ ವಾ ಕರೋಮ್ಯಹಂ ॥ ೯ ॥

ಇತಿ ಸಂಚಿತ್ಯ ತಸ್ಯಾಸ್ತು ವರ್ತಮಾನೇ ಚ ಯೌವನೇ ।
ಪುನಶ್ಚ ಮಾಯಯಾ ದೃಷ್ಟಂ ರೂಪಂ ತಸ್ಯಾಸ್ಸುಶೋಭನಂ ॥ ೧೦ ॥

ಪುನಸ್ಸಂಚಿತ್ಯಮಾನೋಽಸೌ ಗೌತಮಾಧ್ಯಾಸನಂ ಗತಃ ।
ಪಾಶ್ಚಾತ್ಸಾತತ್ಯಗಮನಾದ್ಯದ್ವೃತ್ತಂ ತಚ್ಛೃಣುಷ್ವ ಮೇ ॥ ೧೧ ॥

ಏಕದಾ ಗೌತಮಸ್ಸ್ನಾತುಂ ಗತೋಽಸೌ ಪುಷ್ಕರಂ ಪ್ರತಿ ।
ಸಾಧ್ವೀ ಚ ಗೃಹಶೌಚಂ ಚ ಗೃಹವಸ್ತುನಿ ತತ್ಪರಾ ॥ ೧೨ ॥

---

೮. ಆಗ ಲೋಕಪಾಲಕರೆಲ್ಲರಿಗೂ ಆ ಕನ್ಯೆಯನ್ನು ನೋಡಿ ಮೋಹವುಂಟಾಯಿತು. ಅವರಲ್ಲಿ ಶಚೀದೇವಿಯ ಗಂಡನಾದ ಇಂದ್ರನಿಗೆ ಮಾತ್ರ ಆ ಮೋಹವು ಬಾಣದಂತೆ ನೆಟ್ಟುಬಿಟ್ಟಿತು.

೯. ಈ ಉತ್ತಮವಾದ ಸುಂದರಿಯನ್ನು ಲೋಕಪಾಲಕರನ್ನು ಮೀರಿ ಬ್ರಾಹ್ಮಣನಿಗೆ ಕೊಟ್ಟನಲ್ಲ! ಏನುಮಾಡಲಿ ?

೧೦. ಈ ರೀತಿಯಾಗಿ ಇಂದ್ರನು ಮೋಹಿಸಲು ಅವಳ ಸರಿಯಾದ ಯೌವನದ ರೂಪವೂ ಕೂಡ ಇವನ ಮೋಹಬುದ್ಧಿಯಿಂದ ಬಹುರಮ್ಯವಾಗಿ ಕಂಡಿತು.

೧೧, ಈ ರೀತಿ ತಿಳಿದ ಈ ಇಂದ್ರನು ಗೌತಮನ ಆಶ್ರಮಕ್ಕೆ ಹೋಗಿ ಅವನ ಬರುವಿಕೆ ಹೋಗುವಿಕೆಗಳನ್ನು ತಿಳಿದು ಅಲ್ಲಿದ್ದನು. ಅನಂತರ ನಡೆದುದನ್ನು ಕೇಳು.

೧೨-೧೩. ಹೀಗಿರಲು ಒಂದು ಸಾರಿ ಈ ಗೌತಮನು ಸ್ನಾನಕ್ಕೋಸ್ಕರ ಕೊಳಕ್ಕೆ ಹೋದನು. ಈ ಅಹಲ್ಯೆಯು ಮನೆಯ ಕೆಲಸಗಳನ್ನು ಮಾಡುತ್ತ

ಪ್ರವೃತ್ತಾ ದೇವವಾಸ್ತೂನಾಂ ಬಲಿಂ ವೈಶ್ವಾರ್ಥತತ್ಪರಂ ।
ಇಂಧನಂ ವಹ್ನಿಕಾರ್ಯಂ ಚ ನಿತ್ಯಕರ್ಮಾನುಸಂಚಯಾಂ ॥ ೧೩ ॥

ಏತಸ್ಮಿನ್ನಂತರೇ ಶಕ್ರೋ ಮುನೇಸ್ತಸ್ಯ ಮಹಾತ್ಮನಃ ।
ರೂಪಮಾಸ್ಥಾಯ ಗಾತ್ರೇಣ ಪ್ರವಿವೇಶೋಟಜಂ ಮುದಾ ॥ ೧೪ ॥

ಪತಿವ್ರತಾ ಪತಿಂ ದೃಷ್ಟ್ವಾ ಶ್ರದ್ಧಯಾ ಪರಯಾ ಸತೀ ।
ದೇವಸ್ಥಾನೇ ಚ ವಸ್ತೂನಾಂ ಸಂಚಯಂ ಕರ್ತುಮುದ್ಯತಾ
ತತಸ್ತಾಮಬ್ರವೀದಾರ್ತೋ ಮುನಿವೇಷಧರೋ ಹರಿಃ ॥ ೧೫ ॥

॥ ಇಂದ್ರ ಉವಾಚ ॥

ಪ್ರದ್ಯುಮ್ನವಶಗೋ ವಾಮೇ ದೇಹಿ ಮೇ ಚುಂಬನಾದಿಕಂ ॥ ೧೬ ॥

॥ ಭಗವಾನುವಾಚ ॥

ಏತಸ್ಮಿನ್ನಂತರೇ ಸಾ ಚ ತ್ರಪಾಯುಕ್ತಾಬ್ರವೀದ್ದ್ವಿಜಂ । ॥ ೧೭ ॥

---

ಗುಡಿಸುವುದು, ಸಾರಿಸುವುದನ್ನು ಮಾಡಿಕೊಂಡು ದೇವತೆಗಳಿಗೂ, ವಾಸ್ತುಪುರುಷರಿಗೂ ಬಲಿಕೊಡತಕ್ಕ ವೈಶ್ವದೇವದ ಅನ್ನಕ್ಕೋಸ್ಕರ ಅದರ ಕೆಲಸಗಳೆಲ್ಲವನ್ನೂ ಮಾಡಿಕೊಂಡು ಸೌದೆ ಬೆಂಕಿಗಳನ್ನು ಸಿದ್ಧಪಡಿಸಿಕೊಂಡಳು.

೧೪. ಇಷ್ಟರೊಳಗೆ ಈ ಇಂದ್ರನು ಆ ಗೌತಮನ ವೇಷವನ್ನು ಹಾಕಿಕೊಂಡು ಆ ಪರ್ಣಶಾಲೆಗೆ ಬಂದನು.

೧೫. ಪತಿವ್ರತೆಯಾದ ಆಕೆಯು ಗಂಡನ ವೇಷದ ಇಂದ್ರನನ್ನು ನೋಡಿದ ಕೂಡಲೇ ಗಂಡನೆಂದೇ ತಿಳಿದು ದೇವರಮನೆಯಲ್ಲಿ ಸಾಮಾನುಗಳೆಲ್ಲವನ್ನೂ ಸರಿಯಾಗಿ ತಂದಿಡಲು ಮೊದಲು ಮಾಡಿದಳು. ಆಗ ಆ ಕಪಟಿಯಾದ ಇಂದ್ರನು ಮನ್ಮಥನಿಂದ ದುಃಖಿತನಾಗಿ ಇಂತೆಂದನು.

೧೬. ಇಂದ್ರನು ಹೇಳಿದನು– ಎಲೈ ಸುಂದರಿಯೇ! ನಾನು ಮನ್ಮಥಪೀಡಿತನಾಗಿದ್ದೇನೆ. ನನ್ನನ್ನು ಮುತ್ತಿಕ್ಕುವುದೇ ಮುಂತಾದುವುಗಳಿಂದ ಸಂತೋಷಪಡಿಸು.

೧೭. ಭಗವಂತನು ಹೇಳಿದನು– ಈ ಮಧ್ಯದಲ್ಲಿ ಆಕೆಯು ಲಜ್ಜೆಪಟ್ಟು ಆ ಬ್ರಾಹ್ಮಣನನ್ನು ಕುರಿತು ಇಂತೆಂದಳು.

॥ ಅಹಲ್ಯೋವಾಚ ॥

ದೇವಕಾರ್ಯಾದಿಕಂ ತ್ಯಕ್ತ್ವಾ ವಕ್ತುಂ ನಾರ್ಹಸಿ ಮೇ ಪ್ರಭೋ ।
ಸರ್ವಂ ಜಾನಾಸಿ ಧರ್ಮಜ್ಞ ಪುಣ್ಯಾನಾಂ ನಿಶ್ಚಯಂ ಮುನೇ ॥
ಅಯಥಾರ್ಥೋಽಹವೇಲಾಯಾಮಧುನೈವ ನ ಯುಜ್ಯತೇ ॥ ೧೮ ॥

॥ ಭಗವಾನುವಾಚ ॥

ತತಸ್ತಾಂ ಚಾರುಸರ್ವಾಂಗೀಂ ದೃಷ್ಟ್ವಾ ಮನ್ಮಥಪೀಡಿತಃ ॥ ೧೯ ॥

॥ ಇಂದ್ರ ಉವಾಚ ॥

ಅಲಂ ಪ್ರಿಯೇ ನ ವಕ್ತವ್ಯಂ ಹೃಚ್ಛಯೋ ಮೇ ಪ್ರಜಾಯತೇ ।
ಕರ್ತವ್ಯಂ ಚಾಪ್ಯಕರ್ತವ್ಯಂ ಪತ್ಯುರ್ವಚನಸಮ್ಮತಂ ॥ ೨೦ ॥

ಕರೋತಿ ಸತತಂ ಯಾ ಚ ಸಾ ಚ ನಾರೀ ಪತಿವ್ರತಾ ।
ಲಂಘಯೇದ್ಯಾ ಚ ತಸ್ಯಾಜ್ಞಾಂ ಸುರತೇ ಚ ವಿಶೇಷತಃ ॥
ಪುಣ್ಯಂ ತಸ್ಯಾ ಭವೇನ್ನಷ್ಟಂ ದುರ್ಗತಿಂ ಚಾಧಿಗಚ್ಛತಿ ॥ ೨೧ ॥

---

೧೮ ಅಹಲ್ಯೆಯು ಹೇಳಿದಳು- ಎಲೈ ಪತಿಯೇ ! ದೇವರ ಪೂಜೆ ಮುಂತಾದುವನ್ನು ಬಿಟ್ಟು ನೀನು ಹೀಗೆ ಮಾಡಬಾರದು. ಧರ್ಮಗಳೂ, ಪುಣ್ಯಗಳೂ, ಇಂತವುಗಳೆಂದು ನೀನೆಲ್ಲವನ್ನೂ ತಿಳಿದಿದ್ದೀಯೆ. ಈ ಕಾಲವು ಸರಿಯಾದ ಕಾಲವಲ್ಲ ಈಗ ಯೋಗ್ಯವಲ್ಲ.

೧೯. ಭಗವಂತನು ಹೇಳಿದನು- ಆಕೆಯು ಮಾತನಾಡುತ್ತಿದ್ದುದನ್ನು ಕೇಳಿದ ಮೇಲಂತೂ ಆ ಇಂದ್ರನು ಮತ್ತೂ ಮನ್ಮಥಬಾಧೆಯಿಂದ ಕೂಡಿದನು.

೨೦. ಇಂದ್ರನು ಹೇಳಿದನು- ಎಲೈ ಪ್ರಿಯಳೇ ! ಹಾಗೆನ್ನಬೇಡ. ನನಗೆ ಮನ್ಮಥನ ತೊಂದರೆಯು ಹೆಚ್ಚುತ್ತಿದೆ. ಒಳ್ಳೆಯದಾಗಲಿ, ಕೆಟ್ಟದ್ದಾಗಲಿ, ಗಂಡನ ಮಾತಿನಂತೆ ಯಾವಳು ಇರುತ್ತಾಳೆಯೋ ಅವಳೇ ಗಂಡನಿಗೆ ಸಮ್ಮತಳು.

೨೧. ಮತ್ತು ಪತಿಯ ವಾಕ್ಯದಂತೆ ನಡೆಯುತ್ತಾಳೆಯೋ ಆಕೆಯೇ ಖಂಡಿತವಾಗಿಯೂ ಪತಿವ್ರತೆಯು. ಅವನ ಮಾತನ್ನು ಮೀರಿದರೆ ಅದರಲ್ಲಿಯೂ ಸುರತದ ವಿಷಯದಲ್ಲಿ ಬದಲು ಮಾತಾಡಿದರೆ ಆಕೆಯು ಪುಣ್ಯಗಳನ್ನು ಕಳೆದುಕೊಂಡು ನರಕವನ್ನು ಹೊಂದುತ್ತಾಳೆ.

॥ ಭಗವಾನುವಾಚ ॥

ಸಾಬ್ರವಿದ್ದೇವವಸ್ತೂನಿ ಸಂತಿ ದೇವಾರ್ಥತೋ ಮುನೇ ।
ನಿತ್ಯಕರ್ಮಾಣಿ ಚಾನ್ಯಾನಿ ಕಿಂ ವಾ ತೇಷು ವಿಪರ್ಯಯಃ ॥ ೨೨ ॥

ಸ ಚೋವಾಚ ಸತೀಂ ತತ್ರ ದೇಹ್ಯಾಲಿಂಗಾದಿಕಂ ಮಮ ।
ಮನಸಾ ಭಯ ಮುತ್ಸೃಜ್ಯ ಮಯಾ ದತ್ತಾನಿ ತಾನಿ ಚ ॥ ೨೩ ॥

ಇತ್ಯುಕ್ತ್ವಾ ತಾಂ ಪರಿಷ್ವಜ್ಯ ಕೃತಸ್ತೇನ ಮನೋರಥಃ ।
ಏತಸ್ಮಿನ್ನಂತರೇ ವಿಪ್ರ ಮುನೇರ್ಹ್ಯರ್ಧ್ಯಂ ಚ ಕಲ್ಪಿತಂ ॥ ೨೪ ॥

ತತೋ ಧ್ಯಾನಂ ಸಮಾರಭ್ಯಾಜಾನಾದ್ವೃತ್ತಂ ಶಚೀಪತೇಃ ।
ತೂರ್ಣಮೇವ ದ್ವಾರದೇಶೇ ಗತ್ವಾ ಚ ಸಮುಪಸ್ಥಿತಃ ॥ ೨೫ ॥

ಶಕ್ರೋ ಮುನಿಂ ತು ಸಂಲಕ್ಷ್ಯ ಚೌತುದೇಹಂ ವಿವೇಶ ಹ ।
ಗಚ್ಛತೋ ಪೃಷದಂಶಸ್ಯ ಪದ್ಧತೌ ಪ್ರಚಚಾಲ ಹ ॥ ೨೬ ॥

---

೨೨. ಭಗವಂತನು ಹೇಳಿದನು– ಇದು ದೇವರಮನೆ. ದೇವರ ಪೂಜೆಯ ಪದಾರ್ಥಗಳೆಲ್ಲವೂ ಇಲ್ಲಿವೆ. ಮಾಡಬೇಕಾದ ನಿತ್ಯಕರ್ಮಗಳು ಅನೇಕವಾಗಿವೆ. ಇದೆಲ್ಲವನ್ನೂ ಬಿಟ್ಟು ಇಂದೇಕೆ ಈ ತಲೆಕೆಳಕಾದ ಕೆಲಸಮಾಡುತ್ತಿದ್ದೀಯೆ ?

೨೩. ಆಗ ಆ ಕಪಟ ಋಷಿಯು ನೀನು ಮೊದಲು ನನಗೆ ಆಲಿಂಗನಾದಿಗಳನ್ನು ಕೊಡು. ನಾನು ಕೊಡುವುದನ್ನು ಕೊಂಚವೂ ಭಯಪಡದೆ ಸ್ವೀಕರಿಸು. ಎಂದನು.

೨೪-೨೫. ಹೀಗೆಂದು ಹೇಳಿ ಆ ಇಂದ್ರನು ಆಕೆಯನ್ನು ಆಲಿಂಗಿಸಿಕೊಂಡು ತನ್ನ ಇಷ್ಟಾರ್ಥವನ್ನು ನೆರವೇರಿಸಿಕೊಂಡನು. ಇಷ್ಟರಲ್ಲಿ ಈ ಕಪಟ ಗೌತಮನಾದ ಇಂದ್ರನ ವಿಷಯವನ್ನು ಧ್ಯಾನದಿಂದ ಗೌತಮನು ತಿಳಿದು ಜಾಗ್ರತೆಯಾಗಿ ಬಂದು ಬಾಗಿಲಿನಲ್ಲಿ ನಿಂತುಕೊಂಡನು. ಒಡನೆಯೇ ಇಂದ್ರನೂ ಬಾಗಿಲಿಗೆ ಹೊರಟು ಬಂದನು.

೨೬. ಆ ವೇಳೆಗೆ ಸರಿಯಾಗಿ ಹೊರಗಿನಿಂದ ಗೌತಮನೂ ಮನೆಯ ಬಾಗಿಲಿನಲ್ಲಿ ಎದುರಿಗೆ ಬಂದುದನ್ನು ನೋಡಿ ಅಲ್ಲಿದ್ದ ಒಂದು ಬೆಕ್ಕಿನ ರೂಪವನ್ನು ಹೊಂದಿದನು. ಅಂತೆಯೇ ಪೃಷದಂಶದ ಕಡೆಗೆ ಹೋಗುತ್ತಾ ದಾರಿಯಲ್ಲಿ ಎಡವಿದನು.

ಮುನಿಸ್ತತ್ರಾವದತ್ತಂ ವೈ ಕಸ್ತ್ವಂ ಮಾರ್ಜಾರರೂಪಧೃತ್ ।
ಭಯಾತ್ತಸ್ಯ ಮುನೇರಗ್ರೇ ಶಕ್ರಃ ಪ್ರಾಂಜಲಿರಾಸ್ಥಿತಃ ॥
ಮಘವಸ್ತಂ ಪುರೋ ದೃಷ್ಟ್ವಾ ಚುಕೋಪ ಮುನಿಪುಂಗವಃ ॥ ೨೭ ॥

॥ ಮುನಿರುವಾಚ ॥

ಯತ್ತ್ವಯಾ ಚೇದೃಶಂ ಕರ್ಮ ಭಗಾರ್ಥಂ ಛಲಸಾಹಸಂ ।
ಕೃತಂ ತಸ್ಮಾತ್ತವಾಂಗಂ ತು ಸಹಸ್ರಭಗಮುತ್ತಮಂ । ॥ ೨೮ ॥

ಭವತ್ವಿಹ ತು ಪಾಪಿಷ್ಠ ಲಿಂಗಂ ತೇ ನಿಪತಿಷ್ಯತಿ ।
ಗಚ್ಛ ಮೇ ಪುರತೋ ಮೂಢ ಸುರಸ್ಥಾನಂ ದಿವೌಕಸಃ ॥ ೨೯ ॥

ಪಶ್ಯಂತಿ ಮುನಿಶಾರ್ದೂಲ ನರಾಸ್ಸಿದ್ಧಾಸ್ಸಹೋರಗಾಃ ॥ ೩೦ ॥

---

೨೭. ಆಗ ಇದನ್ನು ನೋಡಿದ ಗೌತಮನು ನೀನಾರೆಂದು ಕೇಳಿದನು. ಆ ಮಾತನ್ನು ಕೇಳಿದೊಡನೆಯೇ ಹೆದರಿಕೆಯಿಂದ ಇಂದ್ರನು ಆ ಋಷಿಯ ಎದುರಿಗೆ ಕೈಮುಗಿದುಕೊಂಡು ನಿಂತನು. ಇಂದ್ರನನ್ನು ನೋಡಿದೊಡನೆಯೇ ಆ ಗೌತಮನಿಗೆ ಕೋಪವು ಬಂದಿತು.

೨೮-೩೦ ಮುನಿಯು ಹೇಳಿದನು– ಭಗಕ್ಕೋಸ್ಕರ ಈ ರೀತಿಯಾದ ಸಾಹಸವೂ, ಮೋಸವೂ ಆದ ಕೆಲಸವನ್ನು ನೀನು ಮಾಡಿದುದರಿಂದ ನಿನ್ನ ದೇಹವೆಲ್ಲವೂ, ಶ್ರೇಷ್ಠವಾದ ಸಾವಿರ ಭಗವುಳ್ಳದ್ದಾಗಲಿ. ಅಲ್ಲದೆ ಎಲೈ ಪಾಪಿಯೇ ! ರಮಿಸಲು ಪ್ರಯತ್ನಿಸಿದ ಆ ನಿನ್ನ ಲಿಂಗವೂ ಕೂಡ ಬಿದ್ದುಹೋಗಲಿ. ಎಲೈ ಮೂಢನೇ ! ನನ್ನ ಎದುರಿಗೆ ನಿಲ್ಲಬೇಡ ಹೊರಡು. ದೇವತೆಗಳು ಇರುವ ಜಾಗಕ್ಕೆ ಹೋಗು. ಅಲ್ಲಿ ದೇವತೆಗಳೂ, ಮುನಿಗಳೂ, ನರರೂ, ಯಕ್ಷರೂ, ಸಿದ್ಧರೂ, ಉರಗರೂ, ನಿನ್ನ ಸ್ಥಿತಿಯನ್ನು ನೋಡಲಿ.

॥ ಭಗವಾನುವಾಚ ॥

ಏವಮುಕ್ತ್ವಾ ಮುನಿಶ್ರೇಷ್ಠೋ ರುದತೀಂ ತಾಂ ಪತಿವ್ರತಾಂ ।
ಪಪ್ರಚ್ಛ ಕಿಮಿದಾನೀಂ ತೇ ಕರ್ಮದಾರುಣಮಾಗತಂ ॥
ಇತ್ಯುಕ್ತೇ ವೇಪಮಾನಾ ಸಾ ಭೀತಾ ಪತಿಮುವಾಚ ಹ ॥ ೩೧ ॥

॥ ಅಹಲ್ಯೋವಾಚ ॥

ಅಜ್ಞಾನಾದ್ಯತ್ಕೃತಂ ಕರ್ಮ ಕ್ಷಂತುಮರ್ಹಸಿ ವೈ ಪ್ರಭೋ ॥ ೩೨ ॥

॥ ಮುನಿರುವಾಚ ॥

ಪರೇಣಾಭಿಗತಾಸಿ ತ್ವಮಮೇಧ್ಯಾ ಪಾಪಚಾರಿಣೀ ।
ಅಸ್ಥಿಚರ್ಮಸಮಾವಿಷ್ಟಾ ನಿರ್ಮಾಂಸಾ ನಖವರ್ಜಿತಾ ॥
ಚಿರಂ ಸ್ಥಾಸ್ಯಸಿ ಚೈಕಾಪಿ ತ್ವಾಂ ಪಶ್ಯಂತು ಜನಾ ಸ್ತ್ರಿಯಃ ॥ ೩೩ ॥

॥ ಶ್ರೀ ಭಗವಾನುವಾಚ ॥

ದುಃಖಿತಾ ತಮುವಾಚೇದಂ ಶಾಪಸ್ಯಾಂತೋ ವಿಧೀಯತಾಂ ।
ಇತ್ಯುಕ್ತೇ ಕರುಣಾವಿಷ್ಟೋ ಮನ್ಯುನಾಕ್ಷಿಪರಿಪ್ಲುತಃ ॥ ೩೪ ॥

---

೩೧ ಭಗವಂತನು ಹೇಳಿದನು- ಇಂದ್ರನನ್ನು ಇಂತು ಶಪಿಸಿ ಆ ಗೌತಮನು ಅಳುತ್ತಿರುವ ಆ ಪತಿವ್ರತೆಯಾದ ಅಹಲ್ಯೆಯನ್ನು ಕುರಿತು ನಿನ್ನನ್ನು ಈಗ ಯಾವ ಪಾಪಕರ್ಮವು ಆವರಿಸಿತ್ತು ? ಎನ್ನಲು ಆಕೆಯು ಭಯದಿಂದ ನಡುಗುತ್ತಾ ಇಂತೆಂದಳು.

೩೨. ಅಹಲ್ಯೆಯು ಹೇಳಿದಳು- ನಾನು ಈ ಕೆಲಸವನ್ನು ತಿಳಿಯದೆ ಮಾಡಿದೆನು. ದಯವಿಟ್ಟು ಕ್ಷಮಿಸು.

೩೩. ಗೌತಮನು ಹೇಳಿದನು- ಮತ್ತೊಬ್ಬನು ನಿನ್ನಲ್ಲಿ ರಮಿಸಿದುದರಿಂದ ಅಪವಿತ್ರಳೂ, ಪಾಪಾಚಾರವುಳ್ಳವಳೂ ಆಗಿದ್ದೀಯೆ. ಚರ್ಮ ಮೂಳೆಗಳಿಂದ ಕೂಡಿ ಮಾಂಸ ಉಗುರುಗಳಿಲ್ಲದವಳಾಗಿ ಒಬ್ಬಂಟಿಗಳಾಗಿ ಬಹುಕಾಲವಿರು. ನಿನ್ನನ್ನು ಹೆಂಗಸರೆಲ್ಲಾ ನೋಡಲಿ.

೩೪-೩೬. ಭಗವಂತನು ಹೇಳಿದನು— ದುಃಖಗೊಂಡ ಆ ಅಹಲ್ಯೆಯು ಸ್ವಾಮಿಯೇ ! ನನ್ನ ಶಾಪಕ್ಕೆ ಕೃಪೆಯಿಂದ ಕೊನೆಯನ್ನು ಕಾಣಿಸೆಂದಳು. ಆಕೆಯು ಹಾಗೆ ಹೇಳುತ್ತಲೂ ಕೃಪೆಯಿಂದ ಕೂಡಿದ ಆ ಋಷಿಯೂ ಕಣ್ಣಿನಲ್ಲಿ ದುಃಖದಿಂದ

ಜಗಾದ ಗೌತಮೋ ವಾಕ್ಯಂ ರಾಮೋ ದಾಶರಥಿರ್ಯದಾ ।
ವನಮಭ್ಯಾಗತೋ ವಿಷ್ಣುಃ ಸೀತಾಲಕ್ಷ್ಮಣಸಂಯುತಃ ॥ ೩೫ ॥

ದೃಷ್ಟ್ವಾ ತಾಂ ದುಃಖಿತಾಂ ಶುಷ್ಕಾಂ ನಿರ್ದೇಹಾಂ ಪಥಿ ಸಂಸ್ಥಿತಾಂ ।
ಗದಿಷ್ಯತಿ ಚ ವೈ ರಾಮೋ ವಸಿಷ್ಠಸ್ಯಾಗ್ರತೋ ಹಸನ್ ॥ ೩೬ ॥

ಕಿಮಿಯಂ ಶುಷ್ಕರೂಪಾ ಚ ಪ್ರತಿಮಾಸ್ಥಿಮಯೀ ಶಿವಾ ।
ನ ದೃಷ್ಟಂ ಮೇ ಪುರಾ ಬ್ರಹ್ಮನ್ರೂಪಂ ಲೋಕವಿಪರ್ಯಯಾ ॥ ೩೭ ॥

ತತೋ ರಾಮಂ ಮಹಾಭಾಗಂ ವಿಷ್ಣುಂ ಮಾನುಷವಿಗ್ರಹಂ ।
ವಸಿಷ್ಠಃ ಕಥಯಾಮಾಸ ಯದ್ವೃತ್ತಮಖಿಲಂ ಚ ತತ್ ॥ ೩೮ ॥

ವಸಿಷ್ಠವಚನಂ ಶ್ರುತ್ವಾ ಪುನರಾಹ ಸ ಧರ್ಮವಿತ್ ।
ಅಸ್ಯಾ ದೋಷೋ ನ ಚೈವಾಸ್ತಿ ದೋಷೋಯಂ ಪಾಕಶಾಸನೇ ॥ ೩೯ ॥

ಏತದುಕ್ತೇ ತು ರಾಮೇ ತು ತ್ಯಕ್ತ್ವಾ ರೂಪಂ ಜುಗುಪ್ಸಿತಂ ।
ದಿವ್ಯಂ ರೂಪಂ ಸಮಾಸ್ಥಾಯ ಮದ್ಗೃಹಂ ಚಾಗಮಿಷ್ಯಸಿ ॥ ೪೦ ॥

---

ನೀರನ್ನು ತುಂಬಿಕೊಂಡು ಇಂತೆಂದನು. ವಿಷ್ಣುವು ದಶರಥನ ಮಗನಾಗಿ ಹುಟ್ಟಿ ರಾಮನೆಂಬ ಹೆಸರುಳ್ಳವನಾಗಿ ಸೀತಾಲಕ್ಷ್ಮಣರೊಂದಿಗೆ ಕಾಡಿಗೆ ಬಂದು ದಾರಿಯಲ್ಲಿ ಒಣಕಲಾಗಿರುವ ನಿನ್ನನ್ನು ನೋಡಿ ವಸಿಷ್ಠನ ಎದುರಿಗೆ ನಗುತ್ತ ಹೇಳುವನು.

೩೭. ಮೂಳೆಯ ರೂಪವಾಗಿರುವ ಒಣಗಿಕೊಂಡಿರುವ ಈ ಪ್ರತಿಮೆಯು ಯಾವುದು ? ಈ ರೀತಿಯಿಂದ ಲೋಕವಿಲಕ್ಷಣವಾದ ರೂಪವನ್ನು ನಾನು ನೋಡಿಯೇ ಇಲ್ಲವಲ್ಲ ! ಎನ್ನುವನು.

೩೮. ಆಗ ವಿಷ್ಣುವಿನ ಅವತಾರರೂಪವಾದ ರಾಮನನ್ನು ಕುರಿತು ಎಲ್ಲವನ್ನು ತಿಳಿಸುವನು.

೩೯. ವಸಿಷ್ಠನ ಈ ಮಾತನ್ನು ಕೇಳಿ ರಾಮನು ವಿಮರ್ಶಿಸಿ ಈಕೆಯ ದೋಷವೇನೂ ಇಲ್ಲ. ಈ ದೋಷವೆಲ್ಲವೂ ಇಂದ್ರನದೆಂದು ಹೇಳುವನು.

೪೦. ರಾಮನು ಹಾಗೆ ಹೇಳಿದೊಡನೆಯೇ ಆ ಅಸಹ್ಯ ರೂಪವನ್ನು ಬಿಟ್ಟು ಸುಂದರವಾದ ರೂಪವನ್ನು ಹೊಂದಿ ನನ್ನ ಮನೆಗೆ ಬರುತ್ತೀಯೆ.

॥ ಭಗವಾನುವಾಚ ॥

ಶಪ್ತ್ವಾ ತು ಗೌತಮೋಽಹಲ್ಯಾಂ ತಪಸ್ತಪ್ತುಂ ಗತೋ ವನಂ ।
ತತೋಽತ್ಯಂತಂ ಶುಷ್ಕರೂಪಾ ತಥೈವ ಪಥಿ ಸಂಸ್ಥಿತಾ ॥ ೪೧ ॥

ರಾಮಸ್ಯ ವಚನಾದೇವ ಗೌತಮಂ ಪುನರಾಗತಾ ।
ಗೌತಮೋಽಪಿ ತಯಾ ಸಾರ್ಧಮುದ್ಯೈವಂ ದಿವಿ ತಿಷ್ಠತಿ ॥ ೪೨ ॥

ಇಂದ್ರೋಽಪಿ ತ್ರಪಯಾ ಯುಕ್ತಃ ಸ್ಥಿತಶ್ಚಾಂತರ್ಜಲಂ ಚಿರಂ ।
ಸ್ಥಿತ್ವಾ ಚಾಂತರ್ಜಲೇ ದೇವೀಂ ಅಸ್ತೌದಿಂದ್ರಾಕ್ಷಿಸಂಜ್ಞಿತಾಂ ॥ ೪೩ ॥

ಸುಪ್ರಸನ್ನಾ ತತೋ ದೇವೀ ಸ್ತೋತ್ರೇಣ ಪರಿತೋಷಿತಾ ।
ಗತ್ವೋವಾಚ ತತಸ್ತಂ ಚ ವರೋಽಸ್ಮತ್ತೋ ವಿಗೃಹ್ಯತಾಂ ॥ ೪೪ ॥

ತತೋ ದೇವೀಮುವಾಚೇದಂ ಶಕ್ರಃ ಪರಪುಂಜಯಃ ॥ ೪೫ ॥

---

೪೧. ಭಗವಂತನು ಹೇಳಿದನು- ಗೌತಮನು ಅಹಲ್ಯೆಗೂ ಶಾಪಕೊಟ್ಟು ತಪಸ್ಸಿಗೆ ಕಾಡಿಗೆ ಹೊರಟುಹೋದನು. ಈಕೆಯು ಈ ರೀತಿ ಬಡಕಲು ಶರೀರವುಳ್ಳ ವಳಾಗಿ ದಾರಿಯಲ್ಲಿ ನಿಂತಳು.

೪೨. ಅನಂತರ ಆಕೆಯು ಆ ರಾಮನ ಮಾತಿನಂತೆ ಗೌತಮನ ಬಳಿಗೆ ಹೋದಳು. ಗೌತಮನೂ ಆಕೆಯೊಡನೆ ಅಂತರಿಕ್ಷದಲ್ಲಿದ್ದಾನೆ.

೪೩. ಇಂದ್ರನು ನಾಚಿಕೊಂಡು ಬಹುಕಾಲವಿದ್ದನು. ಆ ನೀರಿನಲ್ಲಿಯೇ ಇಂದ್ರಾಕ್ಷಿ ಎಂಬ ಹೆಸರಿನ ದೇವಿಯನ್ನು ಸ್ತುತಿಸಿದನು.

೪೪-೪೫. ಆ ದೇವಿಯು ಈ ಸ್ತೋತ್ರದಿಂದ ಸಂತೋಷಗೊಂಡು ಅವನಿಗೆ ಕಾಣಿಸಿಕೊಂಡು ವರವನ್ನು ಕೇಳು, ಎಂದಳು. ಆಗ ಇಂದ್ರನು ಆಕೆಯನ್ನು ಕುರಿತು ಇಂತೆಂದನು.

॥ ಶಕ್ರ ಉವಾಚ ॥

ತ್ವತ್ಪ್ರಸಾದಾಚ್ಚ ಮೇ ದೇವಿ ವೈರೂಪ್ಯಂ ಮುನಿಶಾಪಜಂ ।
ಸಂತ್ಯಜ್ಯ ದೇವರಾಜ್ಯಂ ಚ ಲಬ್ಧ್ವಾಹಂ ತು ಪುರಾ ತಥಾ ॥ ೪೬ ॥

॥ ಭಗವಾನುವಾಚ ॥

ತಮುವಾಚ ತತೋ ದೇವೀ ಪಾಪಂ ತು ಮುನಿಶಾಪಜಂ ।
ಹನ್ತುಂ ಬ್ರಹ್ಮಾದಯೋ ದೇವಾಃ ಶಕ್ತಾ ನಾಹಂ ಸುರೇಶ್ವರ ॥ ೪೭ ॥

ಕಿಂ ತು ಬುದ್ಧಿಂ ಸೃಜಾಮ್ಯದ್ಯ ಯೇನ ಲೋಕೈರ್ನ ಲಕ್ಷ್ಯತೇ ।
ಯೋನಿಮಧ್ಯಗತಂ ದೃಷ್ಟಿಸಹಸ್ರಂ ತು ಭವಿಷ್ಯತಿ ॥ ೪೮ ॥

ಸಹಸ್ರಾಕ್ಷ ಇತಿ ಖ್ಯಾತಃ ಸುರರಾಜ್ಯಂ ಕರಿಷ್ಯಸಿ ।
ಮೇಷಾಂಡಂ ತವ ಶಿಶ್ನಂ ಚ ಭವಿಷ್ಯತಿ ಚ ಮದ್ವರಾತ್ ॥ ೪೯ ॥

---

೪೬. ಇಂದ್ರನು ಹೇಳಿದನು- ತಾಯಿ ! ನಿನ್ನ ಅನುಗ್ರಹದಿಂದ ಈ ಋಷಿಯ ಶಾಪದ ಈ ವಿರೂಪವನ್ನು ಕಳೆದುಕೊಳ್ಳಬೇಕು. ಕಳೆದುಕೊಂಡ ದೇವರಾಜ್ಯವನ್ನು ಮೊದಲಿನಂತೆ ಹೊಂದಬೇಕು.

೪೭. ಭಗವಂತನು ಹೇಳದನು-ಆಗ ಆಕೆಯು ಎಲೈ ಇಂದ್ರನೇ ! ಮುನಿಶಾಪದಿಂದ ಬಂದಿರುವ ಪಾಪವನ್ನು ತ್ರಿಮೂರ್ತಿಗಳೂ ನಾಶಮಾಡಲಾರರು. ಹೀಗಿರುವಲ್ಲಿ ನನ್ನಿಂದ ಸಾಧ್ಯವೇ ಇಲ್ಲ.

೪೮. ಆದರೆ ಜನಗಳು ಅದನ್ನು ತಿಳಿಯದಂತೆ ಒಂದು ಯುಕ್ತಿಯನ್ನು ಮಾಡುತ್ತೇನೆ. ಯೋನಿಯೊಳಗೆ ಗುಪ್ತಿನಂತೆ ಕಾಣುವುದೆಲ್ಲಾ ಕಣ್ಣುಗುಡ್ಡೆಗಳಾಗಿ ಕಂಡು ಸಾವಿರ ಕಣ್ಣುಳ್ಳವನಾಗು.

೪೯. ಅದರಿಂದ ಸಾವಿರ ಕಣ್ಣುಳ್ಳವನೆಂದು ಹೆಸರನ್ನು ಹೊಂದಿ ದೇವತೆಗಳ ರಾಜ್ಯವನ್ನು ಆಳುತ್ತೀಯೆ. ಆಡಿನ ಗುಹ್ಯಸ್ಥಳವೇ ನನ್ನ ವರದಿಂದ ನಿನಗೆ ಗುಹ್ಯ ಸ್ಥಳವಾಗಲಿ.

ಇತ್ಯುಕ್ತ್ವಾ ಸಾ ಜಗನ್ಮಾತಾ ತತ್ರೈವಾಂತರಧೀಯತ ।
ಶಕ್ರೋ ದೇವವರ್ಯೈಃ ಪೂಜ್ಯೋ ಹ್ಯದ್ಯಾಪಿ ದಿವಿ ವರ್ತತೇ ॥
ಇಂದ್ರಸ್ಯೈತಾದೃಶೀ ಕಾಮಾದವಸ್ಥಾ ದ್ವಿಜನಂದನ ॥ ೫೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಅಹಲ್ಯಾಹರಣಂ ನಾಮ
॥ ಏಕಪಂಚಾಶತ್ತಮೋಽಧ್ಯಾಯಃ ॥

---

೫೦. ಹೀಗೆಂದು ಹೇಳಿ ಆ ಲೋಕಮಾತೆಯು ಅಂತರ್ಧಾನಳಾದಳು ಅನಂತರ ಇಂದ್ರನೂ ದೇವತೆಗಳಿಂದ ಗೌರವಿಸಲ್ಪಟ್ಟು ಈಗಲೂ ಸ್ವರ್ಗದಲ್ಲಿದ್ದಾನೆ. ಕಾಮದಿಂದ ಇಂದ್ರನಿಗೆ ಈ ರೀತಿಯಾದ ಅವಸ್ಥೆಯು ಬಂದಿತು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟೀಖಂಡದಲ್ಲಿ ಅಹಲ್ಯಾಹರಣವೆಂಬ
ಐವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ದ್ವಿಪಂಚಾಶತ್ತಮೋऽಧ್ಯಾಯಃ ॥



॥ ಶ್ರೀ ಭಗವಾನುವಾಚ ॥

ಅತಃಪರಂ ಪ್ರವಕ್ಷ್ಯಾಮಿ ಕಾಮೇನಾಧಿಷ್ಠಿತಸ್ಯ ಚ ।
ಪುರಾ ಭಾಗೀರಥೀತೀರೇ ದ್ವಿಜಃ ಪರಮಹಂಸಕಃ ॥ ೧ ॥

ಉಪದೇಷ್ಟಾ ಸಹಸ್ರಾಣಾಂ ದ್ವಿಜಾನಾಂ ಶಾಂತಿದಃ ಪರಃ ।
ಏಕದಂಡಧರಸ್ಸಾಕ್ಷಾತ್ಕೂರ್ಮೋಽಯಂ ಧರಣೀಸ್ಥಿತಃ ॥ ೨ ॥

ಏಕಾಕಿನಸ್ಸತಸ್ತಸ್ಯ ದೇವಾಗಾರೇ ವಿನಿಷ್ಕೃತೇ ।
ಪತ್ಯುರ್ಗೃಹಾತ್ಪರಂ ಗೇಹಂ ಗಂತುಂ ಸಾಯಂ ಸಮುದ್ಯತಾ ॥ ೩ ॥

---

## ಐವತ್ತೆರಡನೆಯ ಅಧ್ಯಾಯವು

೧. ಭಗವಂತನು ಹೇಳಿದನು- ಕಾಮದಿಂದ ಕೂಡಿದವನ ಮತ್ತೊಂದು ಕಥೆಯನ್ನು ಹೇಳುತ್ತೇನೆ. ಕೇಳು ಪೂರ್ವದಲ್ಲಿ ಗಂಗಾತೀರದಲ್ಲಿ ಒಬ್ಬ ಸನ್ಯಾಸಿಯಿದ್ದನು.

೨ ಅನೇಕ ಜನರಿಗೆ ಉಪದೇಶಕನಾಗಿದ್ದನು. ಬರೀ ಉಪದೇಶ ಮಾತ್ರವಲ್ಲದೆ ಅವರಿಗೆ ಮನಶ್ಶಾಂತಿಯನ್ನೂ ಉಂಟುಮಾಡಿಕೊಡುತ್ತಿದ್ದನು ಅವನು ಏಕದಂಡಸನ್ಯಾಸಿಯು ಭೂಮಿಯ ಮೇಲಕ್ಕೆ ಬಂದಿರುವ ಪ್ರತ್ಯಕ್ಷವಾದ ಕೂರ್ಮನಂತೆಯೇ ಇದ್ದನು.

೩-೫. ಅವನು ಒಬ್ಬಂಟಿಗನಾಗಿ ದೇವಸ್ಥಾನದ ಬಾಗಿಲನ್ನು ತೆಗೆದುಕೊಂಡಿರಲು ಗಂಡನ ಮನೆಯಿಂದ ನೆರೆಮನೆಗೆ ಸಾಯಂಕಾಲದಲ್ಲಿ ಹೋಗುತ್ತಿದ್ದ ಒಬ್ಬಳು

ಅಕಸ್ಮಾದ್ಯುವತೀ ನಾರೀ ಮಿಳಿತಾ ರೂಪಶಾಲಿನೀ ।
ದೃಷ್ಟ್ವಾ ತಾಂ ಭಗವಾನ್ವಿಪ್ರೋ ಮನ್ಮಥಸ್ಯ ಭಯಾರ್ದಿತಃ ॥ ೪ ॥

ಅಗಾರಜಠರೇ ಕೃತ್ವಾ ಸ ಚೈನಾಂ ಪ್ರಾಕ್ಷಿಪತ್ಕ್ಷಪಾಂ ।
ಅಕುಲಂ ತು ದೃಢಂ ಕೃತ್ವಾ ದೇವಾಗಾರೇ ಸುಶೋಭನೆ ॥ ೫ ॥

ಕದಾಚಿದಪಿ ತಂ ದ್ವಾರಂ ಸಾ ಗಂತುಂ ನ ದದಾತಿ ಹ ।
ಏವಂಭೂತಸ್ಸಮಾಧಿಸ್ಥಃ ಕ್ಷಪಾಂ ಸ್ಥಿತ್ವಾ ವಿಲಪ್ಯ ಸಃ ॥ ೬ ॥

ಚಿಂತಯಂಸ್ತಾಂ ವರಾರೋಹಾಂ ದ್ವಾರಿ ಕಿಂ ವಾ ಕೃತಂ ಮಮ ।
ಏವಂ ಸಂಚಿಂತ್ಯ ತಾಮಾಹ ದ್ವಾರಂ ದೇಹೇತಿ ನಃ ಪ್ರಿಯೇ ॥ ೭ ॥

ಪತ್ಯುಶ್ಚ ವಶಗಂ ಕಾನ್ತೇ ದಯಿತಂ ತೇ ಭವಿಷ್ಯತಿ ।
ತತಸ್ತಂ ಮುಂಡಿತಂ ವಿಪ್ರಂ ವೃದ್ಧಂ ಕಾಮುಪ್ರಲಾಲಸಂ ॥ ೮ ॥

॥ ನಾರ್ಯುವಾಚ ॥

ಅನನ್ವಿತಾ ಗಿರಸ್ತಾತ ವಕ್ತುಂ ತ್ವಂ ನಾರ್ಹಸಿ ಪ್ರಭೋ ॥ ೯ ॥

---

ರೂಪವತಿಯಾದ ಯುವತಿಯನ್ನು ಕಂಡನು. ಆಕೆಯನ್ನು ನೋಡಿ ಈ ಸನ್ಯಾಸಿಯು ಕಾಮಬಾಧೆಗೊಳಗಾದನು. ಆಗ ಆಕೆಯನ್ನು ಹಿಡಿದು ಆ ದೇವಸ್ಥಾನದೊಳಕ್ಕೆ ನೂಕಿ ಬಾಗಿಲನ್ನು ಎಳೆದುಕೊಂಡನು. ಆಕೆಯು ಒಳಗಡೆಯಿಂದ ಬಾಗಿಲನ್ನು ಹಾಕಿ ಅಗುಳಿಯನ್ನು ಹಾಕಿಕೊಂಡಳು.

೭. ಅವಳು ಬಾಗಿಲನ್ನು ತೆಗೆದು ಒಳಗೆ ಬರಗೊಡಲೇ ಇಲ್ಲ. ಹೀಗೆಯೇ ಅವನು ಕಾಯುತ್ತಾ ರಾತ್ರಿಯನ್ನೆಲ್ಲಾ ದುಃಖಿಸುತ್ತ ಕಳೆದನು.

೮. ನಿನ್ನ ಗಂಡನಿಗೆ ಅತ್ಯಂತ ಪ್ರಿಯವಾದುದನ್ನು ನಿನ್ನ ಅಧೀನವನ್ನಾಗಿ ಮಾಡುತ್ತೇನೆ. (ನಿನ್ನ ಗಂಡನಿಗೆ ಹಿತವಾಗುವ ರೀತಿಯಲ್ಲಿ ನಿನಗೆ ಬೇಕಾದುದನ್ನು ಕೊಡುತ್ತೇನೆ ) ಎಂದನು. ಅನಂತರ ಮುದುಕನೂ, ಬೋಳನೂ ಆದ ಕಾಮಿಯಾದ ಆ ಮುದಿ ಸನ್ಯಾಸಿಯನ್ನು ಕುರಿತು ಇಂತೆಂದಳು

೯. ಹೆಂಗಸು ಹೇಳಿದಳು- ಅಪ್ಪ ! ನಿನ್ನ ಮಾತುಗಳು ಸರಿಯಾಗಿಲ್ಲ. ನೀನು ಈ ರೀತಿಯಾಗಿ ಹೇಳಬಾರದು.

॥ ಭಗವಾನುವಾಚ ॥

ಅಥಾಸೌ ಭಗವಾನ್ಪ್ರಾಹ ಪ್ರಚುರಂ ಚಾಸ್ತಿ ಮೇ ವಸು ।
ತವ ದಾಸ್ಯಾಮಿ ಕಲ್ಯಾಣಿ ಪ್ರಸ್ಫೋಟಯ ಕಪಾಟಿಕಾಂ ॥ ೧೦ ॥

ವಿಪ್ರಮಾಹ ಪುನಸ್ಸಾ ಚ ತ್ವಂ ವೈ ಮೇ ಧರ್ಮತಃ ಪಿತಾ ।
ಮಾ ಗಚ್ಛ ಪುತ್ರಿಕಾಂ ಮಾಂ ಚ ಪರಯೋಷಾಂ ಚ ಧಾರ್ಮಿಕ ॥ ೧೧ ॥

ಮನಸಾ ಯಂ ಸಮಾಲೋಚ್ಯ ಸುಷಿರೇಣ ಪಥಾ ಗೃಹಾತ್ ।
ಬಾಹುನೋದ್ಘಾಟ್ಯ ತೇನೈವ ಗಂತುಂ ಚೈವ ಸಮುದ್ಯತಃ ॥ ೧೨ ॥

ಗಚ್ಛತಶ್ಚಾರ್ಧಮಧ್ಯರ ಉತ್ತಮಾಂಗಂ ಸುಕಂಟಕೇ ।
ಪ್ರವಿಷ್ಟಂ ನ ಪುನಶ್ಚೈತಿ ಪಂಚತ್ವಮಗಮತ್ತದಾ ॥ ೧೩ ॥

ಉಷಃ ಕಾಲೇ ಸಮಾಯಾತಾ ರಕ್ಷಿಣೋ ಯೇ ಚ ಕಿಂಕರಾಃ ।
ಅದ್ಭುತಂ ತು ಶವಂ ದೃಷ್ಟ್ವಾ ತಾಮೂಚುಸ್ತೇ ಚ ವಿಸ್ಮಿತಾಃ ॥ ೧೪ ॥

---

೧೦. ಭಗವಂತನು ಹೇಳಿದನು- ಎಲೈ ಕಲ್ಯಾಣಿಯೇ! ನನ್ನ ಹತ್ತಿರ ಬಹಳವಾದ ಹಣವಿದೆ. ನಿನಗೆ ಕೊಡುತ್ತೇನೆ. ಬಾಗಿಲನ್ನು ತೆಗೆ, ಎಂದನು.

೧೧. ಎಲೈ ಬ್ರಾಹ್ಮಣನೇ! ನೀನು ನನಗೆ ಧರ್ಮದ ರೀತಿಯಿಂದ ತಂದೆಯು. ಧರ್ಮವನ್ನು ಬಲ್ಲ ನೀನು ಮಗಳೂ, ಪರರ ಹೆಂಗಸೂ ಆದ ನನ್ನನ್ನು ಇಚ್ಛಿಸಬಾರದು. ಎಂದಳು.

೧೨. ಆಗ ಸಂದಿಯನ್ನು ಮಾಡಿ ಕೈಯನ್ನು ಹಾಕಿ ಕದವನ್ನೇ ಇಡಿರೆತ್ತಿ ಒಳಕ್ಕೆ ಹೋಗಬೇಕೆಂದು ಯೋಚಿಸಿ ಹಾಗೆಯೇ ಪ್ರಯತ್ನಪಟ್ಟನು.

೧೩. ನುಣುಪಿಲ್ಲದ ಆ ಬಾಗಿಲಿನಲ್ಲಿ ತಲೆಯು ನುಗ್ಗಿ ಆ ಕದುವಿನ ಮೊಳೆಯು ತಲೆಗೆ ಚುಚ್ಚಿಕೊಂಡು ಒಳಕ್ಕೂ ಹೋಗದೆ ಹೊರಕ್ಕೂ ಬಾರದೆ ಆಗ ಸತ್ತುಹೋದನು.

೧೪. ಬೆಳಗ್ಗೆ ಊರಿನ ಕಾವಲುಗಾರರು (ಪೋಲೀಸಿನವರು) ಈ ಅದ್ಭುತವನ್ನು ನೋಡಿ ಆಶ್ಚರ್ಯಪಟ್ಟು ಆಕೆಯನ್ನು ಕೇಳಿದರು.

॥ ರಕ್ಷಿಣ ಊಚುಃ ॥

ಕಥಂ ಚ ನಿಧನಂ ತ್ವಸ್ಯ ಸಂಭೂತಂ ಬ್ರೂಹಿ ಸುಂದರಿ ॥ ೧೫ ॥

॥ ಭಗವಾನುವಾಚ ॥

ಕಥಯಿತ್ವಾ ತು ತದ್ವೃತ್ತಮಭೀಷ್ಟಂ ದೇಶಮಾಗತಾ ।
ಏವಂ ಕಾಮಸ್ಯ ಮಹಿಮಾ ದುರ್ನಿವಾರೋ ಜನೇಷು ಚ ॥ ೧೬ ॥

ಸರ್ವೇಷಾಮೇವ ಜಂತೂನಾಂ ಸುರಾಸುರನೃಣಾಂ ಭವೇತ್ ।
ದೃಷ್ಟ್ವಾಽವರೋಹಾಂ ವರಾರೋಹಾಂ ಸರ್ವಲೋಕಪಿತಾಮಹಃ ॥ ೧೭ ॥

ಚ್ಯುತಬೀಜೋಽಭವತ್ತತ್ರ ಲೌಹಿತ್ಯಸಂಭವಸ್ಸ್ಮೃತಃ ।
ಪುನಾತಿ ಸಕಾಲಾಂಲ್ಲೋಕಾನ್ಸರ್ವತೀರ್ಥಮಯೋ ಹಿ ಸಃ ।
ಯಮಾಶ್ರಿತ್ಯ ನರೋ ಯಾತಿ ಬ್ರಹ್ಮಲೋಕಮನಾಮಯಂ ॥ ೧೮ ॥

---

೧೫. ರಕ್ಷಕರು ಹೇಳಿದರು– ಎಲೈ ಸುಂದರಿಯೇ! ಇವನು ಹೇಗೆ ಸತ್ತನು ?

೧೬. ಭಗವಂತನು ಹೇಳಿದನು- ಆಕೆಯು ಅವರಿಗೆ ಆ ಸಮಾಚಾರವನ್ನು ಹೇಳಿ ತನಗೆ ಬೇಕಾದಲ್ಲಿಗೆ ಹೊರಟುಹೋದಳು. ಕಾಮನ ಮಹಿಮೆಯು ಈರೀತಿಯಾಗಿದೆ. ಜನರು ಅದನ್ನು ತಡೆಯುವುದು ಕಷ್ಟ.

೧೭. ಕೇವಲ ಮನುಷ್ಯರಿಗಲ್ಲ. ದೇವ ರಾಕ್ಷಸರಿಗೂ, ಮನುಷ್ಯರಿಗೂ ಎಲ್ಲಾ ಪ್ರಾಣಿಗಳಿಗೂ ಇದೇ ಸ್ಥಿತಿಯು. ತಡೆಯಲಾಗುವುದಿಲ್ಲ. ಬ್ರಹ್ಮನು ಉತ್ತಮಳಾದ ಹೆಂಗಸನ್ನು ನೋಡಿ ವೀರ್ಯವನ್ನು ಸ್ಖಲನಮಾಡಿಕೊಂಡನು. ಅಲ್ಲಿ ಲೌಹಿತ್ಯಸಂಭವವೆಂಬ ತೀರ್ಥವಾಯಿತು.

೧೮. ಆ ತೀರ್ಥವು ಸರ್ವತೀರ್ಥಗಳ ರೂಪವಾಗಿ ಎಲ್ಲಾ ಲೋಕವನ್ನೂ ಪವಿತ್ರವನ್ನಾಗಿ ಮಾಡುತ್ತಿದೆ. ಅದರಲ್ಲಿ ಮಿಂದವರು ಬ್ರಹ್ಮಲೋಕವನ್ನು ಹೊಂದುತ್ತಾರೆ.

॥ ದ್ವಿಜ ಉವಾಚ ॥

ಕಥಂ ಚ ಬ್ರಹ್ಮಣೋ ಮೋಹೋಽಸ್ಯಮೋಘಾ ಕಾ ವರಾಂಗನಾ ।
ಉದ್ಭವಂ ತೀರ್ಥರಾಜಸ್ಯ ಶ್ರೋತುಮಿಚ್ಛಾಮಿ ತತ್ವತಃ ॥ ೧೯ ॥

॥ ಭಗವಾನುವಾಚ ॥

ಮುನಿರ್ದೇವೈಸ್ಸಮಾರಾಧ್ಯಃ ಪದ್ಮಯೋನಿಸಮಪ್ರಭಃ ।
ಶಾನ್ತನುಶ್ಚೇತಿ ವಿಖ್ಯಾತಃ ಪತ್ನೀ ತಸ್ಯ ಪತಿವ್ರತಾ ॥ ೨೦ ॥

ಅಮೋಘೇತಿ ಸಮಾಖ್ಯಾತಾ ರೂಪಯೌವನಶಾಲಿನೀ ।
ಅಸ್ಯಾಶ್ಚ ಪತಿಮನ್ವೇಷ್ಟುಂ ಯಾತೋ ಬ್ರಹ್ಮಾ ಚ ತದ್ಗೃಹಂ ॥ ೨೧ ॥

ತಸ್ಮಿನ್ಕಾಲೇ ಮುನಿಶ್ರೇಷ್ಠಃ ಪುಷ್ಪಾದ್ಯರ್ಥಂ ವನಂ ಗತಃ ।
ಸಾ ತಂ ದೃಷ್ಟ್ವಾ ಸುರಶ್ರೇಷ್ಠಮರ್ಘ್ಯಪಾದ್ಯಾದಿಕಂ ದದೌ ॥ ೨೨ ॥

ದೂರೇಽಭಿವಾದನಂ ಕೃತ್ವಾ ಸಾ ಗೃಹಂ ಪ್ರವಿವೇಶ ಹ ।
ತಾಂ ಚ ದೃಷ್ಟ್ವಾನವದ್ಯಾಂಗೀಂ ಧಾತಾ ಕಾಮವಶಂ ಗತಃ ॥ ೨೩ ॥

---

೧೯. ಬ್ರಾಹ್ಮಣನು ಹೇಳಿದನು- ಬ್ರಹ್ಮನಿಗೂ ಕೂಡ ಮೋಹವು ಹೇಗೆ ಹುಟ್ಟಿತು? ಅವನಿಗೂ ಮೋಹ ಹುಟ್ಟುವಂತೆ ಮಾಡಿದ ಆ ಉತ್ತಮ ಹೆಂಗಸಾರು ? ಆ ತೀರ್ಥರಾಜನು ಹುಟ್ಟಿದ ವಿಷಯವನ್ನು ಹೇಳು ? ಕೇಳಲು ಇಚ್ಛೆಯಿದೆ.

೨೦. ಭಗವಂತನು ಹೇಳಿದನು- ದೇವತೆಗಳಿಗೂ ಪೂಜ್ಯನಾದ ಬ್ರಹ್ಮನಷ್ಟು ತೇಜಸ್ಸುಳ್ಳಶಾನ್ತನುವೆಂಬ ಋಷಿಯಿದ್ದನು. ಆತನಿಗೆ ಒಬ್ಬಳು ಹೆಂಡತಿಯಿದ್ದಳು. ಅವಳುಬಹು ಪತಿವ್ರತೆ.

೨೧. ಆಕೆಯ ಹೆಸರು ಅಮೋಘೆಯೆಂದು. ರೂಪವತಿಯಾಗಿ ಯೌವನ ಶಾಲಿನಿಯಾಗಿದ್ದಳು. ಒಂದು ಸಾರಿ ಬ್ರಹ್ಮನು ಈಕೆಯ ಗಂಡನಾದ ಶಾನ್ತನುವನ್ನು ಹುಡುಕಿಕೊಂಡು ಆತನ ಮನೆಗೆ ಹೋದನು.

೨೨. ಆಗ ಆ ಶಾನ್ತನುವು ಹೂವಿಗೋಸ್ಕರ ಕಾಡಿಗೆ ಹೋಗಿದ್ದನು. ಬಂದ ಬ್ರಹ್ಮನನ್ನು ನೋಡಿ ಆಕೆಯು ಅರ್ಘ್ಯಪಾದ್ಯಗಳನ್ನು ಕೊಟ್ಟಳು.

೨೩. ದೂರದಲ್ಲಿಯೇ ನಮಸ್ಕರಿಸಿ ಆಕೆಯು ಮನೆಯೊಳಕ್ಕೆ ಹೊರಟು ಹೋದಳು. ಆಕೆಯನ್ನು ನೋಡಿ ಬ್ರಹ್ಮನು ಕಾಮಕ್ಕೊಳಗಾದನು.

ಸ್ರಷ್ಟಾತ್ಮಾನಂ ಸಮಾಧಾಯ ಚಿಂತಯಂಸ್ತಾಂ ಪುರೋಗತಾಂ ।
ಬೀಜಂ ಪಪಾತ ಖಟ್ವಾಯಾಂ ಬ್ರಹ್ಮಣಃ ಪರಮಾತ್ಮನಃ ॥ ೨೪ ॥

ತತೋ ಬ್ರಹ್ಮಾಗತಸ್ತತ್ರ ಸ್ವರಯಾ ಪರಿಪೀಡಿತಃ ।
ಅಥಾಯಾತೋ ಮುನಿರ್ಗೇಹಂ ಶುಕ್ರಂ ಪೀಠೇ ದದರ್ಶ ಹ ॥ ೨೫ ॥

ತಾಮಪೃಚ್ಛದ್ವರಾರೋಹಾಂ ಕಶ್ಚಾಪ್ಯತ್ರಾಗತಃ ಪುಮಾನ್ ।
ತಮುವಾಚ ತತೋಽಮೋಘಾ ಬ್ರಹ್ಮಾಹ್ಯತ್ರಾಗತಃ ಪತೇ ॥ ೨೬ ॥

ತ್ವಾಮೇವಾನ್ವೇಷಿತುಂ ನಾಥ ಮಯಾ ದತ್ತೋತ್ರಪೀಠಕಃ ।
ಶುಕ್ರಸ್ಯ ಕಾರಣಂ ಚಾತ್ರ ತಪಸಾ ಜ್ಞಾತುಮರ್ಹಸಿ ॥
ತತೋ ಧ್ಯಾನಾತ್ಪರಿಜ್ಞಾತಂ ತೇನೈವ ಚ ದ್ವಿಜನ್ಮನಾ ॥ ೨೭ ॥

---

೨೪. ಅಷ್ಟರಲ್ಲಿಯೇ ಬ್ರಹ್ಮನು ಸಮಾಧಾನ ತಂದುಕೊಂಡನು. ಆದರೂ ಎದುರಿಗಿದ್ದ ಆಕೆಯನ್ನು ನೋಡಿದುದರಿಂದ ತಾನು ಕುಳಿತಿದ್ದ (ಮಂಚ) ಪೀಠದಲ್ಲಿ ವೀರ್ಯವು ಬಿದ್ದುಬಿಟ್ಟಿತು.

೨೫. ಅನಂತರ ಬ್ರಹ್ಮನು ಬೇರೆ ಕೆಲಸವಿದ್ದುದರಿಂದ ಜಾಗ್ರತೆಯಾಗಿ ಎದ್ದು ಹೊರಟುಹೋದನು. ಅನಂತರ ಆ ಶಾನ್ತನ ಮುನಿಯು ಮನೆಗೆ ಬಂದು ರೇತಸ್ಸು ಪೀಠದ ಮೇಲೆ ಬಿದ್ದಿರುವುದನ್ನು ನೋಡಿದನು.

೨೬. ಆಗ ಆಕೆಯನ್ನು ಕುರಿತು ಇಲ್ಲಿಗೆ ಬಂದಿದ್ದ ಗಂಡಸರಾರು ? ಎಂದು ಕೇಳಲು ಅಮೋಘೆಯು ಬ್ರಹ್ಮನು ಬಂದಿದ್ದನೆಂದಳು.

೨೭. ಆತನು ನಿನ್ನನ್ನು ಹುಡುಕಿಕೊಂಡು ಇಲ್ಲಿಗೆ ಬರಲು ನಾನು ಅವನಿಗೆ ಪೀಠವನ್ನು ಕೊಟ್ಟೆನು. ಶುಕ್ರವು ಬಿದ್ದುದರ ಕಾರಣವನ್ನು ತಪಸ್ಸಿನಿಂದ ನೀನು ತಿಳಿದುಕೋ ಎನ್ನಲು ಆಗ ಆ ಬ್ರಾಹ್ಮಣನು ಧ್ಯಾನದಿಂದ ಅದೆಲ್ಲವನ್ನೂ ತಿಳಿದುಕೊಂಡನು.

॥ ಶಾನ್ತನುರುವಾಚ ॥

ಬ್ರಹ್ಮರೇತಃ ಪರಂ ಸಾಧ್ವಿ ಪಾಲಯಸ್ವ ಮಮಾಜ್ಞಯಾ ।
ಉತ್ಪದ್ಯತೇ ಸುತಸ್ತೇ ತು ಸರ್ವಲೋಕೈಕಪಾವನಃ ।
ಆವಯೋಸ್ಸರ್ವಕಲ್ಯಾಣಂ ಭವಿಷ್ಯತಿ ಮನೋಗತಂ ॥ ೨೮ ॥

॥ ಭಗವಾನುವಾಚ ॥

ತತಃ ಪತಿವ್ರತಾ ತಸ್ಯ ಆಜ್ಞಾಮಾ ಗೃಹ್ಯ ಸಂಭವಾತ್ ।
ಪಪೌ ರೇತೋ ಮಹಾಭಾಗಾ ಬ್ರಹ್ಮಣಃ ಪರಮಾತ್ಮನಃ ॥ ೨೯ ॥

ಆವರ್ತ ಇವ ಸಂಜಜ್ಞೇ ರೌದ್ರಗರ್ಭ ಇತಿ ಸ್ಫುರನ್ ।
ಪ್ರಸೋಢುಂ ನೈವ ಶಕ್ತಾ ಸಾ ಶಾನ್ತನುಂ ಚಾಬ್ರವೀತ್ತತಃ ॥ ೩೦ ॥

॥ ಅಮೋಘೋವಾಚ ॥

ಗರ್ಭಂ ಧಾರಯಿತುಂ ನಾಥ ನ ಶಕ್ನೋಮ್ಯಧುನಾ ಪ್ರಭೋ ।
ಕಿಂ ಕರಿಷ್ಯಾಮಿ ಧರ್ಮಜ್ಞ ಪ್ರಾಣೋ ಮೇ ಸಂಚಲತ್ಯಪಿ ॥
ಆಜ್ಞಾಪಯ ಮಹಾಭಾಗ ಗರ್ಭಂ ತ್ಯಕ್ಷ್ಯಾಮಿ ಯತ್ರ ಚ ॥ ೩೧ ॥

---

೨೮. ಶಾನ್ತನುವು ಹೇಳಿದನು- ಎಲೈ ಸಾಧ್ವೀಮಣಿಯೇ ! ಇದು ಬ್ರಹ್ಮನ ರೇತಸ್ಸು. ಇದನ್ನು ವ್ಯರ್ಥಮಾಡಬೇಡ. ನಾನು ಅಪ್ಪಣೆಕೊಡುತ್ತೇನೆ. ಇದನ್ನು ನೀನು ಧರಿಸು. ಇದರಿಂದ ಹುಟ್ಟುವ ಮಗನು ಬಹು ಪವಿತ್ರನಾಗಿರುತ್ತಾನೆ. ಇದರಿಂದ ಹುಟ್ಟುವ ಮಗನಿಂದ ನಮ್ಮಿಬ್ಬರ ಇಷ್ಟಾರ್ಥಗಳು ಕೈಗೂಡುತ್ತವಲ್ಲದೆ ಮುಂದೆ ಒಳ್ಳೆಯದೂ ಆಗುತ್ತದೆ.

೨೯. ಭಗವಂತನು ಹೇಳಿದನು- ಆಗ ಆ ಪತಿವ್ರತೆಯು ಗಂಡನ ಅಪ್ಪಣೆಯಂತೆಯೂ, ತನಗೂ ಅದು ಸರಿ ಎಂದು ಕಂಡು ಬಂದುದರಿಂದಲೂ, ಆ ರೇತಸ್ಸನ್ನು ಕುಡಿದಳು.

೩೦. ಹೊಟ್ಟೆ ತೊಳಸುವಂತಾಯಿತು. ರುದ್ರನ ತೇಜಸ್ಸಿನ ಗರ್ಭದಂತೆ ಅಲ್ಲಾಡಲು ಮೊದಲಿಟ್ಟಿತು. ಆಕೆಯು ಕೈಯಲ್ಲಿ ಅದನ್ನು ತಡೆದುಕೊಳ್ಳುವುದು ಸಾಧ್ಯವಿಲ್ಲವಾಯಿತು. ಆಗ ಗಂಡನಾದ ಶಾನ್ತನುವನ್ನು ಕುರಿತು ಇಂತೆಂದಳು.

೩೧. ಅಮೋಘೆಯು ಹೇಳಿದಳು- ಎಲೈ ನಾಥನೇ ! ನಾನು ಈ ಗರ್ಭವನ್ನು ತಡೆಯಲಾರೆನು. ಏನು ಮಾಡಲಿ ? ನನ್ನ ಪ್ರಾಣಗಳೇ ಹೋಗುವಂತೆ ತೊಂದರೆಯಾಗುತ್ತಿದೆ. ಇದನ್ನು ಎಲ್ಲಿ ಬಿಡಲಿ ? ಹೇಳು.

॥ ಭಗವಾನುವಾಚ ॥

ಪತ್ಯುರಾಜ್ಞಾಂ ಸಮಾದಾಯ ಮುಕ್ತೋ ಗರ್ಭೋ ಯುಗಂಧರೇ ।
ಪಯಸ್ತೇಜೋಮಯಂ ಶುದ್ಧಂ ಸರ್ವಧರ್ಮ ಪ್ರತಿಷ್ಠಿತಂ ॥ ೩೨ ॥

ತನ್ಮಧ್ಯೇ ಪುರುಷಶ್ಶುದ್ಧಃ ಕಿರೀಟೀ ನೀಲವಾಸಸಾ ।
ರತ್ನದಾಮ್ನಾ ಚ ವಿದ್ಧಾಂಗೋ ದುಷ್ಪ್ರೇಕ್ಷ್ಯೋ ಜ್ಯೋತಿಷಾಂ ಗಣಃ ॥೩೩॥

ತತೋ ದೇವಗಣಾಸ್ಸ್ವರ್ಗಾತ್ಪುಷ್ಪವರ್ಷಮವಾಕಿರನ್ ।
ಪ್ರಸೂತಸ್ಸರ್ವತೀರ್ಥೇಷು ತೀರ್ಥರಾಜ ಇತಿ ಸ್ಮೃತಃ ॥ ೩೪ ॥

ತತೋ ರಾಮ ಇತಿ ಖ್ಯಾತಃ ಪ್ರಜಾತೋಽಹಂ ಭೃಗೋಃ ಕುಲೇ ।
ಕ್ಷತ್ರಿಯಾನ್ಪಿತೃಹಂತ್ರ್ಯಾಂಸ್ತು ಸಸೈನ್ಯಬಲವಾಹನಃ ॥ ೩೫ ॥

ಹತ್ವಾ ಯುದ್ಧಗತಾನ್ಭೀತಾನ್ಪಂಕ್ತೈಸ್ಸರ್ವೈರ್ಯುತೋಽಹ್ಯಹಂ ।
ಬ್ರಹ್ಮಹತ್ಯಾ ಸಮಂ ಘೋರಂ ಮದ್ಗೇಹೆ ಸಮುಪಸ್ಥಿತಂ ॥ ೩೬ ॥

---

೩೨. ಭಗವಂತನು ಹೇಳಿದನು- ಆಗ ಗಂಡನ ಮಾತಿನಂತೆ ಯುಗಂಧರ ವೆಂಬ ಹಳ್ಳದಲ್ಲಿ ಒಳ್ಳೆಯ ತಿಳಿಯಾದ ನೀರಿದ್ದುದನ್ನು ನೋಡಿ ಅಲ್ಲಿ ಆ ಗರ್ಭವನ್ನು ಬಿಟ್ಟುಬಿಟ್ಟಳು.

೩೩. ಆಗ ಅದರ ಮಧ್ಯದಲ್ಲಿ ಶುದ್ಧನಾದ ಪುರುಷನು ಕಿರೀಟವನ್ನು ಹಾಕಿಕೊಂಡು ನೀಲಿಯ ಬಟ್ಟೆಯನ್ನುಟ್ಟು ರತ್ನದ ಮಾಲೆಗಳನ್ನು ಹಾಕಿಕೊಂಡು ಕಣ್ಣುಗಳನ್ನು ಚುಚ್ಚುವ ತೇಜಸ್ಸಿನಿಂದ ಕೂಡಿಕೊಂಡು ಇದ್ದನು.

೩೪. ಆಗ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸಿದರು. ಆಗ ಆ ತೀರ್ಥವೂ ಬ್ರಹ್ಮನ ವೀರ್ಯವು ಬಿದ್ದುದರಿಂದ ತೀರ್ಥರಾಜನಾಯಿತು.

೩೫-೩೬. ಹೀಗಿರುತ್ತಿರಲು ನಾನು ಭೃಗುವಿನ ವಂಶದಲ್ಲಿ ರಾಮನೆಂಬ ಹೆಸರ್ನಿನಿಂದ ಅವತರಿಸಿ ನನ್ನ ತಂದೆಯನ್ನು ಕೊಂದ ಕ್ಷತ್ರಿಯರನ್ನು ಪರಿವಾರದೊಡನೆ ಕೊಂದು ಪಾಪವನ್ನು ಹೊಂದಿದೆನು. ಆ ಬ್ರಹ್ಮಹತ್ಯಾ ಪಾಪದಂತಹ ಪಾಪವು ನನ ಮನೆಯಲ್ಲಿ ಕಾಣಿಸಿಕೊಂಡಿತು.

ಪಂಕಯುಕ್ತಂ ಕುಠಾರಂ ಮೇ ಕ್ಷಾಳಿತಂ ನೈವ ಶುಧ್ಯತಿ ।
ತತಃ ಖೇ ಚಾಭವದ್ವಾಣೀ ರಾಮ ಮದ್ವಚನಂ ಕುರು ॥ ೩೭ ॥

॥ ದೇವವಾಗುವಾಚ ॥

ಯತ್ರ ತೀರ್ಥೇ ಕುಠಾರಂ ತೇ ನಿರ್ಮಲಂ ಚ ಭವೇದಿತಿ ।
ತತ್ರ ತೇ ಸರ್ವಪಾಪಾನಾಂ ಜಾತಾನಾಂ ಚ ಕ್ಷಯೋ ಭವೇತ್ ॥ ೩೮ ॥

ಜನಾನಾಂ ತತ್ರ ಸರ್ವೇಷಾಂ ಹಿತಾರ್ಥಂ ತಿಷ್ಠ ಮಾನದ ।
ಚಪಲಂ ಗಚ್ಛ ತೀರ್ಥಾನಿ ಸರ್ವಾಣಿ ಸುಮಹಾಂತಿ ಚ ॥ ೩೯ ॥

ತೇಷಾಂ ಮಧ್ಯೇ ಮಹಾತೀರ್ಥೇ ಪರ್ಶುಶುದ್ಧಿರ್ಭವೇದ್ಯದಿ ।
ತಚ್ಚ ಜಾನೀಹಿ ತೀರ್ಥೇಷು ಮುಕ್ತಿದಂ ಪರಿಕೀರ್ತಿತಂ ॥ ೪೦ ॥

॥ ಭಗವಾನುವಾಚ ॥

ತಚ್ಛ್ರುತ್ವಾ ಜಾಮದಗ್ನ್ಯಸ್ತು ತೀರ್ಥಾನಿ ಪ್ರಯಯೌ ತದಾ ।
ಗಂಗಾಂ ಸರಸ್ವತೀಂ ಶುಭ್ರಾಂ ಕಾವೇರೀಂ ಸರಯೂಂ ತಥಾ ॥ ೪೧ ॥

---

೩೭. ಆ ರಕ್ತದಿಂದ ಕೂಡಿದ ನನ್ನ ಕೊಡಲಿಯನ್ನು ಎಲ್ಲಿ ತೊಳೆದರೂ ಆ ರಕ್ತವು ಹೋಗದಿರಲು ಆಗ ಆಕಾಶವಾಣಿಯು ರಾಮನೇ ನನ್ನ ಮಾತನ್ನು ಕೇಳು ಎಂದಿತು

೩೮ ಆಕಾಶವಾಣಿಯು ಹೇಳಿತು- ನಿನ್ನ ಕೊಡಲಿಯನ್ನು ಎಲ್ಲಿ ತೊಳೆದರೆ ನಿರ್ಮಲವಾಗುತ್ತದೆಯೋ ಅಲ್ಲಿ ನಿನ್ನ ಪಾಪವೆಲ್ಲವೂ ಹೋಗಿ ನಿರ್ಮಲವಾಗುತ್ತವೆ. ಅದನ್ನು ಹೇಳುತ್ತೇನೆ.

೩೯. ಜನಗಳ ಹಿತಕ್ಕೋಸ್ಕರ ನೀನು ಎಲ್ಲಾ ತೀರ್ಥಗಳಿಗೂ ಹೋಗು ಅವುಗಳಲ್ಲಿ ನಿನ್ನ ಈ ಕೊಡಲಿಯನ್ನು ತೊಳೆ.

೪೦. ಅವುಗಳೊಳಗೆ ಯಾವ ತೀರ್ಥದಲ್ಲಿ ತೊಳೆದಾಗ ಆ ನಿನ್ನ ಕೊಡಲಿಯು ಶುದ್ಧವಾಗುತ್ತದೆಯೋ ಅದೇ ತೀರ್ಥಗಳಲ್ಲೆಲ್ಲಾ ಮುಕ್ತಿಯನ್ನು ಕೊಡತಕ್ಕದ್ದೆಂದು ತಿಳಿ.

೪೧-೪೩. ಭಗವಂತನು ಹೇಳಿದನು- ಅದನ್ನು ಕೇಳಿ ಪರುಶುರಾಮನು ಗಂಗೆ, ಸರಸ್ವತಿ, ಕಾವೇರಿ, ಸರಯು, ಗೋದಾವರಿ, ಯಮುನೆ, ಕದ್ರೂ, ಬಾಹದೆ,

ಗೋದಾವರೀಂ ಚ ಯಮುನಾಂ ಕದ್ರೂಂ ಚ ಬಾಹುದಾಂ ತಥಾ ।
ಅನ್ಯಾಂ ಚ ಪುಣ್ಯದಾಂ ರಮ್ಯಾಂ ಗೌರೀಪೂರ್ವಾಂ ಸ್ಥಿತಾಂ ಶುಭಾಂ ॥ ೪೨ ॥

ಗಚ್ಛತಸ್ತಸ್ಯ ಧೀರಸ್ಯ ಸದಾ ಗತಿಸಮುಸ್ಯ ಚ ।
ಕ್ಷಾಳಿತ್ಸರ್ವತೀರ್ಥೇಷು ನ ಪುನರ್ನಿರ್ಮಲೋಭವತ್ ॥ ೪೩ ॥

ತತೋ ಗಿರಿಗುಹಾಂ ದುರ್ಗಾಂ ಮಹಾರಣ್ಯಂ ಚ ಪರ್ವತಂ ।
ಗಿರಿಕೂಟಂ ಚ ದುರ್ಲಭ್ಯಂ ಯಯೌ ತೀರ್ಥಮಸೌ ಹರಿಃ ॥ ೪೪ ॥

ನ ಚ ನಿರ್ಮಲತಾಮೇತಿ ಕುಠಾರಸ್ತಸ್ಯ ತೇನ ಚ ।
ವಿಷಾದಮಗಮತ್ತತ್ರ ರಾಮಃ ಪರಪುಂಜಯಃ ॥ ೪೫ ॥

ಹಾ ಹೇತಿ ವಿವಿಧಂ ಕೃತ್ವಾ ಚೋಪವಿಶ್ಯ ಧರಾತಳೇ ।
ಪ್ರಚಿತ್ತಮಾಗಮದ್ವೀರಸ್ತಮುವಾಚ ಪುನಸ್ತಥಾ ॥ ೪೬ ॥

॥ ದೇವವಾಗುವಾಚ ॥

ಪೂರ್ವಸ್ಯಾಂ ದಿಶಿ ದೇವೇಶ ತೀರ್ಥಂ ಚಾಸ್ತಿ ಗೃಹೋದರೇ ॥ ೪೭ ॥

---

ಗೌರಿಯಿಂದ ಪುರಸ್ಕೃತವಾದ ಎಲ್ಲಾ ತೀರ್ಥಗಳಿಗೂ ಹೋಗಿ ತೊಳೆದನು. ಬಹು ಬೇಗನೆ ಎಲ್ಲಾ ತೀರ್ಥಗಳಿಗೂ ಹೋಗಿ ತೊಳೆದರೂ ಆ ಕೊಡಲಿಯು ನಿರ್ಮಲವಾಗಲಿಲ್ಲ.

೪೪-೪೫. ಆಮೇಲೆ ಗಿರಿಯ ಗುಹೆಗಳು, ದುರ್ಗಗಳು, ಅರಣ್ಯದ ಒಳಭಾಗಗಳು, ಪರ್ವತಗಳು, ತಪ್ಪಲುಗಳು, ಅಪ್ರಸಿದ್ಧವಾಗಿ ಸಂದಿಗೊಂದಿಯಲ್ಲಿರುವ ತೀರ್ಥಗಳಿಗೂ ಹೋಗಿ ತೊಳೆದನು. ಆದರೂ ನಿರ್ಮಲವಾಗಲಿಲ್ಲ. ಆಗ ಆ ರಾಮನು ಬಹು ದುಃಖಿತನಾದನು.

೪೬. ಹಾ ! ಹಾ !! ಎಂಬುದಾಗಿ ಬಹುವಾಗಿ ನಿಟ್ಟುಸಿರು ಬಿಟ್ಟು ನೆಲದ ಮೇಲೆ ಕುಳಿತು ಇನ್ನೆಲ್ಲಿಯೂ ಸಾಧ್ಯವಿಲ್ಲವೆಂದು ಸುಮ್ಮನಾಗಲು ಆಕಾಶವಾಣಿಯು ಮತ್ತೆ ಇಂತೆಂದಿತು.

೪೭. ಆಕಾಶವಾಣಿಯು ಹೇಳಿತು- ಪೂರ್ವದಿಕ್ಕಿನಲ್ಲಿ ಮನೆಯೊಳಗೆ ಒಂದು ತೀರ್ಥವಿರುವುದು ಅಲ್ಲಿಗೆ ಹೋಗು.

॥ ಭಗವಾನುವಾಚ ॥

ತಚ್ಛ್ರುತ್ವಾ ನರಶಾರ್ದೂಲೋ ಗತ್ವಾ ಕುಂಡಂ ದದರ್ಶ ಸಃ ।
ಪ್ರದಕ್ಷಿಣಂ ಜಲಾವರ್ತಂ ಶುಭ್ರಂ ಪಾಪಹರಂ ಶುಭಂ ॥ ೪೮ ॥

ತಜ್ಜಲಸ್ಪರ್ಶಮಾತ್ರೇಣ ಕುಠಾರಶ್ಶುದ್ಧಿತಾಂ ಗತಃ ।
ತತೋ ರಾಮೋಽಭಿಷೇಕಂ ತು ಕೃತವಾನ್ಪ್ರಮುದಾನ್ವಿತಃ ॥ ೪೯ ॥

ಶುದ್ಧಾತ್ಮನಸ್ತ್ವಪಾಪಸ್ಯ ಬುದ್ಧಿರ್ಜಾತಾ ಪ್ರಸಾವಿನೀ ।
ಸ ರಾಮಸ್ಸುಚಿರಂ ಸ್ಥಿತ್ವಾ ತೀರ್ಥರಾಜಂ ಪ್ರಸಾದ್ಯ ತಂ ॥ ೫೦ ॥

ಸ ಚಾತ್ರ ವಾಚಲಂ ಪ್ರಾಸ್ಯ ಪುರಂ ವೇಗಸಮನ್ವಿತಃ ।
ಖ್ಯಾತಂ ಕೃತ್ವಾ ತತಶ್ಚೋರ್ವ್ಯಾಂ ಗತೋಽಸೌ ಲವಣಾರ್ಣವಂ ॥ ೫೧ ॥

ಅಯಂ ತೀರ್ಥವರಸ್ಸಾಕ್ಷಾತ್ಪಿತಾಮಹಕೃತೋ ಭುವಿ ।
ಸುಖದಸ್ಸರ್ವದಶ್ಶುದ್ಧೋ ಮುಕ್ತಿಮಾರ್ಗಪ್ರದಃ ಕಿಲ ॥ ೫೨ ॥

---

೪೮. ಭಗವಂತನು ಹೇಳಿದನು- ಆ ರಾಮನು ಆ ಮಾತನ್ನು ಕೇಳಿ ಅಲ್ಲಿ ಬಲಮುಖವಾಗಿರುವ ಸುಳಿಯುಳ್ಳ ಒಂದು ಕುಂಡವನ್ನು ಕಂಡನು.

೪೯. ಆ ಕುಂಡದ ನೀರು ಬಿದ್ದೊಡನೆಯೇ ಕೊಡಲಿಯು ಶುದ್ಧವಾಯಿತು. ಆಗ ಸಂತೋಷಪಟ್ಟು ರಾಮನು ತಾನೂ ಅಲ್ಲಿ ಸ್ನಾನಮಾಡಿದನು.

೫೦. ಆಗ ಅವನ ಮನಸ್ಸು ಶುದ್ಧವಾಯಿತು. ಪಾಪದಿಂದ ಮುಕ್ತನಾಗುತ್ತಲೂ ಬುದ್ಧಿಯೂ ನಿರ್ಮಲವಾಯಿತು. ರಾಮನು ಅಲ್ಲಿ ಸ್ನಾನಮಾಡುತ್ತ ಬಹುಕಾಲವಿದ್ದು ಸಂತೋಷಿಸಿದನು.

೫೧. ಅಲ್ಲಿ ಅವನು ಒಂದೂರನ್ನು ಕಟ್ಟಿಸಿ ಆ ತೀರ್ಥವನ್ನು ಪ್ರಸಿದ್ಧಿಪಡಿಸಿ ಲವಣ ಸಮುದ್ರಕ್ಕೆ ಹೊರಟುಹೋದನು

೫೨. ಆದ್ದರಿಂದ ಇದು ಬ್ರಹ್ಮನಿಂದ ಮಾಡಲ್ಪಟ್ಟ ತೀರ್ಥವಾಯಿತು. ಸುಖವನ್ನೂ, ಮುಕ್ತಿಯನ್ನೂ ಕೊಡುತ್ತದೆ. ಶುದ್ಧವಾಗಿದೆ.

ಏವಂ ಕಾಮಪ್ರಭಾವಂ ಚ ವಿದ್ಧಿ ದುರ್ವಾರದುಸ್ಸಹಂ ।
ಕಾಮಾಜ್ಜಾತಂ ವೃಷಂ ಪಾಪಂ ಪುಣ್ಯಂ ಪುಣ್ಯಪ್ರಯೋಗತಃ ॥ ೫೩ ॥

ಸ ಜಾತಶ್ಚೈವ ಲೋಹಿತ್ಯೋ ವಿರಿಂಚೇಶ್ಚೈವ ಚೌರಸಃ ।
ಶಾಂತನೋಃ ಕ್ಷೇತ್ರಸಂಜಾತಸ್ತ್ವಮೋಘಾ ಗರ್ಭಸಂಭವಃ ॥ ೫೪ ॥

ವಿರಿಂಚಿನಾ ಜಿತಃ ಕಾಮಃ ಶಾಂತನೋರಪ್ಯಮತ್ಸರಾತ್ ।
ತಸ್ಯಾಃ ಪತಿವ್ರತಾತ್ವಾಚ್ಚ ತೀರ್ಥಾತ್ತೀರ್ಥವರೋ ಹಿ ಸಃ ॥ ೫೫ ॥

ಏವಂ ಯಸ್ತು ಪಠೇನ್ನಿತ್ಯಂ ಪುಣ್ಯಾಖ್ಯಾನಮಿದಂ ಶಿವಂ ।
ಶೃಣುಯಾದ್ವಾ ಮುದಾ ಪೃಥ್ವ್ಯಾಂ ಮುಕ್ತಿಮಾರ್ಗಂ ಸ ಗಚ್ಛತಿ ॥ ೫೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪಂಚಾಖ್ಯಾನೇ
ಲೌಹಿತ್ಯೋತ್ಪತ್ತಿರ್ನಾಮ ದ್ವಿಪಂಚಾಶತ್ತಮೋಽಧ್ಯಾಯಃ

---

೫೩. ಕಾಮದ ಪ್ರಭಾವವು ಈ ರೀತಿಯಾಗಿದೆ. ಅದನ್ನು ತಡೆಯಲಾಗುವುದೇ ಇಲ್ಲ. ಕಾಮದಿಂದ ಹುಟ್ಟಿದುದು ಅದು ಪುಣ್ಯವಾದರೂ ಪಾಪವೇನೆ. ಪುಣ್ಯದಿಂದ ಹುಟ್ಟಿದರೇನೆ ಅದು ಪುಣ್ಯವು.

೫೪. ಪಾಪಬುದ್ಧಿಯು ಹುಟ್ಟಿ ಅದರಿಂದ ಆ ವೀರ್ಯವು ಬಂದುದರಿಂದ ನೀಲಿ ಬಣ್ಣದ್ದಾಯಿತು. ಅದು ಶಾಂತನು ಋಷಿಯ ಕ್ಷೇತ್ರವಾದ ಅಮೋಘೆಯ ಗರ್ಭದಲ್ಲಿ ಉತ್ಪನ್ನವಾಯಿತು.

೫೫. ಈ ಕಾಮವು ಪಾಪದಿಂದ ಉತ್ಪನ್ನವಾದರೂ ಅದನ್ನು ಬ್ರಹ್ಮನು ನಿಗ್ರಹಿಸಿಕೊಂಡನು. ಶಂತನುವೂ ಕೂಡ ದ್ವೇಷಭಾವವಿಲ್ಲದೇ ಒಪ್ಪಿದನು. ಆತನ ಹೆಂಡತಿಯೂ ಪತಿವ್ರತೆತನದಿಂದ ಧರಿಸಿದಳು. ಈ ಇಷ್ಟು ಕಾರಣಗಳಿಂದ ಅದು ಉತ್ತಮ ತೀರ್ಥವಾಯಿತು.

೫೬. ಇದನ್ನು ಓದುವವನೂ, ಕೇಳುವವನೂ, ಭೂಮಿಯಲ್ಲಿ ಮುಕ್ತಿ ಮಾರ್ಗವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದ ಪಂಚಾಖ್ಯಾನದಲ್ಲಿ ಲೌಹಿತ್ಯೋತ್ಪತ್ತಿ ಎಂಬ ಐವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ತ್ರಿಪಂಚಾಶತ್ತಮೋಽಧ್ಯಾಯಃ ॥



॥ ಶ್ರೀ ಭಗವಾನುವಾಚ ॥

ಪುರಾ ಶರ್ವಸ್ಸ್ತ್ರಿಯೋ ದೃಷ್ಟ್ವಾ ಯುವತೀರೂಪಶಾಲಿನೀಃ ।
ಗಂಧರ್ವಕಿನ್ನರಾಣಾಂ ಚ ಮನುಷ್ಯಾಣಾಂ ಚ ಸರ್ವತಃ ॥ ೧ ॥

ಮಂತ್ರೇಣ ತಾಸ್ಸಮಾಕೃಷ್ಯ ತ್ವತಿದೂರೇ ವಿಹಾಯಸಿ ।
ತಪೋವ್ಯಾಜಪರೋ ದೇವಸ್ತಾಸುಸಂಗತಮಾನಸಃ ॥ ೨ ॥

ಅತಿರಮ್ಯಾಂ ಕುಟೀಂ ಕೃತ್ವಾ ತಾಭಿಸ್ಸಹ ಮಹೇಶ್ವರಃ ।
ಕ್ರೀಡಾಂ ಚಕಾರ ಸಹಸಾ ಮನೋಭವ ಪರಾಭವಃ ॥ ೩ ॥

ಏತಸ್ಮಿನ್ನಂತರೇ ಗೌರ್ಯಾಶ್ಚಿತ್ತಮುದ್ಭ್ರಾಂತತಾಂ ಗತಂ ।
ಅಪಶ್ಯದ್ಧ್ಯಾನಯೋಗೇನ ಕ್ರೀಡಂತಂ ಜಗದೀಶ್ವರಂ ॥ ೪ ॥

---

### ಐವತ್ತಮೂರನೆಯ ಅಧ್ಯಾಯವು

೧-೨. ಭಗವಂತನು ಹೇಳಿದನು- ಪೂರ್ವದಲ್ಲಿ ಗಂಧರ್ವರು, ಕಿನ್ನರರು, ಮನುಷ್ಯರ ಸುಂದರಿಯರೂ, ಯುವತಿಯರೂ ಆದ ಹೆಂಗಸರನ್ನು ಶಿವನು ನೋಡಿ ಅವರೆಲ್ಲರನ್ನೂ ಮಂತ್ರದಿಂದ ಎಳೆದು ಆಕಾಶದಲ್ಲಿ ಒಂದು ಜಾಗದಲ್ಲಿ ಅವರನ್ನಿಟ್ಟು ತಾನು ತಪಸ್ಸಿನ ನೆವದಿಂದ ಅವರಲ್ಲಿ ಮನಸ್ಸಿಟ್ಟು ರಮಿಸುತ್ತಿದ್ದನು.

೩. ಆ ತಪೋವನದಲ್ಲಿ ಒಂದು ಪರ್ಣಶಾಲೆಯನ್ನು ಮಾಡಿಕೊಂಡು ಶಿವನು ಮನ್ಮಥನಿಗೆ ಸೋತು ವಿವಿಧಕ್ರೀಡೆಗಳನ್ನು ಅನುಭವಿಸುತ್ತಿದ್ದನು.

೪.೫. ಇಷ್ಟರಲ್ಲಿ ಪಾರ್ವತೀದೇವಿಗೆ ಮನಸ್ಸಿಗೆ ಸಂದೇಹ ಬಂದು ಧ್ಯಾನಯೋಗ ದಿಂದ ನೋಡಲು ಈಶ್ವರನು ಹೆಂಗಸರೊಡನೆ ಕ್ರೀಡಿಸುತ್ತಿರುವುದನ್ನು ಕಂಡಳು.

ಸ್ತ್ರೀಭಿರನ್ತರ್ಗತಂ ಜ್ಞಾತ್ವಾ ರೋಷಸ್ಯವಶಗಾಭವತ್ ।
ತತಃ ಕ್ಷೇಮಂಕರೀ ರೂಪಾ ಭೂತ್ವಾ ಚ ಪ್ರವಿವೇಶ ಸಾ ॥ ೫ ॥

ವ್ಯೋಮ್ನ್ಯೇಕಾಂತೇತಿದೂರೇ ಚ ಕಾಮದೇವಸಮಪ್ರಭಂ ।
ವಾಮಾತಿಮಧ್ಯಗಂ ಶುಭ್ರಂ ಪುರುಷಂ ಪುರುಷೋತ್ತಮಂ ॥ ೬ ॥

ಸ್ತ್ರೀಭಿಸ್ಸಹ ಸಮಾಲಿಂಗ್ಯ ಪ್ರಕ್ರೀಡಂತಂ ಮುಹುರ್ಮುಹುಃ ।
ಚುಂಬಂತಂ ನಿರ್ಭರಂ ದೇವಂ ಹರಂ ರಾಗಪ್ರಪೀಡಿತಂ ॥ ೭ ॥

ವೃತಂ ಕ್ಷೇಮಂಕರೀ ದೃಷ್ಟ್ವಾ ನಿಪಪಾತಾಗ್ರತಸ್ತದಾ ।
ತಾಸಾಂ ಕೇಶೇಷು ಚಾಕೃಷ್ಯ ಚಕಾರ ಚರಣಾಹತಿಂ ॥ ೮ ॥

ತ್ರಪಯಾ ಪೀಡಿತಶ್ಶರ್ವಃ ಪರಾಙ್ಮುಖಮವಸ್ಥಿತಃ ।
ಕೇಶೇಷ್ವಾಕೃಷ್ಯ ರೋಷಾತ್ತಾಃ ಪಾತಯಾಮಾಸ ಭೂತಲೇ ॥ ೯ ॥

ಸ್ತ್ರಿಯಸ್ಸರ್ವಾ ಧರಾಂ ಪ್ರಾಪ್ಯ ಸಹಸಾ ವಿಕೃತಾನನಾಃ ।
ಉಮಾಶಾಪಪ್ರದಗ್ಧಾಂಗಾ ಮ್ಲೇಚ್ಛಾನಾಂ ವಶಮಾಗತಾಃ ॥ ೧೦ ॥

---

ಮತ್ತು ಹೆಂಗಸರೊಡನೆ ಒಳಗಿರುವುದನ್ನು ನೋಡಿ ಬಹು ಕೋಪವೂ ಬಂದಿತು. ಆಗ ಕ್ಷೇಮಂಕರಿಯು ವೇಷವನ್ನು (ಕೊರವಂಜಿ) ಹಾಕಿಕೊಂಡು ಅಲ್ಲಿಗೆ ಹೋದಳು.

೬-೯ ದೂರದಲ್ಲಿ ಅಂತರಿಕ್ಷದಲ್ಲಿ ಒಬ್ಬರಿಗೂ ತಿಳಿಯದಂತೆ ಸ್ಥಳಮಾಡಿಕೊಂಡು ಕಾಮದೇವನಂತೆ ಚೆನ್ನಾಗಿದ್ದು ಸ್ತ್ರೀಯರ ಮಧ್ಯದಲ್ಲಿದ್ದು ಅವರಿಂದ ಬಾರಿ ಬಾರಿಗೂ ಆಲಿಂಗಿತನಾಗುತ್ತಾ ಚುಂಬನಾದಿಗಳನ್ನು ಮಾಡುತ್ತಿರುವ ಹರನನ್ನು ಈ ಕ್ಷೇಮಂಕರಿಯು ನೋಡಿ ಒಡನೆಯೇ ಹತ್ತಿರಕ್ಕೆ ಹೋದಳು. ಆ ಹೆಂಗಸರ ಜುಟ್ಟನ್ನು ಹಿಡಿದುಕೊಂಡು ಒದ್ದಳು. ಆಗ ಶಂಕರನು ಲಜ್ಜೆಯಿಂದ ತಲೆಬಗ್ಗಿಸಿಕೊಂಡು ನಿಂತನು. ಅನಂತರ ಆಕೆಯು ಆ ಹೆಂಗಸರ ತಲೆಯನ್ನು ಹಿಡಿದು ಅಂತರಿಕ್ಷದಿಂದ ಕೆಳಕ್ಕೆ ಕೆಡವಿದಳು.

೧೦. ಅವರೆಲ್ಲರೂ ಭೂಮಿಗೆ ಬಿದ್ದು ಗತಿಯಿಲ್ಲದವರಾದರು. ಆ ಪಾರ್ವತಿಯು ಶಾಪದಿಂದವರು ಮ್ಲೇಚ್ಛರ ಅಧೀನರೂ ಆದರು.

ತಾಶ್ಚಾಂಡಾಲಸ್ತ್ರಿಯಃ ಖ್ಯಾತಾ ಅಥವಾ ಧವಸಂಯುತಾಃ ।
ಅದ್ಯಾಪ್ಯುಮಾಕೃತಂ ಶಾಪಂ ಸರ್ವಾಸ್ತಾಶ್ಚ ಸಮಶ್ನುಯುಃ ॥ ೧೧ ॥

ಅಥೋಮಾ ಶತಧಾ ರೂಪಂ ಕೃತ್ವೇಶಂ ಸಂಗತಾ ಯದಾ ।
ಏವಂ ಪ್ರಭಾವಂ ಜಾನೀಹಿ ಕಾಮಸ್ಯ ಸತತಂ ದ್ವಿಜ ॥ ೧೨ ॥

ತತಶ್ಚಿರಂ ತಯಾ ಸಾರ್ಧಂ ಗತಃ ಕೈಲಾಸಮಂದಿರಂ ।
ಅತಃ ಕ್ಷೇಮಂಕರೀಂ ದೃಷ್ಟ್ವಾ ಯೇಭಿವಂದಂತಿ ಮಾನವಾಃ ॥ ೧೩ ॥

ತೇಷಾಂ ವಿತ್ತರ್ಧಿವಿಭವಾ ಭವಂತೀಹ ಪರತ್ರ ಚ ।
ಕುಂಕುಮಾರಕ್ತಸರ್ವಾಂಗಿ ಕುಂದೇಂದುಧವಳಾನನೇ ॥ ೧೪ ॥

ಸರ್ವಮಂಗಳದೇ ದೇವೀ ಕ್ಷೇಮಂಕರಿ ನಮೋಽಸ್ತುತೇ ।
ತೇನೈವ ಯೋಗಿನೀಸಾಮ್ಯಂ ಸಮ್ಮುಖಾ ವಿಮುಖಾಪಿ ವಾ ॥ ೧೫ ॥

ದೃಷ್ಟ್ವಾ ತಾಂ ನಾಭಿವಂದ್ಯೇದ್ಯಸ್ತಸ್ಯ ಯುದ್ಧೇ ಪರಾಜಯಃ ।
ರಾಜಗೃಹೇಷು ವಿದ್ಯಾಯಾಂ ನಮಸ್ಕಾರಾಜ್ಜಯೋ ಭವೇತ್ ॥ ೧೬ ॥

---

೧೧. ಅವರೆಲ್ಲರೂ ಚಾಂಡಾಲಸ್ತ್ರೀಯರೆಂದು ಹೆಸರಾದರು. ಅವರಿಗೆ ಗಂಡಂದಿರಿದ್ದರೂ ವಿಧವೆಯರೆಂದೇ ಹೆಸರು. ಈಗಲೂ ಉಮೆಯ ಶಾಪವನ್ನು ಅನುಭವಿಸುತ್ತಿದ್ದಾರೆ.

೧೨. ಅನಂತರ ಉಮೆಯು ಶಿವನ ಕಾಮಾತುರತೆಯನ್ನು ತಿಳಿದು ತಾನು ನೂರಾರು ಬಗೆಯ ಅವತಾರಗಳನ್ನು ಹೊಂದಿ ರಮಿಸುತ್ತಾ ಬಂದಳು. ಕಾಮನ ಸ್ವಭಾವವು ಈ ರೀತಿಯೆಂದು ತಿಳಿ.

೧೩-೧೬. ಅನಂತರ ಅವಳೊಡನೆ ಕೈಲಾಸದಲ್ಲಿ ಬಹುಕಾಲ ರಮಿಸಿದನು ಆದ್ದರಿಂದ ಕ್ಷೇಮಂಕರಿಯನ್ನು ನೋಡಿ ನಮಸ್ಕರಿಸಿದವರಿಗೆ ಅನೇಕವಾದ ವಿಭವಗಳು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಹೆಚ್ಚುತ್ತವೆ. ಕುಂಕುಮದಿಂದ ಕೆಂಪಾಗಿರುವ ಪೂರ್ಣಚಂದ್ರನಂತೆ ಮುಖವುಳ್ಳ ಸರ್ವಮಂಗಳೆಯಾದ ದೇವಿಯ ನಿನಗೆ ನಮಸ್ಕಾರವು. ಅವಳು ಯೋಗದಿಂದ ವಿಷಯಗಳನ್ನು ತಿಳಿದು ಯೋಗಿನಿಗಳ ಜತೆಯಲ್ಲಿರುವುದರಿಂದ ಯೋಗಿನಿಯು. ಅವಳು ನಮಗ ಅನುಗ್ರಹಮಾಡಲಿ, ಮಾಡದಿರಲಿ ಅವಳಿಗೆ ನಮಸ್ಕರಿಸದಿದ್ದರೆ ಅವನಿಗೆ ಯುದ್ಧದಲ್ಲಿ ಸೋಲುಂಟಾಗುತ್ತದೆ. ಅವಳಿಗೆ ನಮಸ್ಕರಿಸಿದರೆ ರಾಜನಲ್ಲಿಯೂ ವಿದ್ಯೆಯಲ್ಲಿಯೂ ಮೇಲುಂಟಾಗುತ್ತದೆ.

ಏವಂ ಕಾಮಸ್ಯ ಮಾಹಾತ್ಮ್ಯಂ ಭವೋ ಮೋಹವಶಂ ಗತಃ ।
ಮಮೈವ ಯಾದೃಶೋ ಮೋಹಸ್ಸರ್ವಲೋಕೈಃ ಪ್ರಗೀಯತೇ　　॥ ೧೭ ॥

ಪರಸ್ತ್ರೀಹರಣೇ ದೋಷಾನ್ಮಮದುರ್ಗತಿಸಂಚಯಂ ।
ಯಥೋದ್ಭೂತಂ ಪ್ರವಕ್ಷ್ಯಾಮಿ ಜನೇಷು ವಿದಿತಂ ದ್ವಿಜ　　॥ ೧೮ ॥

ಗೋಪೀ ಪತಿಹಿತಾ ಕಾಚಿತ್ಕಾಚಿದ್ಬಾಲಾ ತಪಸ್ವಿನೀ ।
ಪ್ರೌಢಾ ಕಾತ್ಯಾಯನೀ ವೃದ್ಧಾ ಕಾಚಿತ್ಸಂಬಂಧಿನೀ ವಧೂಃ　　॥ ೧೯ ॥

ಆಸಾಂ ಹರಣದೋಷಾಚ್ಚ ಯದ್ವೃತ್ತಂ ತಚ್ಛೃಣುಷ್ವ ಮೇ ।
ರಣೇ ಪರಾಜಯಂ ದೈನ್ಯಂ ಶೋಕಂ ಪುತ್ರವಿನಾಶನಂ　　॥ ೨೦ ॥

ಸಾರಥ್ಯಂ ಸ್ತ್ರೀಜನೇ ಪಾಪಂ ಚಂಡಾಲಾದೇಸ್ಸವಿಪ್ಲವಂ ।
ಶುಕ್ಲಾಂಗಂ ಕ್ಷಯವೃದ್ಧಿಂ ಚ ಕಲ್ಪೇ ಶಾಶ್ವತಮಾಪ್ನುಯಾಂ　　॥ ೨೧ ॥

---

೧೭. ಕಾಮನ ಮಹಿಮೆಯು ಈ ರೀತಿಯಾದುದು. ಹೀಗೆ ಶಿವನು ಮೋಹವನ್ನು ಹೊಂದಿದನು. ನನಗೆ ಉಂಟಾಗಿರುವ ಮೋಹವನ್ನು ಲೋಕದಲ್ಲಿ ಎಲ್ಲರೂ ಬಲ್ಲರು.

೧೮. ಪರಸ್ತ್ರೀಯನ್ನು ಕದ್ದುದರಿಂದ ನನಗೆ ಪಾಪಬಂದ ವಿಷಯವನ್ನು ಹೇಳುತ್ತೇನೆ, ಕೇಳು.

೧೯–೨೧. ನಾನು ರತಿಯನ್ನು ಹೊಂದಿದ ಗೋಪಿಯರಲ್ಲಿ ಕೆಲವರು ಶೋಚ್ಯರು. ಕೆಲವರು ಪ್ರೌಢೆಯರು ಕೆಲವರು ಅರ್ಧಯೌವನ ಕಳೆದವರು, ಕೆಲವರು ಸಂಬಂಧಿಗಳ ಸೊಸೆಯರು, ಇವರೆಲ್ಲರನ್ನೂ ಕದ್ದುದರಿಂದ ನನಗಾದ ದುರವಸ್ಥೆಯನ್ನು ಕೇಳು. ಯುದ್ಧದಲ್ಲಿ ಅಪಜಯ, ದುಃಖ, ದುರವಸ್ಥೆ ಪಡುವುದು, ಮಕ್ಕಳು ಸತ್ತುದು, ಸಾರಥಿಯಾದುದು, ಹೆಂಗಸರಲ್ಲಿಯೂ ಅಪಮಾನ ಹೊಂದಿದುದು, ಚಂಡಾಲರಿಂದ ತೊಂದರೆ, ತೊನ್ನು, ನಾಶ, ಇವುಗಳ ವಿಳಿಗೆಗಳು ಇವನ್ನು ಯಾವಾಗಲೂ ಹೊಂದುತ್ತಿರುವೆನು.

ಅಯಂ ದೇವಾಸುರಾಣಾಂ ಚ ಕ್ಷಮಯಾ ಪ್ರಭುತಾಂ ಗತಃ ।
ಅಸ್ಯೈವ ಸದೃಶೋ ಲೋಕೇ ನ ಭೂತೋ ನ ಭವಿಷ್ಯತಿ ॥ ೨೨ ॥

ರಾಮಾಮಂಕಸ್ಥಿತಾಂ ರಮ್ಯಾಂ ಕ್ಷಮಾತಲ್ಪಗತೇನ ಚ ।
ತ್ಯಕ್ತ್ವೈವ ಸಾಧಿತಾ ಲೋಕಾಃ ಸುರಾಸುರಪ್ರದುರ್ಲಭಾಃ ॥ ೨೩ ॥

ಏವಂ ವೈಷ್ಣವಮುಖ್ಯಶ್ಚ ಸುರಾಸುರಗಣಾರ್ಚಿತಃ ।
ಯೋ ನೋ ದದಾತಿ ಭುಕ್ತ್ಯಂಶಂ ಶೇಷಂ ಚ ಸ್ವಯಮಶ್ನುತೇ ॥ ೨೪ ॥

ಏವಮಭ್ಯಾಸಧೈರ್ಯೇಣ ದೀರ್ಘಕಾಲಂ ಸ ಸಂಗತಃ ।
ಪ್ರಾಕ್ಸಂಗಮಾತ್ಸಭಾರ್ಯಾಂ ಚ ದೃಷ್ಟ್ವಾ ಮಾಂ ಪ್ರದದೌ ಮುದಾ ॥ ೨೫ ॥

ದ್ವಾದಶಾಬ್ದಪ್ರಸಂಕಲ್ಪಂ ಪ್ರಾಗ್ಭೋಗ್ಯಂ ಮಯಿ ವೇಶಿತಂ ।
ತೇನ ತಸ್ಯ ಗೃಹೇ ನಿತ್ಯಂ ತಿಷ್ಠಾಮಿ ಗೃಹರಕ್ಷಣಾತ್ ॥ ೨೬ ॥

---

೨೨. ಪಾಮಕ್ಕೆ ಅಧೀನನಾಗದ ಈ ಅದ್ರೋಹಕನು ಕ್ಷಮೆಯಿಂದ ದೇವಾಸುರರಿಗೆ ಒಡೆಯನಾದನು. ಇವನಿಗೆ ಸಮನಾದವರು ಹಿಂದೆಯೂ ಇಲ್ಲ. ಮುಂದೆಯೂ ಇರುವುದಿಲ್ಲ.

೨೩. ತೊಡೆಯಮೇಲೆ ಕುಳಿತಿದ್ದ ಹೆಂಗಸನ್ನು ಕ್ಷಮೆಯಿಂದ ಬಿಟ್ಟು ದೇವಾಸುರರಿಗೂ ಸಿಕ್ಕದ ಲೋಕಗಳನ್ನು ಗಳಿಸಿಕೊಂಡನು.

೨೪. ಈ ರೀತಿಯಾಗಿ ವೈಷ್ಣವ ಮುಖ್ಯನಾಗಿದ್ದು ದೇವದಾನವರಿಂದ ಪೂಜಿಸಿಕೊಳ್ಳುತ್ತಿದ್ದಾನೆ. ಈತನು ತಾನು ತಿನ್ನುವುದರಲ್ಲಿ ನಮಗೆ ಭಾಗವನ್ನು ಕೊಟ್ಟು ಉಳಿದುದನ್ನು ತಿನ್ನುತ್ತಾನೆ.

೨೫-೨೬. ಈ ರೀತಿಯಾಗಿಯೇ ಅವನು ಅಭ್ಯಾಸಮಾಡಿ ಬಹುಕಾಲದಿಂದಲೂ ಇದ್ದಾನೆ. ಹೆಂಡತಿಯ ಸಂಗಮದಲ್ಲಿ ಮೊದಲನೆಯ ಸಲ ನನ್ನನ್ನು ನೋಡಿ ನನಗೆ ಕೊಟ್ಟುಬಿಟ್ಟನು. ಹನ್ನೆರಡು ವರ್ಷ ನನಗೆ ಕೊಡುವುದೆಂದು ಸಂಕಲ್ಪಮಾಡಿ ನನಗೆ ಕೊಟ್ಟಿರುವನು. ಈ ಭಕ್ತಿಗೋಸ್ಕರ ಅವನ ಮನೆಯನ್ನೂ ಕಾಯುತ್ತಾ ಅಲ್ಲಿಯೇ ಇರುವೆನು.

ತಥಾ ಧಾತ್ರೀಫಲಸ್ಯಾಪಿ ಸದಾ ಸ್ವರಸಮೀಹತೇ ।
ತಸ್ಮಾದುಕ್ತೋ ಮಯಾನ್ಯೇಷಾಂ ವೈಷ್ಣವಾನಾಂ ಚ ವೈಷ್ಣವಃ ॥ ೨೭ ॥

ಪುರಾ ಯೇ ವಿಪ್ರ ಮೇ ಭಕ್ತ್ಯಾ ಸುರಾ ಮತ್ಪಥಗಾಮಿನಃ ।
ತೈರ್ರೈವ ನ ಕೃತಂ ಯಚ್ಚ ಯದನೇನ ಕೃತಂ ಪರಂ ॥ ೨೮ ॥

ತಸ್ಮಾದ್ವೈಷ್ಣವಸರ್ವಸ್ವಂ ನಾಮ ರಮ್ಯಂ ಮಯಾ ಕೃತಂ ।
ಅಸ್ಯವೇಶ್ಮನಿ ತಿಷ್ಠಾಮಿ ಮುಹೂರ್ತಂ ನ ಚಲಾಮ್ಯಹಂ ॥ ೨೯ ॥

ಅತೋ ಯೇ ಚೈವ ಮದ್ಭಕ್ತಾಸ್ತೇಷ್ವಹಂ ಸುಲಭೋ ದ್ವಿಜ ।
ಅಸ್ಮಾಕಂ ಪದವೀಂ ತೇಭ್ಯಶ್ಚಾದ್ಯ ದದ್ಮಿ ಸ್ವಕಾರಣಂ ॥ ೩೦ ॥

ಆವಯೋರ್ವಿಪ್ರ ಸೌಜನ್ಯಂ ಸ್ವಪ್ನಭೋಗ್ಯಾದಿಕಂ ಸಮಂ ।
ಸಾಯುಜ್ಯಂ ಚ ಸಖಿತ್ವಂ ಚ ಪಶ್ಯ ಭೂದೇವ ನಾಂತರಂ ॥ ೩೧ ॥

---

೨೭. ನೆಲ್ಲಿಕಾಯಿಯನ್ನು ತಿನ್ನುವುದರಲ್ಲಿಯೂ ನನ್ನ ಶೇಷವನ್ನೇ ಅಪೇಕ್ಷಿಸುತ್ತಾನೆ. ಆದ್ದರಿಂದಲೇ ಇವನು ವೈಷ್ಣವರಲ್ಲಿಯೂ ವೈಷ್ಣವನೆಂದು ಹೇಳಿದೆನು.

೨೮. ಹಿಂದೆ ವೈಷ್ಣವ ಪಥದಲ್ಲಿದ್ದವರು ಮಾಡದಿದ್ದ ಕೆಲಸವನ್ನೂ ಈತನು ಮಾಡಿದ್ದಾನೆ.

೨೯. ಆದ್ದರಿಂದಲೇ ಈತನಿಗೆ ವೈಷ್ಣವಸರ್ವಸ್ವನೆಂಬ ಹೆಸರನ್ನು ಇಟ್ಟಿದ್ದೇನೆ. ಇವನ ಮನೆಯಲ್ಲಿಯೇ ಇದ್ದುಕೊಂಡು ಒಂದು ಕ್ಷಣವೂ ಕೂಡ ಎಲ್ಲೂ ಹೋಗುವುದೇ ಇಲ್ಲ.

೩೦. ನನ್ನಲ್ಲಿ ಭಕ್ತಿಯಿಟ್ಟಿರುವವರಿಗೆ ನಾನು ಬಹು ಸುಲಭನು. ನನ್ನ ಸ್ಥಾನವನ್ನು ಅವರಿಗೆ ಕೊಡಲು ಸಿದ್ಧವಾಗಿ ಕೊಡುತ್ತಿದ್ದೇನೆ.

೩೧. ನಮ್ಮಗಳಿಬ್ಬರಿಗೂ ಒಂದೇ ರೀತಿಯಾದ ಸೌಜನ್ಯವಿರುವುದು. ಊಟ ನಿದ್ರೆಗಳೆಲ್ಲವೂ ಸಮವು. ಸಾಯುಜ್ಯ ಸ್ನೇಹ ಎಲ್ಲವೂ ಒಂದೇ ರೀತಿಯಾಗಿವೆ. ವ್ಯತ್ಯಾಸವೇ ಇರುವುದಿಲ್ಲವು.

॥ ವ್ಯಾಸ ಉವಾಚ ॥

ತತೋ ಮೂಕಾದಯಸ್ಸರ್ವೇ ಸ್ವಾಗತಾ ಹರಿಮೀಶ್ವರಂ ।
ಗಂತುಕಾಮಾ ದಿವಂ ಪುಣ್ಯಾಃ ಸದಾರಾಸ್ಸಪರಿಚ್ಛದಾಃ ॥ ೩೨ ॥

ಯೇ ಚ ತೇಷಾಂ ಗೃಹಾಭ್ಯಾಸೇಪ್ಯಾತ್ಮನೋ ಗೃಹಗೋಧಿಕಾಃ ।
ನಾನಾಕೀಟಾದಯೋ ಯೇ ಚ ತೇಷಾಮನುಯಯುಸ್ಸುರಾಃ ॥ ೩೩ ॥

॥ ವ್ಯಾಸ ಉವಾಚ ॥

ಏತಸ್ಮಿನ್ನಂತರೇ ದೇವಾಃ ಸಿದ್ಧಾಶ್ಚ ಪರಮರ್ಷಯಃ ।
ಪ್ರಚಕ್ರುಃ ಪುಷ್ಪವರ್ಷಾಣಿ ಸಾಧು ಸಾಧ್ವಿತಿ ನಾದಯನ್ ॥ ೩೪ ॥

ದೇವದುಂದುಭಯೋ ನೇದುಃ ವಿಮಾನೇಷು ವನೇಷು ಚ ।
ಸಮಾರುಹ್ಯ ರಥಂ ಸ್ವಂ ಸ್ವಂ ಹರಿವೀಥಿಪುರಂ ಯಯುಃ ॥ ೩೫ ॥

ತದದ್ಭುತಂ ಸಮಾಲೋಕ್ಯ ವಿಪ್ರೋಪ್ಯಾಹ ಜನಾರ್ದನಂ ।
ಉಪದೇಶಂ ಚ ದೇವೇಶ ಬ್ರೂಹಿ ಮೇ ಮಧುಸೂದನ ॥ ೩೬ ॥

---

೩೨. ವ್ಯಾಸನು ಹೇಳಿದನು- ಆದ್ದರಿಂದ ಈ ಮೂಕನೇ ಮುಂತಾದವರು ಹರಿಯನ್ನು ಹೊಂದಲು ಇಲ್ಲಿಗೆ ಬಂದಿದ್ದಾರೆ ಪರಿವಾರದೊಡನೆ ಪುಣ್ಯಲೋಕವನ್ನು ಸೇರುತ್ತಾರೆ.

೩೩. ಇವರ ಮನೆಯ ಪಕ್ಕದಲ್ಲಿದ್ದ ಹಲ್ಲಿ ಮುಂತಾದ ಪಾಪ ಪ್ರಾಣಿಗಳೂ ಕೂಡ ಸ್ವರ್ಗವನ್ನು ಹೊಂದುತ್ತವೆ.

೩೪-೩೫. ವ್ಯಾಸನು ಹೇಳಿದನು- ಇಷ್ಟರಲ್ಲಿ ಸಿದ್ಧರೂ, ಋಷಿಗಳೂ, ಸಾಧು ಸಾಧು ಎಂದು ಹೇಳುತ್ತಾ ಹೂ ಮಳೆಯನ್ನು ಚಲ್ಲಿದರು. ದೇವದುಂದುಭಿಗಳು ಮೊಳಗಿದುವು. ಅನಂತರ ಅವರವರ ವಿಮಾನಗಳಲ್ಲಿ ಕುಳಿತು ವೈಕುಂಠಕ್ಕೆ ಹೋದರು.

೩೬ ಈ ಅದ್ಭುತವನ್ನು ನೋಡಿ ಆ ಬ್ರಾಹ್ಮಣನು ಜನಾರ್ದನನನ್ನು ಕುರಿತು ನನಗೊಂದು ಉಪದೇಶವನ್ನು ಕೊಡೆಂದು ಕೇಳಿದನು.

॥ ಭಗವಾನುವಾಚ ॥

**ಗಚ್ಛಸ್ವ ಪಿತರೌ ತಾತ ಶೋಕವಿಕ್ಲವಮಾನಸೌ ।**
**ಸಮಾರಾಧ್ಯ ಪ್ರಯತ್ನೇನ ಮದ್ಗೃಹಂ ಪ್ರಾಪ್ಸ್ಯಸೇಽಚಿರಾತ್ ॥ ೩೭ ॥**

**ಮಾತಾಪಿತೃಸಮಾ ದೇವಾ ನ ತಿಷ್ಠಂತಿ ಸುರಾಲಯೇ ।**
**ಯಾಭ್ಯಾಂ ಸಂಗರ್ಭಿತಂ ದೇಹಂ ಶಿಶುತ್ವೇ ಪಾಲಿತಂ ಸದಾ ॥ ೩೮ ॥**

**ಅಜ್ಞಾನದೋಷಸಹಿತಂ ಪ್ರಪುಷ್ಟಂ ಚಾಪಿ ವರ್ಧಿತಂ ।**
**ಯಾಭ್ಯಾಂ ತಯೋಸ್ಸಮಂ ನಾಸ್ತಿ ತ್ರೈಲೋಕ್ಯೇ ಸಚರಾಚರೇ । ॥ ೩೯ ॥**

॥ ವ್ಯಾಸ ಉವಾಚ ॥

**ತತೋ ದೇವಗಣಾಸ್ಸಾರ್ಧಂ ಪಂಚಭಿಸ್ತೈರ್ಮುದಾನ್ವಿತಾಃ ।**
**ಮಾಧವಂ ಸಂಸ್ತುವಂತಶ್ಚ ಗತಾಸ್ತೇ ಹರಿಮಂದಿರಂ ॥ ೪೦ ॥**

**ಖಚಿತಾಂ ಚ ಪುರೀಂ ರಮ್ಯಾಂ ವಿಶ್ವಕರ್ಮವಿನಿರ್ಮಿತಾಂ ।**
**ರತ್ನಾಢ್ಯಮಿಷ್ಟಸಂಪೂರ್ಣಾಂ ಕಲ್ಪವೃಕ್ಷಾದಿಭಿರ್ಯುತಾಂ ॥ ೪೧ ॥**

---

೩೭. ಭಗವಂತನು ಹೇಳಿದನು-'ನೀನ. ನಿನ್ನ ತಾಯಿತಂದೆಗಳ ಬಳಿಗೆ ಹೋಗಿ ಆ ದುಃಖಿತರನ್ನು ಸೇವಿಸಿ ಸಮಾಧಾನಪಡಿಸು. ಅನಂತರ ನನ್ನ ಲೋಕವು ಸಿಕ್ಕುತ್ತದೆ.

೩೮-೩೯. ಸ್ವರ್ಗದಲ್ಲಿ ತಾಯಿತಂದೆಗಳಿಗೆ ಸಮವಾದ ದೇವರೇ ಇಲ್ಲ. ಅವರಿಬ್ಬರೂ ಸೇರಿ ಈ ದೇಹವನ್ನು ಕೊಟ್ಟಿರುತ್ತಾರೆ. ಶಿಶುತನದಿಂದಲೂ ಅಜ್ಞಾನ ರೋಗ, ರುಜಿನಗಳು ಬಾರದಂತೆ ಇದನ್ನು ಕಾಪಾಡಿದರು. ಆದ್ದರಿಂದ ಪ್ರಪಂಚದಲ್ಲಿ ಅವರಿಬ್ಬರಿಗೆ ಸಮವಾದುದು ಮತ್ತಾವುದೂ ಇಲ್ಲ.

೪೦. ವ್ಯಾಸನು ಹೇಳಿದನು- ಆಗ ದೇವತೆಗಳು ಆ ಐದುಜನರೊಡನೆ ಸಂತೋಷದಿಂದ ಹರಿಯನ್ನು ಹೊಗಳುತ್ತ ವೈಕುಂಠಕ್ಕೆ ಹೋದರು.

೪೧-೪೨. ಅನಂತರ ಇವರೆಲ್ಲರೂ ಅಂತರಿಕ್ಷದಲ್ಲಿರುವ ಒಂದು ಪಟ್ಟಣಕೆ ಹೋದರು. ಅದು ವಿಶ್ವಕರ್ಮನಿಂದ ರಚಿತವಾಗಿ ರಮ್ಯವಾಗಿದ್ದಿತು ರತ್ನಗಳಿಂದಲೂ ಇಷ್ಟವಾದ ಪದಾರ್ಥಗಳಿಂದಲೂ, ಕಲ್ಪವೃಕ್ಷಗಳಿಂದಲೂ ಕೂಡಿದ್ದಿತು ಚಿನ್ನದ

ಶಾತಕುಂಭಮಯೈರ್ಗೇಹೈಃ ಸರ್ವರತ್ನೈಸ್ಸಕರ್ಬುರಾಂ ।
ವಜ್ರವೈಡೂರ್ಯಸೋಪಾನಾಂ ಸ್ವರ್ಣದೀತೋಯಸಂಯುತಾಂ ॥ ೪೨ ॥

ಗೀತವಾದ್ಯಾದಿಸಂಪೂರ್ಣಾಂ ಸರ್ವಮಾರ್ಗಸಮಾಕುಲಾಂ ।
ಕೋಕಿಲಾಲಾಪಬಹುಳಾಂ ಸಿದ್ಧಗಂಧರ್ವಸೇವಿತಾಂ ॥ ೪೩ ॥

ರೂಪಾಢ್ಯೈಸ್ಸುಜನೈಃ ಪೂರ್ಣಾಂ ಭ್ರಾಮಂತೀಮಿವ ಖೇ ಪುರೀಂ ।
ತತಸ್ಥಿತ್ವಾಚ್ಯುತಾಸ್ಸರ್ವೇ ಸರ್ವಲೋಕಾಚ್ಯುತಾ ಭೃಶಂ ॥ ೪೪ ॥

ಸದ್ವಿಜೋ ಪಿತರೌ ಗತ್ವಾ ಸಮಾರಾಧ್ಯ ಪ್ರಯತ್ನತಃ ।
ಅಚಿರೇಣೈವ ಕಾಲೇನ ಸಕುಟುಂಬೋ ಹರಿಂ ಯಯೌ ॥ ೪೫ ॥

ಪಂಚಾಖ್ಯಾನಮಿದಂ ಪುಣ್ಯಂ ಮಯಾ ತೇ ಸಮುದಾಹೃತಂ ।
ಯಃ ಪಠೇಚ್ಛೃಣುಯಾದ್ವಾಪಿ ತಸ್ಯ ನಾಸ್ತೀತಿ ದುರ್ಗತಿಃ ॥ ೪೬ ॥

ಬ್ರಹ್ಮಹತ್ಯಾದಿಭಿಃ ಪಾಪೈರ್ನಲಿಪ್ಯೇತ ಕದಾಚನ ।
ಗವಾಂ ಕೋಟಿಪ್ರದಾನೇನ ಯತ್ಫಲಂ ಲಭತೇ ನರಃ ॥ ೪೭ ॥

---

ಗೋಡೆಗಳನ್ನು ಹಾಕಿ ರತ್ನಗಳನ್ನು ಅವಕ್ಕೆ ಹಚ್ಚಿದ್ದ ಮನೆಗಳಿದ್ದುವು. ವೈಢೂರ್ಯ ವಜ್ರಗಳ ಸೋಪಾನದಿಂದ ಕೂಡಿದ, ಗಂಗಾ ನದಿಯ ನೀರನ್ನು ಬಿಟ್ಟಿರುವ ಕೊಳಗಳು ಅಲ್ಲಿದ್ದುವು.

೪೩-೪೪. ಗೀತವಾದ್ಯಗಳು ಅಲ್ಲಿ ಬಹುವಾಗಿದ್ದುವು. ಅನುಕೂಲವಾದ ದುರ್ಗಗಳು ಇದ್ದುವು. ಕೋಗಿಲೆಗಳು ಮನೋಹರವಾಗಿ ಧ್ವನಿಮಾಡುತ್ತಿದ್ದುವು. ಸಿದ್ಧಗಂಧರ್ವಾದಿಗಳೆಲ್ಲರೂ ಇದ್ದರು. ಸುಂದರರಾದ ಜನರು ಅಲ್ಲಿದ್ದರು. ಅಂತರಿಕ್ಷ ದಲ್ಲಿ ಆ ಪಟ್ಟಣವು ತೂಗಾಡುತ್ತಿರುವಂತಿದ್ದಿತು. ಅಲ್ಲಿ ಇವರೆಲ್ಲರೂ ನಿಂತು ವಿಷ್ಣುಗಳೇ ಆದರು. ಮತ್ತು ಎಲ್ಲಾ ಲೋಕಕ್ಕಿಂತಲೂ ಅವರಿಗೆ ಅದು ಶಾಶ್ವತವಾಯಿತು.

೪೫. ಆ ಬ್ರಾಹ್ಮಣನೂ ಕೂಡ ತಾಯಿತಂದೆಗಳ ಬಳಿಗೆ ಹೋಗಿ ಅವರನ್ನು ಸೇವಿಸಿ ಸ್ವಲ್ಪಕಾಲದಲ್ಲಿಯೇ ಕುಟುಂಬದೊಡನೆ ಹರಿಯ ಬಳಿಗೆ ಹೋದನು.

೪೬. ಈ ಪುಣ್ಯಪ್ರದವಾದ ಪಂಚಾಖ್ಯಾನವನ್ನು ನಿಮಗೆ ಹೇಳಿದೆನು. ಇದನ್ನು ಹೇಳಿದವನೂ, ಕೇಳಿದವನೂ ಹೀನಸ್ಥಿತಿಯನ್ನು ಹೊಂದುವುದೇ ಇಲ್ಲ.

೪೭. ಅವನಿಗೆ ಬ್ರಹ್ಮಹತ್ಯಾದಿ ಪಾಪಗಳೂ ಬರುವುದೇ ಇಲ್ಲ. ಕೋಟಿ ಗೋದಾನದಿಂದ ಬರುವ ಫಲವು ಈ ಪಂಚಾಖ್ಯಾನ ಓದುವುದರಿಂದ ಬರುತ್ತದೆ.

**ತತ್ಫಲಂ ಸಮವಾಪ್ನೋತಿ ಪಂಚಾಖ್ಯಾನಾವಗಾಹನಾತ್ ।**
**ಸ್ನಾನೇನ ಪುಷ್ಕರೇ ನಿತ್ಯಂ ಭಾಗೀರಥ್ಯಾಂ ಚ ಸರ್ವದಾ ॥ ೪೮ ॥**

**ಯತ್ಫಲಂ ಸಮವಾಪ್ನೋತಿ ಸಕೃಚ್ಛ್ರವಣಗೋಚರಾತ್ ।**
**ದುಸ್ಸ್ವಪ್ನಂ ನಾಶಯೇತ್ಕ್ಷಿಪ್ರಂ ತಥಾರೋಗ್ಯಂ ಪ್ರಯಚ್ಛತಿ ॥**
**ಲಕ್ಷ್ಮ್ಯಾರೋಗ್ಯಕರಂ ಚೈವ ತಸ್ಮಾಚ್ಛ್ರೋತವ್ಯಮೇವ ಹಿ ॥ ೪೯ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪಂಚಾಖ್ಯಾನೋನಾಮ**
**ತ್ರಿಪಂಚಾಶತ್ತಮೋಽಧ್ಯಾಯಃ**

---

೪೮. ಗಂಗಾನದಿಯಲ್ಲಿ ಪುಷ್ಕರತೀರ್ಥದಲ್ಲಿ ಸ್ನಾನಮಾಡಿದರೆ ಬರುವ ಫಲವು ಇದನ್ನು ಒಂದುಬಾರಿ ಕೇಳುವುದರಿಂದಲೇ ಬರುತ್ತದೆ.

೪೯. ಈ ಕಥೆಯು ದುಸ್ಸ್ವಪ್ನವನ್ನು ನಾಶಮಾಡುತ್ತದೆ. ಆರೋಗ್ಯವನ್ನು ಕೊಡುತ್ತದೆ. ಸಂಪತ್ತನ್ನೂ ಹೆಚ್ಚಿಸುತ್ತದೆ. ಆದ್ದರಿಂದ ಕೇಳಲೇ ಬೇಕು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಪಂಚಾಖ್ಯಾನವೆಂಬ
ಐವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಚತುಷ್ಪಂಚಾಶತ್ತಮೋಽಧ್ಯಾಯಃ ॥



॥ ದ್ವಿಜಾ ಊಚುಃ ॥

ಕೀರ್ತಿರ್ಧರ್ಮೋಽಥ ಲೋಕೇಷು ಸರ್ವಾಣಿ ಪ್ರವರಾಣಿ ಚ ।
ವದ ನೋ ಮುನಿಶಾರ್ದೂಲ ಯದಿ ನೋಽಸ್ತಿ ತ್ವನುಗ್ರಹಃ ॥ ೧ ॥

॥ ವ್ಯಾಸ ಉವಾಚ ॥

ಯಸ್ಯ ಖಾತವನೇ ಗಾವಸ್ತೃಪ್ಯಂತಿ ಮಾಸಮೇವ ಚ ।
ತಾವತ್ಸಪ್ತದಿನಾತ್ಪೂತಃ ಸರ್ವದೇವೈಃ ಪ್ರಪೂಜಿತಃ ॥ ೨ ॥

ಪುಷ್ಕರಿಣ್ಯಾ ವಿಶೇಷೇಣ ಪೂತಾ ಯಾ ಯಜ್ಞಕರ್ಮಣಃ ।
ಯತ್ಫಲಂ ಜಲದಾನೇನ ಸರ್ವಮನ್ನಸ್ಯ ತಚ್ಛೃಣು ॥ ೩ ॥

---

## ಐವತ್ತನಾಲ್ಕನೆಯ ಅಧ್ಯಾಯವು

೧. ಬ್ರಾಹ್ಮಣರು ಹೇಳಿದರು- ಎಲೈ ಮುನಿಶ್ರೇಷ್ಠನೇ ! ಕೀರ್ತಿ, ಧರ್ಮ, ಇನ್ನೂ ಉತ್ತಮವಾದುವು ಯಾವುವಿವೆಯೋ ಅವೆಲ್ಲವನ್ನೂ ದಯವಿಟ್ಟು ಹೇಳು.

೨. ವ್ಯಾಸನು ಹೇಳಿದನು- ಯಾವನು ತೋಡಿದ ಗುಂಡಿಯಲ್ಲಿ ಹಸುಗಳು ಒಂದು ತಿಂಗಳವರೆಗೂ ನೀರು ಕುಡಿದು ತೃಪ್ತಿಹೊಂದುತ್ತವೆಯೋ ಅಷ್ಟರಲ್ಲಿ ಒಂದು ವಾರದೊಳಗೆ ಈ ಹಳ್ಳ ತೋಡಿದವನು ಪವಿತ್ರನಾಗಿ ದೇವತೆಗಳಿಂದ ಗೌರವಿಸಲ್ಪಡುತ್ತಾನೆ.

೩-೪. ಕೊಳಗಳನ್ನು ತೋಡಿಸಿ ಅದರಲ್ಲಿಯೂ ಅದಕ್ಕೆ ಶಾಸ್ತ್ರೋಕ್ತವಾದ ವಿಧಿಗಳನ್ನು ನಡೆಸಿದ್ದರೆ ಅದರ ನೀರನ್ನು ದಾನಮಾಡಿದರೆ ಬರುವ ಫಲವನ್ನು ಹೇಳುವೆನು ಕೇಳು. ಅನ್ನದಾನ ಮಾಡುವವನು ವರ್ಷವರ್ಷಕ್ಕೂ ದಾನಮಾಡಿ ಕಲ್ಪ ಕಲ್ಪ

**ಹಾಯನೇ ಹಾಯನೇ ಚೈವ ಕಲ್ಪಂ ಕಲ್ಪಂ ವಿಧೀಯತೇ ।**
**ದಾತಾ ಸ್ವರ್ಗಮವಾಪ್ನೋತಿ ತೋಯದಸ್ಸರ್ವತೋ ಭುವಿ ॥ ೪ ॥**

**ಮೇಘೋ ವರ್ಷತಿ ಖಾತೇ ಚ ಜಾಯಂತೇ ಯೇ ತು ಶೀಕರಾಃ ।**
**ತಾವದ್ವರ್ಷಸಹಸ್ರಾಣಿ ದಿವಮಶ್ನಾತಿ ಮಾನವಃ ॥ ೫ ॥**

**ತೋಯೈರನ್ನಾದಿಪಾಕೈಶ್ಚ ಪ್ರಸನ್ನೋ ಮಾನವೋ ಭವೇತ್ ।**
**ಪ್ರಾಣಾನಾಂ ಚ ವಿನಾ ತೈಶ್ಚ ಧಾರಣಂ ನೈವ ಜಾಯತೇ ॥ ೬ ॥**

**ಪಿತೃಣಾಂ ತರ್ಪಣಂ ಶೌಚಂ ರೂಪಂ ವೈಗಂಧ್ಯನಾಶನಂ ।**
**ಬೀಜಂ ತ್ವಿಹಾರ್ಜಿತಂ ಸರ್ವಂ ಸರ್ವಂ ತೋಯೇ ಪ್ರತಿಷ್ಠಿತಂ ॥ ೭ ॥**

**ವಸ್ತ್ರಸ್ಯ ಧಾವನಂ ರುಚ್ಯಂ ಭಾಜನಾನಾಂ ತಥೈವ ಚ ।**
**ತೇನೈವ ಸರ್ವಕಾರ್ಯೇ ಚ ಪಾನೀಯಂ ಮೇಧ್ಯಮೇವ ಚ ॥ ೮ ॥**

---

ಗಳವರೆಗೂ (ಒಂದು ವರ್ಷಕ್ಕೆ ಒಂದು ಕಲ್ಪದಂತೆ) ಸ್ವರ್ಗವನ್ನು ಹೊಂದುತ್ತಾನೆ. ನೀರು ಕೊಡುವವನು ಎಲ್ಲಾ ರೀತಿಯಿಂದಲೂ ಯಾವಾಗ ಬೇಕಾದರೂ ದಾನಮಾಡಿ ಸದಾ ಸ್ವರ್ಗವನ್ನು ಹೊಂದುತ್ತಾನೆ

೫. ಆತನು ತೋಡಿರುವ ಕೊಳದಲ್ಲಿ ಮೇಘವು ಮಳೆ ಸುಯ್ದರೆ ಎಷ್ಟು ತುಂತುರುಗಳು ಬೀಳುತ್ತವೆಯೋ ಅಷ್ಟು ಸಾವಿರ ವರ್ಷಗಳವರೆಗೂ ಸ್ವರ್ಗವನ್ನು ಅನುಭವಿಸುತ್ತಾನೆ.

೬. ಪ್ರಪಂಚದಲ್ಲಿ ಮನುಷ್ಯನು ನೀರಿನಿಂದಲೂ ಅನ್ನಾದಿಗಳಿಂದಲೂ ಸುಖಿಸುತ್ತಾನೆ. ಆ ಜನಗಳು ನೀರಿಲ್ಲದೆ ಜೀವಿಸಿರಲಾರರು.

೭. ಪಿತೃತರ್ಪಣ, ಶೌಚ, ರೂಪು, ದುರ್ಗಂಧವನ್ನು ನಾಶಮಾಡಿಕೊಳ್ಳುವುದು, ಬೀಜ, ಇಲ್ಲಿರುವ ಎಲ್ಲವೂ ನೀರಿನಿಂದಲೇ ಆಗತಕ್ಕದ್ದು.

೮. ಬಟ್ಟೆಯನ್ನು ತೊಳೆಯುವುದು, ಪಾತ್ರೆಯನ್ನು ಬೆಳ್ಳಗಿಡುವುದು, ಎಲ್ಲ ಕೆಲಸಗಳೂ ನೀರಿನಿಂದಲೇ ಆಗಬೇಕು. ನೀರು ಪವಿತ್ರವಾದುದು.

ತಸ್ಮಾತ್ಸರ್ವಪ್ರಯತ್ನೇನ ವಾಪೀಕೂಪತಟಾಗಕಂ ।
ಕಾರ್ಯಂ ಚೈವ ಬಲೈಃ ಸರ್ವೈಸ್ತಥಾ ಸರ್ವಧನೇನ ಚ ॥ ೯ ॥

ತತೋ ವಿನಿರ್ಜಲೇ ದೇಶೇ ಯೋ ದದಾತಿ ಜಲಾಶಯಂ ।
ವಾಸರೇ ವಾಸರೇ ತಸ್ಯ ಕಲ್ಪಸ್ವರ್ಗಂ ವಿನಿರ್ದಿಶೇತ್ ॥ ೧೦ ॥

ತ್ರಿವಿಷ್ಟಪಾಚ್ಚ್ಯುತೋ ವಿಪ್ರೋ ವೇದಶಾಸ್ತ್ರಾರ್ಥಪಾರಗಃ ।
ಲೋಕಬಂಧುಸ್ಸಧರ್ಮಾತ್ಮಾ ತಪಸ್ತಪ್ತ್ವಾ ದಿವಂ ವ್ರಜೇತ್ ॥ ೧೧ ॥

ಏವಂ ಜನ್ಮಾಷ್ಟಕಂ ಪ್ರಾಪ್ಯ ಏಕಸ್ಯಾಕ್ಷಯಮಿಷ್ಯತೇ ।
ಕ್ಷತ್ರಿಯಾಣಾಂ ಕುಲೇ ಜಾತಃ ಸಾರ್ವಭೌಮೋ ಭವೇನ್ನೃಪಃ ॥ ೧೨ ॥

ವಿಶೋಽಕ್ಷಯಂ ಧನಂ ವಿದ್ಯಾಂ ಜನ್ಮಜನ್ಮಸು ಯತ್ಪ್ರಿಯಂ ।
ಶೂದ್ರಾದಯೋಽಂತ್ಯಜಾಶ್ಚಾನ್ಯೇ ಲಭಂತೇ ಸ್ವರ್ಗತಿಂ ಮುಹುಃ ॥ ೧೩ ॥

---

೯. ಆದ್ದರಿಂದಲೇ ಸರ್ವಪ್ರಯತ್ನದಿಂದಲೂ, ಕೊಳ, ಕೆರೆ, ಭಾವಿಗಳನ್ನು ನಿರ್ಮಿಸಬೇಕು. ಕೊನೆಗೆ ಎಲ್ಲಾ ಬಲದಿಂದಲೂ, ಎಲ್ಲಾ ಹಣದ ವ್ಯಯದಿಂದಲಾದರೂ ಅವನ್ನು ನಿರ್ಮಿಸಬೇಕು.

೧೦. ಆದ್ದರಿಂದ ನೀರಿಲ್ಲದ ಸ್ಥಳದಲ್ಲಿ ನೀರಿನ ಆಸರೆಯನ್ನು ಕಲ್ಪಿಸಿದರೆ ಅವನಿಗೆ ಒಂದು ವಾರದ ಪುಣ್ಯಕ್ಕೆ ಒಂದು ಕಲ್ಪದ ಸ್ವರ್ಗವನ್ನು ವಿಧಿಸಿದೆ.

೧೧. ಧರ್ಮಿಷ್ಠನು ಸ್ವರ್ಗದಿಂದ ಬಂದು ಈಲೋಕದಲ್ಲಿ ಹುಟ್ಟಿ ವೇದ ಶಾಸ್ತ್ರಗಳನ್ನು ಬಲ್ಲ (ಶಾಸ್ತ್ರಗಳ ಅರ್ಥಗಳನ್ನು ಬಲ್ಲ) ಬ್ರಾಹ್ಮಣನೂ, ಧರ್ಮಿಷ್ಠನೂ, ಲೋಕಬಂಧುವೂ, ಆಗಿ ಮತ್ತೆ ತಪಸ್ಸನ್ನು ಮಾಡಿ ಸ್ವರ್ಗಕ್ಕೆ ಹೋಗುತ್ತಾನೆ.

೧೨. ಈ ರೀತಿ ಎಂಟು ಜನ್ಮಗಳನ್ನು ಹೊಂದಿದರೆ ಅನಂತರ ಅಕ್ಷಯ ಸ್ವರ್ಗ ಲಭಿಸುವುದು. ಕ್ಷತ್ರಿಯನಾದರೆ ಚಕ್ರವರ್ತಿಯಾಗಿ ಹುಟ್ಟಿ ದಾನಧರ್ಮಮಾಡಿ ಎಂಟು ಜನ್ಮಗಳನಂತರ ಅಕ್ಷಯ ಸ್ಥಾನವನ್ನು ಹೊಂದುತ್ತಾನೆ.

೧೩. ವೈಶ್ಯನು ಅಕ್ಷಯವಾದ ಧನ ವಿದ್ಯೆಗಳನ್ನು ಜನ್ಮ ಜನ್ಮದಲ್ಲಿಯೂ ಹೊಂದಿ ಎಂಟು ಜನ್ಮಕ್ಕೆ ಅಕ್ಷಯ ಸುಖವನ್ನು ಹೊಂದುತ್ತಾನೆ. ಶೂದ್ರಾದಿಗಳಾದ ಕೀಳು ಜಾತಿಯವರು ಅವರ ಕರ್ಮಕ್ಕೆ ತಕ್ಕಂತೆ ಹೊಂದುತ್ತಾರೆ.

ಚತುರ್ಹಸ್ತಪ್ರಮಾಣಾಂ ತು ಕೂಪಂ ಖನತಿ ಯಃ ಪುಮಾನ್ ।
ಪರೋಪಕಾರಕಂ ನಿತ್ಯಂ ಕಲ್ಪಂ ಸ್ವರ್ಗಂ ತು ಹಾಯನೇ ॥ ೧೪ ॥

ದ್ವಿಗುಣೇ ದ್ವಿಗುಣಂ ವಿದ್ಯಾಚ್ಛತಂ ಚೈವ ಚತುರ್ಗುಣಂ ।
ವಿಂಶತ್ಕಿಷ್ಕು ಪ್ರಮಾಣಂ ತು ದದ್ಯಾತ್ಪುಷ್ಕರಿಣೀಂ ತು ಯಃ ॥ ೧೫ ॥

ವಿಷ್ಣೋರ್ಧಾಮ ಲಭೇತ್ಸೋಽಪಿ ದಿವ್ಯಭೋಗಂ ತಥೈವ ಚ ।
ಅನಂತರಂ ನೃಪೋ ಜಾತೋ ಧನೀ ವಾಗೀಶ್ವರೋ ಭವೇತ್ ॥ ೧೬ ॥

ಏವಂ ದ್ವಿತ್ರಿಚತುರ್ವಾಪಿ ಗುಣತೋ ಭೋಗ್ಯಮಿಷ್ಯತೇ ।
ವಿಸ್ತೀರ್ಣೇ ಪ್ರಚುರಂ ವಿದ್ಧಿ ಸಹಸ್ರೇಣಾಚ್ಯುತೋ ದಿವಃ ॥ ೧೭ ॥

ಸಹಸ್ರಾದ್ದ್ವಿಗುಣೇನೈವ ಸುರಪೂಜ್ಯೋ ಭವೇನ್ನರಃ ।
ಜಂತವಸ್ತತ್ರ ಯೇ ಸಂತಿ ಯಾವಂತೋ ಜೀವನಂ ಯಯುಃ ॥ ೧೮ ॥

ತತ್ಸಂಖ್ಯಾಕಾ ಜನಾಸ್ತತ್ರ ಕಿಂಕರಾಃ ಯದ್ವಿಲಗ್ನಕಾಃ ।
ಭವಂತಿ ಸತತಂ ಗೇಹೇ ಪುರೇ ಜನಪದೇಷು ಚ ॥ ೧೯ ॥

---

೧೪. ನಾಲ್ಕು ತೋಳುಗಳ ಅಗಲವುಳ್ಳ ಒಂದು ಭಾವಿಯನ್ನು ತೋಡಿದರೆ ಅದರಿಂದ ಪರೋಪಕಾರವಾದರೆ ಒಂದು ವರ್ಷಕ್ಕೊಂದು ಕಲ್ಪದ ಸ್ವರ್ಗವು ಸಿಕ್ಕುತ್ತದೆ.

೧೫–೧೬. ಮೇಲೆ ಹೇಳಿದ ಪ್ರಮಾಣಕ್ಕಿಂತಲೂ ಎರಡರಷ್ಟಾದರೆ ಪುಣ್ಯವನ್ನು ಎರಡರಷ್ಟೆಂದೂ ನಾಲ್ಕರಷ್ಟಾದರೆ ನೂರುಪಾಲು ಹೆಚ್ಚೆಂಬುದಾಗಿಯೂ, ತಿಳಿಯಬೇಕು. ಇಪ್ಪತ್ತು ತೋಳುಗಳುಳ್ಳ ಕೊಳವನ್ನು ತೋಡಿಸಿ ನೀರು ದಾನಮಾಡಿದವನು ವೈಕುಂಠದಲ್ಲಿ ಅನಂತದಿವ್ಯಭೋಗಗಳನ್ನು ಹೊಂದುವನು. ಆಮೇಲೆ ರಾಜನಾಗಿ ಹುಟ್ಟಿ ಧನವಂತನೂ, ವಿದ್ಯಾವಂತನೂ ಆಗುವನು.

೧೭. ಈ ರೀತಿ ಎರಡರಷ್ಟು, ಮೂರರಷ್ಟು, ನಾಲ್ಕರಷ್ಟು ಆಳವಾಗಿದ್ದರೆ ಅದಕ್ಕೆ ಸರಿಯಾದ ಹೆಚ್ಚು ಧರ್ಮವುಂಟು. ಆಳಕ್ಕೆ ತಕ್ಕ ಅಗಲವು ಹೆಚ್ಚಾಗಿದ್ದರೆ ಶಾಶ್ವತವಾದ ಸ್ವರ್ಗಲೋಕ ಪ್ರಾಪ್ತಿಯಾಗುತ್ತದೆ.

೧೮-೧೯. ಸಾವಿರಕ್ಕಿಂತಲೂ ಹೆಚ್ಚು ಅಗಲವಿದ್ದರೆ ದೇವಪೂಜ್ಯನಾಗುತ್ತಾನೆ ಅದರಲ್ಲಿ ಎಷ್ಟು ಪ್ರಾಣಿಗಳು ವಾಸಿಸುತ್ತವೋ ಅದರಿಂದ ಎಷ್ಟು ಜನ ಜೀವನವನ್ನು ಮಾಡಿಕೊಳ್ಳುತ್ತಾರೆಯೋ ಅಷ್ಟು ಜನರು ಮನೆಯಲ್ಲಿ ಸೇವಕರಿರುತ್ತಾರೆ.

ವಿಹಾಯ ಪಿತರಂ ಭೋಗ್ಯಾ ಧನೇ ಕ್ಷೀಣೇ ಯಥಾ ವನಂ ।
ಪಕ್ಷಿಣಸ್ಸೂಕರಶ್ಚೈವ ಮಹಿಷೀ ಕರಿಣೀ ತಥಾ ॥ ೨೦ ॥

ಉಪದೇಷ್ಟಾ ಚ ಕರ್ತಾ ಚ ಷಡೇತೇ ಸ್ವರ್ಗಗಾಮಿನಃ ।
ದಿವ್ಯಂ ಚ ಪಕ್ಷಿಣಾಂ ಚೈವ ಶತಂ ಸ್ವರ್ಗಂ ವಿನಿರ್ದಿಶೇತ್ ॥ ೨೧ ॥

ಕ್ರೋಡೇ ವರ್ಷಸಹಸ್ರಂ ತು ಮಹಿಷ್ಯಯುತಹಾಯನಂ ।
ದೇವರೂಪಂ ಸಮಾಸಾದ್ಯ ಕರಿಣ್ಯಾ ಲಕ್ಷಮುಚ್ಯತೇ ॥ ೨೨ ॥

ಕೋಟ್ಯೇಕಮುಪದೇಷ್ಟುಶ್ಚ ಕರ್ತುರಕ್ಷಯಮೇವ ಚ ।
ಪುರಾ ಧನಿಸುತೇನೈವ ಕೃತಃ ಖ್ಯಾತೋ ಜಲಾಶಯಃ ॥ ೨೩ ॥

ಧನಾಯುತವ್ಯಯೇನೈವ ಪ್ರಾಣೇನೈವ ಬಲೇನ ಚ ।
ಸರ್ವಸತ್ವೋಪಕಾರಾಯ ಶಿವಶ್ರದ್ಧಾಯುತೇನ ಚ ॥ ೨೪ ॥

ಕಾಲೇನ ಕಿಯತಾ ಸೋಽಪಿ ಕ್ಷೀಣವಿತ್ತೋಽಭವತ್ಕಿಲ ।
ಕಶ್ಚಿದರ್ಥೀ ಧನೀ ತಸ್ಯಾ ಮೂಲ್ಯದಾನಾಯ ಚೋದ್ಯತಃ ॥ ೨೫ ॥

---

೨೦-೨೧. ಹಣವು ನಾಶವಾದಮೇಲೆ ತಂದೆಯನ್ನು ಬಿಟ್ಟು ತಾವು ಬೇರೆಬೇರೆ ಹೋಗಿ ಭೋಗಿಸುವಂತೆ ಸೇವಕರು ಬಂದು ಸೇವಿಸುತ್ತಾರೆ. ಪಕ್ಷಿಗಳು, ಹಂದಿಗಳು, ಎಮ್ಮೆ, ಆನೆ, ಉಪದೇಶಕ, ಕಟ್ಟಿಸಿದವನು, ಈ ಆರು ಜನರೂ ಸ್ವರ್ಗವನ್ನು ಹೊಂದುತ್ತಾರೆ. ದೇವಪಕ್ಷಿಗಳು ಅದರಲ್ಲಿದ್ದರೆ ನೂರರಷ್ಟು ಪುಣ್ಯವುಂಟೆಂದು ಹೇಳಲ್ಪಟ್ಟಿದೆ.

೨೨-೨೪. ಹಂದಿಗೆ ಸಾವಿರ ವರ್ಷಗಳೂ, ಎಮ್ಮೆಗೆ ಹತ್ತುಸಾವಿರ ವರ್ಷಗಳೂ ದೇವರೂಪವಾದ ಆನೆಗೆ ಲಕ್ಷವರ್ಷಗಳೂ, ಉಪದೇಶ ಮಾಡಿದವನಿಗೆ ಕೋಟಿ ವರ್ಷಗಳೂ, ಕರ್ತೃವಿಗೆ ಅಕ್ಷಯವಾಗಿಯೂ, ಸ್ವರ್ಗಪ್ರಾಪ್ತಿಯಾಗುತ್ತದೆ. ಹಿಂದೆ ಒಬ್ಬ ಧನಿಕನ ಮಗನು ಹತ್ತುಸಾವಿರ ಹಣದ ಖರ್ಚಿನಿಂದಲೂ, ಪ್ರಾಣ, ಬಲ, ಎಲ್ಲವನ್ನೂ ವ್ಯಯಮಾಡಿ ಶ್ರದ್ಧೆಯಿಂದ ಒಂದು ಜಲಾಶಯವನ್ನು ಪ್ರಾಣಿಗಳಿಗೆ ಉಪಕಾರವಾಗಲೆಂಬ ಬುದ್ಧಿಯಿಂದ ಕಟ್ಟಿಸಿದನು.

೨೫ ಕೆಲವುಕಾಲದಮೇಲೆ ಆ ಕಟ್ಟಿಸಿದವನು ಬಡವನಾದನು. ಆಗ ಒಬ್ಬ ಸಾಹುಕಾರನು ಆ ಜಲಾಶಯವನ್ನು ಕೊಂಡುಕೊಳ್ಳಲು ಪ್ರಯತ್ನವನ್ನು ಮಾಡಿದನು.

ವಿಮೃಶ್ಯ ಧನಿನಾ ಚೋಕ್ತಂ ವ್ಯಾಹಾರಂ ಶೃಣುತಾಧುನಾ ।
ದೀನಾರಸ್ಯಾಯುತಂ ವಾ ತೇ ದಾಸ್ಯಾಮ್ಯಸ್ಯಾಶ್ಚ ಕಾರಣಾತ್ ॥ ೨೬ ॥

ಲಬ್ಧಂ ತೇ ಪುಷ್ಕರಿಣ್ಯಾಶ್ಚ ಪುಣ್ಯಂ ಲಾಭಾತ್ಪ್ರಮನ್ಯಸೇ ।
ಶಕ್ತ್ಯಾ ದತ್ವಾಥ ಮೂಲ್ಯಂ ಚ ಸ್ವೀಯಾಂ ಕರ್ತುಂ ವ್ಯವಸ್ಥಿತಃ ॥ ೨೭ ॥

ಏವಮುಕ್ತೇ ಸ ತಂ ಪ್ರಾಹ ವಾಸರೇ ಪ್ಯಯುತಂ ಪುನಃ ।
ಫಲಂ ಭವತಿ ವೈ ನಿತ್ಯಂ ಪುಣ್ಯಂ ಪುಣ್ಯವಿದೋ ವಿದುಃ ॥ ೨೮ ॥

ಏತಸ್ಮಿನ್ನಿರ್ಜಲೇ ದೇಶೇ ಶಿವಂ ಖ್ಯಾತಂ ಕೃತಂ ಚ ಮೇ ।
ಸ್ನಾನಪಾನಾದಿಕಂ ಕರ್ಮ ಸರ್ವೇ ಕುರ್ವಂತ್ಯಭೀಪ್ಸಿತಃ ॥ ೨೯ ॥

ತಸ್ಮಾನ್ಮೇ ಪ್ರಯುತಾರ್ಥಸ್ಯ ನೈತ್ಯಿಕಂ ಫಲಮಿಷ್ಯತೇ ।
ತತಸ್ತಸ್ಯಾಭವದ್ಧಾಸ್ಯಂ ತಥೈವ ಚ ಸಭಾಸದಾಂ ॥ ೩೦ ॥

ಹ್ರಿಯಾ ಚ ಪೀಡಿತಸ್ಸೋಽಪಿ ವಾಕ್ಯಮೇತದುವಾಚ ಹ ।
ಸತ್ಯಮೇತದ್ವಚೋಽಸ್ಮಾಕಂ ಪರೀಕ್ಷಾಂ ಕುರು ಧರ್ಮತಃ ॥ ೩೧ ॥

---

೨೬. ಆ ಧನಿಕನ ಯೋಚಿಸಿ ಇಂತೆಂದನು. ಇದರ ನಡತೆಯನ್ನು ಹೇಳುತ್ತೇನೆ, ಕೇಳು. ಇದಕ್ಕೋಸ್ಕರ ಹತ್ತುಸಾವಿರ ದಿನಾರ (ನಾಣ್ಯ ವಿಶೇಷ) ಗಳನ್ನಾದರೂ ಕೊಡುತ್ತೇನೆ.

೨೭. ಎಲೈ ಯಜಮಾನನೇ! ನೀನು ಈ ಕೊಳವನ್ನು ಕಟ್ಟಿಸಿ ಪುಣ್ಯವನ್ನು ಕಟ್ಟಿಕೊಂಡಿದ್ದೀಯೆ. ಈಗ ನಿನಗೆ ಬರುವುದೆಲ್ಲವೂ ಲಾಭವೆಂದು ಹೇಳಿ ಸಾಧ್ಯವಾದಷ್ಟು ಹಣವನ್ನು ಕೊಟ್ಟು ತನ್ನದನ್ನಾಗಿ ಮಾಡಿಕೊಳ್ಳೋಣವೆಂದು ಕೇಳಿದನು

೨೮. ಆತನು ಹೀಗೆನ್ನುತ್ತಲೂ, ಮಾರುವವನು ಅಯ್ಯಾ! ಪ್ರತಿವಾರಕ್ಕೂ ಹತ್ತುಸಾವಿರದಷ್ಟು ಫಲ ಬರುವುದೆಂದು ಪುಣ್ಯವನ್ನು ಬಲ್ಲವರು ಹೇಳುತ್ತಾರೆ.

೨೯-೩೦. ಅಯ್ಯಾ! ಈ ನೀರಿಲ್ಲದ ಕಾಡಿನಲ್ಲಿ ಒಳ್ಳೆಯ ಕೊಳವನ್ನು ತೋಡಿಸಿದ್ದೇನೆ. ಎಲ್ಲರೂ ಸ್ನಾನಪಾನಗಳನ್ನು ಯಥೇಚ್ಛವಾಗಿ ಮಾಡುತ್ತಿರುತ್ತಾರೆ. ಆದ್ದರಿಂದ ನಿನ್ನ ಹತ್ತುಸಾವಿರ ಹಣಗಳಿಗೆ ನಿತ್ಯದ ಫಲವು ಬರಬಹುದು. ಎನ್ನಲು ಕೊಂಡುಕೊಳ್ಳುವವನೂ ಸಭೆಯುವರೂ ನಕ್ಕರು.

೩೧. ಅವನು ನಾಚಿಕೊಂಡು ನಾನು ಹೇಳುವುದು ಸತ್ಯವು. ಬೇಕಾದರೆ ಪರೀಕ್ಷೆಮಾಡಿರಿ ಎಂದನು.

ಮತ್ಸರಾತ್ಸ ತತಃ ಪ್ರಾಹ ಶೃಣು ಮೇ ವಚನಂ ಪಿತಃ ।
ದೀನಾರಾಯುತಮೇತತ್ತೇ ದತ್ವಾ ಚಾನೀಯ ಪ್ರಸ್ತರಂ ॥ ೩೨ ॥

ಪಾತಯಿಷ್ಯಾಮಿ ತೇ ಖಾತೇ ಯಥಾಯೋಗಾತ್ಪ್ರಮಜ್ಜತು ।
ಉನ್ಮಜ್ಜಯತಿ ಯತ್ಕಾಲೇ ಪ್ರಸ್ತರಸ್ಸಂತರತ್ಯಪಿ ॥ ೩೩ ॥

ಕ್ಷಯಂ ಯಾಸ್ಯತಿ ನೋ ವಿತ್ತಂ ನೋಚೇನ್ಮೇ ಧರ್ಮತೋ ಹಿ ಸಾ ।
ಬಾಢಮುಕ್ತ್ವಾಯುತಂ ತಸ್ಯ ಗೃಹೀತ್ವಾ ಸ್ವಗೃಹಂ ಗತಃ ॥ ೩೪ ॥

ಸಾಕ್ಷಿಣಾಮಗ್ರತಸ್ತೇನ ಪ್ರಸ್ತರಃ ಪಾತಿತಸ್ತಥಾ ।
ಪುಷ್ಕರಿಣ್ಯಾಂ ಮಹತ್ಯಾಂ ಚ ದೃಷ್ಟಂ ನರಸುರಾಸುರೈಃ ॥ ೩೫ ॥

ತತೋ ಧರ್ಮತುಲಾಯಾಂ ತು ತುಲಿತಂ ಧರ್ಮಸಾಕ್ಷಿಣಾ
ದೀನಾರಾಯುತದಾನಸ್ಯ ಪುಷ್ಕರಿಣ್ಯಾ ಜಲಸ್ಯ ತು ॥ ೩೬ ॥

ನ ಸಮಂ ತು ದಿನೈಕಸ್ಯ ಜಲಸ್ಯ ಧರ್ಮತೋ ಭೃಶಂ ।
ಧನಿನೋ ಮಾನಸಂ ದುಃಖಂ ಮೋಘಾರ್ಥಂ ಚ ಪರೇಹನಿ ।
ಶಿಲೋಚ್ಚಯೋಭವತ್ತೀರ್ಣೋ ದ್ವೀಪವಚ್ಚ ಜಲೋಪರಿ ॥ ೩೭ ॥

---

೩೨-೩೭. ಆಮೇಲೆ ಕೊಂಡುಕೊಳ್ಳುವವನು ಕೋಪದಿಂದ ಇಂತೆಂದನು. ಅಯ್ಯಾ ನಾನು ನಿನಗೆ ಹತ್ತುಸಾವಿರ ದಿನಾರಗಳನ್ನು ಕೊಟ್ಟುಬಿಡುವೆನು ಕೊಂಡು ಕೊಂಡಮೇಲೆ ಅಷ್ಟಕ್ಕೆ ಕಲ್ಲನ್ನು ತಂದು ಪುಷ್ಕರಣಿಯಲ್ಲಿ ಎಸೆಯುವೆನು. ಅದು ಎಷ್ಟು ಧರ್ಮದ ಕಾಲದ್ದೋ ಅಷ್ಟು ಮುಳುಗಲಿ. ಎಂದರೆ ನನ್ನ ಸ್ವಂತದ ಕಲ್ಲುಗಳು ಮುಳುಗಲಿ. ಯಾವಾಗ ಆ ಕಲ್ಲುಗಳು ಮೇಲೆ ತೇಲುತ್ತವೆಯೋ ಅಷ್ಟಕ್ಕೆ ನನ್ನ ಹಣವು ಮುಗಿಯಿತು. ಮಿಕ್ಕದ್ದು ಧರ್ಮಕ್ಕೆ ಸೇರಿದುದು (ಎಂದರೆ ಮುಳುಗಿದ ಕಲ್ಲುಗಳು ಬೆಲೆಗೆ ಸೇರಿದುವು ತೇಲಿದುವು ಹೆಚ್ಚಿನವು ಎಂದರ್ಥ) ಎಂದನು. ಹಾಗೆ ಆಗಲೆಂದು ಕರ್ತೃವು ಹಣವನ್ನು ತೆಗೆದುಕೊಂಡನು. ಸಾಕ್ಷಿಗಳ ಎದುರಿಗೆ ಕೊಳದಲ್ಲಿ ಕಲ್ಲುಗಳನ್ನು ಬಿಸಾಡಿದರು. ಅದನ್ನು ಸುರಾಸುರರೆಲ್ಲರೂ ನೋಡಿದರು. ಧರ್ಮದ ಸಾಕ್ಷಿಗಳು ಧರ್ಮದ ತಕ್ಕಡಿಯಲ್ಲಿ ತೂಗಿದರು. ಹತ್ತುಸಾವಿರ ದಿನಾರದ ಬೆಲೆಯೂ, ಪುಷ್ಕರಿಣಿಯ ಒಂದು ದಿನದ ನೀರಿನ ಧರ್ಮದ ಬೆಲೆಯೂ ಸಮವೂ ಆಗದೆ ಧರ್ಮವೇ ಹೆಚ್ಚಿತು. ಆಗ ಕೊಂಡುಕೊಂಡವನು ತನ್ನ ಹಣವು ಹೀಗೆ ವ್ಯರ್ಥವಾಯಿತಲ್ಲ ಎಂದು ವ್ಯಥೆಪಟ್ಟನು. ಮಾರನೆಯ ದಿನವೇ ಆ ಕಲ್ಲುಗಳೆಲ್ಲವೂ ಆ ಕೊಳದ ಮೇಲೆ ದ್ವೀಪದಂತೆ ತೇಲಿದುವು.

ತತಃಕೋಲಾಹಲಶ್ಚಾಭೂತ್ ಜನಾನಾಂ ಸಮುಪಸ್ಥಿತಃ ।
ಚತುಷ್ಪುತ್ರಾದ್ಧ್ವಾಕ್ಯಂ ಚ ಮುದಾ ತೌ ಚಾಗತೌ ತತಃ ॥ ೩೮ ॥

ದೃಷ್ಟ್ವಾ ಶೈಲಂ ತಥಾಭೂತಂ ಕೃತಂ ತೇನಾಯುತಂ ತಥಾ ।
ತತಃ ಖಾತಾಧಿಪೇನೈವ ಶೈಲಂ ದೂರೇ ನಿಪಾತಿತಂ ॥ ೩೯ ॥

ಪುಣ್ಯಂ ಖಾತಸ್ಯ ಚೋತ್ಪಾತೇ ಪ್ರಲುಪ್ತಸ್ಯ ತು ತೇನ ಹಿ ।
ಸೋಽಪಿ ನಾಕಂ ಸಮಾರುಹ್ಯ ಜನ್ಮಜನ್ಮಸು ನಿರ್ವೃತಃ ॥ ೪೦ ॥

ಗೋತ್ರಮಾತೃಗಣಾನಾಂ ಚ ನೃಪಾಣಾಂ ಸುಹೃದಾಂ ತಥಾ ।
ಸಖೀನಾಂ ಚೋಪಕರ್ತೄಣಾಂ ಖಾತಂ ಖಾತ್ವಾಕ್ಷಯಂ ಫಲಂ ॥ ೪೧ ॥

ತಪಸ್ವಿನಾಮನಾಥಾನಾಂ ಬ್ರಾಹ್ಮಣಾನಾಂ ವಿಶೇಷತಃ ।
ಖಾತಂ ತು ಜನಯಿತ್ವಾ ತು ಸ್ವರ್ಗಂ ಚಾಕ್ಷಯಮಶ್ನುತೇ ॥ ೪೨ ॥

---

೩೮-೩೯. ಆಗ ಜನಗಳಲ್ಲಿ ಕೋಲಾಹಲವೆದ್ದಿತು. ಇದನ್ನು ಕೇಳಿ ಅವರಿಬ್ಬರೂ ಅಲ್ಲಿಗೆ ಬಂದರು. ಆಗ ಅವರಿಬ್ಬರೂ ಅದಕ್ಕೆ ಆ ಹತ್ತುಸಾವಿರ ಬೆಲೆಯನ್ನೇ ಕಟ್ಟಿದರು. ಅನಂತರ ಆ ಕೊಳವನ್ನು ಕಟ್ಟಿಸಿದವನೇನೇ ಆ ಕಲ್ಲುಗಳನ್ನು ಹೊರಗೆ ತೆಗೆಸಿದನು.

೪೦. ಮಾರಿದುದರಿಂದ ಹೋದ ಪುಣ್ಯವು ಮತ್ತೆ ಆ ಕಲ್ಲುಗಳನ್ನು ಎತ್ತಿಹಾಕಿದುದರಿಂದ ಬಂದಿತು. ಆಗ ಅವರಿಬ್ಬರೂ ಸ್ವರ್ಗವನ್ನು ಹೊಂದಿ ಜನ್ಮ ಜನ್ಮಗಳಲ್ಲಿಯೂ ಸುಖಿಸುತ್ತಿದ್ದರು.

೪೧. ಗೋತ್ರದವರು, ತಾಯಿಯ ಕಡೆಯವರು, ರಾಜರು, ಸ್ನೇಹಿತರುಗಳು ಇವರಲ್ಲಿ ಯಾರಾದರೂ ತೋಡಿಸಿರುವ ಜಲಾಶಯವು ಮುಚ್ಚಿದ್ದರೆ, ಮತ್ತೆ ತೋಡಿಸಿದರೆ ಅವರಿಗೆ ಅಕ್ಷಯ ಫಲವು ಲಭಿಸುತ್ತದೆ.

೪೨. ತಪಸ್ವಿಗಳಿಗೆ, ಅನಾಥರಿಗೆ, ಬ್ರಾಹ್ಮಣರಿಗೆ, ಕೊಳಗಳನ್ನು ಕಟ್ಟಿಸಿಕೊಟ್ಟರೆ ಅಕ್ಷಯ ಸ್ವರ್ಗಪ್ರಾಪ್ತಿಯಾಗುತ್ತದೆ.

ತಸ್ಮಾತ್ಖಾತಾದಿಕಂ ವಿಪ್ರಾಃ ಶಕ್ತಿತೋ ಯಃ ಕರಿಷ್ಯತಿ ।
ಸರ್ವಪಾಪಕ್ಷಯಾತ್ಪುಣ್ಯಂ ಮೋಕ್ಷಂ ಯಾವನ್ನ ಸಂಶಯಃ ॥ ೪೩ ॥

ಯ ಇದಂ ಶ್ರಾವಯಾಲ್ಲೋಕೇ ಧರ್ಮಾಖ್ಯಾನಂ ಮಹೋತ್ಕಟಂ ।
ಸರ್ವಖಾತಪ್ರದಾನಸ್ಯ ಫಲಮಶ್ನಾತಿ ಧಾರ್ಮಿಕಃ ॥ ೪೪ ॥

ಗ್ರಹಣೇ ಭಾಸ್ಕರಸ್ಯೈವ ಭಾಗೀರಥ್ಯಾಂ ತಟೇ ವರೇ ।
ಗವಾಂ ಕೋಟಿಪ್ರದಾನಸ್ಯ ಫಲಂ ಶ್ರುತ್ವಾ ಲಭೇನ್ನರಃ ॥ ೪೫ ॥

ನ ಚ ದಾರಿದ್ರ್ಯತಾಮೇತಿ ನ ಶೋಕಂ ವ್ಯಾಧಿಸಂಚಯಂ ।
ಅಸಮ್ಮಾನಂ ಮಹದ್ದುಃಖಮುಭಯೋರ್ನಾಧಿಗಚ್ಛತಿ ॥ ೪೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಖಾತಾದಿಕೀರ್ತನಂನಾಮ ಚತುಷ್ಪಂಚಾಶತ್ತಮೋಽಧ್ಯಾಯಃ

---

೪೩. ಆದ್ದರಿಂದ ಕೊಳ ಮುಂತಾದ ಜಲಾಶಯಗಳನ್ನು ಶಕ್ತಿಗನುಗುಣವಾಗಿ ಮಾಡಿಸಿದವನು ಪಾಪಗಳನ್ನು ನಾಶಮಾಡಿಕೊಂಡು ಮೋಕ್ಷವನ್ನು ಹೊಂದುತ್ತಾನೆ.

೪೪. ಈ ಧರ್ಮಾಖ್ಯಾನವನ್ನು ಜನಗಳಿಗೆ ಹೇಳಿದರೆ ಜಲಾಶಯಗಳೆಲ್ಲದರ ದಾನದ ಫಲವನ್ನು ಹೊಂದುತ್ತಾನೆ.

೪೫. ಸೂರ್ಯಗ್ರಹಣದಲ್ಲಿ ಗಂಗಾನದಿಯ ದಡದಲ್ಲಿ ಕೋಟಿ ಹಸುಗಳನ್ನು ದಾನಮಾಡಿದರೆ ಬರುವ ಫಲವನ್ನು ಈ ಕಥೆಯನ್ನು ಕೇಳಿದವನು ಹೊಂದುತ್ತಾನೆ.

೪೬. ಆತನು ದರಿದ್ರನಾಗುವುದಿಲ್ಲ, ದುಃಖಿಯಾಗುವುದಿಲ್ಲ, ರೋಗಿಯಾಗುವುದಿಲ್ಲ, ಅಗೌರವ ದುಃಖಗಳು ಅವರಿಗೆ ಉಂಟಾಗುವುದೇ ಇಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಖಾತಾದಿಕೀರ್ತನವೆಂಬ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಪಂಚಪಂಚಾಶತ್ತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

ಶಾಖಿನಾಮೇವ ಸರ್ವೇಷಾಂ ಫಲಂ ವಕ್ಷ್ಯಾಮಿ ಯಾದೃಶಂ ।
ತಚ್ಛೃಣುಧ್ವಂ ಮಹಾಭಾಗಾ ರೋಪಣೇ ಚ ಪೃಥಕ್ಪೃಥಕ್ ॥ ೧ ॥

ಯಸ್ತು ರೋಪಯತೇ ತೀರೇ ಪುಣ್ಯವೃಕ್ಷಾನ್ಸಮಂತತಃ ।
ತಸ್ಯ ಪುಣ್ಯಫಲಂ ಜಾತು ಕಥಿತುಂ ನೈವ ಶಕ್ಯತೇ ॥ ೨ ॥

ಅನ್ಯತ್ರ ರೋಪಣಂ ಕೃತ್ವಾ ಶಾಖಿನಾಂ ಯತ್ಫಲಂ ಲಭೇತ್ ।
ತತೋ ಜಲಸಮೀಪೇ ತು ಲಕ್ಷಕೋಟಿಯುತಂ ಭವೇತ್ ॥ ೩ ॥

---

## ಐವತ್ತೈದನೆಯ ಅಧ್ಯಾಯವು

೧. ವ್ಯಾಸನು ಹೇಳಿದನು– ಮರಗಳನ್ನು ಬೆಳೆಸಿದರೆ ಯಾವ ಫಲ ಬರುವುದೋ ಅವೆಲ್ಲವನ್ನೂ ಬೇರೆಬೇರೆಯಾಗಿ ಹೇಳುತ್ತೇನೆ. ಕೇಳು.

೨. ನದಿಯ ದಡಗಳಲ್ಲಿ ಪುಣ್ಯವೃಕ್ಷಗಳನ್ನು ನೆಟ್ಟು ಎಬ್ಬಿಸಿದರೆ ಅದರ ಪುಣ್ಯದ ಫಲವನ್ನು ಹೇಳುವುದಕ್ಕೇ ಸಾಧ್ಯವಿಲ್ಲ.

೩. ಬೇರೆ ಕಡೆಯಲ್ಲಿ ಮರಗಳನ್ನು ಎಬ್ಬಿಸಿದರೆ ಬರುವ ಫಲಕ್ಕಿಂತಲೂ, ನೀರಿನ ಬಳಿ ಅಂತಹುದನ್ನು ಎಬ್ಬಿಸಿದರೆ ಅದರ ಲಕ್ಷಕೋಟಿಯಷ್ಟು ಹೆಚ್ಚು ಫಲವು ಬರುತ್ತದೆ

ಸ್ವಯಂ ಪುಷ್ಕರಿಣೀತೀರೇ ತ್ವನಂತಂ ಫಲಮಶ್ನುತೇ ।
ತಸ್ಮಾಚ್ಛತಗುಣಂ ಬ್ರೂಮಃ ಶಾಖಿನಾಂ ಪುಣ್ಯಕಾರಿಣಾಂ ॥ ೪ ॥

ಅಶ್ವತ್ಥರೋಪಣಂ ಕೃತ್ವಾ ಜಲಾಶಯಸಮೀಪತಃ ।
ಯತ್ಫಲಂ ಲಭತೇ ಮರ್ತ್ಯೋ ನ ತತ್ಕ್ರತುಶತೈರಪಿ ॥ ೫ ॥

ಪತಂತಿ ಯಾನಿ ಪತ್ರಾಣಿ ಜಲೇ ಪರ್ವಣಿ ಪರ್ವಣಿ ।
ತಾನಿ ಪಿಂಡಸಮಾನೀಹ ಪಿತೄಣಾಮಕ್ಷಯಂ ಯಯುಃ ॥ ೬ ॥

ಖಾದಂತಿ ಪತಗಾಸ್ತತ್ರ ಫಲಾನಿ ಕಾಮತೋ ಧ್ರುವಂ ।
ಬ್ರಹ್ಮಭಕ್ಷಸಮಂ ತಸ್ಯ ಪುಣ್ಯಂ ಭವತಿ ಚಾಕ್ಷಯಂ ॥ ೭ ॥

ಅಶ್ವತ್ಥೇನೈವ ವೃಕ್ಷೇಣ ರೋಪಣೇನೈವ ಯತ್ಫಲಂ ।
ತದ್ವೈ ಕ್ರತುಶತೈರ್ನೈವ ಪುತ್ರ್ಯೈರೇವ ಶತೈರಪಿ ॥ ೮ ॥

ಉಷ್ಣೇ ಛಾಯಾಂ ಪ್ರಗೃಹ್ಣಂತಿ ಗಾವೋ ದೇವದ್ವಿಜಾಯಃ ।
ಕರ್ತುಃ ಪಿತೃಗಣಾನಾಂ ಚ ಸ್ವರ್ಗೋ ಭವತಿ ಚಾಕ್ಷಯಃ ॥ ೯ ॥

---

೪. ಜನಗಳು ನಿರ್ಮಿಸಿದ ಕೊಳ ಮುಂತಾದುವುಗಳ ತೀರದಲ್ಲಿ ಎಬ್ಬಿಸಿದರೆ ಅನಂತ ಫಲವು ಬರುತ್ತದೆ. ಪುಣ್ಯವೃಕ್ಷವನ್ನು ಎಬ್ಬಿಸಿದರೆ ಅವಕ್ಕಿಂತಲೂ ನೂರರಷ್ಟು ಹೆಚ್ಚು ಫಲವು ಬರುತ್ತದೆ.

೫. ನೀರಿನ ಸಮೀಪದಲ್ಲಿ ಅರಳಿಯ ಮರವನ್ನು ಎಬ್ಬಿಸಿದರೆ ಅದರ ಫಲವು ನೂರು ಯಾಗಗಳ ಫಲಕ್ಕಿಂತಲೂ ಅಧಿಕವಾಗಿರುತ್ತದೆ.

೬. ಪರ್ವದಿನಗಳಲ್ಲಿ ಅದರ ಎಲೆಯು ನೀರಿನಲ್ಲಿ ಎಷ್ಟು ಬೀಳುತ್ತದೆಯೋ ಅಷ್ಟು ಪಿಂಡಗಳಾಗಿ ಅವು ಪಿತೃಗಳಿಗೆ ಹೊಂದುತ್ತವೆ.

೭. ಅಲ್ಲಿ ಹಕ್ಕಿಗಳು ಯಥೇಚ್ಛವಾಗಿ ಹಣ್ಣನ್ನು ತಿನ್ನುತ್ತವೆ. ಆ ಹಣ್ಣುಗಳು ಬ್ರಹ್ಮಭಕ್ಷಸಮವಾಗಿ ಅಕ್ಷಯ ಪುಣ್ಯವನ್ನು ಕೊಡುತ್ತವೆ.

೮. ಅಶ್ವತ್ಥಮರವನ್ನು ಎಬ್ಬಿಸುವುದರಿಂದ ಬರುವ ಫಲವು ನೂರು ಪುತ್ರಕಾಮೇಷ್ಟಿಯಾಗಗಳಿಂದಲೂ ಬರುವುದಿಲ್ಲ.

೯. ಬಿಸಿಲಿನಲ್ಲಿ ಗೋವು, ಬ್ರಾಹ್ಮಣರು, ದೇವರು ಮುಂತಾದವರು ನೆರಳನ್ನು ಉಪಯೋಗಿಸಿಕೊಳ್ಳುವುದರಿಂದ ನೆಟ್ಟವನಿಗೂ ಅವನ ಪಿತೃಗಳಿಗೂ ಅಕ್ಷಯ ಸ್ವರ್ಗವು ಲಭಿಸುತ್ತದೆ.

ಕರ್ತುಂ ಸ್ವಸ್ಥಸ್ಯ ನೈ ವಿಘ್ನಮಕ್ಷಯ್ಯಾತ್ವಾನ್ನ ಶಕ್ಯತೇ ।
ತಸ್ಮಾತ್ಸರ್ವಪ್ರಯತ್ನೇನ ರೋಪಯೇದ್ವೃಕ್ಷಮಾಧವಂ ॥ ೧೦ ॥

ಏಕಂ ವೃಕ್ಷಂ ಸಮಾರೋಪ್ಯ ನರಸ್ಸ್ವರ್ಗಾನ್ನ ಹೀಯತೇ ।
ತಸ್ಮಾದೇವ ಮಹಾವೃಕ್ಷಂ ರೋಪಯಧ್ವಂ ದ್ವಿಜೋತ್ತಮಾಃ ॥ ೧೧ ॥

ಜಲಾನಾಂ ನಿಕಟೇ ರಮ್ಯೇ ರಸಾನಾಂ ಕ್ರಯವಿಕ್ರಯೇ ।
ಮಾರ್ಗೇ ಜಲಾಶಯೇ ವೃಕ್ಷಾನ್ರೋಪಯೇದ್ಯೋ ಮಹಾಶ್ರಯಃ ॥ ೧೨ ॥

ಅಶ್ವತ್ಥಾದೀನ್ಸಮಾರೋಪ್ಯ ಸ್ವರ್ಗಂ ಯಾತಿ ಮನೋಹರಮ್ ।
ಅರ್ಚಯಿತ್ವಾ ತು ಯತ್ಪುಣ್ಯಂ ಪ್ರವಕ್ಷ್ಯಾಮಿ ದ್ವಿಜಾತಯಃ ॥ ೧೩ ॥

ಸ್ನಾತ್ವಾಶ್ವತ್ಥಂ ಸ್ಪೃಶೇದ್ಯಸ್ತು ಪಾಪೇಭ್ಯಸ್ಸ ಪ್ರಮುಚ್ಯತೇ ।
ಅಸ್ನಾತೋ ಯಸ್ಸ್ಪೃಶೇನ್ಮರ್ತ್ಯೋ ಲಭತೇ ಸ್ನಾನಜಂ ಫಲಂ ॥ ೧೪ ॥

ದೃಷ್ಟ್ವಾ ಚ ನಾಶಯೇತ್ಪಾಪಂ ಸ್ಪೃಷ್ಟ್ವಾ ಲಕ್ಷ್ಮೀಂ ಪ್ರಪದ್ಯತೇ ।
ಪ್ರದಕ್ಷಿಣೇ ಭವೇದಾಯುಃ ಸದಾಶ್ವತ್ಥ ನಮೋಽಸ್ತು ತೇ ॥ ೧೫ ॥

---

೧೦. ಈ ವೃಕ್ಷಗಳು ನಾಶವಾಗದಿರುವುದರಿಂದ ಸ್ವರ್ಗದ ಅಕ್ಷಯ ಫಲಕ್ಕೆ ವಿಘ್ನವುಂಟಾಗುವುದಿಲ್ಲ. ಆದ್ದರಿಂದ ಸರ್ವಪ್ರಯತ್ನದಿಂದಲೂ ಮರವೆಂಬ ಮಾಧವನನ್ನು ಬೆಳೆಸಿ.

೧೧. ಒಂದು ಮರವನ್ನು ಬೆಳೆಸಿದರೇನೆ ಸ್ವರ್ಗದಿಂದ ಹಿಂತಿರುಗುವುದಿಲ್ಲ. ಆದ್ದರಿಂದ ಎಲೈ ಬ್ರಾಹ್ಮಣರಿರಾ! ನೀವು ಬೇಕಾದಷ್ಟು ದೊಡ್ಡ ಮರಗಳನ್ನು ಬೆಳೆಸಿರಿ.

೧೨-೧೩. ನೀರಿನ ತಡಿಯಲ್ಲಿಯೂ, ರಮ್ಯವಾದ ಸ್ಥಳಗಳಲ್ಲಿಯೂ, ವ್ಯಾಪಾರ ಸ್ಥಳಗಳಲ್ಲಿಯೂ, ಮಾರ್ಗದಲ್ಲಿಯೂ, ಯಾವನು ಅಶ್ವತ್ಥ ಮುಂತಾದ ಮರಗಳನ್ನು ಎಬ್ಬಿಸುವನೋ ಅವನು ಮನೋಹರವಾದ ಸ್ವರ್ಗವನ್ನು ಹೊಂದುವನು. ಅದನ್ನು ಪೂಜಿಸಿದರೆ ಬರುವ ಪುಣ್ಯವನ್ನು ಹೇಳುತ್ತೇನೆ. ಕೇಳು.

೧೪. ಅರಳಿಮರವನ್ನು ಸ್ನಾನಮಾಡಿದವನು ಮುಟ್ಟಿದರೆ ಪಾಪ ಹೋಗುತ್ತದೆ. ಸ್ನಾನಮಾಡದವನು ಮುಟ್ಟಿದರೆ ಸ್ನಾನಮಾಡಿದ ಫಲವು ಬರುತ್ತದೆ.

೧೫. ನೋಡಿದರೆ ಪಾಪನಾಶವಾಗುತ್ತದೆ. ಮುಟ್ಟಿದರೆ ಸಂಪತ್ತು ಬರುತ್ತದೆ. ಪ್ರದಕ್ಷಿಣೆ ಮಾಡಿದರೆ ಆಯುಸ್ಸು ಹೆಚ್ಚುತ್ತದೆ. ಇಂತಹ ಅಶ್ವತ್ಥಕ್ಕೆ ಸದಾ ನಮಸ್ಕಾರವು

ಚಲದ್ದಳಾಯ ವೃಕ್ಷಾಯ ಸದಾ ವಿಷ್ಣುಸ್ಥಿತಾಯ ಚ ।
ಬೋಧಿಸತ್ವಾಯ ಯೋಗ್ಯಾಯ ಸದಾಶ್ವತ್ಥ ನಮೋಽಸ್ತು ತೇ ॥ ೧೬ ॥

ಅಶ್ವತ್ಥಾಯ ತು ಹವ್ಯಂ ತು ಪಯೋ ನೈವೇದ್ಯಮೇವ ಚ ।
ಪುಷ್ಪಂ ಧೂಪಂ ಚ ದೀಪಂ ಚ ದತ್ವಾ ಸ್ವರ್ಗಾನ್ನ ಹೀಯತೇ ॥ ೧೭ ॥

ಸುಪುತ್ರಂ ಚಾಕ್ಷಯಂ ವಿದ್ಧಿ ಧನವೃದ್ಧಿಯಶಸ್ಕರಂ ।
ವಿಜಯಂ ಮಾನದಂ ಭದ್ರಮಶ್ವತ್ಥಸ್ಯ ಪ್ರಪೂಜನಂ ॥ ೧೮ ॥

ಯಜ್ಜಪ್ತಂ ಚ ಹುತಂ ಸ್ತೋತ್ರಂ ಯಂತ್ರಮಂತ್ರಾದಿಕಂ ಚ ಯತ್ ।
ಸರ್ವಂ ಕೋಟಿಗುಣಂ ಪ್ರೋಕ್ತಂ ಮೂಲೇ ಚಲದಳಸ್ಯ ಚ ॥ ೧೯ ॥

ಯಸ್ಯ ಮೂಲೇ ಸ್ಥಿತೋ ವಿಷ್ಣುಃ ಮಧ್ಯೇ ತಿಷ್ಠತಿ ಶಂಕರಃ ।
ಅಗ್ರಭಾಗೇ ಸ್ಥಿತೋ ಬ್ರಹ್ಮಾ ಕಸ್ತಂ ಜಗತಿ ನಾರ್ಚಯೇತ್ ॥ ೨೦ ॥

---

೧೬. ಅಲ್ಲಾಡುತ್ತಿರುವ ಎಲೆಯುಳ್ಳ, ಯಾವಾಗಲೂ ವಿಷ್ಣುವಿನ ಸ್ಥಾನವಾದ, ಬೋಧಿಸತ್ವನ ರೂಪವಾದ, ಯೋಗ್ಯವಾದ ಅಶ್ವತ್ಥಕ್ಕೆ ನಮಸ್ಕಾರವು.

೧೭. ಹವಿಸ್ಸು ಹಾಲುಗಳನ್ನು ನೈವೇದ್ಯಮಾಡಿ ಧೂಪದೀಪಗಳಿಂದ ಅಶ್ವತ್ಥವನ್ನು ಪೂಜಿಸಿದರೆ ಸ್ವರ್ಗದಿಂದ ಚ್ಯುತನಾಗುವುದಿಲ್ಲ.

೧೮. ಅಕ್ಷಯಫಲವನ್ನು ಕೊಡುವ ಒಳ್ಳೆಯ ಮಗನೇ ಅಶ್ವತ್ಥನು ಎಂದು ತಿಳಿ. ಧನ, ಏಳಿಗೆ, ಯಶಸ್ಸುಗಳನ್ನೂ, ವಿಜಯವನ್ನೂ, ಮಾನವನ್ನೂ, ಮಂಗಳವನ್ನೂ ಅಶ್ವತ್ಥಪೂಜೆಯು ಕೊಡುತ್ತದೆ.

೧೯. ಅಶ್ವತ್ಥದ ಬುಡದಲ್ಲಿ ಮಾಡಿದ ಜಪ, ಹೋಮ, ಸ್ತೋತ್ರ, ಯಂತ್ರ ಮಂತ್ರ, ತಂತ್ರಗಳು ಕೋಟಿ ಗುಣದಷ್ಟು ಹೆಚ್ಚುತ್ತವೆ.

೨೦. ಅಶ್ವತ್ಥದ ಬುಡದಲ್ಲಿ ವಿಷ್ಣುವೂ, ಮಧ್ಯದಲ್ಲಿ ಶಂಕರನೂ, ಅಗ್ರದಲ್ಲಿ ಬ್ರಹ್ಮನೂ ಇರುವುದರಿಂದ ಅದನ್ನು ಯಾರುತಾನೆ ಪೂಜೆಮಾಡಬಾರದು ?

ಸೋಮವಾರೇ ತ್ವಮಾಯಾಂ ಚ ಸ್ನಾನಂ ಯನ್ಮೌನಿನಾ ಕೃತಂ ।
ದಾನಸ್ಯ ಗೋಸಹಸ್ರಸ್ಯ ಫಲಂ ಚಾಶ್ವತ್ಥವಂದನೇ ॥ ೨೧ ॥

ಸಪ್ತಪ್ರದಕ್ಷಿಣೇ ನೈವ ಗವಾಮಯುತಜಂ ಫಲಂ ।
ಪ್ರಚುರಾಲ್ಲಕ್ಷಕೋಟಿಶ್ಚ ತಸ್ಮಾತ್ಕಾರ್ಯಾ ಹಿ ಸಾ ಸದಾ ॥ ೨೨ ॥

ಯತ್ಕಿಂಚಿದ್ದೀಯತೇ ತತ್ರ ಫಲಮೂಲಜಲಾದಿಕಂ ।
ಸರ್ವಂ ತಚ್ಚಾಕ್ಷಯಂ ವಿಪ್ರಾ ಜನ್ಮಜನ್ಮಸು ಜಾಯತೇ ॥ ೨೩ ॥

ಅಹೋಶ್ವತ್ಥಸಮೋ ನಾಸ್ತಿ ವೃಕ್ಷರೂಪೀ ಹರಿರ್ಭುವಿ ।
ಯಥಾ ಪೂಜ್ಯೋ ದ್ವಿಜೋ ಲೋಕೇ ಯಥಾ ಗಾವೋ ಯಥಾಮರಾಃ ॥೨೪

ತಥಾಯಂ ವೃಕ್ಷರೂಪೀ ಚ ದೇವಃ ಪೂಜ್ಯತಮಃ ಸ್ಮೃತಃ ।
ರೋಪಣೇ ರಕ್ಷಣೇ ಸ್ಪರ್ಶೇ ಪೂಜಾಕರ್ಮಣಿ ವೈ ಸದಾ ॥ ೨೫ ॥

---

೨೧. ಅಮಾವಾಸ್ಯೆಯಿಂದ ಕೂಡಿದ ಸೋಮವಾರದ ದಿನ ಋಷಿಯಾದವನು ಸ್ನಾನಮಾಡಿ ಸಾವಿರ ಗೋದಾನ ಮಾಡಿದರೆ ಯಾವ ಫಲವೋ ಆದಿನ ಅಶ್ವತ್ಥವನ್ನು ನಮಸ್ಕರಿಸಿದರೆ ಆ ಫಲವು ಬರುತ್ತದೆ.

೨೨. ಆದಿನ ಏಳು ಪ್ರದಕ್ಷಿಣೆಗಳನ್ನು ಮಾಡಿದರೆ, ಹತ್ತುಸಾವಿರ ಗೋದಾನದ ಫಲವು ಬರುತ್ತದೆ. ಹೆಚ್ಚಿಗೆ ಮಾಡಿದರೆ ಲಕ್ಷಕೋಟಿಗಳಷ್ಟು ಹೆಚ್ಚು ಫಲವನ್ನು ಹೊಂದುತ್ತಾನೆ. ಆದ್ದರಿಂದ ಅಶ್ವತ್ಥವನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಬೇಕು.

೨೩. ಆ ಮರದ ಕೆಳಗೆ ನೀರು, ಹಣ್ಣು, ಮುಂತಾದ ಯಾವ ದಾನಮಾಡಿದರೂ, ಅವು ಜನ್ಮಜನ್ಮಗಳಲ್ಲಿಯೂ ಅಕ್ಷಯವಾಗುತ್ತವೆ.

೨೪-೨೭. ಅಶ್ವತ್ಥಕ್ಕೆ ಸಮವಾದ ಹರಿಯ ರೂಪವು ಭೂಮಿಯಲ್ಲಿ ಮತ್ತೊಂದಿಲ್ಲ. ಬ್ರಾಹ್ಮಣ, ಗೋವು, ದೇವರು, ಇವರನ್ನು ಪೂಜೆಮಾಡುವಂತೆ ಹರಿರೂಪಿಯಾದ ಅಶ್ವತ್ಥವನ್ನು ಪೂಜಿಸಬೇಕು. ಬೆಳೆಸುವುದು, ರಕ್ಷಿಸುವುದು, ಮುಟ್ಟುವುದು,

ದದಾತಿ ವಿತ್ತಂ ಪುತ್ರಾಂಶ್ಚ ಸ್ವರ್ಗಂ ಮೋಕ್ಷಂ ಪುನಃ ಕ್ರಮಾತ್ ।
ಕಿಂ ಚಿ ಚ್ಛೇದಂ ತು ಯಃ ಕುರ್ಯಾದಶ್ವತ್ಥಸ್ಯ ತನೌ ನರಃ ॥ ೨೬ ॥

ಕಲ್ಪೈಕಂ ನಿರಯಂ ಭುಕ್ತ್ವಾ ಚಾಂಡಾಲಾಪೌ ಪ್ರಜಾಯತೇ ।
ಮೂಲಚ್ಛೇದೇನ ತಸ್ಯೈವ ಸ ಚ ಯಾತ್ಯಪುನರ್ಭವಂ ॥ ೨೭ ॥

ಪುರುಷಾಸ್ತಸ್ಯ ತಿಷ್ಠಂತಿ ರೌರವೇ ಘೋರದರ್ಶನೇ ।
ಅಶ್ವತ್ಥಸ್ಯೈಕವೃಕ್ಷಸ್ಯ ರೋಪಣೇ ಯತ್ಫಲಂ ಭವೇತ್ ॥ ೨೮ ॥

ತಥೈವಂ ಚಂಪಕೇರ್ಕೇಽಚ ತ್ರಯಾಣಾಂ ರೋಪಣೇ ಪಿ ಚ ।
ಅಷ್ಟೌ ಬಿಲ್ವಸ್ಯ ವೃಕ್ಷಾಶ್ಚ ನ್ಯಗ್ರೋಧಾಶ್ಚೈವ ಸಪ್ತ ಚ ॥ ೨೯ ॥

ಏಕೈಕಸ್ಯ ಫಲಂ ಚೋಕ್ತಂ ವೃಕ್ಷಾಣಾಂ ರೋಪಣೇ ದ್ವಿಜಾಃ ।
ನಿಂಬಸ್ಯ ದಶ ವೃಕ್ಷಾಶ್ಚ ಫಲಂ ಚೈಷಾಂ ಸಮಂ ಭವೇತ್ ॥ ೩೦ ॥

ಏವಂ ಬುದ್ಧ್ವಾ ತು ಧರ್ಮಾತ್ಮಾ ಯಃ ಕುರ್ಯಾತ್ಕೃತ್ರಿಮಂ ವನಂ ।
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ॥ ೩೧ ॥

---

ಪೂಜಿಸುವುದು, ಇವನ್ನು ಮಾಡಿದರೆ ಅಶ್ವತ್ಥವು, ಹಣ, ಮಕ್ಕಳು, ಸ್ವರ್ಗ ಮೋಕ್ಷಗಳನ್ನು ಕ್ರಮದಿಂದ ಕೊಡುತ್ತದೆ. ಅಶ್ವತ್ಥಮರಕ್ಕೆ ಸ್ವಲ್ಪ ತೊಂದರೆಮಾಡಿದರೂ ಅವನು ಒಂದು ಕಲ್ಪದವರೆಗೂ ನರಕವನ್ನು ಅನುಭವಿಸಿ ಚಂಡಾಲ ಜಾತಿಯಲ್ಲಿ ಹುಟ್ಟುತ್ತಾನೆ. ಮತ್ತೆ ಅದರ ಬುಡವನ್ನು ಕಡಿದರೆ ನರಕದಿಂದ ಹೊರಗೆ ಬರುವುದೇ ಇಲ್ಲ.

೨೮–೩೦. ಅವನ ಕಡೆಯ ಜನರೂ ಘೋರವಾದ ರೌರವನರಕದಲ್ಲಿ ಬೀಳುತ್ತಾರೆ. ಅರಳಿಯ ಒಂದು ಮರವನ್ನು ಎಬ್ಬಿಸಿದರೆ ಬರುವ ಫಲವು ಸಂಪಿಗೆ ಎಕ್ಕದ ಮರಗಳನ್ನು ಮೂರು ಮೂರು ಎಬ್ಬಿಸಿದರೆ ಬರುತ್ತದೆ. ಎಂಟು ಬಿಲ್ವಪತ್ರೇಮರ, ಏಳು ಆಲದಮರ, ಹತ್ತು ಬೇವಿನ ಮರಗಳು ಈ ರೀತಿ ಒಂದೊಂದು ಅರಳೀಮರದ ಬೆಳೆಸುವಿಕೆಗೆ ಸಮ. ಇದರಿಂದ ಒಂದೊಂದಕ್ಕೂ ಫಲವನ್ನು ಹೇಳಿದಂತಾಯಿತು.

೩೧-೩೨. ಈರೀತಿ ಧರ್ಮಿಷ್ಠರು ತಿಳಿದು ಮರಗಳನ್ನು ನೆಟ್ಟು ವನಗಳನ್ನು ಮಾಡಬೇಕು. ಅವನು ಸಾವಿರ ಕೋಟಿ ಕಲ್ಪಗಳೂ, ಮತ್ತು ನೂರು ಕೋಟಿ

ನಾಕಮೋತಿ ಸ ಚೂತಸ್ಯ ಸಮಾರೋಪ್ಯ ಸಹಸ್ರಕಂ ।
ತತೋ ದ್ವಿತ್ರಿಗುಣೇನೈವ ನ್ಯೂನೇ ವಾ ಪ್ರಚುರೇಪಿ ವಾ ॥ ೩೨ ॥

ಭುಂಕ್ತೇ ಭುಕ್ತ್ವಾ ಪುನಃ ಕುರ್ಯಾನ್ನೃಪೋ ವಾಥ ಸದೀಶ್ವರಃ ।
ಸ್ವರ್ಗಂ ಭೋಗ್ಯಂ ತತೋ ರಾಜ್ಯಂ ಕಲ್ಯಾಣಂ ಮಂಗಳಂ ಶುಭಂ ॥ ೩೩ ॥

ಆರೋಗ್ಯಂ ಶೌರ್ಯಸಂಪನ್ನಮಾರಾದೇವ ಹಿ ಜಾಯತೇ ।
ಫಲಾನಿ ಯಾನಿ ಖಾದಂತಿ ಜಂತವೋಥ ಸಹಸ್ರಶಃ ॥ ೩೪ ॥

ಆಶ್ರಿತಾ ವಿಹಗಾಃ ಕೀಟಾಃ ಪತಗಾಶ್ಚಲಭಾದಯಃ ।
ಛಾಯಾಮಾಶ್ರಿತ್ಯ ಯೇ ಸತ್ವಾಃ ತತ್ಸಂಖ್ಯಾತಾಃ ಪೃಥಗ್ಜನಾಃ ॥ ೩೫ ॥

ತಸ್ಯ ಕಿಂಕರತಾಂ ಯಾಂತಿ ಶತತೋ ದೇವತಾರ್ಚಿತಾಃ ।
ಯೇ ಚ ವೃಕ್ಷಾ ಮಹಾಸತ್ವಾಃ ಸರ್ವೇ ತೇ ದೇವರೂಪಿಣಃ ॥ ೩೬ ॥

ತದರ್ಚಾ ಪಿತೃವತ್ಕಾರ್ಯಾ ಶುಶ್ರೂಷಾ ಜಲಪಿಂಡಕಂ ।
ಮರ್ತ್ಯಲೋಕೇ ಚ ತೇ ಪುತ್ರಾಃ ತಸ್ಯ ಜನ್ಮನಿ ಜನ್ಮನಿ ॥ ೩೭ ॥

---

ಕಲ್ಪಗಳೂ, ಸ್ವರ್ಗದಲ್ಲಿ ಸುಖಿಸುತ್ತಾನೆ. ಸಾವಿರ ಮಾವಿನ ಮರಗಳನ್ನು ಎಬ್ಬಿಸಿ ವನಮಾಡಿದರೂ ಇದೇ ಫಲವನ್ನು ಹೊಂದುತ್ತಾನೆ. ಅದಕ್ಕಿಂತಲೂ ಕೊಂಚ ಹೆಚ್ಚಾಗಿಯಾಗಲಿ, ಕಡಿಮೆಯಾದರೂ ಆಗಲಿ ವನವನ್ನು ಎಬ್ಬಿಸಿದರೆ ಸ್ವರ್ಗವನ್ನು ಅನುಭವಿಸಿ, ಅನಂತರ ರಾಜನಾಗಿಯೋ ಚಕ್ರವರ್ತಿಯಾಗಿಯೋ ಹುಟ್ಟುತ್ತಾನೆ. ಈ ತೋಪುಗಳನ್ನು ಬೆಳೆಸುವುದರಿಂದ-ಸ್ವರ್ಗ, ಭೋಗ್ಯ, ರಾಜ್ಯ, ಕಲ್ಯಾಣ, ಮಂಗಳ, ಶುಭ, ಆರೋಗ್ಯ, ಶೌರ್ಯ ಇವೆಲ್ಲವನ್ನೂ ಹೊಂದುತ್ತಾನೆ. ಆ ಹಣ್ಣುಗಳನ್ನು ತಿನ್ನುವ ಸಾವಿರಾರು ಜಂತುಗಳು ಅದನ್ನು ಆಶ್ರಯಿಸಿರುವ ಹಕ್ಕಿಗಳು, ಹುಳುಗಳು, ಸಣ್ಣ ಕೀಟಗಳು, ಇವೂ ಮತ್ತೂ ನೆಳಲನ್ನು ಆಶ್ರಯಿಸಿಕೊಂಡಿರುವ ಪ್ರಾಣಿಗಳೂ ಎಷ್ಟು ಸಂಖ್ಯೆಯಿವೆಯೋ ಅಷ್ಟು ಸಂಖ್ಯೆಯ ಜನರು ಅವನಿಗೆ ಆಳಾಗಿ ಕೆಲಸಮಾಡಿಕೊಡುತ್ತಾರೆ. ಗೌರವಿಸುತ್ತಾರೆ. ದೊಡ್ಡ ದೊಡ್ಡ ಮರಗಳೆಲ್ಲವೂ ದೇವರೂಪಗಳಾದುವು. ಅವನ್ನು ತಂದೆಯಂತೆ ಸೇವಿಸಬೇಕು. ನೀರು ಪಿಂಡ ಮುಂತಾದುವನ್ನು ಕೊಡಬೇಕು. ಅವು ಈ ಮನುಷ್ಯಲೋಕದಲ್ಲಿ ನಮಗೆ ಮಕ್ಕಳಂತೆ ಆಗಿ ಜನ್ಮ ಜನ್ಮಕ್ಕೂ ಮಕ್ಕಳ ಫಲವನ್ನು ಕೊಡುತ್ತವೆ.

ಸುರೂಪಾಸ್ಸುವಿನೀತಾಶ್ಚ ಸದಾ ಪುಣ್ಯಕ್ರಿಯಾನ್ವಿತಾಃ ।
ಏವಂ ಗಣೇಶತಾಂ ಯಾಂತಿ ಜಂತವಶ್ಚೂತಲಗ್ನಕಾಃ ॥ ೩೮ ॥

ಧಾತ್ರೀ ಹರೀತಕೀ ಚಾನ್ಯೇ ಕಟುತಿಕ್ತಾಮ್ಲ ಸಂಭವಾಃ ।
ಸರ್ವೇ ಚಾರಾಮತಶ್ಶುದ್ಧಾ ಫಲದಾಶ್ಶಿವದಾಸ್ಸದಾ ॥ ೩೯ ॥

ಪ್ರಾಸಾದಾ ಯತ್ರ ಸೌವರ್ಣಾಸ್ಸರ್ವರತ್ನವಿಭೂಷಿತಾಃ ।
ಸರ್ವಾಭರಣಸಂಯುಕ್ತಾ ವಿಮಾನಾಶ್ಚಾನಿಲೋಪಮಾಃ ॥ ೪೦ ॥

ಶಾತಕುಂಭಮಯಾ ವೃಕ್ಷಾಃ ಸದೈವ ಸರ್ವದಾಯಿನಃ ।
ಸರ್ವರ್ತುಸುಖದಾ ಸೌಮ್ಯಾ ಕನ್ಯಕಾಪ್ಸರಸೋಪಮಾಃ ॥ ೪೧ ॥

ಗೀತನೃತ್ಯಪರಾ ಧೀರಾ ತತ್ರ ತಿಷ್ಠಂತಿ ವೃಕ್ಷದಾಃ ।
ಪುಷ್ಕರಿಣ್ಯೋ ವಿಶೇಷೇಣ ಖಾತಾನ್ಯನ್ಯಾನಿ ಯಾನಿ ಚ ॥ ೪೨ ॥

ಸುಧೋಪಲಾಂತರಚಿತಾ ನದ್ಯಃ ಪಾಯಸಕರ್ದಮಾಃ ।
ಪುನರ್ದುಗ್ಧಸಫೇನಾಶ್ಚ ಅನ್ನಾದಿಷಡ್ರಸಾನ್ವಿತಾಃ ॥ ೪೩ ॥

---

೩೮. ಈ ರೀತಿಯಾದ ಮಕ್ಕಳು, ಸುಂದರರೂ, ವಿನಯಸಂಪನ್ನರೂ, ಪುಣ್ಯಕೆಲಸವುಳ್ಳವರೂ, ಆಗಿರುತ್ತಾರೆ. ಇದೇ ರೀತಿ ಪುಣ್ಯ ಕೆಲಸಗಳಿಂದ ಆ ಮಾವಿನ ಮರದಲ್ಲಿ ಅಂಟಿಕೊಂಡಿರುವ ಕ್ರಿಮಿಯೂ ಕೂಡ ಗಣಗಳಿಗೆ ಒಡೆಯನಾಗುತ್ತದೆ.

೩೯. ನೆಲ್ಲಿ, ಅಳಲೆ, ಇದೇ ರೀತಿ, ಹುಣಸೆ, ಬೇವು, ಮುಂತಾದುವು ವನ ದಲ್ಲಿದ್ದರೆ ಅವೆಲ್ಲವೂ ಶುದ್ಧವು. ಫಲವನ್ನು ಕೊಡುತ್ತವೆ. ಚೆನ್ನಾಗಿಯೂ ಇರುತ್ತವೆ. ಮಂಗಳವನ್ನು ಉಂಟುಮಾಡುತ್ತವೆ.

೪೦–೪೪. ಈ ವೃಕ್ಷದ ತೋಪುಗಳನ್ನು ಹಾಕಿದವರು, ರತ್ನ ಚಿನ್ನಗಳಿಂದ ಕೂಡಿದ ಮಹಡಿ ಮನೆಗಳಲ್ಲಿ ವಾಸಿಸುತ್ತಾರೆ. ಸರ್ವಾಭರಣವೂ ಇರುತ್ತದೆ. ವಾಯು ವೇಗದ ವಿಮಾನಗಳು ಇರುತ್ತವೆ. ಚಿನ್ನದ ವೃಕ್ಷಗಳು ಅವನ್ನು ಕೊಡುತ್ತವೆ. ಅಲ್ಲಿ ಅಪ್ಸರಕನ್ನಿಕೆಯರಿರುತ್ತಾರೆ. ಅವರು ಹಾಡುತ್ತ ಕುಣಿಯುತ್ತಲಿರುತ್ತಾರೆ. ಅವರ ಮಧ್ಯದಲ್ಲಿ ಇವರು ಇರುತ್ತಾರೆ. ಅನೇಕವಾದ ಕೊಳಗಳನ್ನು ಅಲ್ಲಿ ಕಟ್ಟಿಸಿರುತ್ತಾರೆ. ಒಳಗೆಲ್ಲವೂ ಅಮೃತಶಿಲೆಯ ಕಲ್ಲನ್ನು ಹದ್ದಿರುತ್ತಾರೆ. ಅಲ್ಲಿರುವ ನದಿಗಳು

ಮರ್ತ್ಯಲೋಕೇ ಯಥಾಭೋಗ್ಯಂ ಪುನಸ್ಸ್ವರ್ಗೇ ಪುನರ್ಭುವಿ ।
ಪುನರೇವ ತದಭ್ಯಾಸಾತ್ಪ್ರಾತವಾರಾಮಕಂ ಪುನಃ ॥ ೪೪ ॥

ಯಥಾ ಪುಣ್ಯಾದಿಕಂ ಕೃತ್ವಾ ಸ್ವರ್ಗಮರ್ತ್ಯಾಧಿಪಃ ಕ್ರಮಾತ್ ।
ಅಶಕ್ತಸ್ತು ಪ್ರಪಾಂ ಕೃತ್ವಾ ಪುಷ್ಕರಿಣ್ಯಾಃ ಫಲಂ ಲಭೇತ್ ॥ ೪೫ ॥

ಪ್ರಪಾಯಾ ಲಕ್ಷಣಂ ಚಾತ್ರ ಸರ್ವಪಾಪಹರಂ ಪರಂ ।
ಸರ್ವಭೋಗಪ್ರದಂ ಶುದ್ಧಂ ಸ್ವರ್ಗಾಪವರ್ಗದಂ ಸ್ಥಿರಂ ॥ ೪೬ ॥

ಲಕ್ಷಣಂ ಚ ಪ್ರವಕ್ಷ್ಯಾಮಿ ಪ್ರಪಾಯಾಃ ಕೀರ್ತಿವರ್ಧನಂ ।
ನಿರ್ಜಲೇಽಧ್ವನಿ ಪೃಕ್ತೇ ಚ ಸ್ಥಾನೇ ಕೃತ್ವಾ ಚ ಮಂಟಪಂ ॥ ೪೭ ॥

ಬಹುಪಾಂಥೇ ಸಮಾಯಾತೇ ಗ್ರೀಷ್ಮವರ್ಷಾಶರತ್ಸ್ವಪಿ ।
ಅಗರುಕಾದಿ ಸೌಗಂಧ್ಯಂ ಜಲಂ ಪೂಗಂ ಸ ಚಂದ್ರಕಂ ॥ ೪೮ ॥

---

ಪಾಯಸದ ನದಿಗಳು. ಹಾಲಿನ ನೊರೆಗಳೇ ಅದರಲ್ಲಿವೆ. ಅನ್ನಾದಿ ಷಡ್ರಸಗಳಿಂದಲೂ ಕೂಡಿರುತ್ತವೆ. ಮರಗಳನ್ನು ಬೆಳೆಸಿದವರು ಮನುಷ್ಯಲೋಕದಲ್ಲಿಯೂ ಮತ್ತೆ ಹುಟ್ಟಿ ಭೋಗಿಸಿ ಮತ್ತೆ ಸ್ವರ್ಗದಲ್ಲಿಯೂ ಭೋಗಿಸುತ್ತಾರೆ. ಅದೇ ಅಭ್ಯಾಸದಿಂದ ಮತ್ತೆ ತೋಪುಗಳನ್ನೂ ಜಲಾಶಯಗಳನ್ನೂ ನಿರ್ಮಿಸುತ್ತಾರೆ.

೪೫. ಈ ರೀತಿ ಪುಣ್ಯದ ಕೆಲಸಗಳನ್ನು ಮಾಡಿ ಮನುಷ್ಯಲೋಕಕ್ಕೂ ಸ್ವರ್ಗ ಲೋಕಕ್ಕೂ ಅಧಿಪನಾಗುತ್ತಾನೆ. ಕೊಳವನ್ನು ಕಟ್ಟಲು ಶಕ್ತಿಯಿಲ್ಲದವನು ಅರವಟ್ಟಿಗೆ ಯನ್ನಿಟ್ಟರೆ ಅದರ ಫಲವು ಬರುತ್ತದೆ.

೪೬. ಅರವಟ್ಟಿಗೆಯ ಲಕ್ಷಣವು ಸರ್ವಪಾಪಹರವು. ಸರ್ವ ಭೋಗಪ್ರದವು. ಶುದ್ಧವು, ಸ್ವರ್ಗ ಮೋಕ್ಷಗಳನ್ನು ಕೊಡುತ್ತದೆ.

೪೭. ಅರವಟ್ಟಿಗೆಯ ಲಕ್ಷಣವನ್ನು ಹೇಳುತ್ತೇನೆ. ನೀರಿಲ್ಲದ ದಾರಿಯಲ್ಲಿ ಮಾಡಬೇಕು. ಕಷ್ಟವಾಗಿರುವ ಜಾಗಗಳಲ್ಲಿ ಮಾಡಬೇಕು. ಬಹಳ ಜನರು ಸೇರು ವಲ್ಲಿ ಅರವಟ್ಟಿಗೆಯನ್ನು ಕಟ್ಟಬೇಕು.

೪೮-೪೯. ಗ್ರೀಷ್ಮ ಕಾಲ, ವರ್ಷಾಕಾಲ, ಶರತ್ಕಾಲಗಳಲ್ಲಿ, ಬಹಳ ಜನರು ಬಂದಾಗ, ಅಗರು ಮುಂತಾದುವುಗಳಿಂದ ವಾಸನೆ ಹೊಂದಿದ ಗಂಧವನ್ನೂ, ವಾಸನೆ

ಆಸನಂ ಚೈವ ತಾಂಬೂಲಂ ದತ್ವಾ ಸ್ವರ್ಗಾನ್ನಹೀಯತೇ ।
ಏವಂ ವರ್ಷಕ್ರಮೇಣೈವ ಪುಷ್ಕರಿಣ್ಯಾಃ ಫಲಂ ಲಭೇತ್ ॥ ೪೯ ॥

ಸ್ವರ್ಗಾಚ್ಚೈವಾಚ್ಯುತೋ ಮರ್ತ್ಯೋ ದೇವೈರಪಿ ಪ್ರಪೂಜ್ಯತೇ ।
ಮಾಸಮೇಕಂ ತು ಯೋ ದದ್ಯಾತ್ಪ್ರಪಾಂ ಗ್ರೀಷ್ಮೇಥ ನಿರ್ಜಲೇ ॥ ೫೦ ॥

ಕಲ್ಪೈಕಂ ತು ವಸೇತ್ಸ್ವರ್ಗೇ ಸ್ವರ್ಗಾದ್ಭ್ರಷ್ಟೋ ಮಹೀಯತೇ ।
ಪ್ರಪಾದಾಸ್ತತ್ರ ತಿಷ್ಠಂತಿ ಯತ್ರ ಪುಷ್ಕರಿಣೀ ಪ್ರದಾಃ ॥ ೫೧ ॥

ನೋಚೇದ್ಧರ್ಮಘಟೋ ದೇಯಃ ಪುಣ್ಯಃ ಪಾಪಕ್ಷಯಾಯ ಚ ।
ಏಷ ಧರ್ಮಘಟೋ ದೇಯೋ ಬ್ರಹ್ಮವಿಷ್ಣುಶಿವಾತ್ಮಕಃ ॥ ೫೨ ॥

ತವ ಪ್ರಸಾದಾತ್ಸಫಲಾ ಮಮ ಸಂತು ಮನೋರಥಾಃ ।
ಸ್ವರ್ಣಂ ಮಾಷಚತುರ್ಭಾಗಂ ದಕ್ಷಿಣಾರ್ಥಂ ಘಟಸ್ಯ ಚ ॥ ೫೩ ॥

---

ಕಟ್ಟಿದ ಅಡಕೆಯನ್ನೂ, ಆಸನ, ತಾಂಬೂಲಗಳನ್ನೂ ಕೊಟ್ಟರೆ ಅವನು ಸ್ವರ್ಗವನ್ನು ಪೊಂದುತ್ತಾನೆ. ಈ ರೀತಿ ಮೂರು ವರ್ಷಗಳು ಮಾಡಿದರೆ ಪುಷ್ಕರಿಣಿಯನ್ನು ಕಟ್ಟಿಸಿದ ಫಲವು ಬರುತ್ತದೆ.

೫೦-೫೧. ಆತನು ಸ್ವರ್ಗದಿಂದ ಚ್ಯುತನಾದರೂ, ದೇವತೆಗಳಿಂದ ಪೂಜ್ಯನಾಗಿರುತ್ತಾನೆ. ಗ್ರೀಷ್ಮ ಋತುವಿನಲ್ಲಿ ನೀರಿಲ್ಲದಿರುವಾಗ ಒಂದು ತಿಂಗಳು ಅರವಟ್ಟಿಗೆಯಿಟ್ಟರೆ ಒಂದು ಕಲ್ಪಗಳ ಕಾಲ ಸ್ವರ್ಗದಲ್ಲಿ ಇರುತ್ತಾನೆ. ಸ್ವರ್ಗದಿಂದ ಬಂದ ಮೇಲೂ ಸುಖದಿಂದಿರುತ್ತಾನೆ. ಪುಷ್ಕರಿಣಿಗಳನ್ನು ಕಟ್ಟಿಸಿದವರಿರುವಲ್ಲಿಯೇ ಅರವಟ್ಟಿಗೆ ಕಟ್ಟಿಸಿದವರೂ ಇರುತ್ತಾರೆ.

೫೨. ಅರವಟ್ಟಿಗೆಯನ್ನು ಕಟ್ಟಿಸದಿದ್ದರೆ ಪುಣ್ಯಕ್ಕೋಸ್ಕರಲೂ, ಪಾಪದ ಕ್ಷಯಕ್ಕೋಸ್ಕರಲೂ, ಧರ್ಮಘಟವನ್ನು ಕೊಡಬೇಕು. ಅದು ಬ್ರಹ್ಮ ವಿಷ್ಣು ಶಿವಾತ್ಮಕವಾದುದು.

೫೩. ನಿನ್ನ ಅನುಗ್ರಹದಿಂದ ನನ್ನ ಇಷ್ಟಾರ್ಥಗಳು ಕೈಗೂಡಲೆಂದು ದಾನ ಮಾಡಬೇಕು. ಮಾಷತೂಕದ ಚಿನ್ನದಲ್ಲಿ ನಾಲ್ಕನೆಯ ಒಂದು ಭಾಗವನ್ನು ಆ ಘಟದ ದಕ್ಷಿಣೆಗೋಸ್ಕರ ಕೊಡಬೇಕು.

ಏವಂ ವರ್ಷತ್ರಯೇಣೈವ ಪ್ರಪಾದಾನಫಲಂ ಲಭೇತ್ ।
ಯಃ ಪಠೇಚ್ಛೃಣುಯಾದ್ವಾಪಿ ಪುಷ್ಕರಿಣ್ಯಾದಿಕಂ ಫಲಂ ॥ ೫೪ ॥

ಸಾಕ್ಷಾತ್ಪಾಪಾದ್ಭವೇನ್ಮುಕ್ತಃ ತತ್ಪ್ರಸಾದಾತ್ತು ಸದ್ಗತಿಃ ।
ಜನೇಷು ಶ್ರಾವಯೇದ್ಯಸ್ತು ಪುಣ್ಯಾಖ್ಯಾನಮಿದಂ ಶುಭಂ ॥
ಕಲ್ಪಕೋಟಿಸಹಸ್ರಾಣಿ ಸುರಲೋಕೇ ಸ ತಿಷ್ಠತಿ ॥ ೫೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪುಷ್ಕರಿಣ್ಯಾದಿ ಧರ್ಮಕೀರ್ತನಂನಾಮ ಪಂಚಪಂಚಾಶತ್ತಮೋಽಧ್ಯಾಯಃ

---

೫೪-೫೫. ಈ ರೀತಿ ಮೂರು ವರ್ಷಗಳು ಮಾಡಿದರೆ ಅರವಟ್ಟಿಗೆಯ ಫಲವನು ಹೊಂದುವನು. ಈ ಪುಷ್ಕರಿಣ್ಯಾದಿ ಫಲಗಳನ್ನು ಓದಿದವರು, ಕೇಳಿದವರು ಅದರ ಅನುಗ್ರಹದಿಂದ ಪಾಪಗಳನ್ನು ಕಳೆದುಕೊಂಡು ಮುಕ್ತರಾಗುತ್ತಾರೆ. ಈ ಪುಣ್ಯಾಖ್ಯಾನವನ್ನು ಜನಗಳಿಗೆ ಹೇಳಿದವನು ಕೋಟಿಸಾವಿರ ಕಲ್ಪಗಳವರೆಗೂ ದೇವಲೋಕದಲ್ಲಿರುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಪುಷ್ಕರಿಣ್ಯಾದಿ ಧರ್ಮಕೀರ್ತನ ಎಂಬ ಐವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಷಟ್ಪಂಚಾಶತ್ತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

ಅಪರಂ ಚ ಪ್ರವಕ್ಷ್ಯಾಮಿ ಕೀರ್ತಿಧರ್ಮಪರಂ ಶುಭಂ ।
ಸೇತುಬಂಧಫಲಂ ಪುಣ್ಯಂ ಬ್ರಹ್ಮಣಾ ಭಾಷಿತಂ ತಥಾ ॥ ೧ ॥

ಕಾಂತಾರೇ ದುಸ್ತರೇ ಪಂಕೇ ಪುರಾ ಶಂಕುಸಮಾಕುಲೇ ।
ಆಳಿಂ ಕೃತ್ವಾ ಭವೇತ್ಪೂತೋ ದೇವತ್ವಂ ಯಾತಿ ಮಾನವಃ ॥ ೨ ॥

ವಿತಸ್ತೌ ತು ಲಭೇತ್ಸ್ವರ್ಗಂ ದಿವ್ಯಂ ವರ್ಷಶತಂ ಸಮಂ ।
ಏವಂ ಸಂಖ್ಯಾವಿಧಾನೇನ ನರಸ್ಸ್ವರ್ಗಾನ್ನ ಹೀಯತೇ ॥ ೩ ॥

---

## ಐವತ್ತಾರನೆಯ ಅಧ್ಯಾಯವು

೧. ವ್ಯಾಸನು ಹೇಳಿದನು- ಕೀರ್ತಿಯನ್ನೂ, ಧರ್ಮವನ್ನೂ ಕೊಡುವ ಶುಭಕರವಾದ ಬೇರೆ ಕೆಲಸವನ್ನು ಹೇಳುತ್ತೇನೆ. ಸೇತುವೆ ಕಟ್ಟುವುದು, ಮಹಾ ಪುಣ್ಯಕರವೆಂದು ಬ್ರಹ್ಮನೇ ಹೇಳಿದ್ದಾನೆ.

೨. ಕಾಡುಗಳಲ್ಲಿ ದಾಟುವುದಕ್ಕಾಗದ ಕೆಸರಿರುವಲ್ಲಿ, ಕಲ್ಲು ಮುಳ್ಳುಗಳಿರುವಲ್ಲಿ, ದಾಟುವ ಸೇತುವೆ, ಕಟ್ಟೆ, (ಸಾರಣೆ) ಗಳನ್ನು ಕಟ್ಟಿ ಪವಿತ್ರನಾಗಿ ಮನುಷ್ಯನು ದೇವತೆಯಾಗುತ್ತಾನೆ.

೩. ಹನ್ನೆರಡಂಗುಲ (ಒಂದು ಗೇಣು) ಉದ್ದ ಕಟ್ಟಿದರೇನೇ ದೇವತೆಗಳ ನೂರು ವರ್ಷಗಳು ಸ್ವರ್ಗವು ಸಿಕ್ಕುತ್ತದೆ. ಈ ರೀತಿಯಾದ ಲೆಕ್ಕದಿಂದ ತಾನು ಕಟ್ಟಿದ ಕಟ್ಟೆಯ ಲೆಕ್ಕಕ್ಕೆ ಸ್ವರ್ಗವು ಸಿಕ್ಕುತ್ತದೆ.

ಕದಾಚಿತ್ಪಂಕಯೋಗಾಚ್ಚ ಸ್ವರ್ಗಾದ್ಭುವಿ ವಿಜಾಯತೇ ।
ತದಾ ಭಟ್ಟಾರಕಶ್ರೀಮಾನ್ರೋಗಶೋಕವಿವರ್ಜಿತಃ ॥ ೪ ॥

ಪಂಕಾದೌ ಸಂಕ್ರಮಾಂಶ್ಚೈವ ಕೃತ್ವಾ ಸ್ವರ್ಗಾನ್ನ ಹೀಯತೇ ।
ಸರ್ವಪಾಪಂ ಕ್ಷಯಂ ತಸ್ಯ ಸಂಪ್ರಯಾತಿ ದಿನೇ ದಿನೇ ॥ ೫ ॥

ತಥಾಳಿಸಂಕ್ರಮಾಣಾಂ ಚ ಫಲಂ ತುಲ್ಯಂ ಪ್ರಕೀರ್ತಿತಂ ।
ಧನಪ್ರಾಣವ್ಯಯೇನೈವ ಧೀಮತಾ ಕ್ರಿಯತೇ ಸದಾ ॥ ೬ ॥

ಶ್ರೂಯತಾಂ ಯತ್ಪುರಾವೃತ್ತಮಾಖ್ಯಾನಂ ವೃದ್ಧಸಮ್ಮತಂ ।
ಕಶ್ಚಿಚ್ಚೋರೋ ಮಹಾಭೀಷ್ಮಃ ಸ್ತೇಯಕರ್ಮಣಿ ಚೋದ್ಯತಃ ॥ ೭ ॥

ಕಾಂತಾರೇ ಗೋಶಿರಸ್ಸ್ಥಾಪ್ಯ ಕ್ರಾನ್ತ್ವಾ ಸ್ತೇಯಂ ಗತೋಹ್ಯಸೌ ।
ಧನಾಪಹರಣಂ ಕೃತ್ವಾ ಗೃಹಸ್ಥಸ್ಯ ಚ ತೇನ ಹಿ ॥ ೮ ॥

---

೪. ಒಂದುವೇಳೆ ಪಾಪಸಂಬಂಧದಿಂದ ಸ್ವರ್ಗದಿಂದ ಬಂದು ಭೂಮಿಯಲ್ಲಿ ಹುಟ್ಟಿರಬಹುದು. ಆಗ ರಾಜನಾಗಿ ಶ್ರೀಮಂತನೂ, ದುಃಖರಹಿತನೂ ಆಗಿ ಹುಟ್ಟುವನು.

೫. ಕೆಸರಿರುವಲ್ಲಿ ಕಟ್ಟೆಗಳನ್ನು ಕಟ್ಟಿದರೆ ಸ್ವರ್ಗವು ಲಭಿಸುತ್ತದೆ. ಅವನ ಪಾಪಗಳು ದಿನದಿನಕ್ಕೂ ನಾಶವಾಗುತ್ತವೆ.

೬. ಆಳಿ ಎಂದರೆ ಒಂದೊಂದು ಕಲ್ಲನ್ನೂ ಸಂಬಂಧಿಸಿದಂತೆ ಇಡುವುದು. ಸಂಕ್ರಮ ಎಂದರೆ ಉದ್ದಕ್ಕೂ ಕಟ್ಟಿರುವ ಕಟ್ಟೆ. ಇವೆರಡಕ್ಕೂ ಸಮವಾದ ಫಲವು ಬರುತ್ತದೆ. ಬುದ್ಧಿವಂತರು ಹಣ, ಪ್ರಾಣ, ಬುದ್ಧಿಗಳೆಲ್ಲವನ್ನೂ ವ್ಯಯಮಾಡಿ ಕಟ್ಟುತ್ತಾರೆ.

೭. ಹಿಂದೆ ನಡೆದ ಕಥೆಯನ್ನು ಹೇಳುತ್ತೇನೆ. ಅದು ಧರ್ಮಿಷ್ಠರಿಗೆ ಸಮ್ಮತವಾದುದು. ಒಬ್ಬ ಕಳ್ಳನು ಬಹು ಉಗ್ರನಾಗಿ ಕಳ್ಳತನದಲ್ಲಿ ಬಹು ಆಸಕ್ತಿಯಿಂದಿರುತ್ತಿದ್ದನು.

೮-೯. ಒಂದು ಕೆಸರಿರುವ ತೊಂದರೆಯ ಸ್ಥಳದಲ್ಲಿ ದಾಟಲು ಕಷ್ಟವಾಗಿರಲು ಅದರ ಮಧ್ಯದಲ್ಲಿ ಆ ಕಳ್ಳನು ಒಂದು ಗೋವಿನ ತಲೆಯನ್ನು ತಂದಿಟ್ಟು ಅದರ ಮೇಲೆ ಒಂದು ಕಾಲನ್ನಿಟ್ಟು ಗೃಹಸ್ಥನ ಮನೆಯಲ್ಲಿ ಧನವನ್ನು ಕದ್ದು ಮತ್ತೆ ಹಾಗೆಯೇ

ಗತಸ್ಸ್ವಮಂದಿರಂ ತತ್ರ ಜನಾ ಗಚ್ಛಂತಿ ವರ್ತ್ಮನಿ ।
ಸರ್ವೇಷಾಮೇಕಪಾದಸ್ಯ ಸುಖಂ ಭವತಿ ನಿಶ್ಚಿತಂ ॥ ೯ ॥

ಏಕಪಾದೇ ಹ್ರದೇ ದುರ್ಗೇ ತಾರಕಂ ಗೋಶಿರಃ ಪರಂ ।
ಚಂದ್ರಾಯಣಂ ಚ ತತ್ತಸ್ಯ ಕಾಂತಾರೇ ಸಂಸ್ಥಿತಂ ಶಿರಃ ॥
ತತಶ್ಚೌರಸ್ಯ ನಿಧನೇ ಚಿತ್ರಗುಪ್ತಪ್ರಣೀತಕೇ ॥ ೧೦ ॥

॥ ಚಿತ್ರಗುಪ್ತ ಉವಾಚ ॥

ಧರ್ಮಸ್ಯ ಫಲಮಾತ್ರಂ ತು ಏಕಸ್ಯ ಚ ನ ವಿದ್ಯತೇ ।
ನ ದೈವಂ ಪೈತೃಕಂ ಕಾರ್ಯಂ ತೀರ್ಥಸ್ನಾನಂ ದ್ವಿಜಾರ್ಚನಂ ॥ ॥ ೧೧ ॥

ದಾನಂ ಗುರುಜನೇ ಮಾನಃ ಜ್ಞಾನಂ ಪರಹಿತಂ ಶುಭಂ ।
ಮನಸಾ ನ ಕೃತಂ ತೇನ ಕ್ರಿಯಯಾ ಚ ಕಥಂ ಪುನಃ ॥ ೧೨ ॥

---

ಹೊರಟುಹೋದನು. ಅಲ್ಲಿ ಇದರಿಂದ ಅನುಕೂಲವಾಗಲು ಜನರು ತಿರುಗಾಡಲು ಮೊದಲುಮಾಡಿದರು. ಆ ಜಾಗದಲ್ಲಿ ಎಲ್ಲರೂ ಒಂದು ಕಾಲನ್ನಿಟ್ಟುಕೊಂಡು ದಾಟಲು ಸುಖವಾಗಿದ್ದಿತು.

೧೦. ಆ ದೊಡ್ಡ ಕಷ್ಟವಾದ ಮಡುವಿನ ಬಳಿ ಒಂದೇ ಹೆಜ್ಜೆಯನ್ನಿಟ್ಟು ಕೊಂಡು ದಾಟಲು ಸುಖವಾದುದು ಆ ಗೋಶಿರಸ್ಸು ಒಂದೇ ಆಗಿದ್ದಿತು. ಈ ರೀತಿ ಸುಗಮನವನ್ನು ಮಾಡಿದುದರಿಂದ ಅವನಿಗೆ ಒಬ್ಬನು ದಾಟಿದರೆ ಒಂದು ಚಾಂದ್ರಾಯಣದ ಫಲವು ಬರುವುದು. ಈ ರೀತಿ ಅಲ್ಲಿ ಆ ತಲೆಯು ಇದ್ದಿತು. ಕೆಲವು ಕಾಲದ ಮೇಲೆ ಆ ಕಳ್ಳನು ಸತ್ತನು. ಚಿತ್ರಗುಪ್ತನು ಅವನನ್ನು ಯಮನ ಬಳಿಗೆ ಕರೆದು ಕೊಂಡು ಹೋದನು.

೧೧-೧೨. ಚಿತ್ರಗುಪ್ತನು ಹೇಳಿದನು- ಧರ್ಮವು ಇವನಲ್ಲಿ ಸ್ವಲ್ಪವೂ ಇಲ್ಲ. ದೇವಕಾರ್ಯ, ಪಿತೃಕಾರ್ಯ, ತೀರ್ಥಸ್ನಾನ, ಬ್ರಾಹ್ಮಣಪೂಜೆ, ದಾನ, ಗೌರವ, ಪರಹಿತ ಶುಭಗಳನ್ನು ಮನಸ್ಸಿನಲ್ಲಿಯೂ ಎಣಿಸಿಲ್ಲ. ಕೆಲಸವೆಲ್ಲಿಂದ ಬಂತು ?

ಕೃತಂ ಸಾಹಸಿಕಂ ಸ್ತೇಯಂ ಪರದಾರಾಭಿಮರ್ಶನಂ ।
ಭೂತಮಿಥ್ಯಾಪವಾದಂ ಚ ಸಾಧುನಿಂದಾಪರಂ ತಥಾ ॥
ಏವಂ ಶತಸಹಸ್ರಂ ತು ತಥಾ ಗೋಹರಣಂ ಕೃತಂ ॥ ೧೩ ॥

॥ ವ್ಯಾಸ ಉವಾಚ ॥

ತತ್ರಾಹ ಧರ್ಮರಾಜಸ್ತು ಕಾಲಾನಲಸಮಪ್ರಭಃ ॥ ೧೪ ॥

॥ ಧರ್ಮರಾಜ ಉವಾಚ ॥

ನಯತ್ವೈನಂ ಫಲಂ ಶೂರಾ ದುರ್ಗತಿಂ ಚಾಪುನರ್ಭವಾಂ ॥ ೧೫ ॥

॥ ವ್ಯಾಸ ಉವಾಚ ॥

ಏತಸ್ಮಿನ್ನಂತರೇವೋಚಚ್ಚಿತ್ರಗುಪ್ತೋನುಕಂಪಕಃ ॥ ೧೬ ॥

॥ ಚಿತ್ರಗುಪ್ತ ಉವಾಚ ॥

ಅಸ್ತ್ಯಸ್ಯ ಗೋಶಿರಃ ಪುಣ್ಯಂ ಕಿಂಚಿನ್ನಾಥ ಕ್ಷಮಾಧುನಾ ।
ಅಸ್ಯ ಪುನರ್ಭವೋ ನಾಸ್ತಿ ಶರ್ಮ ಚಾತ್ರ ಲವಂ ನ ಚ
ಚಿಂತಯಿತ್ವೋಚ್ಯತಾಂ ದೇವ ತತ್ಪಾಪಸ್ಯ ಕ್ಷಯಾಯ ವೈ ॥ ೧೭ ॥

---

೧೩. ಕಳ್ಳತನದಲ್ಲಿ ನಿಸ್ಸೀಮನು, ಪರರ ಹೆಂಡಿರಲ್ಲಿ ರಮಿಸಿರುವನು, ಜನರಿಗೆ ಮಿಥ್ಯಾಪವಾದವನ್ನು ಹೊರಿಸಿರುವನು, ಸಾಧುಗಳನ್ನು ನಿಂದಿಸಿರುವನು, ಇವಂತು ಸಾವಿರಾರು ಇವೆ. ಅಲ್ಲದೆ ಗೋವುಗಳನ್ನು ಬೇರೆ ಕದ್ದಿರುವನು.

೧೪. ವ್ಯಾಸನು ಹೇಳಿದನು- ಕಾಲಾಗ್ನಿಯಂತೆ ಉಗ್ರನಾದ ಯಮನು ಆಗ ಹೀಗೆಂದು ಹೇಳಿದನು.

೧೫. ಧರ್ಮರಾಜನು ಹೇಳಿದನು- ಎಲೈ ಆಳುಗಳಿರಾ ! ಈತನನ್ನು ಮತ್ತೆ ಹೊರಗೆ ಬರದಿರತಕ್ಕ ನರಕಕ್ಕೆ ತೆಗೆದುಕೊಂಡು ಹೋಗಿರಿ.

೧೬. ವ್ಯಾಸನು ಹೇಳಿದನು- ಇಷ್ಟರಲ್ಲಿ ದಯಾವಂತನಾದ ಚಿತ್ರಗುಪ್ತನು ಇಂತೆಂದನು.

೧೭. ಚಿತ್ರಗುಪ್ತನು ಹೇಳಿದನು- ಸ್ವಾಮಿ ! ಇವನು ಗೋವಿನ ತಲೆಯನ್ನು ಇಟ್ಟು ದಾಟಿಸಿದ ಪುಣ್ಯವು ಸ್ವಲ್ಪವಿರುತ್ತದೆ. ಮತ್ತೆ ನರಕದಿಂದ ಬಾರದಂತಿದ್ದರೂ ಇದರಲ್ಲಿ ಸ್ವಲ್ಪ ಒಳ್ಳೆಯದನ್ನು ಯೋಚಿಸು. ಆ ಪಾಪಗಳನ್ನು ನಾಶಮಾಡಿಕೊಳ್ಳಲು ಆದರದ್ದೊಂದು ಉಪಾಯವಿರಬಹುದು. ಅದನ್ನು ಯೋಚಿಸಿ ಹೇಳು.

॥ ವ್ಯಾಸ ಉವಾಚ ॥

ತತಸ್ಸಂಚಿಂತ್ಯ ಧರ್ಮಾತ್ಮಾ ತಸ್ಯ ಪುಣ್ಯಂ ಸಮಾಧಿನಾ ।
ನೃಪೋ ದ್ವಾದಶವಾರ್ಷಿಕ್ಯಂ ಲಭೇತ್ಪುಣ್ಯೋದಯಂ ಕ್ಷಿತೌ ॥ ೧೮ ॥

ತಥಾಹ ಧರ್ಮ ರಾಜಸ್ತ್ವಂ ಗಚ್ಛ ಮರ್ತ್ಯಂ ದುರಾತ್ಮಕೆ ।
ಅಕಂಟಕಂ ಚ ರಾಜ್ಯಂ ಚ ಭುಂಕ್ಷ್ವ ದ್ವಾದಶವತ್ಸರಂ ॥ ೧೯ ॥

ಯದ್ಧೃತಂ ಗೋಶಿರೋ ಮಾರ್ಗೇ ಮುಕ್ತಸ್ತಸ್ಯೈವ ಕಾರಣಾತ್ ।
ಪುನರತ್ರ ಸಮಾಗಮ್ಯ ಸಂಗಂತಾಚಾಪುನರ್ಭವಂ ॥
ತತಃ ಕೃತಾಂಜಲಿರ್ದೇವಮುವಾಚ ದುಃಖಪೀಡಿತಃ ॥ ೨೦ ॥

॥ ಚೋರ ಉವಾಚ ॥

ಧರ್ಮರಾಜಾನುಕಂಪಾಂ ಚ ಮಯ್ಯೇವಂ ಪಾಪಕಾರಿಣಿ ।
ಕುರು ನಾಥ ತ್ವನಾಥೇ ಚ ಜಾನಾಸಿ ಪ್ರೀತಿಪೂರ್ವಕಂ ॥ ೨೧ ॥

---

೧೮. ವ್ಯಾಸನು ಹೇಳಿದನು– ಆಗ ಆ ಯಮನು ಹನ್ನೆರಡು ವರ್ಷಗಳವರೆಗಿನ ಅವನ ದಾಟಿಸಿದ ಪುಣ್ಯವನ್ನು ಯೋಚಿಸಿದನು.

೧೯. ಆಗ ಧರ್ಮರಾಜನು ಅವನನ್ನು ಕುರಿತು ಎಲೈ ದುಷ್ಟನೇ! ಭೂಲೋಕಕ್ಕೆ ಹೋಗು. ಹನ್ನೆರಡು ವರ್ಷಗಳವರೆಗೂ ಸುಖವಾಗಿ ರಾಜ್ಯವನ್ನು ಅನುಭವಿಸು.

೨೦. ನೀನು ದಾರಿಯಲ್ಲಿ ಗೋಶಿರಸ್ಸನ್ನಿಟ್ಟು ದಾಟಿ ಹೋಗುವಂತೆ ಮಾಡಿದೆ. ಆದರ ಕಾರಣದಿಂದ ನಿನ್ನನ್ನು ಬಿಟ್ಟಿದ್ದೇನೆ. ಅದನ್ನು ಅನುಭವಿಸಿ ಬಂದು ಅನಂತರ ಈ ನರಕಗಳನ್ನು ಅನುಭವಿಸು. ಆಗ ಆ ಕಳ್ಳನು ಕೈಮುಗಿದುಕೊಂಡು ಯಮನಿಗೆ ಇಂತೆಂದನು.

೨೧. ಕಳ್ಳನು ಹೇಳಿದನು- ಎಲೈ ಧರ್ಮರಾಜನೇ! ಪಾಪಿಯಾದ ನನ್ನಲ್ಲಿ ದಯೆಯಿಟ್ಟು ನಾನು ಮಾಡಿರುವುದನ್ನು ತಿಳಿಸು. ಅದನ್ನೇ ನಾನು ವಿಶ್ವಾಸದಿಂದ ತಿಳಿದು ಮಾಡುವೆನು.

॥ ವ್ಯಾಸ ಉವಾಚ ॥

ಧರ್ಮರಾಜಸ್ತು ತಂ ಪ್ರಾಹ ಬಾಢಮೇವಮಿತೋ ವ್ರಜ ।
ಸ್ಮರಿಷ್ಯಸಿ ಸ್ವವೃತ್ತಾಂತಂ ಮತ್ಪ್ರಸಾದಾತ್ಸುದುಃಖಿತಃ ॥ ೨೨ ॥

ಏತಸ್ಮಿನ್ನಂತರೇ ಮುಕ್ತೋ ಯಮಸ್ಯ ಕಿಂಕರೇಣ ಹಿ ।
ತಸ್ಯ ಜನ್ಮಾ ಭವತ್ತ್ಯಾಚ ದುರ್ವಿಧೇ ಜಾತಿವಾಣಿಕೇ ॥ ೨೩ ॥

ಆಜನ್ಮ ವಿವಿಧಂ ದುಃಖಂ ಭುಕ್ತಂ ಪೂರ್ವವಿಕರ್ಮತಃ ।
ಭುಕ್ತಂ ಕಷ್ಟಂ ಮಹತ್ತಚ್ಚ ಏಕವಿಂಶತಿಹಾಯನಂ ॥ ೨೪ ॥

ತಸ್ಮಿನ್ರಾಷ್ಟ್ರೇ ಮೃತೋ ಭೂಪಃ ಸ್ವಕರ್ಮಪರಿಪೀಡಿತಃ ।
ಏತಸ್ಮಿನ್ನಂತರೇಽಮಾತ್ಯೈಃ ಸಮಾಲೋಕ್ಯ ಸುಮಂತ್ರಿಭಿಃ ॥ ೨೫ ॥

ಅನೇಕಪರಿಮರ್ಶೈಸ್ತು ಪೃಥಿವ್ಯಾಂ ಭ್ರಮಣಂ ಕೃತಂ ।
ತಮಾನ್ವಿಷ್ಯಂಶ್ಚ ತೇ ಸದ್ಯಃ ಸರ್ವೇಷಾಂ ಪುರತೋ ದೃಢಂ ॥ ೨೬ ॥

---

೨೨. ವ್ಯಾಸನು ಹೇಳಿದನು– ಆಗ ಧರ್ಮರಾಜನು ಹಾಗೆ ಆಗಲಿ. ಹೋಗು. ನಿನ್ನ ವಿಷಯಗಳನ್ನು ತಿಳಿದುಕೊಳ್ಳುವ ಶಕ್ತಿಯು ನಿನಗೆ ನನ್ನ ಅನುಗ್ರಹದಿಂದ ಉಂಟಾಗಲಿ, ಎಂದನು.

೨೩. ಇಷ್ಟರಲ್ಲಿ ಯಮನ ಆಳು ಬಿಟ್ಟುಬಿಡಲು ಭೂಮಿಯಲ್ಲಿ ಬಡವರೂ, ಜಾತಿಗೆಟ್ಟವರೂ ಆದವರ ಮನೆಯಲ್ಲಿ ಹುಟ್ಟಿದನು.

೨೪. ಪೂರ್ವಕರ್ಮದ ಬಲದಿಂದ ಹುಟ್ಟಿದಂದಿನಿಂದಲೂ, ಇಪ್ಪತ್ತೊಂದು ವರ್ಷಗಳವರೆಗೂ, ಬಹುವಾದ ಕಷ್ಟಗಳನ್ನು ಅನುಭವಿಸಿದನು.

೨೫-೨೬, ಆಗ ಆ ಕಳ್ಳನು ಹುಟ್ಟಿದ್ದ ರಾಜ್ಯದ ಧೊರೆಯು ಸತ್ತುಹೋಗಿದ್ದನು. ಇಷ್ಟರಲ್ಲಿ ಆ ದೇಶದ ಮಂತ್ರಿಗಳು ಯೋಚಿಸಿ ವಿಮರ್ಶೆ ಮಾಡುತ್ತಾ ಅವನಿಗೆ ಮಕ್ಕಳಿಲ್ಲದಿರಲು ಹುಡುಕುತ್ತಾ ಈತನನ್ನು ಕಂಡು ಎಲ್ಲರ ಎದುರಿಗೂ ಸುತ್ತುಗಟ್ಟಿಕೊಂಡರು.

ತತೋ ರಾಜ್ಯಾಭಿಷೇಕಶ್ಚ ಕೃತಸ್ತೈಸ್ತು ವಿಮತ್ಸರೈಃ ।
ಸ ಚ ರಾಜ್ಯಂ ಚ ಸಂಶ್ರಿತ್ಯ ಧರ್ಮರಾಜವರೇಣ ಚ ॥ ೨೭ ॥

ಆಕರೋದಾಳಿಕಂ ಕರ್ಮ ಶಿಲಾಬದ್ಧಂ ಚ ಮೃಣ್ಮಯಂ ।
ಸಂಕ್ರಮಂ ಜಲದುರ್ಗೇ ಚ ತರಣಿಂ ಚ ತಥಾಪರೇ ॥ ೨೮ ॥

ವಾಪೀಕೂಪತಟಾಗಾನಿ ಪ್ರಪಾರಾಮಮಹೀರುಹಂ ।
ಕೃತವಾನ್ವಿವಿಧಂ ಯಜ್ಞಂ ದಾನಪುಣ್ಯಮತಃ ಪರಂ ॥ ೨೯ ॥

ಸ್ಮರಂಶ್ಚ ಪೂರ್ವಕರ್ಮಾಣಿ ಸರ್ವಪಾಪಕ್ಷಯಾಯ ವೈ ।
ಕೃತಂ ಬಹುವಿಧಂ ಧರ್ಮಂ ವ್ರತಾನಿ ವಿವಿಧಾನಿ ಚ ॥ ೩೦ ॥

ಸುರಾಣಾಂ ಬ್ರಾಹ್ಮಣಾನಾಂ ಚ ಗುರೂಣಾಂ ಚೈವ ತರ್ಪಣಾತ್ ।
ಪಾಪಾತ್ಪತೋ ಯಯೌ ಗೇಹಂ ಧರ್ಮರಾಜಸ್ಯ ಧೀಮತಃ ॥ ೩೧ ॥

---

೨೭-೨೯. ಆಗ ಅವರು ಇವನನ್ನು ಕರೆದುಕೊಂಡು ಹೋಗಿ ರಾಜ್ಯಾಭಿಷೇಕವನ್ನು ಮಾಡಿದರು. ರಾಜನಾದನಂತರ ಧರ್ಮರಾಜನ ಮಾತಿನಂತೆ ಹಿಂದಿನದನ್ನು ಜ್ಞಾಪಿಸಿಕೊಳ್ಳುತ್ತ ಅನೇಕವಾದ ಕಲ್ಲಿನ, ಮಣ್ಣಿನ ಎರಡರಿಂದಲೂ ಕೂಡಿದ ಸಾರಣೆ (ದಾಟುವ ಕಟ್ಟೆಗಳು) ಗಳನ್ನು ಮಾಡಿಸಿದನು. ಸೇತುವೆ ಅಣೆಗಳನ್ನು ಕಟ್ಟಿಸಿದನು. ನೀರಿರುವ ಮತ್ತೆ ಕೆಲವೆಡೆಗಳಲ್ಲಿ ದೋಣಿಗಳನ್ನಿಡಿಸಿದನು. ಭಾವಿ, ಕೊಳ, ಕೆರೆ, ಅರವಟ್ಟಿಗೆ, ಕೈದೋಟಗಳು, ತೋಪುಗಳು, ಇವೇ ಮುಂತಾದ ಪುಣ್ಯಕೆಲಸಗಳನ್ನೂ ದಾನಗಳನ್ನೂ, ಯಜ್ಞಗಳನ್ನೂ, ಮಾಡಿದನು.

೩೦. ಹಿಂದಿನ ಕರ್ಮಗಳನ್ನು ಸ್ಮರಿಸುತ್ತ ತನ್ನ ಆ ಪಾಪದ ನಾಶಕ್ಕೋಸ್ಕರ ಅನೇಕವಾದ ಧರ್ಮಗಳನ್ನೂ, ವ್ರತಗಳನ್ನೂ ಮಾಡಿದನು.

೩೧. ದೇವತೆಗಳು, ಬ್ರಾಹ್ಮಣರು, ಗುರುಗಳು, ಇವರನ್ನು ತೃಪ್ತಿಪಡಿಸಿ ಪಾಪವನ್ನು ಕಳೆದುಕೊಂಡು ಧರ್ಮರಾಜನ ಮನೆಗೆ ಹೋದನು.

ಸ ಯಾನಸ್ಥಂ ತತೋ ದೃಷ್ಟ್ವಾ ಕ್ರೋಧರಕ್ತೇಕ್ಷಣೋಽಭವತ್ ।
ಸ ಚ ತಂ ಪ್ರಾಂಜಲಿಃ ಪ್ರಾಹ ಭೋ ಧರ್ಮ ಕುರು ತಾರಣಂ ॥
ಚಿತ್ರಗುಪ್ತೋಽಬ್ರವೀದ್ವಾಕ್ಯಂ ಧರ್ಮರಾಜಸಮೀಪತಃ ॥ ೩೨ ॥

॥ ಚಿತ್ರಗುಪ್ತ ಉವಾಚ ॥

ಕರ್ಮಣಾ ಮನಸಾ ಪೂತೋ ವಿಷ್ಣುಲೋಕಂ ಸ ಗಚ್ಛತು ॥ ೩೩ ॥

॥ ವ್ಯಾಸ ಉವಾಚ ॥

ಸತಚ್ಛ್ರುತ್ವಾ ಪುನಶ್ಚಾಹ ತಸ್ಯ ವಿಜ್ಞಾಯ ಕಾರಣಂ ।
ಸ್ಮಿತಃ ಪ್ರೀತ್ಯಾ ಪ್ರಸನ್ನಾತ್ಮಾ ಗಚ್ಛ ಗಚ್ಛಾಚ್ಯುತಾಲಯಂ ॥ ೩೪ ॥

ವಿಮಾನಂ ಸುರಲೋಕಾಚ್ಚ ಸ್ವಾಗತಂ ವರ್ಣಕರ್ಬುರಂ ।
ಸಮಾರುಹ್ಯ ಗತಸ್ಸ್ವರ್ಗಂ ಪುನರಾವೃತ್ತಿ ದುರ್ಲಭಂ ॥ ೩೫ ॥

ತಸ್ಮಾತ್ಕಿಷ್ಕು ಪ್ರಮಾಣಂ ಹಿ ದತ್ತಂ ಯೇನಾಳಿಕಂ ಪುರಾ ।
ತಸ್ಯ ರಾಜ್ಯಾನ್ವಯಂ ಸ್ವರ್ಗಂ ಮಹಾನ್ತಂ ಚಾನುಗಚ್ಛತಿ ॥ ೩೬ ॥

---

೩೨. ಆಗ ಅವನು ಯಾನದಲ್ಲಿರುವುದನ್ನು ನೋಡಿ ಯಮನು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡನು. ಆಗ ಕೈಮುಗಿದುಕೊಂಡು ಎಲೈ ಧರ್ಮರಾಜನೇ ! ನನ್ನನ್ನು ಉದ್ಧರಿಸೆಂದನು ಆಗ ಚಿತ್ರಗುಪ್ತನು ಧರ್ಮರಾಜನನ್ನು ಕುರಿತು ಇಂತೆಂದನು.

೩೩. ಚಿತ್ರಗುಪ್ತನು ಹೇಳಿದನು- ಈತನು ಕರ್ಮಗಳನ್ನು ಮಾಡಿಯೂ, ಮನಸ್ಸಿನಿಂದಲೂ ಶುದ್ಧನಾಗಿದ್ದಾನೆ. ವಿಷ್ಣುಲೋಕಕ್ಕೆ ಹೋಗಲಿ.

೩೪. ವ್ಯಾಸನು ಹೇಳಿದನು- ಅದನ್ನು ಕೇಳಿ ಯಮನು ಮತ್ತೆ ಇದರ ಕಾರಣವನ್ನು ತಿಳಿದು ಪ್ರೀತಿಯಿಂದ ನಗುತ್ತಾ ವಿಷ್ಣುಲೋಕಕ್ಕೆ ಹೋಗು. ಎಂದನು.

೩೫. ಆಗ ದೇವಲೋಕದಿಂದ ಬೂದುಬಣ್ಣದ ವಿಮಾನವು ಬಂದಿತು. ಅದರಲ್ಲಿ ಅವನು ಕುಳಿತು ಶಾಶ್ವತವಾದ ಸ್ವರ್ಗವನ್ನು ಹೊಂದಿದನು.

೩೬. ಆದ್ದರಿಂದಲೇ ಕಿಷ್ಕುಪ್ರಮಾಣದ ಸಾರಣೆಯನ್ನು ಮಾಡಿದರೆ ಅವನಿಗೆ ರಾಜ್ಯವೂ, ಸ್ವರ್ಗವೂ, ಸಿಕ್ಕುತ್ತದೆ. ಎಂದು ಹೇಳಿದನು.

ತಥೈವ ಗೋಪ್ರಚಾರಂ ತು ದತ್ವಾ ಸ್ವರ್ಗಾನ್ನ ಹೀಯತೇ ।
ಯಾ ಗತಿರ್ಗೋಪ್ರದಸ್ಯೈವ ಧ್ರುವಂ ತಸ್ಯ ಭವಿಷ್ಯತಿ ॥ ೩೭ ॥

ವ್ಯಾಮೈಕಂ ಗೋಪ್ರಚಾರಂ ತು ಮುಕ್ತಂ ಯೇನ ಸುಧೀಮತಾ ।
ತಸ್ಯ ಸ್ವರ್ಗೇ ಭವೇದಿಷ್ಟಂ ಕಿಮನ್ಯೈಃ ಪುರುಭಾಷಿತೈಃ ॥ ೩೮ ॥

ಗೋಪ್ರಚಾರಂ ಯಥಾಶಕ್ತಿ ಯೋ ವೈ ತ್ಯಜತಿ ಹೇತುನಾ ।
ದಿನೇ ದಿನೇ ಬ್ರಹ್ಮಭೋಜ್ಯಂ ಪುಣ್ಯಂ ತಸ್ಯ ಶತಾಧಿಕಂ ॥ ೩೯ ॥

ತಸ್ಮಾದ್ಗವಾಂ ಪ್ರಚಾರಂ ತು ಮುಕ್ತ್ವಾ ಸ್ವರ್ಗಾನ್ನ ಹೀಯತೇ ।
ಯಶ್ಛಿನತ್ತಿ ದ್ರುಮಂ ಪುಣ್ಯಂ ಗೋಪ್ರಚಾರಂ ಛಿನತ್ತ್ಯಪಿ ॥ ೪೦ ॥

ತಸ್ಯೈಕವಿಂಶಪುರುಷಾಃ ಪಚ್ಯಂತೇ ರೌರವೇಷು ಚ ।
ಗೋಚಾರಘ್ನಂ ಗ್ರಾಮಗೋಪಃ ಶಕ್ತೋ ಜ್ಞಾತ್ವಾ ತು ದಂಡಯೇತ್ ॥೪೧॥

---

೩೭. ಅದೇ ರೀತಿಯಾಗಿ ಗೋಮಾಳವನ್ನು ಬಿಡಿಸಿದರೆ ಅವನಿಗೆ ಸ್ವರ್ಗದಿಂದ ಚ್ಯುತಿಯೇ ಇರುವುದಿಲ್ಲ. ಗೋದಾನ ಮಾಡಿದವರಿಗೆ ಬರುವ ಗತಿಯು ಈತನಿಗೆ ಬರುತ್ತದೆ.

೩೮. ಒಂದು ಮಾರುದ್ದವಿರುವಷ್ಟು ಭೂಮಿಯನ್ನು ತಿರುಗಲು ಬಿಟ್ಟರೂ ಅವರಿಗೆ ಸುಖವಾದ ಸ್ವರ್ಗವು ಸುಲಭವಾಗಿ ಸಿಕ್ಕುತ್ತದೆ. ಹೆಚ್ಚಿನಿಂದೇನು ?

೩೯. ಗೋಮಾಳವನ್ನು ಯಾವನು ಶಕ್ತಿಗನುಗುಣವಾಗಿ ಬಿಡುವನೋ ಅವನಿಗೆ ದಿನದಿನಕ್ಕೂ ಬ್ರಹ್ಮಭೋಜನದ ಪುಣ್ಯದ ನೂರರಷ್ಟು ಪುಣ್ಯದ ಹೆಚ್ಚು ಪುಣ್ಯವು ಬರುತ್ತದೆ.

೪೦-೪೧. ಆದ್ದರಿಂದ ಗೋಮಾಳವನ್ನು ಬಿಟ್ಟರೆ ಶಾಶ್ವತಸ್ವರ್ಗವು ಸಿಕ್ಕುತ್ತದೆ. ಪುಣ್ಯವಾದ ಮರಗಳನ್ನೂ, ಪುಣ್ಯಪ್ರದೇಶಗಳನ್ನೂ, ಗೋಮಾಳವನ್ನೂ, ಯಾವನು ನಾಶಮಾಡುವನೋ ಅವನ ಇಪ್ಪತ್ತೊಂದು ತಲೆಯ ಜನರು ರೌರವದಲ್ಲಿ ಬಿದ್ದು ದುಃಖಿಸುತ್ತಾರೆ. ಗ್ರಾಮದ ಪಟೇಲನು ಗೋಮಾಳವನ್ನು ಹಿಡಿದುಕೊಂಡವನನ್ನೂ

ಛೇತ್ತಾರಂ ಧರ್ಮವೃಕ್ಷಾಣಾಂ ವಿಶೇಷಾದ್ಗೋಪ್ರಚಾರಹಂ ।
ತಸ್ಯ ದಂಡೇ ಸುಖಂ ತಸ್ಯ ತಸ್ಮಾತ್ತಂ ದಂಡಯೇತ್ತು ಸಃ ॥ ೪೨ ॥

ಪ್ರಾಸಾದಂ ಕುರುತೇ ಯಸ್ತು ವಿಷ್ಣುಲಿಂಗಸ್ಯ ಮಾನವಃ ।
ತ್ರಿಕಾಂಡಂ ಪಂಚಕಾಂಡಂ ಚ ಸುಶೋಭಂ ಸುಘಟಾನ್ವಿತಂ ॥ ೪೩ ॥

ಇತೋಽಧಿಕಂ ತು ಯೋ ದದ್ಯಾನ್ಮೃಣ್ಮಯಂ ವಾ ದೃಷನ್ಮಯಂ ।
ವಸುವೃತ್ತಿಸುಪೂರ್ಣಂ ಚ ಸುರಮ್ಯಂ ದಿವ್ಯಭೂತಳಂ ॥ ೪೪ ॥

ಪ್ರತಿಷ್ಠಾಕರ್ಮಸಂಪನ್ನಂ ಕಿಂಕರಾದಿಭಿರಾವೃತಂ ।
ಸುಲಿಂಗಮಿಷ್ಟದೇವಸ್ಯ ವಿಷ್ಣೋರೇವ ವಿಶೇಷತಃ ॥ ೪೫ ॥

ಕೃತ್ವಾ ಚ ವಿಷ್ಣುಸಾಯುಜ್ಯಂ ಸಮಾಪ್ನೋತಿ ನರೋತ್ತಮಃ ।
ತಥೈವ ಪ್ರತಿಮಾಂ ಕೃತ್ವಾ ಹರೇರನ್ಯತರಸ್ಯ ಚ ॥ ೪೬ ॥

---

ಶಿಕ್ಷಿಸಬೇಕು. ಧರ್ಮದ ಮರಗಳನ್ನು ಕಡಿಯುವವನನ್ನೂ, ಗೋಮಾಳವನ್ನು ನಾಶ ಮಾಡುವವನನ್ನೂ ದಂಡಿಸಿದರೆ ಆ ದಂಡಿಸಿದವನಿಗೆ ಸ್ವರ್ಗವುಂಟು. ಆದ್ದರಿಂದ ಶಿಕ್ಷಿಸಬೇಕು.

೪೩. ಯಾವನು ವೈಷ್ಣವರು ವಾಸಿಸಲು ಮೂರು ಐದು ಪ್ರಕಾರಗಳುಳ್ಳ ಮನೆಗಳನ್ನು ಕಟ್ಟಿಸಿ ಮೇಲುಕಲಶವನ್ನು ಹಾಕಿಸಿಕೊಡುತ್ತಾನೆಯೋ ಅವನು ಸ್ವರ್ಗವನ್ನು ಹೊಂದುತ್ತಾನೆ.

೪೪. ಅದಕ್ಕಿಂತಲೂ ಹೆಚ್ಚಾದ ಮಣ್ಣಿನ ಅಥವಾ ಕಲ್ಲಿನ ಮನೆಗಳನ್ನೂ, ಕಟ್ಟಿಸಿಕೊಡಬೇಕು. ಸಾಕಾದಷ್ಟು ಹಣ, ಜೀವನಕ್ಕೆ ತಕ್ಕಷ್ಟು ಭೂಮಿ, ಇವನ್ನು ಕೊಟ್ಟರೂ, ಅಕ್ಷಯವಾದ ಸ್ವರ್ಗವು ಲಭಿಸುತ್ತದೆ.

೪೫-೪೬. ವಿಷ್ಣುವಿನದಾಗಲಿ, ಶಿವನದಾಗಲಿ, ದೇವಸ್ಥಾನವನ್ನು ಕಟ್ಟಿಸಿ, ದೇವರನ್ನು ಪ್ರತಿಷ್ಠೆಮಾಡಿಸಿ, ಅದಕ್ಕೆ ಬೇಕಾದಷ್ಟು ಸೇವಕರನ್ನು ಗೊತ್ತುಮಾಡಿ ಅವರಿಗೆ ವೃತ್ತಿಯನ್ನು ಗೊತ್ತುಮಾಡಿದರೆ ಅವರು ವಿಷ್ಣುವಿನ ಸಾಯುಜ್ಯವನ್ನು ಹೊಂದುತ್ತಾರೆ. ವಿಷ್ಣುವಿನ ಅಥವಾ ಶಿವನ ಪ್ರತಿಮೆಯನ್ನು ಮಾಡಿಸಿ ಪ್ರತಿಷ್ಠಿಸಿ

ಕೃತ್ವಾ ದೇವಕುಲಂ ರಮ್ಯಂ ಯತ್ಫಲಂ ಲಭತೇ ನರಃ ।
ನ ತನ್ಮಖಸಹಸ್ರೈಸ್ತು ದಾನೈರ್ಭುವಿ ವ್ರತಾದಿಭಿಃ ॥ ೪೭ ॥

ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।
ಪ್ರಾಸಾದೇ ರತ್ನಸಂಯುಕ್ತೇ ಸಂಪೂರ್ಣೇ ದ್ರವ್ಯಸಂಕುಲೇ ॥ ೪೮ ॥

ಸ ವಸೇತ್ಕಾಮಗೇ ಯಾನೇ ಸರ್ವಲೋಕಮನೋಹರೇ ।
ಸ್ವರ್ಗಾಚ್ಚ್ಯುತೋ ಭವೇದ್ರಾಜಾ ಸಾರ್ವಭೌಮೋ ಗುಣೈರ್ವಶೀ ॥ ೪೯ ॥

ಶಿವಲಿಂಗೇ ತು ಪ್ರಾಸಾದಂ ಕಾರಯಿತ್ವಾ ತು ಶಕ್ತಿತಃ ।
ಯದುಕ್ತಂ ವಿಷ್ಣುಲಿಂಗೇ ತು ತಜ್ಜ್ಞೇಯಂ ಶಿವವೇಶ್ಮನಿ ॥ ೫೦ ॥

ಭುಂಕ್ತೇ ಭೋಗಂ ಮಹಾಭಾಗೋ ಮನಶ್ಶರ್ಮಕರಂ ಪರಂ ।
ರಾಮಾಭಿರಾಮಂ ಸಂಪೂರ್ಣಂ ಸರ್ವತಸ್ಸುಖದಂ ದಿವಿ ॥ ೫೧ ॥

ಉರ್ವ್ಯಾಮಕ್ಷಯಭೋಗ್ಯಾನಿ ನೃಪೋವಾಥ ಮಹಾಧನೀ ।
ಹರಸ್ಯ ಪ್ರತಿಮಾಂ ಯಶ್ಚ ಕುರ್ಯಾದೇವ ಗೃಹೇ ನರಃ ॥ ೫೨ ॥

---

ದೇವಸ್ಥಾನವನ್ನು ಕಟ್ಟಿಸಿದರೆ ಬರುವ ಪುಣ್ಯವು ಸಾವಿರ ಯಾಗಗಳನ್ನಾಗಲಿ ಅನೇಕ ದಾನಗಳನ್ನಾಗಲೀ, ವ್ರತಗಳನ್ನಾಗಲೀ, ಮಾಡಿದರೂ ಬರುವುದಿಲ್ಲ.

೪೮-೪೯. ಅವನು ರತ್ನಗಳಿಂದ ಕೂಡಿದ ದ್ರವ್ಯಗಳಿಂದ ಪೂರ್ಣವಾದ ಇಚ್ಛೆ ಬಂದಂತೆ ಹೋಗಬಲ್ಲ ಮನೋಹರವಾದ ವಿಮಾನದಲ್ಲಿ ಕೋಟಿಸಾವಿರ ಮತ್ತೂ ಕೋಟಿನೂರು ವರ್ಷಗಳಗರೆಗೆ ವಾಸಿಸಿ ಸ್ವರ್ಗದಿಂದ ಚ್ಯುತನಾದ ಮೇಲೆ ರಾಜನೋ ಚಕ್ರವರ್ತಿಯೋ ಆಗಿ ಹುಟ್ಟಿ ಗುಣಿಯೂ ಜಿತೇಂದ್ರಿಯನೂ ಆಗುತ್ತಾನೆ.

೫೦. ಶಿವಲಿಂಗಕ್ಕೆ ದೇವಸ್ಥಾನವನ್ನು ಕಟ್ಟಿಸಿದರೆ ವಿಷ್ಣುಪ್ರತಿಮೆಗೆ ಹೇಳಿದ ಪುಣ್ಯವೇ ಬರುತ್ತದೆ

೫೧. ಹೆಂಗಸರಿಂದ ಪೂರ್ಣವಾದ ಸುಖವನ್ನು ಕೊಡುವ ಸ್ವರ್ಗವನ್ನು ಹೊಂದಿ ಹಿತಕರಗಳಾದ ಭೋಗಗಳನ್ನು ಅನುಭವಿಸುತ್ತಾನೆ.

೫೨-೫೩. ಆಮೇಲೆ ಭೂಮಿಯಲ್ಲಿ ಹುಟ್ಟಿ ರಾಜನಾಗಿಯೋ ಧನಿಕನಾಗಿಯೋ ಇದ್ದು ಅಕ್ಷಯ ಭೋಗವನ್ನು ಹೊಂದುತ್ತಾನೆ. ಒಳ್ಳೆಯ ಲಿಂಗವನ್ನಾಗಲಿ, ಒಳ್ಳೆಯ

ಸುಲಿಂಗಾಂ ವಾ ಸುರೂಪಾಂ ವಾ ಕಲ್ಪಕೋಟಿ ವಸೇದ್ದಿವಿ ।
ಸ್ವರ್ಗಾದ್ಭ್ರಷ್ಟೋ ಭವೇದ್ರಾಜಾ ಧನೀ ಪೂಜ್ಯತಮೋಽಪಿ ವಾ ॥ ೫೩ ॥

ದೇವೀಲಿಂಗೇಷು ಸರ್ವೇಷು ಕೃತ್ವಾ ದೇವಗೃಹಂ ನರಃ ।
ಸುರತ್ವಂ ಪ್ರಾಪ್ನುಯಾಲೋಲ್ಲೋಕೇ ದೇವ್ಯಾಸ್ಸರ್ವಸುಖೋದ್ಭವೇ ॥ ೫೪ ॥

ಭೃಶಮುಚ್ಯುತತಾಮೇತಿ ಸುಖಮೇತಿ ನಿರಾಮಯಂ ।
ರತ್ನಸಂಸೃಷ್ಟಪ್ರಾಸಾದೇ ಮಣಿಕರ್ಬುರಭೂತಳೇ ॥ ೫೫ ॥

ರಾಮಾಯುತಪ್ರಸಂಭೋಗ್ಯೇ ದೇವೀಸಂಸೃಷ್ಟನಿರ್ಭಯೇ ।
ನೃತ್ಯಗೀತಪರೇರಮ್ಯೇ ಸರ್ವೇಂದ್ರಿಯಮನೋರಮೇ ॥ ೫೬ ॥

ರತ್ನಮರ್ದಲತಾಲಾಢ್ಯೇ ಸರ್ವದಾಸ್ತ್ರೀಜನೇರಿತೇ ।
ನಿರ್ಮಲೇ ಸುಖದೇ ರಮ್ಯೇ ರತ್ನಾನಾಂ ಸುಭಗೇ ಗೃಹೇ ॥ ೫೭ ॥

ತಥೈವ ಪ್ರತಿಮಾಯಾಶ್ಚ ದೇವ್ಯಾಃ ಪ್ರಾಸಾದಮುತ್ತಮಂ ।
ನಿಯುತಂ ಕಲ್ಪಕೋಟೀನಾಂ ಸ್ವರ್ಲೋಕಂ ಏತಿ ಮಾನವಃ ॥ ೫೮ ॥

---

ವಿಷ್ಣುಪ್ರತಿಮೆಯನ್ನಾಗಲಿ, ಮನೆಯಲ್ಲಿಟ್ಟಿದ್ದರೆ ಕೋಟಿ ಕಲ್ಪಗಳವರೆಗೂ ಸ್ವರ್ಗದಲ್ಲಿ ಸುಖಿಸುತ್ತಾನೆ ಸ್ವರ್ಗದಿಂದ ಚ್ಯುತನಾದ ಮೇಲೆ ರಾಜನಾಗಿ ಅಥವಾ ಧನಿಕನಾಗಿ ಹುಟ್ಟಿ ಪೂಜ್ಯನಾಗಿರುತ್ತಾನೆ.

೫೪-೫೭. ದೇವಿಯ ಪ್ರತಿಮೆಯಿರುವಲ್ಲಿಯೂ, ದೇವಸ್ಥಾನಗಳನ್ನು, ಕಟ್ಟಿಸಿದರೆ ದೇವಿಯ ಲೋಕದಲ್ಲಿ ದೇವತೆಯಾಗಿ ಆಗಿ ನಾಶರಹಿತವಾದ ಸುಖವನ್ನು ಹೊಂದುತ್ತಾನೆ. ರತ್ನದಿಂದ ಕೂಡಿರುವ, ಮಣಿಗಳ ಕಾಂತಿಯುಳ್ಳ, ಸಾವಿರಾರು ಜನ ಸ್ತ್ರೀಯರಿಂದ ಕೂಡಿರುವ, ದೇವಿಯಿಂದ ಭಯವರ್ಜಿತವಾದ, ರತ್ನದ ಮದ್ದಲೆಯ ಕಾಲದ ಧ್ವನಿಯುಳ್ಳ, ಸ್ತ್ರೀಜನರು ಓಡಾಡುತ್ತಿರುವ, ನಿರ್ಮಲವಾದ, ಸುಖವಾದ, ರಮ್ಯವಾದ, ಶುಭವಾದ, ಮಹಡಿ ಮನೆಗಳಲ್ಲಿ ವಾಸಿಸುತ್ತಾನೆ.

೫೮. ಆ ದೇವಿಯ ಪ್ರತಿಮೆಗೆ ಗುಡಿಯನ್ನು ಕಟ್ಟಿಸಿದರೆ ಕೋಟಿಕಲ್ಪಗಳ ವರೆಗೂ ಸ್ವರ್ಗದಲ್ಲಿ ಸುಖಿಸುತ್ತಾನೆ.

ಸ್ವರ್ಗಾದ್ಭ್ರಷ್ಟೋ ಭವೇದ್ಭೂಯೋ ದೇವೀಭಕ್ತಿಪರಾಯಣಃ ।
ಏವಂ ಚ ಜನ್ಮಸಾಹಸ್ರಂ ಸ್ಮರ ಏವ ಭವೇದ್ಭುವಿ ॥ ೫೯ ॥

ಪ್ರಾಸಾದಂ ಗಾಣಪತ್ಯಂ ಚ ದೇವ್ಯಾ ವಾ ಪ್ರೀತಿಮಾನ್ನರಃ ।
ಕೃತ್ವಾ ಸುರಗಣಾನಾಂ ಚ ಪೂಜಿತೋ ದಿವಿ ಜಾಯತೇ ॥ ೬೦ ॥

ತಥೈವ ರಾಜತಾಮೇತಿ ಭೋಗಾನ್ದೇವೀಪುರೇ ತಥಾ ।
ಅವಿಘ್ನಂ ಸರ್ವಕಾರ್ಯೇಷು ಸದೈವ ಗಣಪೋ ಯಥಾ ॥ ೬೧ ॥

ಆಜ್ಞಾ ನ ಸ್ಖಲಿತಾ ತಸ್ಯ ಸುರಾಸುರನರೇಷು ಚ ।
ತಥೈವ ಸೌರಪ್ರಾಸಾದೇ ಫಲಮೇತಿ ನರೋತ್ತಮಃ ॥ ೬೨ ॥

ಅರೋಗೀ ಸುಪ್ರಸನ್ನಾತ್ಮಾ ಕಾಮದೇವಸಮಪ್ರಭಃ ।
ವರದಸ್ಸರ್ವಲೋಕೇಷು ಯಥಾ ಬ್ರಧ್ನಸ್ತಥಾ ಹಿ ಸಃ ॥ ೬೩ ॥

---

೫೯. ಸ್ವರ್ಗದಿಂದ ಮತ್ತೆ ಈ ಭೂಮಿಯಲ್ಲಿ ಹುಟ್ಟಿದಾಗ ದೇವೀಭಕ್ತನಾಗಿಯೂ ಸ್ಮರನಂತೆ ಸುಂದರನಾಗಿಯೂ, ಸಾವಿರ ಜನ್ಮಗಳವರೆಗೂ ಇರ-ವನು.

೬೦. ದೇವಿಯಲ್ಲಿ ಪ್ರೀತಿಯುಳ್ಳವರು ದೊಡ್ಡ ಮನೆಗಳನ್ನು ಕಟ್ಟಿ ಸುಖಿಸುತ್ತಾರೆ. ಗಣಾಧಿಪತ್ಯವನ್ನು ಹೊಂದುತ್ತಾರೆ. ಸ್ವರ್ಗದಲ್ಲಿದ್ದು ದೇವತೆಗಳಿಗೂ ಪೂಜ್ಯರಾಗಿರುತ್ತಾರೆ.

೬೧. ಈ ಲೋಕದಲ್ಲಿ ರಾಜನಾಗಿ ಹುಟ್ಟಿ ದೇವೀಪುರದಲ್ಲಿ ಭೋಗ ಹೊಂದಿದಂತೆ ಇಲ್ಲಿಯೂ ಹೊಂದುತ್ತಾನೆ ಕೆಲಸಗಳೆಲ್ಲವೂ ನಿರ್ವಿಘ್ನವಾಗಿ ನಡೆಯುತ್ತವೆ.

೬೨. ಆತನು ದೇವದಾನವರಲ್ಲಿಯೂ ನಿರರ್ಗಳವಾದ ಆಜ್ಞೆಯುಳ್ಳವನಾಗುತ್ತಾನೆ. ಅದೇ ರೀತಿ ದೇವತೆಗಳ ಮನೆಯಾದ ಸ್ವರ್ಗದಲ್ಲಿಯೂ ಸುಖಿಸುತ್ತಾನೆ.

೬೩. ಅವನು ರೋಗರಹಿತನೂ, ಒಳ್ಳೆಯ ಬುದ್ಧಿಯುಳ್ಳವನೂ, ಕಾಮನಂತೆ ಸುಂದರನೂ ಆಗಿರುತ್ತಾನೆ. ಎಲ್ಲರಿಗೂ ವರವನ್ನು ಕೊಡುತ್ತಾನೆ.

ಸೂರ್ಯಸ್ಯ ಪ್ರತಿಮಾಯಾಂ ಚ ಗೃಹಂ ಕೃತ್ವಾ ಶಿಲಾಮಯಂ ।
ಕಲ್ಪಕೋಟಿಶತಂ ಭುಕ್ತ್ವಾ ಸ್ವರ್ಗಮುರ್ವೀಶ್ವರೋ ಭವೇತ್ ॥ ೬೪ ॥

ವಿಷ್ಣ್ವಾದಿ ಸರ್ವದೇವಾನಾಮರ್ಚನಂ ಯತ್ಪೃಥಕ್ಪೃಥಕ್ ।
ಪ್ರತ್ಯೇಕಂ ಸಂಪ್ರವಕ್ಷ್ಯಾಮಿ ನರಾಣಾಂ ಹಿತಹೇತವೇ ॥ ೬೫ ॥

ಘೃತಪ್ರದೀಪಂ ಯೋ ದದ್ಯಾನ್ಮಾಸಮೇಕಮಹರ್ನಿಶಂ ।
ದಿವ್ಯಂ ವರ್ಷಾಯುತಂ ಸ್ವರ್ಗೇ ಪೂಜಿತೋ ದೇವಸತ್ತಮೈಃ ॥ ೬೬ ॥

ಘೃತಸ್ನಾನಂ ತಥಾ ಲಿಂಗೇ ಯಃ ಕುರ್ಯಾದ್ಭುವಿ ಮಾನವಃ ।
ಕಲ್ಪಕೋಟಿಸಹಸ್ರಾಣಿ ಮಾಸೈಕೇ ಲಭತೇ ನರಃ ॥ ೬೭ ॥

ತಿಲತೈಲಪ್ರದೀಪಸ್ಯ ತಥಾನ್ಯಸ್ಯಾರ್ಧಕಂ ಫಲಂ ।
ಮಾಸೈಕಂ ಜಲದಾನಸ್ಯ ಫಲೇನೇಶ್ವರತಾಂ ವ್ರಜೇತ್ ॥ ೬೮ ॥

---

೬೪. ಸೂರ್ಯನ ಪ್ರತಿಮೆಗೆ ಕಲ್ಲಿನ ಗುಡಿಯನ್ನು ಕಟ್ಟಿಸಿದರೆ ಸ್ವರ್ಗವನ್ನು ಕೋಟಿಕಲ್ಪಗಳವರೆಗೂ ಅನುಭವಿಸಿ ಅನಂತರ ರಾಜನಾಗಿ ಹುಟ್ಟುತ್ತಾನೆ.

೬೫. ವಿಷ್ಣುವೇ ಆದಿಯಾದ ಎಲ್ಲ ದೇವರ ಪೂಜೆಯನ್ನೂ ಬೇರೆಬೇರೆಯಾಗಿ ಹೇಳುತ್ತೇನೆ.

೬೬. ಒಂದು ತಿಂಗಳ ಕಾಲ ಹಗಲು ರಾತ್ರಿಯೂ ತುಪ್ಪದ ದೀಪವನ್ನು ಹಚ್ಚಿಸುವವನು ಹತ್ತು ಸಾವಿರ ದೇವವರ್ಷಗಳವರೆಗೂ ದೇವತೆಗಳಿಂದ ಸ್ವರ್ಗದಲ್ಲಿ ಪೂಜಿತನಾಗುತ್ತಾನೆ.

೬೭. ಲಿಂಗಕ್ಕೆ ತುಪ್ಪವನ್ನು ಬಳಿಯುತ್ತಾ ಒಂದು ತಿಂಗಳವರೆಗೂ ಸ್ನಾನಮಾಡಿಸುವವನು ಕೋಟಿಸಾವಿರ ಕಲ್ಪಗಳವರೆಗೂ ಸ್ವರ್ಗದಲ್ಲಿ ಪೂಜಿತನಾಗುತ್ತಾನೆ.

೬೮. ಎಳ್ಳೆಣ್ಣೆ ಮುಂತಾದ ಇತರ ಎಣ್ಣೆಗಳಲ್ಲಿ ದೀಪವನ್ನು ಹಚ್ಚಿದರೆ ಹಿಂದೆ ಹೇಳಿದುದರಲ್ಲಿ ಅರ್ಧಫಲವು ಬರುತ್ತದೆ. ಒಂದು ತಿಂಗಳವರೆಗೆ ಜಲದಾನಮಾಡಿದರೆ ಅವನು ಈಶ್ವರನಾಗುತ್ತಾನೆ.

ಧೂಪದಾನೇನ ಗಾಂಧರ್ವಂ ಚಂದನೇ ದ್ವಿಗುಣಂ ಭವೇತ್ ।
ಮೃಗಮದಾಗುರುಸತ್ತ್ವಸ್ಯ ದಾನೇ ಬಹುಫಲಂ ಭವೇತ್ ॥ ೬೯ ॥

ಮಾಲಾಪುಷ್ಪಪ್ರದಾನೇನ ನರಸ್ಸ್ಯಾತ್ತ್ರಿದಶೇಶ್ವರಃ ।
ಶೀತೇ ತೂಲಪಟೀಂ ದತ್ವಾ ಸರ್ವದುಃಖಾತ್ಪ್ರಮುಚ್ಯತೇ ॥ ೭೦ ॥

ಜನ್ಮ ಜನ್ಮಸು ಲಭ್ಯೇತ ಉಷ್ಣೇ ಚ ಶೀತಲಾಂ ಪಟೀಂ ।
ದತ್ವಾ ಚ ನೈವ ಸೀದೇತ ಶಕ್ತ್ಯಾ ವಸ್ತ್ರಂ ದದಾತಿ ಯಃ ॥ ೭೧ ॥

ಚತುರ್ಹಸ್ತಪ್ರಮಾಣಂ ಚ ವರ್ಷ್ಮವೇಷ್ಟಂ ಸುಶೋಭನಂ ।
ಪಿಧಾನಂ ಚರಣಾನಾಂ ಚ ಡತ್ವಾ ಸ್ವರ್ಗಾನ್ನ ಹೀಯತೇ ॥ ೭೨ ॥

ಶಕ್ತ್ಯಾ ಸ್ವರ್ಣಪ್ರದಾನೇನ ಸ್ವರ್ಗೇ ಪೂಜ್ಯೋ ಭವೇನ್ನರಃ ।
ದಶಯೋಜನವಿಸ್ತೀರ್ಣೇ ಮಂಟಪೇ ರೂಪಭಾಗ್ಭವೇತ್ ॥ ೭೩ ॥

---

೬೯. ಧೂಪದಾನಮಾಡಿದರೆ ಗಾಂಧರ್ವಲೋಕ ಸಿಕ್ಕುತ್ತದೆ. ಚಂದನದಾನ ಮಾಡಿದರೆ ಗಾಂಧರ್ವದ ಎರಡರಷ್ಟು ಫಲ ಸಿಕ್ಕುತ್ತದೆ. ಕಸ್ತೂರಿ, ಅಗರುಗಳನ್ನು ದಾನಮಾಡಿದರೆ ಬಹು ಫಲವು ಬರುತ್ತದೆ.

೭೦. ಹೂಮಾಲೆಯನ್ನು ಕೊಟ್ಟರೆ ಅವನು ದೇವತೆಗಳಿಗೆ ಅಧಿಪತಿಯಾಗುತ್ತಾನೆ. ಶೀತಕಾಲದಲ್ಲಿ ಹತ್ತಿಬಟ್ಟೆಯನ್ನು ಕೊಟ್ಟರೆ ಸರ್ವದುಃಖಗಳೂ ನಾಶವಾಗುತ್ತವೆ.

೭೧. ಉಷ್ಣಕಾಲದಲ್ಲಿ ಶೀತವಾದ ಬಟ್ಟೆಯನ್ನು ಕೊಟ್ಟರೆ ಜನ್ಮಜನ್ಮದಲ್ಲಿಯೂ ಅದೇ ರೀತಿಯಾದ ಬಟ್ಟೆಯನ್ನು ಹೊಂದುತ್ತಾನೆ. ದುಃಖಪಡುವುದೂ ಇಲ್ಲ.

೭೨. ನಾಲ್ಕು ಮೊಳದುದ್ದವಿರುವ ಮೈಗೆ ಹೊದೆಯುವ ಶಾಲನ್ನು ಕೊಟ್ಟು ಕಾಲಿಗೆ ಮುಚ್ಚಿಕೊಳ್ಳುವಂತಿದ್ದರೆ ಅವನು ಸ್ವರ್ಗದಿಂದ ಇಳಿಯುವುದೇ ಇಲ್ಲ.

೭೩. ಶಕ್ತಿಗನುಗುಣವಾಗಿ ಚಿನ್ನದ ದಾನವನ್ನು ಮಾಡಿದರೆ ಸ್ವರ್ಗದಲ್ಲಿ ಪೂಜೆ ಹೊಂದುವನು. ಅಲ್ಲದೆ ಹತ್ತುಯೋಜನದಗಲವಿರುವ ಮನೆಯಲ್ಲಿ ರೂಪವಂತನಾಗಿದ್ದುಕೊಂಡು ಸೌಖ್ಯವನ್ನನುಭವಿಸುವನು.

ಸುವರ್ಣಂ ರತ್ನಸಂಯುಕ್ತಂ ದತ್ವಾ ದಶಗುಣಂ ಲಭೇತ್ ।
ವಜ್ರವೈಡೂರ್ಯಗಾರುತ್ಮಮಾಣಿಕ್ಯಾದೀನನರ್ಘತಃ ॥ ೭೪ ॥

ದತ್ವಾ ಲಿಂಗೇ ವಿಧಾನಾಚ್ಚ ಬ್ರಾಹ್ಮಣೇ ವಾ ಯಶಸ್ವಿನಿ ।
ಶತಯೋಜನವಿಸ್ತೀರ್ಣೇ ಮಂಡಲೇಧಿಪತಿರ್ಭವೇತ್ ॥ ೭೫ ॥

ತಥೈವ ಭುವಿ ಜಾತೋಽಪಿ ಸರ್ವಲೋಕಪ್ರರಂಜನಃ ।
ಸುರಭಿದ್ರವ್ಯದಾನೇನ ವಾವದೂಕಶ್ಚ ಸುಂದರಃ ॥ ೭೬ ॥

ರಕ್ತಾಮೃತಸುಕಂಠಶ್ಚ ಪೂಗದಾನಾನ್ನರೋ ಭವೇತ್ ।
ವರದಾಸೀಪ್ರದಾನೇನ ನರಃ ಕಲ್ಪಂ ವಸೇದ್ದಿವಿ ॥ ೭೭ ॥

ನರನಾರೀಪ್ರದಾನೇನ ಉರ್ವ್ಯಾಂ ಜಾತೋ ಜನೇಶ್ವರಃ ।
ತಥೈವ ಭೃತ್ಯದಾನೇನ ಬಹುಭೃತ್ಯೋ ಭವೇದ್ದಿವಿ ॥ ೭೮ ॥

---

೭೪-೭೫. ರತ್ನದೊಡನೆ ಚಿನ್ನವನ್ನು ಸೇರಿಸಿ ದಾನಮಾಡಿದರೆ ಬರಿ ಚಿನ್ನದಕ್ಕಿಂತಲೂ ಹತ್ತರಷ್ಟು ಪುಣ್ಯವನ್ನು ಹೊಂದುತ್ತಾನೆ. ವಜ್ರ, ವೈಡೂರ್ಯ, ಗಾರುತ್ಮತ ಮಾಣಿಕ್ಯಗಳನ್ನು ಯಥಾಶಕ್ತಿಯಾಗಿ ಬ್ರಾಹ್ಮಣನಿಗೆ ದಾನಮಾಡಿದರೆ ಅಥವಾ ದೇವರಿಗೆ ಕೊಟ್ಟರೆ ನೂರು ಯೋಜನದ ವಿಸ್ತಾರವಿರುವ ಮನೆಯಲ್ಲಿ ಒಡೆಯನಾಗಿ ಬಾಳುವನು.

೭೬ ಮತ್ತೆ ಭೂಮಿಯಲ್ಲಿ ಹುಟ್ಟಿ ಲೋಕರಂಜಕನಾಗಿದ್ದುಕೊಂಡು ಬಾಳುವನು. ವಾಸನಾದ್ರವ್ಯಗಳನ್ನು ದಾನಮಾಡಿದರೆ ಸುಂದರನೂ, ಮಾತುಗಾರನೂ ಆಗುವನು.

೭೭. ಅಡಕೆಯನ್ನು ದಾನಮಾಡಿದರೆ ಒಳ್ಳೆಯ ಧ್ವನಿ ಸೌಂದರ್ಯಗಳಿಂದ ಕೂಡಿದ ಕತ್ತುಳ್ಳವನಾಗಿ ಆಗುತ್ತಾನೆ. ಸೂಳೆಯರನ್ನು ದಾನಮಾಡಿದರೆ ಕಲ್ಪಕಾಲ ಸ್ವರ್ಗವು ಸಿಕ್ಕುತ್ತದೆ.

೭೮-೭೯. ದಂಪತಿಗಳನ್ನು ದಾನಮಾಡಿದರೆ ಭೂಮಿಯಲ್ಲಿ ರಾಜನಾಗಿ ಹುಟ್ಟುತ್ತಾನೆ. ಆಳುಗಳನ್ನು ದಾನಮಾಡುವುದರಿಂದ ಸ್ವರ್ಗದಲ್ಲಿ ಬಹುಮಂದಿ ಆಳುಗಳನ್ನು

ಧರಾಯಾಮಕ್ಷಯಾ ವೃದ್ಧಿಃ ಜನ್ಮಜನ್ಮಸು ಜಾಯತೇ ।
ಸರ್ವತೂರ್ಯಪ್ರದಾನೇನ ಗುಣವಾಂಲ್ಲೋಕೇಸಮ್ಮತಃ ॥ ೭೯ ॥

ನೃತ್ಯಗೀತಾದಿಶಾಸ್ತ್ರೇಣ ಗಂಧರ್ವಾಣಾಂ ಪತಿರ್ಭವೇತ್ ।
ದಾಸೀದಾಸಯುತಸ್ಸ್ವರ್ಗೇ ಧನ್ಯೈಸ್ತ್ರೀಭಿರ್ವರೈರ್ವೃತಃ ॥ ೮೦ ॥

ತಥೈವ ಗೋಪ್ರದಾನೇನ ತಾವತ್ಕಾಲಂ ವಸೇದ್ದಿವಿ ।
ಲಿಂಗೇ ದುಗ್ಧಪ್ರದಾನಾಚ್ಚ ನರಃ ಕಲ್ಪಂ ವಸೇದ್ದಿವಿ ॥ ೮೧ ॥

ದಧ್ನಾ ಸ್ನಾನೇನ ದ್ವಿಗುಣಂ ಘೃತೇನ ತು ಶತಾಧಿಕಂ ।
ಅನ್ನಂ ಷಡ್ರಸಂಯುಕ್ತಂ ದತ್ವಾ ಕ್ಷಿತಿಪತಿರ್ಭವೇತ್ ॥ ೮೨ ॥

ತಥೈವ ಪಾಯಸಂ ದತ್ವಾ ಮುನೀನಾಂ ಪ್ರವರೋ ಭುವಿ ।
ಹವಿಷ್ಯಾನ್ನಂ ಮುದಾ ದತ್ವಾ ವೇದಶಾಸ್ತ್ರಾರ್ಥಪಾರಗಃ ॥ ೮೩ ॥

ನಿರಾಮಿಷಪ್ರದಾನಾಚ್ಚ ಬ್ರಹ್ಮಚಾರೀ ವ್ರತೀ ಭವೇತ್ ।
ಮಧುದಾನಾಚ್ಚ ಸೌಭಾಗ್ಯಂ ಗುಡೇನ ಲವಣೇನ ಚ ॥ ೮೪ ॥

---

ಹೊಂದುತ್ತಾನೆ. ಅವನಿಗೆ ಭೂಮಿಯಲ್ಲಿಯೂ ಬಹುವಾದ ವೃದ್ಧಿಯುಂಟಾಗುತ್ತದೆ. ಮಂಗಳವಾದ್ಯಗಳನ್ನು ದಾನಮಾಡಿದರೆ ಗುಣಿಯಾಗಿ ಹುಟ್ಟುತ್ತಾನೆ.

೮೦. ನೃತ್ತಗೀತಗಳನ್ನು ಹೇಳಿಕೊಟ್ಟರೆ ಗಂಧರ್ವಪತಿಯಾಗುತ್ತಾನೆ. ಸ್ವರ್ಗದಲ್ಲಿಯೂ ಆಳುಗಳಿಂದ ಕೂಡಿ ಸುಖಿಸುತ್ತಾನೆ.

೮೧.೮೨ ಗೋವನ್ನು ದಾನಮಾಡಿದರೆ ಕಲ್ಪವರ್ಷಗಳವರೆಗೂ ಸ್ವರ್ಗದಲ್ಲಿ ವಾಸಿಸುತ್ತಾನೆ. ಲಿಂಗದಲ್ಲಿ ಹಾಲನ್ನು ಕೊಟ್ಟರೆ (ಅಭಿಷೇಕ ಮಾದಿದರೆ) ಕಲ್ಪಕಾಲ ಸ್ವರ್ಗದಲ್ಲಿ ವಾಸಿಸುತ್ತಾನೆ. ಮೊಸರಿನಿಂದ ಲಿಂಗಕ್ಕೆ ಸ್ನಾನಮಾಡಿಸಿದರೆ ಹಾಲಿನ ಎರಡರಷ್ಟೂ, ತುಪ್ಪದಿಂದ ಮಾಡಿಸಿದರೆ ನೂರರಷ್ಟು ಹೆಚ್ಚು ಪುಣ್ಯವು ಬರುತ್ತದೆ. ಷಡ್ರಸಯುಕ್ತವಾದ ಅನ್ನವನ್ನು ದಾನಮಾಡಿದರೆ ರಾಜನಾಗಿ ಹುಟ್ಟುತ್ತಾನೆ.

೮೩. ಪಾಯಸದ ದಾನಮಾಡಿದರೆ ಋಷಿಶ್ರೇಷ್ಠನಾಗುವನು. ಹವಿಷ್ಯಾನ್ನವನ್ನು ದಾನಮಾಡಿದರೆ ವೇದಶಾಸ್ತ್ರಗಳನ್ನು ಓದಿ ಅದರಲ್ಲಿ ಪಂಡಿತನಾಗುವನು.

೮೪-೮೬. ಮಾಂಸವರ್ಜಿತವಾದ ಆಹಾರದಾನದಿಂದ ಬ್ರಹ್ಮಚಾರಿಯಾಗುವನು. ಮಧು (ಜೇನು) ದಾನದಿಂದ ಸೌಭಾಗ್ಯವನ್ನೂ, ಬೆಲ್ಲ, ಉಪ್ಪುಗಳಿಂದ ಸಕ್ಕರೆ

ಶರ್ಕರಾಭಿಶ್ಚ ಲಾವಣ್ಯಂ ಸರ್ವಲೋಕೇಷು ಗೀಯತೇ ।
ದೈವಾನಾಂ ಶಂಭುಲಿಂಗಾನಾಮರ್ಚಾಂ ಕೃತ್ವಾ ವಿಧಾನತಃ ॥ ೮೫ ॥

ಅನುಕ್ರಮೇಣ ಸ್ವರ್ಗಾದೌ ಲೋಕಾನಾಂ ಸ ಪತಿರ್ಭವೇತ್ ।
ಜಲಪಾತ್ರಾದಿದಾನೇನ ನರಸ್ಸ್ವರ್ಗಾನ್ನ ಹೀಯತೇ ॥ ೮೬ ॥

ಶಯ್ಯಾಭೋಜನದಾನೇನ ನರಃ ಪಾಪಾತ್ಪ್ರಮುಚ್ಯತೇ ।
ತಸ್ಮಾದರ್ಚಾ ಪ್ರಕರ್ತವ್ಯಾ ಸ್ವಯಂಭೂನಾಂ ಭವಾರ್ಥಿಭಿಃ ॥ ೮೭ ॥

ಲೋಕಾನಾಂ ಚ ಹಿತಾರ್ಥಾಯ ದೇವಾಸ್ತಿಷ್ಠಂತಿ ಸಮ್ಮುಖಾಃ ।
ಸಕೃತ್ಪ್ರದಕ್ಷಿಣಂ ಕೃತ್ವಾ ಶಂಭುಲಿಂಗೇಷು ಪಂಡಿತಃ ॥ ೮೮ ॥

ದಿವ್ಯಂ ವರ್ಷಶತಂ ಪೂರ್ಣಂ ಸ್ವರ್ಗಮತ್ತಿ ನರೋತ್ತಮಃ ।
ಏವಮೇವ ಕ್ರಮೇಣೈವ ನಮಸ್ಕಾರೈಸ್ಸ್ವಯಂಭುವಃ ॥ ೮೯ ॥

ಲೋಕವಂದ್ಯೋ ವ್ರಜೇತ್ಸ್ವರ್ಗಂ ತಸ್ಮಾನ್ನಿತ್ಯಂ ಸಮಾಚರೇತ್ ।
ಲಿಂಗರೂಪಸ್ಯ ದೇವಸ್ಯ ಯೋ ಧನಂ ಹರತೇ ನರಃ ॥ ೯೦ ॥

---

ಯಿಂದಲೂ, ಲಾವಣ್ಯವೂ ಬರುತ್ತದೆಂದು ಪ್ರಸಿದ್ಧಿಯಾಗಿದೆ. ಶಂಭುವಿನ ಲಿಂಗವೇ ಮುಂತಾದ ಪ್ರತಿಮೆಗಳಿಗೆ ಪೂಜೆಮಾಡಿದರೆ ಆ ದೇವರ ಲೋಕದಲ್ಲಿ ಸುಖಿಸುತ್ತಾನೆ. ನೀರು ಕುಡಿಯುವ ಪಾತ್ರೆಗಳನ್ನು ದಾನಮಾಡಿದರೆ ಸ್ವರ್ಗದಿಂದ ಹಿಂತಿರುಗುವುದಿಲ್ಲ.

೮೭. ಹಾಸಿಗೆ ಊಟಗಳನ್ನು ದಾನಮಾಡುವುದರಿಂದ ಪಾಪದಿಂದ ಮುಕ್ತನಾಗುತ್ತಾನೆ. ಬ್ರಹ್ಮ, ವಿಷ್ಣು, ಶಿವಾದಿಪ್ರತಿಮೆಗಳ ಅರ್ಚನೆಯನ್ನು ಮಾಡಬೇಕು. ಆ ರೀತಿ ಮಾಡಿದರೆ ಸ್ವರ್ಗವು ಸಿಕ್ಕುತ್ತದೆ.

೮೮-೯೩. ಲೋಕದ ಹಿತಕ್ಕೋಸ್ಕರವೇ ದೇವತೆಗಳು ಇರತಕ್ಕದ್ದು. ಈಶ್ವರ ಲಿಂಗಕ್ಕೆ ಒಂದಾವರ್ತಿ ಪ್ರದಕ್ಷಿಣೆ ಮಾಡಿದರೆ ದೇವತೆಗಳು ನೂರುವರ್ಷಗಳವರೆಗೆ ಸ್ವರ್ಗದಲ್ಲಿರುತ್ತಾರೆ. ಈ ರೀತಿಯಾಗಿಯೇ ವಿಷ್ಣುಬ್ರಹ್ಮರುಗಳಿಗೂ ನಮಸ್ಕರಿಸಿದರೆ ಲೋಕದಲ್ಲಿ ಗೌರವವನ್ನು ಹೊಂದಿ ಸ್ವರ್ಗವನ್ನು ಹೊಂದುತ್ತಾನೆ. ಆದ್ದರಿಂದ ದಿನವೂ ನಮಸ್ಕರಿಸಬೇಕು. ಲಿಂಗರೂಪಿಯಾದ ಶಿವನ ಧನವನ್ನು ಕದ್ದರೆ ರೌರವ ನರಕವನ್ನು

**ಸ ಚ ರೌರವಮಾಸಾದ್ಯ ಹರಣಾತ್ಕೀಟತಾಂ ವ್ರಜೇತ್ ।**
**ದಾತುಃ ಪೂಜಾಂ ಚ ಲಿಂಗಾರ್ಥೇ ಹರೇಶ್ಚಾಪ್ಯಾದದಾತಿ ಯಃ ॥ ೯೧ ॥**

**ಕುಲಕೋಟಿಸಹಸ್ರೇಣ ನರಕಾನ್ನ ನಿವರ್ತತೇ ।**
**ಜಲಪುಷ್ಪಾದಿದೀಪಾರ್ಥೇ ವಸುಚಾನ್ಯದ್ಗೃಹೀತವಾನ್ ॥ ೯೨ ॥**

**ಪಶ್ಚಾನ್ನ ದೀಯತೇ ಲೋಭಾದಕ್ಷಯಂ ನರಕಂ ವ್ರಜೇತ್ ।**
**ದಾಸೀಂ ಹೃತ್ವಾ ತು ಲಿಂಗಸ್ಯ ನರಕಾನ್ನನಿವರ್ತತೇ ॥ ೯೩ ॥**

**ಕಾಮಾತೋ ಮಾತರಂ ಗಚ್ಛೇನ್ನಗಚ್ಛೇಚ್ಛಿವಚೇಟಿಕಾಂ ।**
**ಶಿವದಾಸೀಂ ತತೋ ಗತ್ವಾ ಶಿವಸ್ವಹರಣೇ ತಥಾ ॥ ೯೪ ॥**

**ಭಕ್ಷಣಾದನ್ನಪಾನಾನಾಂ ನರೋ ದುರ್ಗತಿಮಾಪ್ನುಯಾತ್ ।**
**ಅತೋ ದೇವಲವಿಪ್ರೋ ಯೋ ನರಕಾನ್ನ ನಿವರ್ತತೇ ॥ ೯೫ ॥**

**ದೇವದ್ರವ್ಯಂ ಸುಸಂಪೂಜ್ಯ ಲಿಂಗಾರ್ಚನಫಲಂ ಲಭೇತ್ ।**
**ವೇಶ್ಯಾಯಾಂ ಚ ನರೋ ಗತ್ವಾ ಕೀಟಜಾತಿಷು ಜಾಯತೇ ॥ ೯೬ ॥**

---

ಹೊಂದುವನು. ಕೀಟವಾಗಿ ಹುಟ್ಟುವನು. ಲಿಂಗಕ್ಕೆ ಪೂಜೆಗೆ ಕೊಟ್ಟಿರುವ ಹಣವನ್ನು ಕದ್ದರೆ ಕೋಟಿಸಾವಿರ ಕುಲಗಳವರೆಗೂ ನರಕದಿಂದ ಬಿಡುಗಡೆ ಇಲ್ಲ. ನೀರು, ಹೂ, ದೀಪಗಳಿಗೆ ಕೊಟ್ಟ ಹಣವನ್ನು ತೆಗೆದುಕೊಂಡರಾಗಲಿ, ಮತ್ತೆ ಕೊಡದಿದ್ದರಾಗಲೀ, ಅಕ್ಷಯ ನರಕವನ್ನು ಹೊಂದುತ್ತಾನೆ. ಲಿಂಗಕ್ಕೆ ಬಿಟ್ಟಿರುವ ದಾಸಿಯನ್ನು ಅಪಹರಿಸಿದರೆ ನರಕದಿಂದ ಹಿಂತಿರುಗುವುದಿಲ್ಲ.

೯೪-೯೫. ಕಾಮದಿಂದ ಕೂಡಿದವನು ತಾಯಿಯನ್ನಾದರೂ ರಮಿಸಬಹುದು. ಶಿವದಾಸಿಯರನ್ನು ರಮಿಸಬಾರದು. ಶಿವದಾಸಿಯನ್ನು ರಮಿಸಿದರೂ, ಶಿವಸ್ವತ್ತನ್ನು ಅಪಹರಿಸಿದರೂ, ಆ ಶಿವನ ಅನ್ನ ನೀರುಗಳನ್ನು ಸೇವಿಸಿದರೂ ನರಕ ಬರುವುದು. ಆದ್ದರಿಂದಲೇ ಪೂಜಾರಿಯು ನರಕದಿಂದ ಹಿಂತಿರುಗುವುದಿಲ್ಲ.

೯೬. ದೇವದ್ರವ್ಯವನ್ನು ಕಾಪಾಡಿದರೆ ಲಿಂಗವನ್ನು ಪೂಜಿಸಿದ ಫಲವು ಬರುತ್ತದೆ. ಆ ಲಿಂಗದಾಸಿಯರಲ್ಲಿ ರಮಿಸಿದರೆ ಕೀಟ ಜಾತಿಯಲ್ಲಿ ಹುಟ್ಟುತ್ತಾನೆ.

ತಸ್ಮಾದ್ವೇಶ್ಯಾಜನಾನಾಂ ಚ ದೌಷ್ಟ್ಯಮೇವ ಹಿತಂ ಭವೇತ್ ।
ಅತಸ್ತು ಗಣಿಕಾಂ ಸ್ಪೃಸ್ಟ್ವಾ ನರಸ್ಸ್ನಾನಾದ್ವಿಶುದ್ಧ್ಯತಿ ॥ ೯೭ ॥

ಮಲಿನಾಂ ದುರ್ಗತಿಂ ಯಾತಿ ಬಹುಪೂರುಷಸಂಶ್ರಯಾತ್ ।
ವೇಶ್ಯಾ ತಪಸ್ವಿನೀ ಯಾ ಚ ದೇವಾರ್ಚನರತಾ ಸದಾ ॥ ೯೮ ॥

ಪತಿವ್ರತಪರಾ ಶುದ್ಧಾ ಸ್ವರ್ಗಂ ಚಾಕ್ಷಯಮಶ್ನುತೇ ।
ಗಣಿಕಾಂ ಮಾತೃವದ್ಯಸ್ತು ಸದಾಸನ್ನಾಂ ಪ್ರಪಶ್ಯತಿ ॥ ೯೯ ॥

ದೇವವತ್ಸುರಲೋಕೇಷು ನಿಖಿಲಂ ಭೋಗಮಶ್ನುತೇ ।
ಸುರಾಸುರನರಾಣಾಂ ಚ ವಂದನೀಯೋ ಯಥಾ ಹರಿಃ ॥ ೧೦೦ ॥

ತಥಾಯಂ ಸರ್ವಲೋಕೇಶಃ ಸರ್ವಭೂತೈಕಪಾವನಃ ।
ದೇವದಾಸಸ್ಸದಾ ಯಸ್ತು ದೇವಭೃತ್ಯೇಷು ಲೋಲುಪಃ ॥ ೧೦೧ ॥

ಸ ಚ ಗಚ್ಛತಿ ಲೋಕೇಶೋ ದೇವಲೋಕೇ ಮಹೀಯತೇ ।
ಏತೇಷಾಮೇವ ಲಿಂಗಾನಾಂ ಕಾರಯಿತ್ವಾ ಚ ಮಂಟಪಂ ॥ ೧೦೨ ॥

---

೯೭. ಇದನ್ನು ನೋಡಿದರೆ ವೇಶ್ಯೆಯರು ದುಷ್ಟರಾಗಿದ್ದೇ ಚೆನ್ನಾಗಿ ಕಾಣುತ್ತದೆ. ಆದ್ದರಿಂದಲೇ ಸೂಳೆಯನ್ನು ಮುಟ್ಟಿದರೆ ಮನುಷ್ಯನು ಸ್ನಾನಮಾಡಬೇಕು.

೯೮-೧೦೪. ಅನೇಕ ಜನರನ್ನು ಹೊಂದುವುದರಿಂದ ಆವೇಶ್ಯೆಯು ಕೊಳೆಕಳು ವೇಶ್ಯೆಯು ಪತಿವ್ರತೆಯಾಗಿ ದೇವತಾರ್ಚನೆಯಲ್ಲಿ ಆಸಕ್ತಳಾಗಿದ್ದರೆ ಅಕ್ಷಯವಾದ ಸ್ವರ್ಗವು ಲಭಿಸುತ್ತದೆ. ಸೂಳೆಯ ಹತ್ತಿರದಲ್ಲಿ ಓಡಿಯಾಡುತ್ತಿದ್ದರೂ ತಾಯಿಯಂತೆ ತಿಳಿಯುತ್ತಿರುವವನು ದೇವಲೋಕದಲ್ಲಿ ದೇವತೆಗಳಂತೆ ಎಲ್ಲಾ ಭೋಗಗಳನ್ನೂ ಹೊಂದುತ್ತಾನೆ. ಆ ರೀತಿ ತಾಯಿಯಂತೆ ನೋಡಿದವನು ಹರಿಯಂತೆ ಪೂಜ್ಯನು. ರಾಜನಂತೆಯೇ ಸರ್ವರಿಗೂ ಒಡೆಯನಾಗಿ ಪ್ರೀತಿಪಾತ್ರನಾಗಿರುತ್ತಾನೆ. ಯಾವನು ದೇವದಾಸನಾಗಿ ದೇವದಾಸರಲ್ಲಿಯೇ ಆಸಕ್ತನಾಗಿರುವನೋ ಅವನು ಲೋಕೇಶನಾಗಿ ದೇವಲೋಕದಲ್ಲಿ ಸುಖಿಸುತ್ತಾನೆ. ಈ ರೀತಿಯಾದ ದಾಸರಿಗೆ ಮನೆಯನ್ನು

ಶಕ್ತ್ಯಾಶ್ರಯಂ ಲಭತೇ ನಾಕಂ ಶೃಣು ಕಾಲಸ್ಯ ನಿಶ್ಚಯಂ ।
ಹಾಯನೈಕಂ ತೃಣೇನೈವ ಶರಕಾಂಡೇನ ತಚ್ಛತಂ ॥ ೧೦೩ ॥

ಅಯುತಂ ತ್ವನ್ಯಕಾಷ್ಠೇನ ಲಕ್ಷಂ ಖದಿರದಾರುಣಾ ।
ಕೋಟಿಕೋಟಿ ಚ ಪಾಷಾಣೈಃ ಸದ್ವೃಕ್ಷೈರ್ಯತ್ನಸಂಯುತೈಃ ॥ ೧೦೪ ॥

ತಸ್ಮಾತ್ಸರ್ವಪ್ರಯತ್ನೇನ ಮಂಟಪಂ ಕಾರಯೇದ್ಬುಧಃ ।
ಯಾವತ್ಕಾಲಂ ವಸೇತ್ಸ್ವರ್ಗೇ ನರೋ ಮಂಟಪಕಾರಕಃ ॥ ೧೦೫ ॥

ತಾವತ್ಕಾಲಂ ಚ ಹರಣೇ ನರೋ ದುರ್ಗತಿಮಾಪ್ನುಯಾತ್ ।
ಜನಾನಾಂ ನಿಚಯೇ ರಮ್ಯೇ ವಸ್ತೂನಾಂ ಕ್ರಯ ವಿಕ್ರಯೇ ॥ ೧೦೬ ॥

ಆಶ್ರಯೇ ಚಾಧ್ವಗಾನಾಂ ಚ ನದೀನದಸಮಾಗಮೇ ।
ದೇವಾನಾಂ ಮಂಟಪಂ ಕೃತ್ವಾ ಯತ್ಫಲಂ ಲಭತೇ ನರಃ ॥ ೧೦೭ ॥

ತತ್ಫಲಂ ಸಮವಾಪ್ನೋತಿ ದ್ವಿಗುಣಂ ವಿಪ್ರಮಂದಿರೇ ।
ಅನಾಥಸ್ಯ ಚ ದೀನಸ್ಯ ಶ್ರೋತ್ರಿಯಸ್ಯ ವಿಶೇಷತಃ ॥ ೧೦೮ ॥

---

ಶಕ್ತ್ಯಾನುಸಾರ ಕಟ್ಟಿಸಿದವನು ಸ್ವರ್ಗವನ್ನು ಹೊಂದುತ್ತಾನೆ. ಹುಲ್ಲಿನಿಂದ ಅವರಿಗೆ ಮನೆಜುನ್ನು ಕಟ್ಟಿಸಿಕೊಟ್ಟರೆ ಒಂದು ವರ್ಷಕಾಲವೂ, ಲಾಳದ ಕಡ್ಡಿಯನ್ನು ಹಾಕಿಸಿ ಕಟ್ಟಿಸಿದರೆ ನೂರು ವರ್ಷಗಳೂ, ಬೇರೆಯಮರದಿಂದ ಹತ್ತುಸಾವಿರ ವರ್ಷಗಳೂ, ಕಗ್ಗಲಿಮುಂತಾದ ಮರಗಳಿಂದ ಕಟ್ಟಿಸಿದರೆ ಲಕ್ಷವರ್ಷವೂ, ಕಲ್ಲಿನಿಂದ ಕಟ್ಟಿಸಿದರೆ ಕೋಟಿಕೋಟಿ ವರ್ಷಗಳವರೆಗೂ ಸ್ವರ್ಗದಲ್ಲಿ ಸುಖಿಸುತ್ತಾರೆ.

೧೦೫-೧೧೩. ಆದ್ದರಿಂದ ತಿಳಿದವರು ಮಂಟಪವನ್ನು ಕಟ್ಟಿಸಬೇಕು. ಮಂಟಪವನ್ನು ಮಾಡಿಸಿದವನು ಎಷ್ಟುರವರೆಗೂ ಸ್ವರ್ಗದಲ್ಲಿರುವನೋ ಅದನ್ನು ಕದ್ದವನು ಅಷ್ಟುರವರೆಗೂ ನರಕದಲ್ಲಿರುತ್ತಾನೆ. ಜನಗಳು ಸೇರುವ ಜಾಗ, ರಮ್ಯವಾದ ಜಾಗ, ವ್ಯಾಪಾರದ ಸ್ಥಳ, ದಾರಿಗರಿಗೆ ಆಶ್ರಯವಿರುವ ಜಾಗ, ನದಿಗಳ ಸಂಗಮುಗಳಲ್ಲಿ ದೇವರಿಗೆ ಮಂಟಪಗಳನ್ನು ಕಟ್ಟಿಸಿದರೆ ಬರುವ ಫಲದ ಎರಡರಷ್ಟು ಫಲವು ಬ್ರಾಹ್ಮಣರಿಗೆ ಮನೆಯನ್ನು ಕಟ್ಟಿಸಿದರೆ ಬರುತ್ತದೆ. ಅನಾಥನೂ, ಬಡವನೂ, ಶ್ರೋತ್ರಿಯನೂ,

ಕಾರಯಿತ್ವಾ ಗೃಹಂ ರಮ್ಯಂ ನರಸ್ಸ್ವರ್ಗಾನ್ನ ಹೀಯತೇ ।
ಯ ಇದಂ ಶೃಣುಯಾನ್ನಿತ್ಯಂ ಪುಣ್ಯಾಖ್ಯಾನಮನುತ್ತಮಂ ॥ ೧೦೯ ॥

ಅಕ್ಷಯಂ ಲಭತೇ ಸ್ವರ್ಗಂ ಪ್ರಾಸಾದಾದೇಃ ಫಲಂ ಲಭೇತ್ ।
ಧನಿನಾಂ ಚೇಶ್ವರಾಣಾಂ ಚ ತಥಾ ಪುಣ್ಯವತಾಂ ಪುನಃ ॥ ೧೧೦ ॥

ಪಾಠಯಿತ್ವಾ ಪಠಿತ್ವಾ ತು ನರಸ್ಸ್ವರ್ಗಾನ್ನ ಹೀಯತೇ ।
ದೇವಾನಾಂ ದಾಸದಾಸೀನಾಂ ಸದಾ ದೇವಾಲಯೇಷು ಚ ॥ ೧೧೧ ॥

ಪಠೇದ್ಯಸ್ತು ಸದಾ ವಿಪ್ರೋ ಮೋಕ್ಷಮಾರ್ಗಂ ಸ ಗಚ್ಛತಿ ।
ನೃಪಾಣಾಮೀಶ್ವರಾಣಾಂ ಚ ಧನಿನಾಂ ಗುಣಿನಾಂ ಪುರಃ ॥ ೧೧೨ ॥

ಪಠಿತ್ವಾ ಮೋಕ್ಷಮಾಪ್ನೋತಿ ಶ್ರವಣಾತ್ತತ್ಫಲಂ ಲಭೇತ್ ॥ ೧೧೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಧರ್ಮಾಖ್ಯಾನೇ
ಷಟ್ಪಂಚಾಶತ್ತಮೋಽಧ್ಯಾಯಃ

---

ಆದವನಿಗೆ ರಮ್ಯವಾದ ಮನೆಯನ್ನು ಕಟ್ಟಿಸಿದರೆ ಸ್ವರ್ಗದಿಂದ ಚ್ಯುತಿಯೇ ಇರುವುದಿಲ್ಲ. ಈ ಪುಣ್ಯಾಖ್ಯಾನವನ್ನು ಕೇಳಿದವನು ಮನೆಗಳನ್ನು ಕಟ್ಟಿಸಿ ಕೊಟ್ಟ ಫಲವನ್ನು ಹೊಂದಿ ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾನೆ. ಇದನ್ನು ಕೇಳಿದವನು ಧನಿಕರ, ರಾಜರ, ಪುಣ್ಯವಂತರ ಮನೆಯಂತಹ ಮನೆಯನ್ನು ಹೊಂದುತ್ತಾನೆ. ಹೇಳಿದವನೂ, ಕೇಳಿದವನೂ ಸ್ವರ್ಗದಿಂದ ಚ್ಯುತರಾಗುವುದಿಲ್ಲ ದೇವತೆಗಳ ವಿಷ್ಣುಭಕ್ತರ ಮನೆಗಳಲ್ಲಿ ದೇವಸ್ಥಾನಗಳಲ್ಲಿ ಇದನ್ನು ಯಾವಾಗಲೂ ಓದಿದರೆ ಮೋಕ್ಷವನ್ನು ಹೊಂದುತ್ತಾರೆ. ರಾಜರುಗಳು, ಯಜಮಾನರುಗಳು, ಧನಿಕರು, ಗುಣಿಗಳು, ಇವರ ಎದುರಿಗೆ ಓದಿದರೂ ಮೋಕ್ಷವನ್ನು ಹೊಂದುತ್ತಾನೆ ಹೇಳುವುದರಿಂದಲೂ ಆ ಫಲವು ಬರುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಧರ್ಮಾಖ್ಯಾನವೆಂಬ
ಐವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

-X-

ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

॥ ಸಪ್ತಪಂಚಾಶತ್ತಮೋಽಧ್ಯಾಯಃ ॥



॥ ದ್ವಿಜಾ ಊಚುಃ ॥

ಪುಣ್ಯಾನಾಂ ಕಃ ಪರಃ ಪುಣ್ಯೋ ಮರ್ತ್ಯಲೋಕೇ ದ್ವಿಜೋತ್ತಮ ।
ಸುಲಭೋ ಮರ್ತ್ಯಪೂಜ್ಯಸ್ತು ಮುನೀನಾಂ ಚ ತಪಸ್ವಿನಾಂ ॥ ೧ ॥

ಚಾತುರ್ವರ್ಣ್ಯಾಶ್ರಮಾಣಾಂ ಚ ಪಾಪಪುಣ್ಯವತಾಂ ನೃಣಾಂ ।
ಗುಣಾಗುಣವತಾಂ ಚೈವ ವರ್ಣಾವರ್ಣವತಾಂ ತಥಾ ॥ ೨ ॥

॥ ವ್ಯಾಸ ಉವಾಚ ॥

ಸರ್ವೇಷಾಮೇವ ಭೂತಾನಾಂ ರುದ್ರಾಕ್ಷೇಣ ಯತೋ ವರಃ ।
ದರ್ಶನಾದ್ಯಸ್ಯ ಲೋಕಾನಾಂ ಪಾಪರಾಶಿಃ ಪ್ರಲೀಯತೇ ॥ ೩ ॥

---

## ಐವತ್ತೇಳನೆಯ ಅಧ್ಯಾಯವು

೧. ಬ್ರಾಹ್ಮಣರು ಹೇಳಿದರು- ಎಲೈ ಬ್ರಾಹ್ಮಣನೇ! ಪುಣ್ಯಗಳಲ್ಲೆಲ್ಲಾ ಶ್ರೇಷ್ಠವಾದ ಪುಣ್ಯವಾವುದು? ಮುನಿಗಳಿಗೂ, ತಪಸ್ವಿಗಳಿಗೂ ಸುಲಭವಾಗಿ ಗೌರವಿಸತಕ್ಕ ಪುಣ್ಯವಾವುದು?

೨. ಚತುರ್ವರ್ಣಗಳೂ ನಾಲ್ಕು ಆಶ್ರಮಗಳವರೂ, ಗುಣವಂತರೂ, ನಿರ್ಗುಣರೂ, ಜಾತಿಯನ್ನೇ ಹೊಂದದವರೂ, ಕೂಡ ಗೌರವಿಸುವ ಪುಣ್ಯವಾವುದು?

೩. ವ್ಯಾಸನು ಹೇಳಿದನು- ಪ್ರಾಣಿಗಳೊಳಗೆಲ್ಲಾ ರುದ್ರಾಕ್ಷಿಯನ್ನು ಹಾಕಿಕೊಂಡಿರುವವನು ಶ್ರೇಷ್ಠನು. ಅವನನ್ನು ನೋಡುವುದರಿಂದಲೇ ಜನಗಳ ಪಾಪವು ನಾಶವಾಗುತ್ತವೆ.

ಸ್ಪರ್ಶನಾದ್ದಿವಮಾಪ್ನೋಽಶಿ ಧಾರಣಾನ್ಮೋಕ್ಷತಾಂ ವ್ರಜೇತ್ ।
ಶಿರಸ್ಯುರಸಿ ಬಾಹೌ ಚ ರುದ್ರಾಕ್ಷಂ ಧಾರಯೇತ್ತು ಯಃ ॥ ೪ ॥

ಸಚೇಶಾಸನಸಮೋ ಲೋಕೇ ಮಖೇ ಸರ್ವತ್ರಗೋಚರಃ ।
ಯತ್ರ ತಿಷ್ಠತ್ಯಸೌ ವಿಪ್ರಃ ಸದೇಶಃ ಪುಣ್ಯವಾನ್ಭವೇತ್ ॥ ೫ ॥

ತಂ ದೃಷ್ಟ್ವಾಪ್ಯಥವಾ ಸ್ಪೃಷ್ಟ್ವಾ ನರಃ ಪೂಯೇತ ಕಲ್ಮಷಾತ್ ।
ಯಜ್ಜಪ್ಯಂ ತರ್ಪಣಂ ದಾನಂ ಸ್ನಾನಮರ್ಚಾಪ್ರದಕ್ಷಿಣಂ ॥ ೬ ॥

ಯತ್ಕಿಂಚಿತ್ಕುರುತೇ ಪುಣ್ಯಂ ನಿಖಿಲಂ ತದನಂತರ ।
ತೀರ್ಥಾನಾಂ ಚ ಮಹತ್ತೀರ್ಥಂ ರುದ್ರಾಕ್ಷಸ್ಯ ಫಲಂ ದ್ವಿಜಾಃ ॥ ೭ ॥

ಅಸ್ಯೈವ ಧಾರಣಾದ್ದೇಹೇ ಪಾಪಾತ್ಪೂತೋಽಪವರ್ಗಭಾಕ್ ।
ಗೃಹೀತ್ವಾ ಚಾಕ್ಷಮಾಲಾಂ ಚ ಬಹ್ಮಗ್ರಂಥಿಯುತಾಂ ಶಿವಾಂ ॥ ೮ ॥

ಯಜ್ಜಪ್ತಂ ಚ ಕೃತಂ ದಾನಂ ಸ್ತೋತ್ರಮಂತ್ರಂ ಸುರಾರ್ಚನಂ ।
ಸರ್ವಂ ಚಾಕ್ಷಯತಾ ಮೇತಿ ಪಾಪಂ ಚ ಕ್ಷಯತಾಂ ವ್ರಜೇತ್ ॥ ೯ ॥

---

೪–೫. ಆ ರುದ್ರಾಕ್ಷಿಯನ್ನು ಮುಟ್ಟುವುದರಿಂದ ಸ್ವರ್ಗವನ್ನೂ, ಧರಿಸುವುದರಿಂದ ಮೋಕ್ಷವನ್ನೂ ಹೊಂದುತ್ತಾನೆ. ತಲೆ, ಎದೆ, ತೋಳುಗಳಲ್ಲಿ ರುದ್ರಾಕ್ಷಿಯನ್ನು ಧರಿಸಿದವನು ಈಶ್ವರನಿಗೆ ಸಮನು ಎಲ್ಲಾ ಪೂಜೆಗಳಲ್ಲಿಯೂ ಶ್ರೇಷ್ಠನು. ಈ ಬ್ರಾಹ್ಮಣನು ಇರುವ ಸ್ಥಳವೇ ಪುಣ್ಯಪ್ರದವಾದ ದೇಶವು.

೬-೯. ಆತನನ್ನು ಮುಟ್ಟಿದರೂ, ನೋಡಿದರೂ, ಅವನ ಪಾಪಗಳೆಲ್ಲವೂ ಪರಿಹಾರವಾಗುತ್ತವೆ. ಆ ರುದ್ರಾಕ್ಷವನ್ನು ಹಾಕಿಕೊಂಡು ಜಪಮಾಡಿದರೂ, ತರ್ಪಣ ದಾನ, ಸ್ನಾನ, ಪೂಜೆ, ನಮಸ್ಕಾರ ಇವುಗಳನ್ನು ಮಾಡಿದರೂ, ಇನ್ನೂ ಯಾವ ಪುಣ್ಯಕೆಲಸವನ್ನು ಮಾಡಿದರೂ ಕೂಡ ಬಹು ಫಲವನ್ನು ಹೊಂದುತ್ತಾನೆ. ರುದ್ರಾಕ್ಷಿಯ ಫಲವು, ತೀರ್ಥಗಳೊಳಗೆಲ್ಲ ಉತ್ತಮವಾದ ತೀರ್ಥವು ಇದನ್ನು ಧರಿಸುವುದರಿಂದ ಪಾಪವನ್ನು ಕಳೆದುಕೊಂಡು ಮೋಕ್ಷವನ್ನು ಹೊಂದುವನು. ಬ್ರಹ್ಮಗಂಟಿನಿಂದ ಕೂಡಿದ ಅಕ್ಷಮಾಲೆಯನ್ನು ಹಿಡಿದು ಮಾಡಿದ ಜಪ, ದಾನ ಸ್ತೋತ್ರ, ಮಂತ್ರ, ದೇವತಾರ್ಚನೆ ಇವೆಲ್ಲವೂ ಅಕ್ಷಯವಾಗುತ್ತನೆ ಪಾಪವು ನಾಶವಾಗುತ್ತದೆ.

ಮಾಲಾಯಾ ಲಕ್ಷಣಂ ಬ್ರೂಮಃ ಶ್ರೂಯತಾಂ ದ್ವಿಜಸತ್ತಮಾಃ ।
ತಸ್ಯಾಸ್ತು ಲಕ್ಷಣಂ ಜ್ಞಾತ್ವಾ ಮೋಕ್ಷಮಾರ್ಗಂ ಪ್ರಲಪ್ಸ್ಯಥ ॥ ೧೦ ॥

ನಿರ್ಯೋನೀಕೀಟವಿದ್ಧಂ ಚ ಭಗ್ನಲಿಂಗಂ ಯಥಾಕ್ರಮಂ ।
ಅನ್ಯೋನ್ಯಬೀಜಲಗ್ನಂ ಚ ಮಾಲಾಯಾಂ ಪರಿವರ್ಜಯೇತ್ ॥ ೧೧ ॥

ಸ್ವಯಂ ಚ ಗ್ರಥಿತಾ ಯಾ ಚ ಶ್ಲಥಾನ್ಯೋನ್ಯಪ್ರಸಜ್ಜಿತಾ ।
ಶೂದ್ರಾದಿಗ್ರಹತಾಽಶುದ್ಧಾ ದೂರಾತ್ತಾಂ ಪರಿವರ್ಜಯೇತ್ ॥ ೧೨ ॥

ಸರ್ಪಾಕಾರಾ ಚ ನಕ್ಷತ್ರಾ ಮೇರುಣಾತ್ಯಂತಸಂಯುತಾ ।
ಸಂಸಕ್ತಗ್ರಂಥಿಶುದ್ಧಾ ಯಾ ಪ್ರಶಸ್ತಾ ತಾಂ ಜಪೇದ್ಬುಧಃ ॥ ೧೩ ॥

ಏಭಿಶ್ಶುದ್ಧಾಂ ಚ ಮಾಲಾಂ ಚ ಧೃತ್ವಾಂಗುಷ್ಠೇನ ಕರ್ಷಯೇತ್ ।
ಮಧ್ಯಮಾಲಗ್ನಕಂ ಬೀಜಂ ಜಪವ್ಯಂ ಚ ಯಥಾಕ್ರಮಂ ॥ ೧೪ ॥

---

೧೦. ಎಲೈ ಬ್ರಾಹ್ಮಣರಿರಾ ! ಮಾಲೆಯ ಲಕ್ಷಣವನ್ನು ಹೇಳುತ್ತೇನೆ, ಕೇಳಿ ಆದರ ಲಕ್ಷಣವನ್ನು ತಿಳಿದರೇನೇ ಮೋಕ್ಷವನ್ನು ಹೊಂದುತ್ತಾರೆ.

೧೧. ತೊಟ್ಟಿಲ್ಲದ, ಹುಳುಕಾದ, ಲಿಂಗವಿಲ್ಲದ, ಬಿಡಿಬಿಡಿಯಾಗಿರುವ ರುದ್ರಾಕ್ಷಿಗಳನ್ನು ಮಾಲೆಗೆ ಸೇರಿಸಬಾರದು. ಅವು ಅಯೋಗ್ಯವು.

೧೨. ಸರದೊಳಗೆ ಒಂದಕ್ಕೊಂದು ತಗುಲಿಕೊಳ್ಳುವಂತಿರಬೇಕು. ಅಳ್ಳಕವಾಗಿರಬಾರದು. ಶೂದ್ರಾದಿಗಳು ಪೋಣಿಸಬಾರದು. ಈ ರೀತಿಯಿಲ್ಲದಿದ್ದರೆ ಅದನ್ನು ದೂರದಲ್ಲಿಯೇ ಬಿಟ್ಟುಬಿಡಬೇಕು.

೧೩. ಸರ್ಪದ ಆಕಾರವಿರಬೇಕು. ಮಧ್ಯದಲ್ಲಿ ನಕ್ಷತ್ರಗಳಿರಬೇಕು. ಮೇರು ನೆಂಬ ದೊಡ್ಡ ಮಣಿಗಳಿಂದ ಕೂಡಿರಬೇಕು ಗಂಟು ಶುದ್ಧವಾಗಿರಬೇಕು. ಇದು ಜಪಕ್ಕೆ ಯೋಗ್ಯವಾದುದು.

೧೪. ಈ ರೀತಿ ಶುದ್ಧವಾದ ಮಾಲೆಯನ್ನು ನೋಡಿ ತೆಗೆದುಕೊಂಡು ಮಧ್ಯದ ೆರಳು ಕೆಬ್ಬೆರಳುಗಳಿಂದ ಹಿಡಿದುಕೊಂಡು ಹೆಬ್ಬೆಟ್ಟಿನಿಂದ ಎಳೆಯುತ್ತಾ ಜಪಿಸಬೇಕು.

ಹಸ್ತಸಂಭ್ರಮಣೇನ್ನೈವ ಮೇರ್‍ವಾಮರ್ಶಂ ಪುನಃ ಪುನಃ ।
ಸಂಖ್ಯಾತಂ ಯಜ್ಞಪೇನ್ಮಂತ್ರಮಸಂಖ್ಯಾತಂ ಚ ನಿಷ್ಫಲಂ ॥ ೧೫ ॥

ಸರ್ವೇಷಾಮೇವ ದೇವಾನಾಂ ಜಪೇನ್ಮಂತ್ರಂ ಸ್ವಮಾಲಯಾ ।
ಪ್ರಯತಸ್ಸಕಲೇ ತೀರ್ಥೇ ಕೋಟಿಕೋಟಿಗುಣಂ ಭವೇತ್ ॥ ೧೬ ॥

ಶುದ್ಧಾಯಾಮೇವ ಭೂಮ್ಯಾಂ ತು ಮೇಧ್ಯೈಕವೃಕ್ಷಮೂಲತಃ ।
ಗೋಷ್ಠೇ ಚತುಷ್ಪಥಾಗಾರೇ ವಿಷ್ಣುಮಂತ್ರಂ ಶಿವಸ್ಯ ಚ ॥ ೧೭ ॥

ಗಾಣಪತ್ಯಸ್ಯ ಸೂರ್ಯಸ್ಯ ಲಿಂಗೇನಂತಫಲಂ ಲಭೇತ್ ।
ಶೂನ್ಯಾಗಾರೇ ಶವಸ್ಯಾಗ್ರೇ ಶ್ಮಶಾನೇ ಚ ಚತುಷ್ಪಥೇ ॥ ೧೮ ॥

ದೇವೀಮಂತ್ರಂ ಜಪೇದ್ಯಸ್ತು ಸದ್ಯಸ್ಸಿದ್ಧ್ಯತಿ ಸಾಧಕಃ ।
ಯಾವಂತೋ ವೈದಿಕಾ ಮಂತ್ರಾಃ ಪೌರಾಣಾಶ್ಚಾಗಮೋದ್ಭವಾಃ ॥ ೧೯ ॥

ಸರ್ವಂ ರುದ್ರಾಕ್ಷಮಾಲಾಯಾಂ ದಯಿತಂ ಮೋಕ್ಷದಾಯಕಂ ।
ರುದ್ರಾಕ್ಷಸ್ರವಜಂ ಶುದ್ಧಂ ಜಲಂ ಶಿರಸಿ ಧಾರಯೇತ್ ॥ ೨೦ ॥

---

೧೫ ಬಾರಿಬಾರಿಗೂ ಎಷ್ಟಾಯಿತು, ಇನ್ನು ಎಷ್ಟಿದೆ, ಎಂಬ ಆತುರದಿಂದ ದಪ್ಪ ಮಣಿಯನ್ನು ಬಾರಿಬಾರಿಗೂ ಮುಟ್ಟುತ್ತಿರಬಾರದು. ಹಾಗೆ ಮುಟ್ಟುತ್ತಿದ್ದರೂ ಲೆಕ್ಕ ಮಾಡದೆ ಜಪಿಸಿದರೂ, ಅವು ಫಲವಿಲ್ಲದೇ ಹೋಗುತ್ತವೆ.

೧೬. ಯಾವ ದೇವರ ಮಂತ್ರಜಪವೇ ಆಗಲಿ, ತನ್ನ ಮಾಲೆಯನ್ನು ಹಿಡಿದೇ ಮಾಡಬೇಕು. ಹಾಗೆ ಮಾಡಿದರೆ ಕೋಟಿಯಷ್ಟು ಹೆಚ್ಚು ಗುಣವನ್ನು ಕೊಡುತ್ತವೆ.

೧೭-೨೧. ವಿಷ್ಣು, ಶಿವ, ಗಣಪತಿ, ಸೂರ್ಯ, ಇವರ ಮಂತ್ರಗಳನ್ನು ಶುದ್ಧವಾದ ಭೂಮಿ, ಪೂಜ್ಯವಾದ ಮರದ ಬುಡ, ದನಗಳ ಕೊಟ್ಟಿಗೆ, ಚೌಕವಾದ ಮನೆ, ಲಿಂಗವಿರುವ ಜಾಗಗಳಲ್ಲಿ ಜಪಿಸಬೇಕು. ಅನಂತವಾದ ಫಲವನ್ನು ಕೊಡುತ್ತದೆ ಪಾಳುಮನೆ, ಹೆಣದಮುಂದೆ, ಶ್ಮಶಾನ, ನಾಲ್ಕುದಾರಿ ಸೇರುವ ಚೌಕಗಳಲ್ಲಿ ದೇವಿಯ ಮಂತ್ರವನ್ನು ಜಪಿಸಿದರೆ ಕೂಡಲೇ ಸಿದ್ಧಿಸುತ್ತದೆ. ವೇದದ ಮಂತ್ರಗಳು, ಪುರಾಣದ ಮಂತ್ರಗಳು, ಇವನ್ನು ರುದ್ರಾಕ್ಷಮಾಲೆಯಲ್ಲಿ ಜಪಿಸಿದರೆ ಮೋಕ್ಷ ಸಿಕ್ಕುತ್ತದೆ. ರುದ್ರಾಕ್ಷಿಯಿಂದ ಸೋರುವಂತೆ ನೀರನ್ನು ತಲೆಯಮೇಲೆ ಬಿಟ್ಟುಕೊಳ್ಳಬೇಕು. ಎಲ್ಲಾ ಪಾಪವು

ಸರ್ವಸ್ಮಾತ್ಕಲ್ಮಷಾತ್ಪೂತಃ ಪುಣ್ಯಂ ಭವತಿ ಚಾಕ್ಷಯಂ ।
ರುದ್ರಾಕ್ಷಸ್ಯ ಚ ಪ್ರತ್ಯೇಕಂ ಬೀಜಂ ಪ್ರತ್ಯೇಕನಿರ್ಜರಂ ॥
ಧಾರಯೇದ್ಯಸ್ತ್ವಸೌ ಮರ್ತ್ಯಃ ಸುರಾಣಾಂ ಸತ್ತಮೋ ಭವೇತ್ ॥ ೨೦ ॥

॥ ದ್ವಿಜಾ ಊಚುಃ ॥

ರುದ್ರಾಕ್ಷಸ್ತು ಕುತೋ ಜಾತಃ ಕುತೋ ವಾ ಮೇಧ್ಯತಾಂ ಗತಃ ।
ಕಿಮರ್ಥಂ ಸ್ಥಾವರೋ ಭೂಮೌ ಕೇನೈವ ಚ ಪ್ರಚಾರಿತಃ ॥ ೨೨ ॥

॥ ವ್ಯಾಸ ಉವಾಚ ॥

ಪುರಾ ಕೃತಯುಗೇ ವಿಪ್ರಾಃ ತ್ರಿಪುರೋ ನಾಮ ದಾನವಃ ।
ಸುರಾಣಾಂ ಚ ವಧಂ ಕೃತ್ವಾ ಅಂತರಿಕ್ಷಪುರೇ ಹಿ ಸಃ ॥ ೨೩ ॥

ಪ್ರಣಾಶೇ ಸರ್ವಲೋಕಾನಾಂ ಸ್ಥಿತೋ ಬ್ರಹ್ಮವರೇಣ ಚ ।
ಶುಶ್ರಾವ ಶಂಕರೋ ಭೀಮಂ ದೇವೈರೀಶೋ ನಿವೇದಿತಂ ॥ ೨೪ ॥

ತತೋಽಜಗವಮಾಸಜ್ಯ ಬಾಣಮಂತಕಸನ್ನಿಭಂ ।
ಧೃತ್ವಾ ತಂ ಚ ಜಘಾನಾಥ ದೃಷ್ಟಂ ದಿವ್ಯೇನ ಚಕ್ಷುಷಾ ॥ ೨೫ ॥

---

ಹೋಗಿ ಅಕ್ಷಯವಾದ ಪುಣ್ಯವು ಬರುತ್ತದೆ. ರುದ್ರಾಕ್ಷಿಯ ಒಂದೊಂದು ಬೀಜವೂ ಒಂದೊಂದು ದೇವತೆಯು. ಅದನ್ನು ಮೈಯಲ್ಲಿ ಧರಿಸಿದವನು ದೇವತಾಶ್ರೇಷ್ಠನಾಗುತ್ತಾನೆ.

೨೨. ಬ್ರಾಹ್ಮಣನು ಹೇಳಿದನು- ರುದ್ರಾಕ್ಷಿಯು ಎಲ್ಲಿ ಹುಟ್ಟಿತು ? ಅದು ಹೇಗೆ ಪವಿತ್ರವಾಯಿತು ? ಅದೇಕೆ ಜಡವಾಯಿತು ? ಅದನ್ನು ಪ್ರಸಿದ್ಧಿಮಾಡಿದವರಾರು ?

೨೩.-೨೪. ವ್ಯಾಸನು ಹೇಳಿದನು- ಎಲೈ ಬ್ರಾಹ್ಮಣರಿರಾ ! ಪೂರ್ವದಲ್ಲಿ ಕೃತಯುಗದಲ್ಲಿ ತ್ರಿಪುರನೆಂಬ ದಾನವನು ದೇವತೆಗಳನ್ನು ಕೊಂದು ಬ್ರಹ್ಮನ ವರದಿಂದ ಅಂತರಿಕ್ಷದ ಪಟ್ಟಣದಲ್ಲಿದ್ದುಕೊಂಡು ಲೋಕಗಳನ್ನು ನಾಶಮಾಡುತ್ತಿದ್ದನು. ಅದನ್ನು ದೇವತೆಗಳು ಶಂಕರನಿಗೆ ಹೇಳಿದರು.

೨೫. ಆಗ ಶಿವನು ಧನುಸ್ಸಿನಲ್ಲಿ ಉಗ್ರವಾದ ಬಾಣವನ್ನು ಸೇರಿಸಿ ಆ ಪಟ್ಟಣವನ್ನು ದಿವ್ಯಚಕ್ಷುಸ್ಸಿನಿಂದ ತಿಳಿದು ನಾಶಪಡಿಸಿದನು.

ಸ ಪಪಾತ ಮಹೀಪೃಷ್ಠೇ ಮಹೋಲ್ಕೇವ ಚ್ಯುತೋ ದಿವಃ ।
ಘಟನವ್ಯಾಕುಲಾದ್ರುದ್ರಾತ್ಪತಿತಾಃ ಸ್ವೇದಬಿಂದವಃ ॥ ೨೬ ॥

ತತ್ರಾಶ್ರುಬಿಂದುತೋ ಜಾತೋ ಮಹಾರುದ್ರಾಕ್ಷಕಃ ಕ್ಷಿತೌ ।
ಅಸ್ಯೈವ ಚ ಫಲಂ ಜೀವಾ ನ ಜಾನಂತ್ಯತಿಗುಹ್ಯತಃ ॥ ೨೭ ॥

ತತಃ ಕೈಲಾಸಶಿಖರೇ ದೇವದೇವಂ ಮಹೇಶ್ವರಂ ।
ಪ್ರಣಮ್ಯ ಶಿರಸಾ ಭೂಮೌ ಸ್ಕಂದೋ ವಚನಮಬ್ರವೀತ್ ॥ ೨೮ ॥

॥ ಸ್ಕಂದ ಉವಾಚ ॥

ರುದ್ರಾಕ್ಷಸ್ಯ ಫಲಂ ತಾತ ಜ್ಞಾತುಮಿಚ್ಛಾಮಿ ತತ್ತ್ವತಃ ।
ಜಪ್ಯೇಽಥ ಧಾರಣೇ ಕಿಂ ವಾ ದರ್ಶನೇ ಸ್ಪರ್ಶನೇಪಿ ವಾ ॥ ೨೯ ॥

॥ ಈಶ್ವರ ಉವಾಚ ॥

ಲಕ್ಷಂತು ದರ್ಶನಾತ್ಪುಣ್ಯಂ ಕೋಟಿರ್ಸ್ಯೈ ಸ್ಪರ್ಶನೇನ ಚ ।
ದಶಕೋಟಿಫಲಂ ಪುಣ್ಯಂ ಧಾರಣಾಲ್ಲಭತೇ ನರಃ ॥ ೩೦ ॥

---

೨೬. ಆಗ ಆ ಪಟ್ಟಣವು ಅಂತರಿಕ್ಷದಿಂದ ದೊಡ್ಡಕೊಳ್ಳಿಯಂತೆ ಕೆಳಕ್ಕೆ ಬಿದ್ದಿತು. ಇದನ್ನು ನಾಶಮಾಡುವುದರಲ್ಲಿ ಆಸಕ್ತನಾದ ರುದ್ರನ ದೇಹದಿಂದ ಬೆವರಿನ ಹನಿಗಳು ಬಿದ್ದುವು.

೨೭. ಆ ಬಿದ್ದ ಬೆವರಿನ ಹನಿಗಳಿಂದ ರುದ್ರಾಕ್ಷಿಗಳು ಹುಟ್ಟಿದುವು. ಇದರ ಫಲವನ್ನು ಪ್ರಾಣಿಗಳು ಗುಟ್ಟಾದುದರಿಂದ ತಿಳಿದುಕೊಂಡಿಲ್ಲ

೨೮. ಅನಂತರ ಕೈಲಾಸದ ಶಿಖರದಲ್ಲಿ ಮಹೇಶ್ವರನನ್ನು ಸ್ಕಂದನು ನಮುಸ್ಕರಿಸಿ ಇಂತೆಂದನು,

೨೯. ಸ್ಕಂದನು ಹೇಳಿದನು- ಎಲೈ ತಾತನೇ! ರುದ್ರಾಕ್ಷಿಯ ಫಲವನ್ನು ತಿಳಿಯಲಿಚ್ಛಿಸುತ್ತೇನೆ. ಅದನ್ನು ಹಿಡಿದು ಜಪಿಸಿದರೆ, ಅದನ್ನು ಧರಿಸಿದರೆ, ನೋಡಿದರೆ, ಮುಟ್ಟಿದರೆ ಫಲಗಳೇನು?

೩೦. ಈಶ್ವರನು ಹೇಳಿದನು- ನೋಡುವುದರಿಂದ ಲಕ್ಷದಷ್ಟು ಪುಣ್ಯವೂ, ಮುಟ್ಟುವುದರಿಂದ ಕೋಟಿ ಪುಣ್ಯವೂ, ಧರಿಸಿದರೆ ಹತ್ತುಕೋಟಿ ಪುಣ್ಯವೂ ಸಹ ಬರುತ್ತದೆ.

ಲಕ್ಷಕೋಟಿಸಹಸ್ರಾಣಿ ಲಕ್ಷಕೋಟಿಶತಾನಿ ಚ ।
ಜಪ್ತ್ವಾಸ್ಯ ಲಭತೇ ಪುಣ್ಯಂ ನಾತ್ರ ಕಾರ್ಯಾ ವಿಚಾರಣಾ ॥ ೩೧ ॥

ಉಚ್ಛಿಷ್ಟೋ ವಾ ವಿಕರ್ಮಸ್ಥೋ ಯುಕ್ತೋ ವಾ ಸರ್ವಪಾತಕೈಃ ।
ಮುಚ್ಯತೇ ಸರ್ವಪಾಪೇಭ್ಯೋ ರುದ್ರಾಕ್ಷಧಾರಣೇನ ವಾ ॥ ೩೨ ॥

ಕಂಠೇ ರುದ್ರಾಕ್ಷಮಾಧಾಯ ಶ್ವಾಪದೋ ಮ್ರಿಯತೇ ಯದಿ ।
ಸೋಽಪಿ ರುದ್ರತ್ವಮಾಪ್ನೋತಿ ಕಿಂ ಪುನರ್ಮಾನುಷಾದಯಃ ॥ ೩೩ ॥

ಧ್ಯಾನಧಾರಣಹೀನೋಽಪಿ ರುದ್ರಾಕ್ಷಂ ಯದಿ ಧಾರಯೇತ್ ।
ಸರ್ವಪಾಪವಿನಿರ್ಮುಕ್ತಃ ಸ ಯಾತಿ ಪರಮಾಂ ಗತಿಂ ॥ ೩೪ ॥

॥ ಕಾರ್ತಿಕೇಯ ಉವಾಚ ॥

ಏಕವಕ್ತ್ರಂ ದ್ವಿತ್ರಿಚತುಷ್ಪಂಚಷಡ್ವಕ್ತ್ರಮೇವ ಚ ।
ಸಪ್ತಾಷ್ಟನವವಕ್ತ್ರಂ ಚ ದಶೈಕಾದಶವಕ್ತ್ರಕಂ ॥ ೩೫ ॥

---

೩೧. ಈ ರುದ್ರಾಕ್ಷಿಯ ಜಪಸರದಲ್ಲಿ ಜಪಿಸಿದರೆ ಲಕ್ಷಕೋಟಿಸಾವಿರವೂ, ಮತ್ತು ಲಕ್ಷಕೋಟಿಗಳ ನೂರರಷ್ಟು ಪುಣ್ಯವನ್ನು ಹೊಂದುತ್ತಾನೆ. ಸಂಶಯವಿಲ್ಲ.

೩೨. ಎಲ್ಲಾ ಜಾತಿಯಿಂದಲೂ ಹೊರಗಿರಲಿ, ಜಾತಿಯ ಕರ್ಮಕ್ಕಿಂತಲೂ ಬೇರೆಯ ಕರ್ಮದಲ್ಲಿರಲಿ, ಎಲ್ಲಾ ಪಾಪದಿಂದಲೂ ಕೂಡಿರಲಿ, ಈ ರುದ್ರಾಕ್ಷಿಯನ್ನು ಧರಿಸಿದ್ದರೆ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ.

೩೩. ಕ್ರೂರಮೃಗಗಳಾದರೂ ಕತ್ತಿನಲ್ಲಿ ರುದ್ರಾಕ್ಷಿ ಮಾಲೆಯನ್ನು ಧರಿಸಿ ಸತ್ತರೆ ಅದೂ ಕೂಡ ರುದ್ರನ ಸಾರೂಪ್ಯವನ್ನು ಹೊಂದುತ್ತವೆ. ಹೀಗಿರುವಲ್ಲಿ ಮನುಷ್ಯರು ಧರಿಸಿದರೆ ಹೇಳತಕ್ಕದ್ದೇನಿದೆ ?

೩೪. ಧ್ಯಾನಧಾರಣೆಗಳಿಲ್ಲದಿದ್ದರೂ ಸರಿಯೆ, ರುದ್ರಾಕ್ಷಿಯನ್ನು ಧರಿಸಿದರೆ ಪಾಪಗಳಿಂದ ಮುಕ್ತನಾಗಿ ಉತ್ತಮಗತಿಯನ್ನು ಹೊಂದುತ್ತಾನೆ.

೩೫-೩೬. ಕುಮಾರಸ್ವಾಮಿಯು ಹೇಳಿದನು- ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು, ಒಂಭತ್ತು, ಹತ್ತು, ಹನ್ನೊಂದು,

ರುದ್ರಾಕ್ಷಂ ದ್ವಾದಶಾಸ್ಯಂ ಚ ತ್ರಯೋದಶಮುಖಂ ತಥಾ ।
ಚತುರ್ದಶಾಸ್ಯಸಂಯುಕ್ತಂ ಸ್ವಯಮುಕ್ತಂ ಚ ಶಂಕರಂ ॥ ೩೬ ॥

ತೇಷಾಂ ಚ ತನ್ಮುಖಾನಾಂ ಚ ದೇವತಾಃ ಕಾಶ್ಚ ತದ್ವದ ।
ಗುಣಾ ವಾ ಕೀದೃಶಾಸ್ತೇಷಾಂ ದೋಷೋ ವಾ ಜಗದೀಶ್ವರ
ಯದಿ ಮೇಽನುಗ್ರಹೋ ವಾಸ್ತಿ ಕಥಯಸ್ವ ಯಥಾರ್ಥತಃ ॥ ೩೭ ॥

॥ ಈಶ್ವರ ಉವಾಚ ॥

ಏಕವಕ್ತ್ರಶ್ಶಿವಸ್ಸಾಕ್ಷಾದ್ಬ್ರಹ್ಮಹತ್ಯಾಂ ವ್ಯಪೋಹತಿ ।
ತಸ್ಮಾತ್ತು ಧಾರಯೇದ್ದೇಹೇ ಸರ್ವಪಾಪಕ್ಷಯಾಯ ಚ ॥ ೩೮ ॥

ಶಿವಲೋಕಂ ಸ ಗಚ್ಛೇಚ್ಚ ಶಿವೇನ ಸಹ ಮೋದತೇ ।
ಮಹತಾ ಪುಣ್ಯಯೋಗೇನ ಹರಾನುಗ್ರಹಕಾರಣಾತ್ ॥ ೩೯ ॥

ಏಕವಕ್ತ್ರಂ ಲಭೇನ್ಮರ್ತ್ಯೋ ಮೋಕ್ಷಮಾರ್ಗಂ ಷಡಾನನ ।
ದೇವದೇವೋ ದ್ವಿವಕ್ತ್ರಂ ಚ ಯಸ್ತು ಧಾರಯತೇ ನರಃ ॥ ೪೦ ॥

---

ಹನ್ನೆರಡು, ಹದಿಮೂರು, ಹದಿನಾಲ್ಕು, ಹದಿನೈದು ಈ ರೀತಿ ರುದ್ರಾಕ್ಷಿಯು ಮುಖಗಳುಳ್ಳವೆಂದು ಕೇಳಿದ್ದೇನೆ. ಇವೆಲ್ಲವೂ ಮಂಗಳಕರಗಳು.

೩೭. ರುದ್ರಾಕ್ಷಿಗೂ, ರುದ್ರಾಕ್ಷಿಯ ಮುಖಗಳಿಗೂ, ದೇವತೆಗಳಾವುವು ? ಅವುಗಳ ಗುಣಗಳಾದರೂ ಯಾವುವು ? ಅವುಗಳಲ್ಲಿರುವ ದೋಷವೇನು ? ನನ್ನಲ್ಲಿ ಅನುಗ್ರಹವಿಟ್ಟು ಇವೆಲ್ಲವನ್ನೂ ತಿಳಿಸು.

೩೮. ಈಶ್ವರನು ಹೇಳಿದನು- ಒಂದು ಮುಖದ ರುದ್ರಾಕ್ಷಿಯು ಶಿವಸ್ವರೂಪ ವಾದುದು. ಬ್ರಹ್ಮಹತ್ಯೆಯನ್ನು ನಾಶಮಾಡುತ್ತದೆ. ಆದ್ದರಿಂದ ಅದನ್ನು ಧರಿಸಿದರೆ ಪಾಪವೆಲ್ಲವೂ ನಾಶವಾಗುತ್ತದೆ.

೩೯-೪೧. ಅವನು ಶಿವಲೋಕಕ್ಕೆ ಹೋಗಿ ಶಿವನೊಡನೆ ಸುಖಿಸುತ್ತಾನೆ. ಮಹಾಪುಣ್ಯದಿಂದಲೂ, ಹರನ ಅನುಗ್ರಹದಿಂದಲೂ, ಮೋಕ್ಷಸುಖವನ್ನು ತೋರಿ ಸುವ ಆ ಒಂದು ಮುಖದ ರುದ್ರಾಕ್ಷಿಯು ಸಿಕ್ಕುತ್ತದೆ. ಎರಡು ಮುಖವುಳ್ಳದ್ದು

ಸರ್ವಪಾಪಕ್ಷಯಂ ಯಾತಿ ಯದುಗ್ರ್ಯಂ ಗೋವಧಾದಿಕಂ ।
ಸ್ವರ್ಗಂ ಚಾಕ್ಷಯಮಾಪ್ನೋತಿ ದ್ವಿವಕ್ತ್ರಧಾರಣಾತ್ತತಃ ॥ ೪೧ ॥

ತ್ರಿವಕ್ತ್ರಮನಲಃ ಸಾಕ್ಷಾದ್ಯಸ್ಯ ದೇಹೇ ಪ್ರತಿಷ್ಠತಿ ।
ತಸ್ಯ ಜನ್ಮಾರ್ಜಿತಂ ಪಾಪಂ ದಹತ್ಯಗ್ನಿರಿವೇಂಧನಂ ॥ ೪೨ ॥

ಸ್ತ್ರೀಹತ್ಯ ಬ್ರಹ್ಮಹತ್ಯಾಭ್ಯಾಂ ಬಹೂನಾಂ ಚೈವ ಹತ್ಯಯಾ ।
ಯತ್ಪಾಪಂ ಲಭತೇ ಮರ್ತ್ಯಃ ಸರ್ವಂ ನಶ್ಯತಿ ತತ್ಕ್ಷಣಾತ್ ॥ ೪೩ ॥

ಯತ್ಫಲಂ ವಹ್ನಿಪೂಜಾಯಾಮಗ್ನಿಕಾರ್ಯೇ ಘೃತಾಹುತೌ ।
ತತ್ಫಲಂ ಲಭತೇ ಧೀರಃ ಸ್ವರ್ಗಂ ಚಾನಂತಮಶ್ನುತೇ ॥ ೪೪ ॥

ತ್ರಿವಕ್ತ್ರಂ ಧಾರಯೇದ್ಯಸ್ತು ಸ ಚ ಬ್ರಹ್ಮಸಮೋ ಭುವಿ ।
ನಿಚಿತಂ ದುಷ್ಕೃತಂ ಸರ್ವಂ ದಹೇಜ್ಜನ್ಮನಿ ಜನ್ಮನಿ ॥ ೪೫ ॥

ನ ಚೋದರೇ ಭವೇದ್ರೋಗೋ ನ ಚೈವಾಪಟುತಾಂ ವ್ರಜೇತ್ ।
ಪರಾಜಯಂ ನ ಲಭತೇ ನಾಗ್ನಿನಾ ದಹ್ಯತೇ ಗೃಹಂ ॥ ೪೬ ॥

---

ದೇವದೇವನು. ಅವನ್ನು ಧರಿಸಿದರೆ ಪಾಪಗಳು ಹೋಗುವುದಲ್ಲದೆ ಗೋವಧೆಯ ಪಾಪವು ಕೂಡ ಹೋಗುತ್ತದೆ. ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾನೆ.

೪೨. ಮೂರು ಮುಖವಿರುವುದಕ್ಕೆ ಅನಲವೆಂದು ಹೆಸರು. ಅದನ್ನು ಧರಿಸಿದವನು ಪಾಪಗಳನ್ನು ನಾಶಮಾಡಿಕೊಳ್ಳುತ್ತಾನೆ.

೪೩. ಸ್ತ್ರೀಹತ್ಯೆ, ಬ್ರಹ್ಮಹತ್ಯೆ, ಮತ್ತಾವ ಹತ್ಯೆಯಾದರೂ ಸರಿಯೇ, ಅವೆಲ್ಲವೂ ಒಡನೆಯೇ ಹೋಗುತ್ತವೆ.

೪೪. ವಹ್ನಿಪೂಜೆಯ ಫಲವೂ, ಅಗ್ನಿಕಾರ್ಯದ ಫಲವೂ, ಹೋಮಗಳ ಫಲವೂ, ಇದನ್ನು ಧರಿಸುವುದರಿಂದ ಬರುತ್ತದೆ. ಅಕ್ಷಯ ಸ್ವರ್ಗವೂ ಬರುತ್ತದೆ.

೪೫. ಮೂರು ಮುಖದ ರುದ್ರಾಕ್ಷಿಯನ್ನು ಧರಿಸಿದರೆ ಬ್ರಹ್ಮನ ಸಮನಾಗುತ್ತಾನೆ. ಜನ್ಮ ಜನ್ಮದ ಪಾಪಗಳನ್ನು ನಾಶಮಾಡುತ್ತದೆ.

೪೬. ರೋಗ ಬರುವುದಿಲ್ಲ. ಸೋಮಾರಿಯಾಗುವುದಿಲ್ಲ ಅಪಜಯವನ್ನು ಹೊಂದುವುದಿಲ್ಲ. ಮನೆಗೆ ಬೆಂಕಿ ಬಿದ್ದು ನಾಶವಾಗುವುದೂ ಇಲ್ಲ.

ಏತಾನ್ಯನ್ಯಾನಿ ಸರ್ವಾಣಿ ವಜ್ರಾದೇಶ್ಚ ನಿವಾರಣಂ ।
ನಾಶುಭಂ ವಿದ್ಯತೇ ಕಿಂಚಿತ್ರಿವಕ್ತ್ರಸ್ಯ ಚ ಧಾರಣಾತ್ ॥ ೪೭ ॥

ಚತುರ್ವಕ್ತ್ರಃ ಸ್ವಯಂ ಬ್ರಹ್ಮಾ ಯಸ್ಯ ದೇಹೇ ಪ್ರತಿಷ್ಠತಿ ।
ಸ ಭವೇತ್ಸರ್ವಶಾಸ್ತ್ರಜ್ಞೋ ದ್ವಿಜೋ ವೇದವಿದಾಂ ವರಃ ॥ ೪೮ ॥

ಸರ್ವಧರ್ಮಾರ್ಥತತ್ತ್ವಜ್ಞಃ ಸ್ಮಾರ್ತಃ ಪೌರಾಣಿಕೋ ಭವೇತ್ ।
ಯತ್ಪಾಪಂ ನರಹತ್ಯಾಯಾಂ ಬಹುಸತ್ತ್ವೇಷು ವೇಶ್ಮಸು ॥ ೪೯ ॥

ತತ್ಸರ್ವಂ ದಹತೇ ಶೀಘ್ರಂ ಚತುರ್ವಕ್ತ್ರಸ್ಯ ಧಾರಣಾತ್ ।
ಪಂಚವಕ್ತ್ರಸ್ಸ್ವಯಂ ರುದ್ರಃ ಕಾಲಾಗ್ನಿರ್ನಾಮ ನಾಮತಃ ॥ ೫೦ ॥

ಅಗಮ್ಯಾಗಮನಂ ಚೈವ ಅಭಕ್ಷ್ಯಸ್ಯ ಚ ಭಕ್ಷಣಂ ।
ಮುಚ್ಯತೇ ನಾತ್ರ ಸಂದೇಹೋ ಪಂಚವಕ್ತ್ರಸ್ಯ ಧಾರಣಾತ್ ॥ ೫೧ ॥

ಮಹೇಶಸ್ತುಷ್ಯತೇ ನಿತ್ಯಂ ಭೂತಾನಾಮಧಿಪೋ ಭವೇತ್ ।
ಸದ್ಯೋಜಾತಸ್ತಥೇಶಾನಸ್ತತ್ಪುರುಷೋಽಘೋರ ಏವ ಚ ॥ ೫೨ ॥

---

೪೭. ಇವೇ ಮುಂತಾದ ಪ್ರಯೋಜನಗಳುಂಟು. ಸಿಡಿಲು ಮುಂತಾದುವು ಬೀಳುವುದಿಲ್ಲ. ಈ ಮೂರು ಮುಖದ್ದನ್ನು ಧರಿಸಿದರೆ ಅಶುಭವೆಂಬುದೇ ಇರುವುದಿಲ್ಲ.

೪೮. ನಾಲ್ಕು ಮುಖವುಳ್ಳದ್ದು ಬ್ರಹ್ಮನು. ಅದನ್ನು ಧರಿಸಿದರೆ ಶಾಸ್ತ್ರಜ್ಞನೂ, ವೇದವೇದಾಂಗಗಳನ್ನು ತಿಳಿದವನೂ ಆಗುವನು.

೪೯-೫೧ ಧರ್ಮಗಳನ್ನು ಬಲ್ಲವನೂ, ಸ್ಮೃತಿಯನ್ನು ಬಲ್ಲವನೂ, ಪೌರಾಣಿಕನೂ, ಆಗುತ್ತಾನೆ. ಬ್ರಹ್ಮಹತ್ಯಾದಿ ಸಕಲ ಪಾಪಗಳನ್ನೂ ಈ ಚತುರ್ವಕ್ತ್ರದ ಧಾರಣವು ನಾಶಮಾಡುತ್ತದೆ. ಐದು ಮುಖವುಳ್ಳದ್ದು ಕಾಲಾಗ್ನಿರುದ್ರನೆಂಬ ಹೆಸರುಳ್ಳದ್ದು. ಅದನ್ನು ಧರಿಸಿದರೆ ಅಗಮ್ಯಾಗಮನ ದೋಷವೂ, ಅಭಕ್ಷ್ಯ, ಭಕ್ಷಣ ದೋಷವೂ, ಹೋಗುತ್ತದೆ, ಸಂದೇಹವಿಲ್ಲ.

೫೨-೫೩. ಅದನ್ನು ಧರಿಸಿದ್ದರೆ ಮಹೇಶನು ಸಂತೋಷಗೊಳ್ಳುತ್ತಾನೆ. ಭೂತಗಳಿಗೆ ಅಧಿಪತಿಯಾಗುತ್ತಾನೆ. ಸದ್ಯೋಜಾತ ಈಶಾನ, ತತ್ಪುರುಷ, ವಾಮದೇವ,

ವಾಮದೇವ ಇಮೇ ದೇವಾ ವಕ್ತ್ರೈಃ ಪಂಚಭಿರಾಶ್ರಿತಾಃ ।
ಅತಃ ಸರ್ವತ್ರ ಭೂಯಿಷ್ಠಃ ಪಂಚವಕ್ತ್ರೋ ಧರಾತಲೇ ॥ ೫೩ ॥

ರುದ್ರಸ್ಯಾತ್ಮಜರೂಪೋಽಯಂ ತಸ್ಮಾತ್ತಂ ಧಾರಯೇದ್ಬುಧಃ ।
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ॥ ೫೪ ॥

ತಾವತ್ಕಾಲಂ ಶಿವಸ್ಯಾಗ್ರೇ ಪೂಜನೀಯಸ್ಸುರಾಸುರೈಃ ।
ಸಾರ್ವಭೌಮೋ ಭವೇದ್ಭೂಮೌ ಸರ್ವತೇಜಾಶ್ಶಿವಾಲಯೇ ॥ ೫೫ ॥

ತಸ್ಮಾತ್ಸರ್ವಪ್ರಯತ್ನೇನ ಪಂಚವಕ್ತ್ರಂ ತು ಧಾರಯೇತ್ ।
ಷಡ್ವಕ್ತ್ರಂ ಕಾರ್ತಿಕೇಯಂ ತು ಧಾರಯನ್ದಕ್ಷಿಣೇ ಭುಜೇ ॥ ೫೬ ॥

ಬ್ರಹ್ಮಹತ್ಯಾದಿಭಿಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ।
ಸ್ಕಂದಸ್ಯ ಸದೃಶಶ್ಶೂರಃ ಕಲ್ಪಾಂತೇ ಸಮುಪಸ್ಥಿತೇ ॥ ೫೭ ॥

ಪರಾಜಯಂ ನಾತ್ರ ಚೈತಿ ಗುಣಾನಾಮಾಕರೋ ಭುವಿ ।
ಕುಮಾರತ್ವಮವಾಪ್ನೋತಿ ಯಥಾ ಗೌರೀಶನಂದನಃ ॥ ೫೮ ॥

---

ಅಘೋರ, ಈ ಐದು ದೇವತೆಗಳು ಐದು ಮುಖವನ್ನು ಆಶ್ರಯಿಸಿಕೊಂಡಿವೆ. ಈ ಐದು ಮುಖವುಳ್ಳದ್ದು ಲೋಕದಲ್ಲಿ ಬಹು ಪ್ರಸಿದ್ಧವಾಗಿದೆ.

೫೪-೫೭. ಈ ಪಂಚವಕ್ತ್ರವು ರುದ್ರನಿಗೆ ಮಗನ ರೂಪವಾದುದು. ಆದುದರಿಂದ ಧರಿಸಬೇಕು. ಇದನ್ನು ಧರಿಸಿದವನು ಕೋಟಿಸಹಸ್ರ, ಕೋಟನೂರು ಕಲ್ಪಗಳವರೆಗೂ ಶಿವನ ಎದುರಿನಲ್ಲಿ ಪೂಜೆಯನ್ನು ಹೊಂದುತ್ತಾ ಇದ್ದು ಚಕ್ರವರ್ತಿಯಾಗಿ ಹುಟ್ಟುತ್ತಾನೆ. ಆದ್ದರಿಂದ ಈ ಐದುಮುಖದ ರುದ್ರಾಕ್ಷಿಯನ್ನು ಧರಿಸಬೇಕು. ಆರು ಮುಖದ ರುದ್ರಾಕ್ಷಿಯು ಕಾರ್ತಿಕೇಯನೆನಿಸಿಕೊಳ್ಳುತ್ತದೆ. ಇದನ್ನು ಧರಿಸಿದರೆ ಬ್ರಹ್ಮಹತ್ಯಾದಿ ಪಾಪಗಳು ನಾಶವಾಗುತ್ತವೆ. ಯುದ್ಧದಲ್ಲಿ ಸ್ಕಂದನಂತೆಯೇ ಶೂರನಾಗಿರುತ್ತಾನೆ.

೫೮. ಇವನಿಗೆ ಸೋಲೆಂಬುದೇ ಇರುವುದಿಲ್ಲ. ಗುಣಿಯಾಗಿರುತ್ತಾನೆ. ಸ್ಕಂದನಂತೆ ಸುಂದರನಾಗಿಯೂ ಆಗುತ್ತಾನೆ.

ಬ್ರಾಹ್ಮಣೋ ಭೂಪಪೂಜ್ಯಶ್ಚ ಕ್ಷತ್ರಿಯೋ ಲಭತೇ ಜಯಂ ।
ವೈಶ್ಯಾಶ್ಶೂದ್ರಾದಯೋ ವರ್ಣಾಃ ಸದೈಶ್ವರ್ಯಪ್ರಪೂರಿತಾಃ ॥ ೫೯ ॥

ತಸ್ಯೈವ ವರದಾ ಗೌರೀ ಮಾತೇವ ಸುಲಭಾ ಭವೇತ್ ।
ತತೋ ಭುಜಬಲಾದೇವ ವಿಶ್ವಜೇತಾ ಭವೇನ್ನರಃ ॥ ೬೦ ॥

ವಾಗ್ಮೀ ಧೀರಸ್ಸಭಾಯಾಂ ಚ ನೃಪವೇಶ್ಮನಿ ಸಂಸದಿ ।
ನ ಚ ಕಾತರತಾಮೇತಿ ನೈವ ಭಂಗೋ ಭವೇದ್ಧ್ರುವಂ ॥ ೬೧ ॥

ಏತಾನ್ಯನ್ಯಾನಿ ಸರ್ವಾಣಿ ಷಡ್ವಕ್ತ್ರಸ್ಯೈವ ಧಾರಣಾತ್ ।
ಸಪ್ತವಕ್ತ್ರೇ ಮಹಾಸೇನಸ್ತ್ವನಂತೋ ನಾಮ ನಾಗರಾಟ್ ॥ ೬೨ ॥

ಅಸ್ಯ ಪ್ರತ್ಯೇಕವಕ್ತ್ರೇ ತು ಪ್ರತಿನಾಗಾ ವ್ಯವಸ್ಥಿತಾಃ ।
ಅನಂತಃ ಕರ್ಕಟಶ್ಚೈವ ಪುಂಡರೀಕೋಥ ತಕ್ಷಕಃ ॥ ೬೩ ॥

ವಿಷೋಲ್ಬಣಶ್ಚ ಕಾರೋಷಃ ಶಂಖಚೂಡಶ್ಚ ಸಪ್ತಮಃ ।
ಏತೇ ನಾಗಾ ಮಹಾವೀರ್ಯಾಃ ಸಪ್ತವಕ್ತ್ರೇ ವ್ಯವಸ್ಥಿತಾಃ ॥ ೬೪ ॥

---

೫೯. ಬ್ರಾಹ್ಮಣನು ರಾಜಗೌರವವನ್ನು ಹೊಂದುತ್ತಾನೆ. ಕ್ಷತ್ರಿಯನು ಜಯವನ್ನು ಹೊಂದುತ್ತಾನೆ. ವೈಶ್ಯರೂ, ಶೂದ್ರರೂ ಐಶ್ವರ್ಯವಂತರಾಗುತ್ತಾರೆ.

೬೦. ಅವನಿಗೆ ಗೌರಿಯು ವರಕೊಡುವಳು. ತಾಯಿಯಂತೆ ಸುಲಭಳಾಗಿರುವಳು. ಅವನು ತನ್ನ ಭುಜದಿಂದಲೇ ಪ್ರಪಂಚವನ್ನು ಜಯಿಸುವನು.

೬೧. ಸಭೆ, ಅರಮನೆಗಳಲ್ಲಿ ವಾಚಾಳಿಯೂ, ಧೀರನೂ ಆಗಿರುತ್ತಾನೆ. ಹೆದರುವುದಿಲ್ಲ. ಅವಮಾನವಾಗುವುದೇ ಇಲ್ಲ.

೬೨. ಆರು ಮುಖವುಳ್ಳದ್ದನ್ನು ಧರಿಸುವುದರಿಂದ ಇವೇ ಮುಂತಾದ ಗುಣಗಳಿರುತ್ತವೆ. ಏಳು ಮುಖವುಳ್ಳದ್ದಕ್ಕೆ ಅನಂತನೆಂಬ ಹೆಸರು ಇರುವುದು.

೬೩-೬೪. ಇದರ ಒಂದೊಂದು ಮುಖದಲ್ಲಿಯೂ ಒಂದೊಂದು ಸರ್ಪಗಳು ವಾಸವಾಗಿವೆ. ಅನಂತ ಕರ್ಕಟ, ಪುಂಡರೀಕ್ಷ, ತಕ್ಷಕ, ವಿಷೋಲ್ಬಣ, ಕಾರೋಷ, ಶಂಖಚೂಡ, ಈ ಏಳು ಸರ್ಪಗಳು ವಾಸವಾಗಿವೆ. ಇವು ಬಹು ಪರಾಕ್ರಮಿಗಳು.

ಅಸ್ಯಧಾರಣಮಾತ್ರೇ ತು ವಿಷಂ ನ ಕ್ರಮತೇ ತನೌ ।
ಹರಶ್ಚ ಪರಮಪ್ರೀತೋ ಭವೇನ್ನಾಗೇಶ್ವರೋ ಯಥಾ ॥ ೬೫ ॥

ಪ್ರೀತ್ಯಾಸ್ಯ ಸರ್ವಪಾಪಾನಿ ಕ್ಷಯಂ ಯಾನ್ತಿ ದಿನೇ ದಿನೇ ।
ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಾದಿ ಗುರುತಲ್ಪಜಂ ॥ ೬೬ ॥

ಯತ್ಪಾಪಂ ಲಭತೇ ಮರ್ತ್ಯಃ ಸರ್ವಂ ನಶ್ಯತಿ ತತ್ಕ್ಷಣಾತ್ ।
ದೇವಸ್ಯ ಸದೃಶಂ ಭೋಗ್ಯಂ ತ್ರೈಲೋಕ್ಯೇ ನಿಶ್ಚಿತಂ ಲಭೇತ್ ॥ ೬೭ ॥

ಅಷ್ಟವಕ್ತ್ರೋ ಮಹಾಸೇನ ಸಾಕ್ಷಾದ್ದೇವೋ ವಿನಾಯಕಃ ।
ಅಸ್ಯೈವ ಧಾರಣಾದೇವ ಯತ್ಪುಣ್ಯಂ ತಚ್ಛೃಣುಷ್ವ ಮೇ ॥ ೬೮ ॥

ಜನ್ಮಜನ್ಮ ನ ಮೂರ್ಖಃಸ್ಯಾನ್ನಾತುರೋ ನ ಚ ನಷ್ಟಧೀಃ ।
ಅವಿಘ್ನಂ ಸರ್ವಕಾರ್ಯೇಷು ತಸ್ಯೈವ ಸತತಂ ಭವೇತ್ ॥ ೬೯ ॥

ನೈಪುಣ್ಯಂ ಲಿಪಿಕಾರ್ಯೇಷು ಮಹಾಕಾರ್ಯೇಷು ಕೌಶಲಂ ।
ಸರ್ವಾರಂಭಾದಿಕಾರ್ಯೇಷು ಕ್ಷೇಮಂ ತಸ್ಯ ದಿನೇ ದಿನೇ ॥ ೭೦ ॥

---

೬೫. ಇದನ್ನು ಧರಿಸಿದ್ದರೆ ವಿಷ್ಣುವು ಆಕ್ರಮಿಸುವುದಿಲ್ಲ. ಹರನೂ ಬಹು ಪ್ರೀತಿಯನ್ನು ಹೊಂದುತ್ತಾನೆ. ನಾಗರಾಜನೂ ಸಂತುಷ್ಟನಾಗುತ್ತಾನೆ.

೬೬-೬೭. ಇದರ ವಿಶ್ವಾಸದಿಂದ ಪಾಪಗಳೆಲ್ಲವೂ ನಾಶಹೊಂದುತ್ತವೆ. ಬ್ರಹ್ಮ ಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುಭಾರ್ಯಾಗಮನ ಇವೇ ಮುಂತಾದ ಮಹಾ ಪಾಪಗಳು ಒಡನೆಯೇ ನಾಶಹೊಂದುತ್ತವೆ. ದೇವರಿಗೆ ಸಮಾನವಾದ ಸುಖವನ್ನು ಮೂರು ಲೋಕದಲ್ಲಿಯೂ ಖಂಡಿತವಾಗಿ ಹೊಂದುವನು.

೬೮. ಎಂಟು ಮುಖವುಳ್ಳದ್ದು ಸಾಕ್ಷಾದ್ವಿನಾಯಕನೆನಿಸಿಕೊಳ್ಳುತ್ತದೆ. ಇದನ್ನು ಧರಿಸುವುದರಿಂದ ಬರುವ ಪುಣ್ಯವನ್ನು ಹೇಳುತ್ತೇನೆ, ಕೇಳು.

೬೯. ಜನ್ಮ ಜನ್ಮದಲ್ಲಿಯೂ ಮೂರ್ಖನಾಗುವುದಿಲ್ಲ. ರೋಗಿಯಾಗುವುದಿಲ್ಲ. ದಡ್ಡನಾಗುವುದಿಲ್ಲ. ಕೆಲಸಗಳೆಲ್ಲವೂ ನಿರ್ವಿಘ್ನವಾಗಿ ನಡೆಯುತ್ತವೆ.

೭೦. ಬರವಣಿಗೆಯಲ್ಲಿ ಬುದ್ಧಿವಂತನಾಗಿರುವನು. ದೊಡ್ಡ ಕೆಲಸಗಳಲ್ಲಿ ಬುದ್ಧಿವಂತನಾಗಿರುತ್ತಾನೆ. ಕೆಲಸಗಳ ಆರಂಭದಲ್ಲಿ ಕ್ಷೇಮವಾಗಿರುತ್ತವೆ.

ಅರ್ಥಕೊಟಂ ತುಲಾಕೊಟಂ ಸರ್ವಕೂಟಂ ತಥೈವ ಚ ।
ಶಿಶ್ನೋದರಕರೇಣೈವ ಸಂಸ್ಪೃಶೇದ್ವಾ ಗುರುಸ್ತ್ರಿಯಂ ॥ ೭೧ ॥

ಏವಮಾದೀನಿ ಸರ್ವಾಣಿ ಹಂತಿ ಪಾಪಾನಿ ಸರ್ವಥಾ ।
ಅಕ್ಷಯಂ ತ್ರಿದಿವಂ ಭುಕ್ತ್ವಾ ಮುಕ್ತೋ ಯಾತಿ ಪರಾಂಗತಿಂ ॥ ೭೨ ॥

ಗುಣಾನ್ಯೇತಾನಿ ಸರ್ವಾಣಿ ಅಷ್ಟವಕ್ತ್ರಸ್ಯ ಧಾರಣಾತ್ ।
ನವಾಸ್ಯಂ ಭೈರವಂ ಪ್ರೋಕ್ತಂ ಧಾರಯೇದ್ವಾಮ ಬಾಹುತಃ ॥ ೭೩ ॥

ಕಪಿಲಂ ಮುಕ್ತಿದಂ ಧೃತ್ವಾ ಮಮ ತುಲ್ಯಬಲೋ ಭವೇತ್ ।
ಲಕ್ಷಕೋಟಿಸಹಸ್ರಾಣಿ ಬ್ರಹ್ಮಹತ್ಯಾಃ ಕರೋತಿ ಯಃ ॥ ೭೪ ॥

ತಾಸ್ಸರ್ವಾ ದಹತೇ ಶೀಘ್ರಂ ನವವಕ್ತ್ರಸ್ಯ ಧಾರಣಾತ್ ।
ಸುರಲೋಕೇ ಸದಾ ದೇವೈಃ ಪೂಜಿತೋ ಮಘವಾನ್ಯಥಾ ॥ ೭೫ ॥

ಹರವದ್ವರವೇಶ್ಮಸ್ಥೋ ಗಣೇಶೋ ನಾತ್ರ ಸಂಶಯಃ ।
ಪನ್ನಗಾಶ್ಚ ವಿನಶ್ಯಂತಿ ದಶವಕ್ತ್ರಸ್ಯ ಧಾರಣಾತ್ ॥ ೭೬ ॥

---

೭೧-೭೨ ಅನ್ನಕಂಟಕತನ, ಅಳತೆಯ ಮೋಸ, ಎಲ್ಲಾ ಮೋಸ, ಗುರುತಲ್ಪಗಮನ, ಇವೇ ಮುಂತಾದ ಸಕಲ ಪಾಪಗಳೂ ನಾಶವಾಗುತ್ತವೆ ಅಕ್ಷಯವಾಗಿ ಸ್ವರ್ಗವನ್ನು ಅನುಭವಿಸಿ ಆಮೇಲೆ ಮುಕ್ತನಾಗುತ್ತಾನೆ.

೭೩-೭೫. ಎಂಟು ಮುಖದ ರುದ್ರಾಕ್ಷಿಯನ್ನು ಧರಿಸಿದರೆ ಇವೇ ಮುಂತಾದ ಗುಣಗಳಿರುತ್ತವೆ. ಒಂಭತ್ತು ಮುಖವಿರುವುದು ಭೈರವನೆಂದೆನಿಸಿಕೊಳ್ಳುತ್ತದೆ. ಅದನ್ನು ತೋಳಿಗೆ ಕಟ್ಟಿಕೊಳ್ಳಬೇಕು. ಕಪಿಲವರ್ಣದ್ದು. ಮುಕ್ತಿಯನ್ನು ಕೊಡುತ್ತದೆ. ಅದನ್ನು ಧರಿಸಿದವನು ನನ್ನ ಸಮವಾಗಿ ಆಗುತ್ತಾನೆ. ಇದನ್ನು ಧರಿಸಿದರೆ ಲಕ್ಷಕೋಟಿಯ ಬ್ರಹ್ಮಹತ್ಯೆಗಳನ್ನೂ ನಾಶಮಾಡುತ್ತದೆ. ದೇವಲೋಕದಲ್ಲಿ ಇಂದ್ರನಂತೆ ಪೂಜಿಸಲ್ಪಡುತ್ತಾನೆ.

೭೬ ಹತ್ತು ಮುಖವುಳ್ಳದ್ದನ್ನು ಧರಿಸಿದರೆ ಹರನಂತೆ ಉತ್ತಮವಾದ ಮನೆಯಲ್ಲಿರುತ್ತಾನೆ. ಸರ್ಪಗಳೂ ಇವನನ್ನು ನೋಡಿದ ಕೂಡಲೇ ಹೊರಟುಹೋಗುತ್ತವೆ.

ವಕ್ತ್ರೇ ಚೈಕಾದಶೇ ವತ್ಸ ರುದ್ರಾಶ್ಚೈಕಾದಶಸ್ಮೃತಾಃ ।
ಶಿಖಾಯಾಂ ಧಾರಯೇನ್ನಿತ್ಯಂ ತಸ್ಯ ಪುಣ್ಯಫಲಂ ಶೃಣು ॥ ೭೭ ॥

ಅಶ್ವಮೇಧಸಹಸ್ರಾಣಿ ಯಜ್ಞಕೋಟಿಶತಾನಿ ಚ ।
ಗವಾಂ ಶತಸಹಸ್ರಸ್ಯ ಸಮ್ಯಗ್ದತ್ತಸ್ಯ ಯತ್ಫಲಂ ॥ ೭೮ ॥

ತತ್ಫಲಂ ಶೀಘ್ರಮಾಪ್ನೋತಿ ವಕ್ತ್ರೈಕಾದಶಧಾರಣಾತ್ ।
ಹರಸ್ಯ ಸದೃಶೋ ಲೋಕೇ ಪುನರ್ಜನ್ಮ ನ ವಿದ್ಯತೇ । ॥ ೭೯ ॥

ರುದ್ರಾಕ್ಷಂ ದ್ವಾದಶಾಸ್ಯಂ ಯಃ ಕಂಠದೇಶೇ ತು ಧಾರಯೇತ್ ।
ಆದಿತ್ಯಸ್ತುಷ್ಯತೇ ನಿತ್ಯಂ ದ್ವಾದಶಾಸ್ಯೇ ವ್ಯವಸ್ಥಿತಃ ॥ ೮೦ ॥

ಗೋಮೇಧಂ ನರಮೇಧಂ ಚ ಕೃತ್ವಾ ಯತ್ಫಲಮುಚ್ಯತೇ ।
ತತ್ಫಲಂ ಶೀಘ್ರಮಾಪ್ನೋತಿ ವಜ್ರಾದೇಶ್ಚ ನಿವಾರಣಂ ॥ ೮೧ ॥

---

೭೭. ಹನ್ನೊಂದು ಮುಖವಿರುವುದರಲ್ಲಿ ಒಂದೊಂದು ಮುಖಕ್ಕೆ ಒಬ್ಬೊಬ್ಬರಂತೆ ಹನ್ನೊಂದು ಜನ ರುದ್ರರೂ, ವಾಸಿಸುತ್ತಾರೆ. ಇದನ್ನು ತಲೆಯಲ್ಲಿಟ್ಟುಕೊಳ್ಳಬೇಕು. ಅವನಿಗೆ ಬರುವ ಪುಣ್ಯವನ್ನೂ ಮತ್ತು ಅದರ ಫಲವನ್ನೂ ಹೇಳುತ್ತೇನೆ, ಕೇಳು.

೭೮-೭೯. ಹನ್ನೊಂದು ಮುಖದ ರುದ್ರಾಕ್ಷಿಯನ್ನು ಧರಿಸಿದರೆ ಸಾವಿರ ಅಶ್ವಮೇಧಗಳನ್ನು ಮಾಡಿದ, ಕೋಟಿ ಯಜ್ಞಗಳನ್ನು ಮಾಡಿದ, ಒಂದು ಲಕ್ಷ ಗೋದಾನಗಳನ್ನು ಮಾಡಿದ ಫಲವನ್ನು ಹೊಂದುತ್ತಾನೆ. ಲೋಕದಲ್ಲಿ ಹರನಿಗೆ ಸಮನಾಗಿ ಪುನರ್ಜನ್ಮವನ್ನೂ ಹೊಂದುವುದಿಲ್ಲ,

೮೦. ಹನ್ನೆರಡು ಮುಖದ ರುದ್ರಾಕ್ಷಿಯನ್ನು ಧರಿಸಿದರೆ ಸೂರ್ಯನು ತೃಪ್ತಿ ಹೊಂದುತ್ತಾನೆ. ಆ ರುದ್ರಾಕ್ಷಿಯ ಹನ್ನೆರಡು ಮುಖಗಳಲ್ಲಿಯೂ, ಸೂರ್ಯನು ಇದ್ದಾನೆ. ಇದನ್ನು ಕತ್ತಿನಲ್ಲಿ ಧರಿಸಬೇಕು.

೮೧. ಅಶ್ವಮೇಧ ನರಮೇಧಗಳನ್ನು ಮಾಡಿದ ಪುಣ್ಯವನ್ನು ಹೊಂದುತ್ತಾನೆ. ಸಿಡಿಲು ಮುಂತಾದುವು ತೊಂದರೆ ಪಡಿಸುವುದಿಲ್ಲ.

ನೈವ ವಹ್ನೇರ್ಭಯಂ ಚೈವ ನ ಚ ವ್ಯಾಧಿಃ ಪ್ರವರ್ತತೇ ।
ಅರ್ಥಲಾಭಂ ಸುಖಂ ಭುಂಕ್ತೇ ಈಶ್ವರೋ ನ ದರಿದ್ರತಾ ॥ ೮೨ ॥

ಹಸ್ತ್ಯಶ್ವನರಮಾರ್ಜಾರಮೂಷಕಾನ್ ಶಶಕಾಂಸ್ತಥಾ ।
ವ್ಯಾಳದಂಷ್ಟ್ರಿಸೃಗಾಲಾದೀನ್ಹತ್ವಾ ವ್ಯಾಘಾತಯತ್ಯಪಿ ॥ ೮೩ ॥

ಮುಚ್ಯತೇ ನಾತ್ರ ಸಂದೇಹೋ ವಕ್ತ್ರದ್ವಾದಶ ಧಾರಣಾತ್ ।
ವಕ್ತ್ರತ್ರಯೋದಶೋ ರುದ್ರೋ ರುದ್ರಾಕ್ಷಃ ಪ್ರಾಪ್ಯತೇ ಯದಿ ॥ ೮೪ ॥

ಶಂತಮಸ್ಸ ತು ವಿಜ್ಞೇಯೋ ಸರ್ವಕಾಮಫಲಪ್ರದಃ ।
ಸುಧಾರಸಾಯನಂ ಚೈವ ಧಾತುವಾದಶ್ಚ ಪಾದುಕಾಃ ॥ ೮೫ ॥

ಸಿದ್ಧ್ಯಂತಿ ತಸ್ಯ ವೈ ಸರ್ವೇ ಭಾಗ್ಯಯುಕ್ತಸ್ಯ ಷಣ್ಮುಖ ।
ಮಾತೃಪಿತೃಷ್ವಸೃಭ್ರಾತೃಗುರೂನ್ವಾಥ ನಿಹತ್ಯ ಚ ॥ ೮೬ ॥

ಮುಚ್ಯತೇ ಸರ್ವಪಾಪೇಭ್ಯೋ ತ್ರಯೋದಶಾಸ್ಯಧಾರಣಾತ್ ।
ಅಕ್ಷಯಂ ಲಭತೇ ಸ್ವರ್ಗಂ ಯಥಾ ದೇವೋ ಮಹೇಶ್ವರಃ ॥ ೮೭ ॥

---

೮೨. ಬೆಂಕಿ, ವ್ಯಾಧಿಗಳ ಭಯವಿರುವುದಿಲ್ಲ. ಹಣದ ಲಾಭವುಂಟು. ಸುಖ ಪಡುತ್ತಾನೆ. ಧನಿಕನಾಗಿರುವನೇ ಹೊರತು ದರಿದ್ರನಾಗುವುದಿಲ್ಲ.

೮೩-೮೭. ಈ ಹನ್ನೆರಡು ಮುಖದ ರುದ್ರಾಕ್ಷಿಯ ಧಾರಣದಿಂದ ಆನೆ, ಕುದುರೆ ಮನುಷ್ಯ, ಬೆಕ್ಕು, ಇಲಿ, ಮೊಲ, ಹುಲಿ, ಹಂದಿ, ನರಿ ಮುಂತಾದುವನ್ನು ಕೊಲ್ಲುವುದಕ್ಕೆ ಶಕ್ತನಾಗುತ್ತಾನೆ. ಹದಿಮೂರು ಮುಖದ ರುದ್ರಾಕ್ಷಿಯು ಸಿಕ್ಕಿದರೆ ಅದಕ್ಕೆ ರುದ್ರನೆಂಬ ಹೆಸರು. ಬಹು ಸುಖಕರವಾದುದು. ಇಷ್ಟವು ಸಿದ್ಧಿಸುತ್ತದೆ. ಸುಧಾಸಿದ್ಧಿ, ರಸಾಯನಸಿದ್ಧಿ, ಧಾತುವಾದಸಿದ್ಧಿ, ಪಾದುಕಾಸಿದ್ಧಿಗಳೆಲ್ಲವೂ ಸಿದ್ಧಿಸುತ್ತವೆ. ಇದು ಭಾಗ್ಯವಂತನಿಗೆ ಸಿಕ್ಕುತ್ತದೆ. ಈ ಹದಿಮೂರು ಮುಖದ್ದನ್ನು ಧರಿಸಿಕೊಂಡರೆ ತಾಯಿ ಸೋದರತ್ತೆ, ಸೋದರ, ಗುರು ಇವರನ್ನು ಕೊಂದ ಪಾಪವೂ ಹೋಗುತ್ತದೆ. ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾನೆ. ಮಹೇಶ್ವರನಂತೆಯೂ ಇರುತ್ತಾನೆ.

ಚತುರ್ದಶಮುಖಂ ವತ್ಸ ರುದ್ರಾಕ್ಷಂ ಯದಿ ಧಾರಯೇತ್ ।
ಸತತಂ ಮೂರ್ಧ್ನಿ ಬಾಹೌ ವಾ ಶಕ್ತಿಪಿಂಡಂ ಶಿವಸ್ಯ ಚ ॥ ೮೮ ॥

ಕಿಂಪುನರ್ಬಹುನೋಕ್ತೇನ ವರ್ಣಿತೇನ ಪುನಃಪುನಃ ।
ಪೂಜ್ಯತೇ ಸತತಂ ದೇವೈಃ ಪ್ರಾಪ್ಯತೇ ಪುಣ್ಯಗೌರವಾತ್ ॥ ೮೯ ॥

॥ ಕಾರ್ತಿಕೇಯ ಉವಾಚ ॥

ಭಗವನ್ಶ್ರೋತುಮಿಚ್ಛಾಮಿ ವಕ್ತ್ರೇ ವಕ್ತ್ರೇ ಯಥಾವಿಧಿ ।
ನ್ಯಸನಂ ಕೇನ ಮಂತ್ರೇಣ ಧಾರಣಂ ವಾ ಕಥಂ ವದ ॥ ೯೦ ॥

॥ ಈಶ್ವರ ಉವಾಚ ॥

ಶೃಣು ಷಣ್ಮುಖ ತತ್ತ್ವೇನ ವಕ್ತ್ರೇ ವಕ್ತ್ರೇ ಯಥಾ ವಿಧಿ ।
ಅಮಂತ್ರೋಚ್ಚಾರಣಾದೇವ ಗುಣಾಹ್ಯೇತೇ ಪ್ರಕೀರ್ತಿತಾಃ ॥ ೯೧ ॥

ಯಃ ಪುನಃ ಮಂತ್ರಸಂಯುಕ್ತಂ ಧಾರಯೇದ್ಭುವಿ ಮಾನವಃ ।
ಗುಣಾಂಸ್ತಸ್ಯ ಮಹತ್ವಂ ಚ ಕಥಿತುಂ ನೈವ ಶಕ್ಯತೇ ॥ ೯೨ ॥

---

೮೮. ಹದಿನಾಲ್ಕು ಮುಖದ್ದನ್ನು ತಲೆಯಲ್ಲಾಗಲೀ, ತೋಳಿನಲ್ಲಾಗಲಿ ಧರಿಸಬೇಕು. ಇದು ಶಿವನ ಶಕ್ತಿಪಿಂಡವು.

೮೯. ಅದರ ವಿಷಯವನ್ನು ಬಹಳ ಹೇಳುವುದರಿಂದ ಪ್ರಯೋಜನವಿಲ್ಲ. ಯಾವಾಗಲೂ ದೇವಪೂಜ್ಯನಾಗುತ್ತಾನೆ. ಪುಣ್ಯದಿಂದಲೇ ಇದು ಸಿಕ್ಕುತ್ತದೆ.

೯೦. ಸ್ಕಂದನು ಹೇಳಿದನು- ಎಲೈ ಸ್ವಾಮಿಯೇ ! ಯಾವ ಯಾವ ಮುಖದ ರುದ್ರಾಕ್ಷಿಗಳನ್ನು ಯಾವ ಯಾವ ಮಂತ್ರದಿಂದ ಧರಿಸಬೇಕು ?

೯೧. ಈಶ್ವರನು ಹೇಳಿದನು- ಎಲೈ ಷಣ್ಮುಖನೇ ! ಮಂತ್ರವಿಲ್ಲದಂತೆ ಜಪಿಸುವುದರಿಂದ ಇವುಗಳ ಗುಣವನ್ನು ಹೇಳಿದೆನು.

೯೨. ಮಂತ್ರದಿಂದ ಕೂಡಿ ಇವನ್ನು ಧರಿಸಿಕೊಂಡವರ ಗುಣಗಳನ್ನೂ, ಮಹಿಮೆಯನ್ನೂ ಹೇಳಲು ಸಾಧ್ಯವಾಗುವುದೇ ಇಲ್ಲ.

ಇದಾ ನೀಂ ಮಂತ್ರಾ ದಿಶ್ಯಂತೇ ॥

ಓಂ ರುದ್ರ ಏಕವಕ್ತ್ರಸ್ಯ, ಓಂ ಖಂ ದ್ವಿವಕ್ತ್ರಸ್ಯ, ಓಂ ವುಂ
ತ್ರಿವಕ್ತ್ರಸ್ಯ, ಓಂ ಹ್ರೀಂ ಚತುರ್ವಕ್ತ್ರಸ್ಯ, ಓಂ, ಹ್ರಾಂ
ಪಂಚವಕ್ತ್ರಸ್ಯ, ಓಂ ಹ್ರೂಂ ಷಡ್ವಕ್ತ್ರಸ್ಯ, ಓಂ ಹ್ರಃ
ಸಪ್ತವಕ್ತ್ರಸ್ಯ, ಓಂ ಕಂ ಅಷ್ಟವಕ್ತ್ರಸ್ಯ, ಓಂ ಜೂಂ
ನವವಕ್ತ್ರಸ್ಯ, ಓಂ ಕ್ಷಂ ದಶವಕ್ತ್ರಸ್ಯ, ಓಂ ಶ್ರೀಂ
ಏಕಾದಶವಕ್ತ್ರಸ್ಯ, ಓಂ, ಹ್ರಾಂ ದ್ವಾದಶವಕ್ತ್ರಸ್ಯ,
ಓಂ ಕ್ಷಾಂ, ತ್ರಯೋದಶವಕ್ತ್ರಸ್ಯ, ಓಂನ್ರಾಂ ಚತುರ್ದಶವಕ್ತ್ರಸ್ಯ
ಏವಂ ಯಥಾಕ್ರಮಂ ನ್ಯಸ್ತವ್ಯಾಃ ॥

ಶಿರಸ್ಯುರಸಿಮಾಲಾಂ ಚ ಗೃಹೀತ್ವಾ ಯೋ ವ್ರಜೇನ್ನರಃ ।
ಪದೇಪದೇಶ್ವಮೇಧಸ್ಯ ಫಲಮಾಪ್ನೋತಿ ನಾನ್ಯಥಾ　　॥ ೯೩ ॥

---

ಈಗ ಮಂತ್ರಗಳನ್ನು ಹೇಳುತ್ತೇನೆ-

ಒಂದು ಮುಖವಿರುವುದಕ್ಕೆ ಓಂ ರುದ್ರನೆಂದೂ, ಎರಡು ಮುಖವಿರುವುದಕ್ಕೆ ಓಂ ಖಂ ಎಂದೂ, ಮೂರು ಮುಖವಿರುವುದಕ್ಕೆ ಓಂ ವುಂ ಎಂದೂ, ನಾಲ್ಕು ಮುಖವಿರುವುದಕ್ಕೆ ಓಂ ಹ್ರೀಂ ಎಂದೂ, ಐದು ಮುಖವಿರುವುದಕ್ಕೆ ಓಂ ಹ್ರಾಂ ಎಂದೂ, ಆರು ಮುಖವಿರುವುದಕ್ಕೆ ಓಂ ಹ್ರೂಂ ಎಂದೂ, ಏಳು ಮುಖವಿರುವುದಕ್ಕೆ ಓಂ ಹ್ರಃ ಎಂದೂ, ಎಂಟು ಮುಖವಿರುವುದಕ್ಕೆ ಓಂ ಕಂ ಎಂದೂ, ಒಂಭತ್ತು ಮುಖವಿರುವುದಕ್ಕೆ ಓಂ ಜೂಂ ಎಂದೂ, ಹತ್ತು ಮುಖವಿರುವುದಕ್ಕೆ ಓಂ ಕ್ಷಂ ಎಂದೂ, ಹನ್ನೊಂದು ಮುಖದ್ದಕ್ಕೆ ಓಂ ಶ್ರೀಂ ಎಂದೂ, ಹನ್ನೆರಡು ಮುಖವಿರುವುದಕ್ಕೆ ಓಂ ಹ್ರಾಂ ಎಂದೂ, ಹದಿಮೂರು ಮುಖವಿರುವುದಕ್ಕೆ ಓಂ ಕ್ಷಾಂ ಎಂದೂ, ಹದಿನಾಲ್ಕು ಮುಖವಿರುವುದಕ್ಕೆ ಓಂ ನ್ರಾಂ ಎಂದೂ. ಮಂತ್ರೋಚ್ಚಾರಣೆಗಳನ್ನು ಮಾಡಿ ಕಂಠದಲ್ಲಾಗಲೀ, ಶಿರಸ್ಸಲ್ಲಾಗಲೀ, ಕಟ್ಟಿಕೊಳ್ಳಬೇಕು.

೯೩. ತಲೆ, ಎದೆಗಳ ಮೇಲೆ ರುದ್ರಾಕ್ಷಿಮಾಲೆಯನ್ನು ಹಾಕಿಕೊಂಡು ನಡೆದರೆ ಹೆಜ್ಜೆ ಹೆಜ್ಜೆಗೂ ಅಶ್ವಮೇಧದ ಫಲವು ಬರುತ್ತದೆ.

ಸರ್ವೇಷಾಮಪಿ ವಕ್ತ್ರಾಣಾಂ ಧಾರಣೇ ಮತ್ಸಮೋ ಭವೇತ್ ।
ತಸ್ಮಾತ್ಸರ್ವಪ್ರಯತ್ನೇನ ರುದ್ರಾಕ್ಷಂ ಪುತ್ರ ಧಾರಯ ॥ ೯೪ ॥

ಯ ಇದಂ ಶೃಣುಯಾನ್ಮಂತ್ರಪುಣ್ಯಾಖ್ಯಾನಮಿದಂ ಸ್ಮೃತಂ ।
ಸರ್ವೇಷಾಮೇವ ವಕ್ತ್ರಾಣಾಂ ಧಾರಣೇ ಯತ್ಫಲಂ ಲಭೇತ್ ॥ ೯೫ ॥

ತತ್ಫಲಂ ಸಮನುಪ್ರಾಪ್ಯ ವ್ರಜೇತ್ಸ್ವರ್ಗಾಪವರ್ಗತಾಂ ।
ಧಾರಯಿತ್ವಾ ತು ರುದ್ರಾಕ್ಷಂ ಮ್ರಿಯತೇ ಯಃ ಕ್ಷಿತೌ ನರಃ ॥ ೯೬ ॥

ಸ ಯಾತಿ ಮತ್ಪುರಂ ರಮ್ಯಂ ಸರ್ವದೇವೈಃ ಪ್ರಪೂಜಿತಃ ।
ಮರುದ್ದೇಶೇ ಪುರಾ ವತ್ಸ ವಾಣಿಜ್ಯಾಯ ಕಿಲ ಸ್ಥಲೇ ॥ ೯೭ ॥

ಗಚ್ಛನ್ವಣಿಕ್ಸುತಸ್ತತ್ರ ತರೌ ಪ್ರೇತಾಪ್ರಪೀಡಿತಃ ।
ನರೀನರ್ತಿ ತತಃ ಪ್ರೇತಾ ದ್ವಿಜೇನ ಪರಮ್ಯೈಕ್ಷಿ ಚ ॥ ೯೮ ॥

॥ ದ್ವಿಜ ಉವಾಚ ॥

ಕಾ ತ್ವಂ ನೃತ್ಯಸಿ ದೀನಾಸಿ ಸಂವೃತಾ ಜೀರ್ಣವಾಸಸಾ ॥ ೯೯ ॥

---

೯೪. ಯಾರು ರುದ್ರಾಕ್ಷಿಯನ್ನು ಧರಿಸಿದರೂ ಅವನು ನನ್ನ ಸಮವಾಗುತ್ತಾನೆ. ಆದ್ದರಿಂದ ಪ್ರಯತ್ನಪಟ್ಟು ರುದ್ರಾಕ್ಷಿಯನ್ನು ಧರಿಸಬೇಕು.

೯೫–೯೮. ಈ ಪುಣ್ಯಕಥೆಯನ್ನು ಕೇಳಿದವನು ಎಲ್ಲಾ ಮುಖದ ರುದ್ರಾಕ್ಷಿಗಳನ್ನೂ ಧರಿಸಿದರೆ ಯಾವ ಫಲವು ಬರುತ್ತದೆಯೋ ಆ ಫಲವನ್ನು ಹೊಂದಿ ಸ್ವರ್ಗಮೋಕ್ಷಗಳನ್ನು ಹೊಂದುತ್ತಾನೆ. ರುದ್ರಾಕ್ಷಿಗಳನ್ನು ಹಿಡಿದುಕೊಂಡು ಸತ್ತರೆ ಅವನು ದೇವತೆಗಳಿಂದ ಪೂಜೆಯನ್ನು ಹೊಂದುತ್ತಾ ನನ್ನ ಪಟ್ಟಣವನ್ನು ಹೊಂದುತ್ತಾನೆ. ಒಬ್ಬ ಶೆಟ್ಟಿಯು ವ್ಯಾಪಾರಕ್ಕೋಸ್ಕರ ಒಂದು ಮರುಭೂಮಿಯಲ್ಲಿ ಹೋಗುತ್ತಿದ್ದನು. ಅಲ್ಲಿ ಒಂದು ಮರದಲ್ಲಿ ಪ್ರೇತಗಳು ಕುಣಿಯುತ್ತಿದ್ದುದನ್ನು ನೋಡಿದನು.

೯೯. ಶೆಟ್ಟಿಯು ಹೇಳಿದನು– ಕುಣಿಯುತ್ತಿರುವ ನೀನಾರು ? ದುಃಖಿಯಾಗಿರುವೆಯಲ್ಲ ? ಹರಕಲು ಬಟ್ಟೆಗಳನ್ನು ಹೊದ್ದಿರುವೆಯಲ್ಲ ?

॥ ಈಶ್ವರ ಉವಾಚ ॥

ಅಥ ಸಾ ಚ ದ್ವಿಜಂ ಪ್ರಾಹ ದೇವದೂತಾನ್ಮಯಾ ಶ್ರುತಂ ।
ಅಸ್ಯ ಚಾರುನರಸ್ಯೈವ ವಜ್ರಪಾತೇನ ಸಾಂಪ್ರತಂ ॥ ೧೦೦ ॥

ನಿಶ್ಚಿತಂ ನಿಧನಂ ವಿಪ್ರ ಮದ್ಭರ್ತಾ ತು ಭವಿಷ್ಯಸಿ ।
ಏತಸ್ಮಿನ್ನಂತರೇ ನಾಕಾದ್ವಜ್ರಂ ತಸ್ಯ ಶಿರೋಪರಿ ॥ ೧೦೧ ॥

ಅಪತತ್ಸ ಪಪಾತೋರ್ವ್ಯಾಂ ರುದ್ರಾಕ್ಷಸ್ಯಾರ್ಧಖಂಡಕೇ ।
ತತೋ ಮಮ ಪುರಾತ್ಪುತ್ರ ವಿಮಾನಂ ಚಾಪತತದ್ರುತಂ ॥ ೧೦೨ ॥

ಸಮಾರುಹ್ಯ ಸತಃ ಶ್ರೀಮಾನ್ತತ್ರ ತಿಷ್ಠತಿ ಸಂಚಿರಂ ।
ಸಮಾಂಸಕಂ ಸಮಾಸಾದ್ಯ ಈಶ್ವರಃ ಕೌ ಧನೀ ಭವೇತ್ ॥ ೧೦೩ ॥

ಏವಂ ರುದ್ರಾಕ್ಷಖಂಡೇ ಚ ಮೃತಸ್ಯ ಸುಗತಿಸ್ಸುತ ।
ಜ್ಞಾನೇನ ಧಾರಿಣಃ ಪುಂಸಃ ಫಲಂ ವಕ್ತುಂ ನ ಶಕ್ನುಮಃ ॥ ೧೦೪ ॥

ಸ ಶೈವೋ ವೈಷ್ಣವಶ್ಯಾಕ್ತೋ ಗಾಣಪತ್ಯೋಥ ಸೌರಕಃ ।
ಯೋ ದದಾತಿ ಮೃತೋ ಮಾಲಾಮೇಕಂ ರುದ್ರಾಕ್ಷಕಂ ಶಿರಃ ॥ ೧೦೫ ॥

---

೧೦೦-೧೦೪. ಈಶ್ವರನು ಹೇಳಿದನು- ಆಮೇಲೆ ಆ ಪ್ರೇತವು ಆ ಶೆಟ್ಟಿಯನ್ನು ಕುರಿತು ಈಗ ದೇವದೂತನು ಹೇಳಿದುದನ್ನು ಕೇಳಿದೆ. ಈತನ ಮೇಲೆ ಈಗ ಸಿಡಿಲು ಬೀಳುವುದು. ಸಾಯುವುದು ಖಂಡಿತ. ಅವನು ಆಮೇಲೆ ನಿನಗೆ ಗಂಡನಾಗಿ ಆಗುವನು. ಎನ್ನಲು ಇಷ್ಟರಲ್ಲಿಯೇ ಆಕಾಶದಿಂದ ಶಿಡಿಲು ಬಿದ್ದಿತು. ಆತನು ತಲೆಯ ಮೇಲೆ ರುದ್ರಾಕ್ಷಿಯನ್ನು ಕಟ್ಟಿಕೊಂಡಿದ್ದನು ಹಾಗೆಯೇ ಸಾಯಲು ಕೈಲಾಸದಿಂದ ವಿಮಾನವು ಬರಲು ಅದನ್ನು ಹತ್ತಿ ಕುಳಿತುಕೊಂಡು ಹೋಗಿ ಸುಖಿಸಿದನು. ನನ್ನ ಸಂಬಂಧವಾದ ರುದ್ರಾಕ್ಷಿಯು ಚೂರನ್ನು ಹೊಂದಿದರೆ ಭೂಮಿಯಲ್ಲಿ ಧನವಂತನಾಗಿ ಉತ್ತಮಸ್ಥಾನವನ್ನು ಹೊಂದುವನು. ಜ್ಞಾನದಿಂದ ಸರಿಯಾಗಿ ರುದ್ರಾಕ್ಷಿಯನ್ನು ಧರಿಸಿದರೆ ಅದರ ಮಹಿಮೆಯನ್ನು ಹೇಳಲು ಸಾಧ್ಯವಿಲ್ಲವು.

೧೦೫. ಅವನು ಶೈವನಾಗಲಿ, ವೈಷ್ಣವನಾಗಲಿ, ಗಾಣಪತ್ಯನಾಗಲಿ, ಸೂರ್ಯನ ಭಕ್ತನೇ ಆಗಲಿ, ಯಾವನೇ ಆಗಲಿ ಸತ್ತರೆ ರುದ್ರಾಕ್ಷಿಯ ಮಾಲೆಯನ್ನು ಕೊಡುತ್ತಾನೆಯೋ (ತಲೆಯಮೇಲೆ ಹಾಕುತ್ತಾನೆಯೋ) ಅವನು ಉತ್ತಮಲೋಕ ವನ್ನು ಹೊಂದುತ್ತಾನೆ.

ಯಃ ಪಠೇತ್ಪಾಠಯೇದ್ವಾಪಿ ಶ್ರಾವಯೇಚ್ಛೃಣುತೇ ಪಿ ಚ ।
ಸರ್ವಪಾಪವಿಮುಕ್ತಾತ್ಮಾ ಸುಖಂ ಮೋಕ್ಷಂ ಲಭೇತ್ಕ್ರಮಾತ್ ॥ ೧೦೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ರುದ್ರಾಕ್ಷಮಾಹಾತ್ಮ್ಯ ವರ್ಣನಂ ನಾಮ ಸಪ್ತಪಂಚಾಶತ್ತಮೋಽಧ್ಯಾಯಃ

---

೧೦೭. ಇದನ್ನು ಓದಿದವನೂ, ಕೇಳಿದವನೂ, ಹೇಳಿದವನೂ, ಪಾಪಗಳನ್ನು ಕಳೆದುಕೊಂಡು ಮೋಕ್ಷವನ್ನೂ, ಸುಖವನ್ನೂ, ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ರುದ್ರಾಕ್ಷ ಮಾಹಾತ್ಮ್ಯ ವರ್ಣನವೆಂಬ ಐವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಅಷ್ಟಪಂಚಾಶತ್ತಮೋಽಧ್ಯಾಯಃ ॥



॥ ಸ್ಕಂದ ಉವಾಚ ॥

ಅಪರಸ್ಯಾಪಿ ಪೃಚ್ಛಾಮಿ ಫಲಸ್ಯ ಪೂತತಾಂ ತರೋಃ ।
ಸರ್ವಲೋಕಹಿತಾರ್ಥಾಯ ವದ ನೋ ಜಗದೀಶ್ವರ ॥ ೧ ॥

॥ ಈಶ್ವರ ಉವಾಚ ॥

ಧಾತ್ರೀಫಲಂ ಪರಂ ಪೂತಂ ಸರ್ವಲೋಕೇಷು ವಿಶ್ರುತಂ ।
ಯಸ್ಯ ರೋಹಾನ್ನರೋ ನಾರೀ ಮುಚ್ಯತೇ ಜನ್ಮಬಂಧನಾತ್ ॥ ೨ ॥

ಪಾವನಂ ವಾಸುದೇವಸ್ಯ ಫಲಂ ಪ್ರೀತಿಕರಂ ಶುಭಂ।
ಅಸ್ಯ ಭಕ್ಷಣಮಾತ್ರೇಣ ಮುಚ್ಯತೇ ಸರ್ವಕಲ್ಮಷಾತ್ ॥ ೩ ॥

---

## ಐವತ್ತೆಂಟನೆಯ ಅಧ್ಯಾಯವು

೧. ಸ್ಕಂದನು ಹೇಳಿದನು- ಎಲೈ ಸ್ವಾಮಿಯೇ ! ಮರಗಳಲ್ಲಿರುವ ಶ್ರೇಷ್ಠತೆಯನ್ನೂ ಮತ್ತು ಅವುಗಳನ್ನು ನೆಟ್ಟರೆ ಬರುವ ಫಲವನ್ನೂ ಕೇಳುತ್ತೇನೆ. ಸರ್ವಲೋಕ ಹಿತಕ್ಕೋಸ್ಕರ ಅದನ್ನು ನನಗೆ ಹೇಳು.

೨. ಈಶ್ವರನು ಹೇಳಿದನು- ನೆಲ್ಲಿ ಮರವು ಬಹು ಪವಿತ್ರವಾದುದೆಂದು ಎಲ್ಲೆಡೆಯಲ್ಲಿಯೂ ಹೇಳಲ್ಪಟ್ಟಿದೆ. ಅದನ್ನು ಎಬ್ಬಿಸುವುದರಿಂದ ಮನುಷ್ಯರು ಮೋಕ್ಷವನ್ನು ಹೊಂದುತ್ತಾರೆ.

೩. ಈ ನೆಲ್ಲಿ ಹಣ್ಣು ವಾಸುದೇವನಿಗೆ ಪ್ರೀತಿಕರವಾದುದು. ಇದನ್ನು ತಿಂದರೇನೇ ಪಾಪಗಳು ಹೋಗುತ್ತವೆ.

ಭಕ್ಷಣೇ ಚ ಭವೇದಾಯುಃ ಪಾನೇ ವೈ ಧರ್ಮಸಂಚಯಃ ।
ಅಲಕ್ಷ್ಮೀನಾಶನಂ ಸ್ನಾನಂ ಸರ್ವೈಶ್ವರ್ಯಮವಾಪ್ನುಯಾತ್ ॥ ೪ ॥

ಯಸ್ಮಿನ್ಗೇಹೇ ಮಹಾಸೇನ ಧಾತ್ರೀ ತಿಷ್ಠತಿ ಸರ್ವದಾ ।
ತಸ್ಮಿನ್ಗೇಹೇ ನ ಗಚ್ಛಂತಿ ಪ್ರೇತಾ ದೈತೇಯರಾಕ್ಷಸಾಃ ॥ ೫ ॥

ನ ಗಂಗಾ ನ ಗಯಾ ಚೈವ ನ ಕಾಶೀ ನ ಚ ಪುಷ್ಕರಂ ।
ಏಕೈವ ಹಿ ನೃಣಾಂ ಧಾತ್ರೀ ಸಂಪ್ರಾಪ್ತೇ ಹರಿವಾಸರೇ ॥ ೬ ॥

ಏಕಾದಶ್ಯಾಮುಭೇ ಪಕ್ಷೇ ಧಾತ್ರೀಸ್ನಾನಂ ಕರೋತಿ ಯಃ ।
ಸರ್ವಪಾಪಕ್ಷಯಂ ಯಾತಿ ವಿಷ್ಣುಲೋಕೇ ಮಹೀಯತೇ ॥ ೭ ॥

ಧಾತ್ರೀಫಲಂ ಮಹಾಸೇನ ಭಕ್ಷಣಂ ಸ್ನಾನಮೇವ ಚ ।
ನಿಯತೇ ಪಾರಣೇ ವಿಷ್ಣೋಸ್ಸ್ನಾನಮಾತ್ರಂ ಹರೇರ್ದಿನೇ ॥ ೮ ॥

ಸಂಯತೇ ಪಾರಣೇ ಚೈವ ಧಾತ್ರ್ಯೈಕಸ್ಪರ್ಶನೇ ನರಃ ।
ಭುಕ್ತ್ವಾ ತು ಲಂಘಯೇದ್ಯಸ್ತು ಏಕಾದಶ್ಯಾಂ ಸಿತಾಸಿತೇ ॥ ೯ ॥

---

೪. ಇದನ್ನು ತಿಂದರೆ ಆಯುಸ್ಸು ವೃದ್ಧಿ ಹೊಂದುತ್ತದೆ. ಇದರ ರಸವನ್ನು ಕುಡಿದರೆ ಧರ್ಮವು ಹೆಚ್ಚುತ್ತದೆ. ಇದರ ರಸದಲ್ಲಿ ಸ್ನಾನಮಾಡಿದರೆ ಅಲಕ್ಷ್ಮಿಯು ಹೋಗುತ್ತದೆ. ಸರ್ವೈಶ್ವರ್ಯವನ್ನೂ ಹೊಂದುತ್ತಾನೆ.

೫. ನೆಲ್ಲಿಯ ಮರವಿರುವ ಮನೆಗೆ ಪ್ರೇತರಾಕ್ಷಸರೊಬ್ಬರೂ ಹೋಗುವುದಿಲ್ಲ.

೬. ಹರಿವಾಸರದಲ್ಲಿ ನೆಲ್ಲಿಯ ಫಲವನ್ನು ಉಪಯೋಗಿಸಿದರೆ ಗಂಗೆ, ಗಯೆ, ಕಾಶಿ ಪುಷ್ಕರಗಳೊಂದಕ್ಕೂ ಹೋಗಬೇಕಾದುದೇ ಇಲ್ಲ.

೭. ತಿಂಗಳಿನ ಎರಡು ಪಕ್ಷಗಳಲ್ಲಿ ಬರುವ ಏಕಾದಶಿಯಲ್ಲಿ ನೆಲ್ಲಿಕಾಯನ್ನು ತಿಕ್ಕಿಕೊಂಡು ಸ್ನಾನಮಾಡಿದರೆ ಪಾಪವು ನಾಶವಾಗಿ ವಿಷ್ಣುಲೋಕವನ್ನು ಹೊಂದುತ್ತಾನೆ.

೮. ಹರಿದಿನಗಳಲ್ಲಿ ಪಾರಣೆಯ ದಿನ ಭಕ್ಷಣವೂ, ಉಪವಾಸದ ದಿನ ಸ್ನಾನವೂ ಯುಕ್ತವಾದುದು.

೯-೧೦. ಪಾರಣೆಯು ದ್ವಾದಶಿಯದಿನ ಬಾರದೇ ಮುಂದಕ್ಕೆ ಹೋದರೆ ಏಕಾದಶಿಗೂ ಪಾರಣೆಗೂ ಮಧ್ಯದ ದಿನದಲ್ಲಿ ನೆಲ್ಲಿಕಾಯನ್ನು ಸ್ಪರ್ಶಮಾತ್ರ ಮಾಡಬೇಕು.

ಏಕೇನೈವೋಪವಾಸೇನ ಕೃತೇನ ತು ಷಡಾನನ ।
ಸಪ್ತಜನ್ಮಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥ ೧೦ ॥

ಅಕ್ಷಯಂ ಲಭತೇ ಸ್ವರ್ಗಂ ವಿಷ್ಣುಸಾಯುಜ್ಯತಾಂ ವ್ರಜೇತ್ ।
ತಸ್ಮಾತ್ಸರ್ವಪ್ರಯತ್ನೇನ ಧಾತ್ರೀವ್ರತಂ ಸಮಾಚರ ॥ ೧೧ ॥

ಧಾತ್ರಿದ್ರವೇಣ ಸಾತತ್ಯಂ ಯಸ್ಯ ಕೇಶಾಸ್ಸುಸಂಚಿತಾಃ ।
ನ ಪಿಬೇತ್ಸ ಪುನರ್ಮಾತುಸ್ಸ್ತನಂ ಕಶ್ಚಿತ್ಷಡಾನನ ॥ ೧೨ ॥

ಧಾತ್ರೀದರ್ಶನಸಂಸ್ಪರ್ಶಾನ್ನಾಮ್ನ ಉಚ್ಚಾರಣೇಪಿ ವಾ ।
ವರದಸ್ಸಮ್ಮುಖೋ ವಿಷ್ಣುಸ್ಸಂತುಷ್ಟೋ ಭವತಿ ಪ್ರಿಯಃ ॥ ೧೩ ॥

ಧಾತ್ರೀಫಲಂ ಚ ಯತ್ರಾಸ್ತಿ ತತ್ರ ತಿಷ್ಠತಿ ಕೇಶವಃ ।
ತತ್ರ ಬ್ರಹ್ಮಾ ಸ್ಥಿರಾ ಪದ್ಮಾ ತಸ್ಮಾತ್ತಾಂ ತು ಗೃಹೇ ನ್ಯಸೇತ್ ॥ ೧೪ ॥

---

ಏಕಾದಶಿಯು ಇದ್ದೂ ಇಲ್ಲದ ಹಾಗೂ ಅನುಮಾನವಾಗಿದ್ದರೆ ಒಂದೇ ಉಪವಾಸದ ಪಾರಣೆಯನ್ನು ಮಾಡಬೇಕು. ಆಗ ಆ ಕಾಯನ್ನು ತಿನ್ನಬೇಕು. ಇದರಿಂದಲೇ ಏಳು ಜನ್ಮದ ಪಾಪವು ಹೋಗುತ್ತದೆ

೧೧. ಅಕ್ಷಯಸ್ವರ್ಗವನ್ನು ಹೊಂದಿ ವಿಷ್ಣುಸಾಯುಜ್ಯವನ್ನು ಹೊಂದುತ್ತಾನೆ. ಆದ್ದರಿಂದ ಸರ್ವಪ್ರಯತ್ನದಿಂದಲೂ ನೆಲ್ಲಿಯಕಾಯನ್ನು ತಿನ್ನಬೇಕು.

೧೨. ನೆಲ್ಲಿಯ ದ್ರವದಿಂದ ಯಾವನ ಕೂದಲುಗಳು ಯಾವಾಗಲೂ ನೆನೆದು ಪ್ರಕಾಶಿಸುತ್ತಾನೆಯೋ ಅವನಿಗೆ ಪುನರ್ಜನ್ಮವಿಲ್ಲ.

೧೩. ನೆಲ್ಲಿಯಕಾಯನ್ನು ನೋಡುವುದು, ಮುಟ್ಟುವುದು, ಹೆಸರು ಹೇಳುವುದು, ಇವುಗಳಿಂದ ವಿಷ್ಣುವು ಸಂತೋಷಗೊಂಡು ವರದನಾಗುತ್ತಾನೆ.

೧೪. ಧಾತ್ರೀ ಫಲವಿರುವಲ್ಲಿ ವಿಷ್ಣು, ಬ್ರಹ್ಮ, ಲಕ್ಷ್ಮಿಯರಿರುತ್ತಾರೆ. ಆದ್ದರಿಂದ ಅದನ್ನು ಮನೆಯಲ್ಲಿ ಪ್ರಯತ್ನಪಟ್ಟು ಇಟ್ಟಿರಬೇಕು.

ಅಲಕ್ಷ್ಮೀರ್ನಶ್ಯತೇ ತತ್ರ ಯತ್ರ ಧಾತ್ರೀ ಪ್ರತಿಷ್ಠತಿ ।
ಸಂತುಷ್ಟಾಸ್ಸರ್ವದೇವಾಶ್ಚ ನ ತ್ಯಜಂತಿ ಕ್ಷಣಂ ಮುದಾ ॥ ೧೫ ॥

ಧಾತ್ರೀಫಲೇನ ನೈವೇದ್ಯಂ ಯೋ ದದಾತಿ ಮಹಾಧನಂ ।
ತಸ್ಯ ತುಷ್ಟೋ ಭವೇದ್ವಿಷ್ಣುರ್ನಾನ್ಯೈಃ ಕ್ರತುಶತೈರಪಿ ॥ ೧೬ ॥

ಸ್ನಾತ್ವಾ ಧಾತ್ರೀದ್ರವೇಣೈವ ಪೂಜಯೇದ್ಯಸ್ತು ಮಾಧವಂ ।
ಸೋಭೀಷ್ಟಫಲಮಾಪ್ನೋತಿ ಯದ್ವಾ ಮನಸಿ ವರ್ತತೇ ॥ ೧೭ ॥

ತಥೈವ ಲಕ್ಷಣಂ ಸ್ಮೃತ್ವಾ ಪೂಜಯಿತ್ವಾ ಫಲೇನ ತು ।
ಸುವರ್ಣಶತಸಾಹಸ್ರಂ ಫಲಮೇತಿ ನರೋತ್ತಮಃ ॥ ೧೮ ॥

ಯಾ ಗತಿರ್ಜ್ಞಾನಿನಾಂ ಸ್ಕಂದ ಮುನೀನಾಂ ಯೋಗಸೇವಿನಾಂ ।
ಗತಿಂ ತಾಂ ಸಮವಾಪ್ನೋತಿ ಧಾತ್ರೀ ಸೇವಾರತೋ ನರಃ ॥ ೧೯ ॥

ತೀರ್ಥಸೇವಾಭಿಗಮನೈರ್ವ್ರತೈಶ್ಚ ವಿವಿಧೈಸ್ತಥಾ ।
ಸಾ ಗತಿರ್ಲಭ್ಯತೇ ಪುಂಸಾಂ ಧಾತ್ರೀಫಲಸುಸೇವಯಾ ॥ ೨೦ ॥

---

೧೫. ಧಾತ್ರಿಯಿರುವಲ್ಲಿ ಅಲಕ್ಷ್ಮಿಯು ಇರುವುದೇ ಇಲ್ಲ. ಆ ಜಾಗದಲ್ಲಿ ದೇವತೆಗಳು ಸಂತೋಷಗೊಂಡು ಬಿಡದೇ ಇರುತ್ತಾರೆ.

೧೬. ಧಾತ್ರೀಫಲವನ್ನು ನೈವೇದ್ಯಮಾಡಿದರೆ ವಿಷ್ಣುವು ಸಂತೋಷಪಡುವಂತೆ ನೂರಾರು ಯಾಗಗಳಿಂದಲೂ ಸಂತೋಷಪಡುವುದಿಲ್ಲ.

೧೭. ನೆಲ್ಲಿಯಕಾಯಿಯಿಂದ (ರಸದಿಂದ) ಸ್ನಾನಮಾಡಿ ಮಾಧವನನ್ನು ಪೂಜಿಸಿದರೆ ಇಷ್ಟವು ಕೈಗೂಡುತ್ತದೆ.

೧೮. ಆ ಧಾತ್ರೀಫಲದಿಂದ ಶಾಸ್ತ್ರದಲ್ಲಿ ಹೇಳಿರುವಂತೆ ದೇವರಿಗೆ ಪೂಜೆಮಾಡಿದರೆ ಸಾವಿರಾರು ಚಿನ್ನದ ನಾಣ್ಯಗಳನ್ನು ಹೊಂದುತ್ತಾನೆ. (ಐಶ್ವರ್ಯವು ಬರುತ್ತದೆ.)

೧೯. ಧಾತ್ರಿಯ ಸೇವೆಯನ್ನು ಮಾಡಿದವನು ಜ್ಞಾನಿಗಳಿಗೆ, ಮುನಿಗಳಿಗೆ ಬರುವ ಗತಿಯನ್ನು ಹೊಂದುತ್ತಾನೆ.

೨೦. ಧಾತ್ರಿಯ ಸೇವೆಯಿಂದ ತೀರ್ಥಸೇವೆಯ ಮತ್ತು ವ್ರತಗಳ ಫಲವು ಬರುತ್ತದೆ.

ಪ್ರೀತಿಶ್ಚ ಸರ್ವದೇವಾನಾಂ ದೇವೀನಾಂ ನೋ ಗಣಸ್ಯ ಚ ।
ಸಮ್ಮುಖಾ ವರದಾ ಸ್ನಾನೇ ಧಾತ್ರೀಫಲನಿಷೇವಣೇ ॥ ೨೧ ॥

ಗ್ರಹಾ ದುಷ್ಟಾಶ್ಚ ಯೇ ಕೇಚಿದುಗ್ರಾಶ್ಚ ದೈತ್ಯರಾಕ್ಷಸಾಃ ।
ಸರ್ವೇ ನ ದುಷ್ಟತಾಂ ಯಾಂತಿ ಧಾತ್ರೀಫಲಸುಸೇವನಾತ್ ॥ ೨೨ ॥

ಸರ್ವಯಜ್ಞೇಷು ಕಾರ್ಯೇಷು ಶಸ್ತಂ ಚಾಮಲಕೀಫಲಂ ।
ಸರ್ವದೇವಸ್ಯ ಪೂಜಾಯಾಂ ವರ್ಜಯಿತ್ವಾ ರವಿಂ ಸುತ ॥ ೨೩ ॥

ತಸ್ಮಾದ್ರವಿದಿನೇ ತಾತ ಸಪ್ತಮ್ಯಾಂ ಚ ವಿಶೇಷತಃ ।
ಧಾತ್ರೀ ಫಲಾನಿ ಸಾತತ್ಯಂ ದೂರತಃ ಪರಿವರ್ಜಯೇತ್ ॥ ೨೪ ॥

ಯಸ್ತು ಸ್ನಾತಿ ತಥಾಶ್ನಾತಿ ಧಾತ್ರೀಂ ಚ ರವಿವಾಸರೇ ।
ಆಯುರ್ವಿತ್ತಂ ಕಳತ್ರಂ ಚ ಸರ್ವಂ ತಸ್ಯ ವಿನಶ್ಯತಿ ॥ ೨೫ ॥

ಸಂಕ್ರಾಂತ್ಯಾಂ ಚ ಭೃಗೋರ್ವಾರೇ ಪುಷ್ಯಾಂ ಪ್ರತಿಪದಿ ಧ್ರುವಂ ।
ನವಮ್ಯಾಂ ಚಾಪ್ಯಮಾಯಾಂ ಚ ಧಾತ್ರೀಂ ದೂರಾತ್ಪರಿತ್ಯಜೇತ್ ॥ ೨೬ ॥

---

೨೧. ಧಾತ್ರೀಫಲವನ್ನು ಸೇವಿಸಿದರೆ ದೇವತೆಗಳ ದೇವಿಯರ ಶಿವಗಣದ ಪ್ರೀತಿಯುಂಟಾಗುತ್ತದೆ.

೨೨. ಧಾತ್ರೀಫಲದ ಸೇವನೆಯಿಂದ ದುಷ್ಟರಾದ ಗ್ರಹಗಳೂ ಕ್ರೂರರಾದ ದೈತ್ಯರಾಕ್ಷಸರೂ ಸುಮುಖರಾಗುತ್ತಾರೆ.

೨೩. ಎಲ್ಲಾ ಯಜ್ಞಗಳಲ್ಲಿಯೂ ಎಲ್ಲಾ ದೇವರ ಪೂಜೆಗಳಲ್ಲಿಯೂ ಈಧಾತ್ರೀ ಫಲವು ಶ್ರೇಷ್ಠವಾದುದು. ಆದರೆ ಸೂರ್ಯನ ಪೂಜಾದಿಗಳಲ್ಲಿ ಇದು ನಿಷಿದ್ಧವು.

೨೪. ಆದ್ದರಿಂದ ಸೂರ್ಯನ ದಿನಗಳಲ್ಲಿಯೂ, ಸಪ್ತಮಿಯಲ್ಲಿಯೂ ಈ ಧಾತ್ರಿಯನ್ನು ಸೇವಿಸಬಾರದು.

೨೫. ಸೂರ್ಯನ ವಾರದಿನಗಳಲ್ಲಿ ಧಾತ್ರೀಹಣ್ಣನ್ನು ಸೇವಿಸಿದರೂ ಅದರಿಂದ ಸ್ನಾನಮಾಡಿದರೂ ಆಯುಸ್ಸು, ಹಣ, ಹೆಂಡಿರು, ಎಲ್ಲವೂ, ನಾಶವಾಗುತ್ತವೆ.

೨೬. ಸಂಕ್ರಾತಿ, ಶುಕ್ರವಾರ, ಷಷ್ಠಿ, ಪಾಡ್ಯ, ನವಮಿ ಅಮಾವಾಸ್ಯೆಗಳಲ್ಲಿಯೂ ಧಾತ್ರೀ ಫಲವನ್ನು ಸೇವಿಸಬಾರದು.

ಸಂಕ್ರಾಂತ್ಯಾಂ ಚ ಭವೇದ್ರೋಗೀ ಅಲಕ್ಷ್ಮೀರ್ಭೃಗುವಾಸರೇ ।
ಅನಪತ್ಯಂ ಯದಾ ಷಷ್ಠ್ಯಾಂ ನವಮ್ಯಾಮಾಯುಷಃ ಕ್ಷಯಃ ॥ ೨೭ ॥

ದಶಧಾತ್ರೀಸಮಾಯೋಗಾತ್ಸರ್ವನಾಶಂ ವಿನಿರ್ದಿಶೇತ್ ।
ನಾಸಿಕಾ ಕರ್ಣಕುಂಡೇಷು ಮೃತಸ್ಯ ಚಿಕುರೇಷು ವಾ ॥ ೨೮ ॥

ತಿಷ್ಠೇದ್ಧಾತ್ರೀಫಲಂ ಯಸ್ಯ ಸ ಯಾತಿ ವಿಷ್ಣುಮಂದಿರಂ ।
ಧಾತ್ರೀ ಸಂಪರ್ಕಮಾತ್ರೇಚ ಮೃತೋ ಯಾತ್ಯಚ್ಯುತಾಲಯಂ ॥ ೨೯ ॥

ಸರ್ವಪಾಪಕ್ಷಯಸ್ತಸ್ಯ ಸ್ವರ್ಗಂ ಯಾತಿ ರಥೇನ ತು ।
ಧಾತ್ರೀದ್ರವಂ ನರೋ ಲಿಪ್ತ್ವಾ ಯಸ್ತು ಸ್ನಾನಂ ಸಮಾಚರೇತ್ ॥ ೩೦ ॥

ಪದೇ ಪದೇಶ್ವಮೇಧಸ್ಯ ಫಲಂ ಪ್ರಾಪ್ನೋತಿ ಧಾರ್ಮಿಕಃ ।
ಅಸ್ಯ ದರ್ಶನಮಾತ್ರೇಣ ಯೇ ವೈ ಪಾಪಿಷ್ಠಜಂತವಃ ॥ ೩೧ ॥

ಸರ್ವೇ ತೇ ಪ್ರಪಲಾಯಂತೇ ಗ್ರಹಾ ದುಷ್ಟಾಶ್ಚ ದಾರುಣಾಃ ।
ಪುರೈಕಃ ಪುಲ್ಕಸಸ್ಸ್ಕಂದ ಮೃಗಯಾರ್ಥಂ ವನಂ ಗತಃ ॥ ೩೨ ॥

ಮೃಗಪಕ್ಷಿಗಣಾನ್ಹತ್ವಾ ತೃಷಯಾ ಪರಿಪೀಡಿತಃ ।
ಕ್ಷುಧಯಾಮಲಕೀವೃಕ್ಷಂ ಪುರಃ ಪೀನಫಲಾನ್ವಿತಂ ॥ ೩೩ ॥

---

೨೭. ಸಂಕ್ರಾಂತಿಯಲ್ಲಿ ರೋಗವೂ, ಶುಕ್ರವಾರದಲ್ಲಿ ದಾರಿದ್ರ್ಯವೂ, ಷಷ್ಠಿಯಲ್ಲಿ ಮಕ್ಕಳಾಗದಿರುವಿಕೆಯೂ, ನವಮಿಯಲ್ಲಿ ಆಯುಸ್ಸಿನ ನಾಶವೂ ಆಗುತ್ತವೆ.

೨೮-೩೬. ಮೇಲೆ ಹೇಳಿದ ಹತ್ತು ದಿನಗಳಲ್ಲಿ ಧಾತ್ರಿಯ ಹಣ್ಣನ್ನುಪಯೋಗಿಸಿದರೆ ಸರ್ವನಾಶವೂ, ಆಗುತ್ತದೆ. ಮೂಗು, ಕಿವಿ, ತುಟಿ, ಜುಟ್ಟುಗಳಲ್ಲಿ ಸತ್ತವನಿಗೆ ಇಟ್ಟರೆ ಅವನ ಪಾಪವೆಲ್ಲವೂ ನಾಶವಾಗಿ ವಿಮಾನದಿಂದ ವೈಕುಂಠಕ್ಕೆ ಹೋಗುತ್ತಾನೆ. ಧಾತ್ರಿಯ ಕಾಯಿನ ನೀರನ್ನು ಹಚ್ಚಿಕೊಂಡು ಸ್ನಾನಮಾಡಿದರೇನೆ ಹೆಜ್ಜೆ ಹೆಜ್ಜೆಗೂ ಅಶ್ವಮೇಧದ ಫಲವನ್ನು ಹೊಂದುತ್ತಾನೆ. ಇದನ್ನು ನೋಡಿದ ಕೂಡಲೇ ಪಾಪಿಗಳೂ ದುಷ್ಟಗ್ರಹಗಳೂ ಓಡುತ್ತವೆ. ಪೂರ್ವದಲ್ಲಿ ಒಬ್ಬ ಚಂಡಾಲನು ಬೇಟೆಗೋಸ್ಕರ ಕಾಡಿಗೆ ಹೋಗಿ ಅನೇಕ ಪ್ರಾಣಿಗಳನ್ನು ಕೊಂದು ಬಾಯಾರಿ ಮುಂದುಗಡೆಯಲ್ಲ ಹಣ್ಣು ಬಿಟ್ಟಿದ್ದ ನೆಲ್ಲಿ ಮರವನ್ನು ನೋಡಿ ಹತ್ತಿ ಬೇಕಾದಷ್ಟು ಹಣ್ಣುಗಳನ್ನು

ದೃಷ್ಟ್ವಾ ಸಂರುಹ್ಯ ಸಹಸಾ ಚಖಾದ ಫಲಮುತ್ತಮಂ ।
ತತೋ ದೈವಾತ್ಸ ವೃಕ್ಷಾಗ್ರಾನ್ನಿಪಪಾತ ಧರಾತಲೇ ॥ ೩೪ ॥

ವೇದನಾಮನುಸಂವಿದ್ಧಃ ಪಂಚತ್ವಮುಗಮತ್ತದಾ ।
ತತಃ ಪ್ರೇತಗಣಾಸ್ಸರ್ವೇ ರಕ್ಷೋಭೂತಗಣಾಸ್ತಥಾ ॥ ೩೫ ॥

ತಂ ತು ವೋಢುಂ ಮುದಾ ಸರ್ವೇ ಯೇ ವೈ ಶಮನಸೇವಕಾಃ ।
ನ ಶಕ್ನುವಂತಿ ಚಾಂಡಾಲಂ ಮೃತಂ ದ್ರಷ್ಟುಂ ಮಹಾಬಲಾಃ ॥ ೩೬ ॥

ಅನ್ಯೋನ್ಯಂ ವಿಗ್ರಹಸ್ತೇಷಾಮ್ಮಮಾಯಮಿತಿ ಭಾಷತಾಂ ।
ಗೃಹೀತುಂ ಚ ವಿನೇತುಂ ಚ ನ ಶಕ್ತಾಸ್ತೇ ಪರಸ್ಪರಂ ॥
ತತಸ್ತೇ ತು ಸಮಾಲೋಕ್ಯ ಗತಾ ಮುನಿಗಣಾನ್ಪ್ರತಿ ॥ ೩೭ ॥

॥ ಪ್ರೇತಾ ಊಚುಃ ॥

ಕಿಮರ್ಥಂ ಮುನಯೋ ಧೀರಾಶ್ಚಾಂಡಾಲಂ ಪಾಪಕಾರಿಣಂ ।
ಪ್ರೇಕ್ಷಿತುಂ ನ ವಯಂ ಶಕ್ತಾ ನ ಚಾಪಿ ಯಮಸೇವಕಾಃ ॥ ೩೮ ॥

ಮ್ರಿಯಂತೇ ಘಾತಿತಾ ಯೇ ಚ ಸ್ಥಿರೈರ್ಯುದ್ಧಪರಾಙ್ಮುಖಾಃ ।
ಸಾಹಸೈಃ ಪಾತಿತಾ ಭೀತಾ ವಜ್ರಾಗ್ನಿಕಾಷ್ಠಪೀಡಿತಾಃ ॥ ೩೯ ॥

---

ತಿಂದನು. ಅನಂತರ ಅವನು ಕೈತಪ್ಪಿ ಮರದಿಂದ ಬಿದ್ದು ನೋವಾಗಿ ಅದನ್ನು ತಾಳಲಾರದೆ ಸತ್ತುಹೋದನು. ಅನಂತರ ಯಮನ ಕಡೆಯ ಪ್ರೇತಪಿಶಾಚಿಗಳು ಅವನನ್ನು ಕೊಂಡೊಯ್ಯಲು ಬಂದುವು. ಆದರೂ ಸತ್ತ ಅವನನ್ನು ನೋಡಲು ಕೂಡ ಆಗಲಿಲ್ಲ.

೩೭. ನಾನು ತೆಗೆದುಕೊಂಡು ಹೋಗಬೇಕು, ತಾನು ತೆಗೆದುಕೊಂಡು ಹೋಗಬೇಕೆಂದು ಜಗಳ ಹುಟ್ಟಿತು. ಅದರೂ ಮುಟ್ಟಲೂ, ಕೊಂಡೊಯ್ಯಲೂ ಆಗಲಿಲ್ಲ. ಆಗ ಅವು ಯೋಚಿಸಿ ಮುನಿಗಳಲ್ಲಿಗೆ ಹೋದುವು.

೩೮ ಪ್ರೇತನು ಹೇಳಿದನು–ಎಲೈ ಧೀರರಾದ ಋಷಿಗಳಿರಾ! ಈ ಪಾಪಿಯಾದ ಚಂಡಾಲನನ್ನು ನಾವಾಗಲೀ, ಯಮನ ಕಿಂಕರರಾಗಲೀ ನೋಡುವುದಕ್ಕೂ ಶಕ್ತರಾಗಿಲ್ಲವಲ್ಲಾ, ಕಾರಣವೇನು ?

೩೯-೪೪. ಏಟುತಿಂದು ಸತ್ತವರು, ಯುದ್ಧದಲ್ಲಿ ಪರಾಙ್ಮುಖರಾಗಿ ಸತ್ತವರು, ಶಕ್ತಿಮೀರಿದ ಕೆಲಸಗಳಿಂದ ಬಿದ್ದು ಸತ್ತವರು, ಭಯದಿಂದ ಸತ್ತವರು, ಸಿಡಿಲು, ಬೆಂಕಿ, ಮರ ಮುಂತಾದುವುಗಳಿಂದ ಸತ್ತವರು, ಸಿಂಹಹುಲಿಗಳಿಂದ ಕೊಲ್ಲಲ್ಪಟ್ಟವರು

ಸಿಂಹವ್ಯಾಘ್ರಹತಾ ಮರ್ತ್ಯಾ ವ್ಯಾಘ್ರೈರ್ವಾ ಜಲಜಂತುಭಿಃ ।
ಜಲಸ್ಥಲಸ್ಥಿತಾಃ ಪ್ರೇತಾ ವೃಕ್ಷಪರ್ವತಪಾತಿತಾಃ ॥ ೪೦ ॥

ಪಶುಪಕ್ಷಿಹತಾ ಯೇ ಚ ಕಾರಾಗಾರಾ ಗರೇ ಮೃತಾಃ ।
ಆತ್ಮಾಘಾತಮೃತಾ ಯೇ ಚ ಶ್ರಾದ್ಧಾದಿಕರ್ಮವರ್ಜಿತಾಃ ॥ ೪೧ ॥

ಗೂಢಕರ್ಮಮೃತಾ ಧೂರ್ತಾ ಗುರುವಿಪ್ರನೃಪದ್ವಿಷಃ ।
ಪಾಷಂಡಾಃ ಕೌಲಿಕಾಃ ಕ್ರೂರಾಃ ಗರದಾಃ ಕೂಟಸಾಕ್ಷಿಣಃ ॥ ೪೨ ॥

ಆಶೌಚಾನ್ನಸ್ಯ ಭೋಕ್ತಾರಃ ಪ್ರೇತಭೋಗ್ಯಾ ನ ಸಂಶಯಃ ।
ಏತೇ ಚಾನ್ಯೇ ಚ ಯೇ ಧೀರಾಃ ಪ್ರವದಾಮಃ ಪ್ರಧಾನತಃ ॥ ೪೩ ॥

ನೋ ಚೇತ್ಕಿಂಚಿದ್ಭಯಂ ಪ್ರಾಪ್ಯ ಯಮಲೋಕಂ ವ್ರಜಂತಿ ತೇ ।
ಕಿಂಕರಾ ಯೇ ಚ ಧರ್ಮಸ್ಯ ವಯಂ ಪ್ರೇತಾಶ್ಚರಾಕ್ಷಸಾಃ ॥ ೪೪ ॥

ಮಮಾಯಮಿತಿ ಭಾಷಂತೋ ನೇತುಂ ತಂ ಚ ನ ಶಕ್ನುಮಃ ।
ಆದಿತ್ಯ ಇವ ದುಷ್ಪ್ರೇಕ್ಷ್ಯಃ ಕಿಂ ವಾ ತಸ್ಯ ಪ್ರಭಾವತಃ ॥ ೪೫ ॥

---

ಕ್ರೂರಪ್ರಾಣಿಗಳಿಂದಾಗಲೀ, ನೀರಿನಲ್ಲಿರುವ ಮೊಸಳೆ, ಮೀನು, ಮೊದಲಾದುವುಗಳಿಂದಾಗಲೀ, ಸತ್ತವರು, ಮರ, ಬೆಟ್ಟಗಳಿಂದ ಬಿದ್ದು ಸತ್ತವರು, ಪಶುಪಕ್ಷಿಗಳಿಂದ ಸತ್ತವರು, ಕಾರಾಗೃಹದಲ್ಲಿ ಸತ್ತವರು, ವಿಷದಿಂದ ಸತ್ತವರು, ಆತ್ಮಹತ್ಯೆ ಮಾಡಿಕೊಂಡವರು, ಶ್ರದ್ಧೆಯಿಂದ ಕೂಡಿದ ಕರ್ಮವನ್ನು ಬಿಟ್ಟು ಸತ್ತವರು ಗುಟ್ಟಾಗಿ ಪಾಪಮಾಡಿ ಸತ್ತವರು, ಧೂರ್ತರಾಗಿದ್ದು ಸತ್ತವರು, ಗುರು, ಬ್ರಾಹ್ಮಣ, ರಾಜದ್ವೇಷದಿಂದ ಸತ್ತವರು, ಇಂತಹವರೂ, ಪಾಷಂಡಿಗಳೂ, ಮನೆಮನೆಗೂ ಸುತ್ತಿ ಕೆಲಸಮಾಡುವವರೂ, ಕ್ರೂರರೂ, ವಿಷಹಾಕುವವರೂ, ಸುಳ್ಳುಸಾಕ್ಷಿ ನುಡಿಯುವವರೂ, ಆಶೌಚದ ಅನ್ನವನ್ನು ತಿನ್ನುವವರೂ, ಇವರೆಲ್ಲರೂ, ಪ್ರೇತಗಳಿಗೆ ತಿನ್ನಲರ್ಹರು. ಸಂಶಯವಿಲ್ಲ. ನಾವು ಹೇಳಿದ ಇವರು ಇದೇ ರೀತಿಯಾದವರು. ಮತ್ತೆ ಕೆಲವರು ಭಯಶೀಲರು. ಇವರು ನಮ್ಮಿಂದ ಭಯವನ್ನು ಹೊಂದುತ್ತಾ ಯಮಲೋಕಕ್ಕೆ ಹೋಗಬೇಕು. ನಾವೂ ಪ್ರೇತಗಳೂ, ರಾಕ್ಷಸರೂ ಯಮನಲ್ಲಿ ಆಳುಗಳು.

೪೫. ನನ್ನವನು ನನ್ನವನು ಎಂದು ಮೇಲೆ ಬಿದ್ದು ಹೋದರೆ ತೆಗೆದುಕೊಂಡು ಹೋಗಲು ಆಗುತ್ತಿಲ್ಲ. ನೋಡಲು ಸೂರ್ಯನಂತೆ ಕಣ್ಣು ಕುಕ್ಕವನು ಇದೇನು ? ಇದು ಯಾತರ ಪ್ರಭಾವವು ?

॥ ಮುನಯ ಊಚುಃ ॥

ಅನೇನ ಭಕ್ಷಿತಂ ಪ್ರೇತಾಃ ಪಕ್ವಂ ಚಾಮಲಕೀಫಲಂ ।
ತತ್ಸಂಗಘಾತಿತಸ್ಯೈವ ಫಲಾನಿ ಪ್ರಚುರಾಣಿ ಚ ॥ ೪೬ ॥

ತೇನೈವ ಕಾರಣೇನಾಯಂ ದುಷ್ಪ್ರೇಕ್ಷ್ಯೋ ಭವತಾಂ ಧ್ರುವಂ ।
ವೃಕ್ಷಾಗ್ರಪತಿತಸ್ಯಾಥ ಪ್ರಾಣಸ್ನೇಹಾನ್ನ ಚ ತ್ಯಜೇತ್ ॥ ೪೭ ॥

ನಾಯಂ ವಾರೇಣ ಸೂರ್ಯಸ್ಯ ನ ಚಾನ್ಯೇ ಪಾಪಕಾರಿಣಃ ।
ಧಾತ್ರೀಭಕ್ಷಣಮಾತ್ರೇಣ ಪಾಪಾತ್ಪೂತೋ ವ್ರಜೇದ್ದಿವಂ ॥ ೪೮ ॥

॥ ಪ್ರೇತಾ ಊಚುಃ ॥

ವಃ ಪೃಚ್ಛಾಮಸ್ಸುವಿಜ್ಞಾನಾನ್ನ ವಯಂ ನಿಂದಕಾಃ ಕ್ವಚಿತ್ ।
ವಿಷ್ಣುಲೋಕಾದ್ವಿಮಾನಂ ತು ಯಾವನ್ನೈವಾತ್ರ ಗಚ್ಛತಿ ॥ ೪೯ ॥

ಉಚ್ಯತಾಂ ಮುನಿಶಾರ್ದೂಲ ವೋ ದ್ರುತಂ ಮನಸಿ ಸ್ಥಿತಂ ।
ಯಾವದ್ದ್ವಿಜಾ ನ ಪೋಷಂತಿ ವೇದಮಂತ್ರಾದಿಕಲ್ಪಿತಂ ॥ ೫೦ ॥

---

೪೬-೪೭. ಮುನಿಗಳು ಹೇಳಿದರು- ಎಲೈ ಪ್ರೇತಗಳಿರಾ ! ಈತನು ಈ ನೆಲ್ಲೀ ಮರವನ್ನು ಹತ್ತಿ ಹಣ್ಣುಗಳನ್ನು ತಿಂದನು. ಅನೇಕ ಹಣ್ಣುಗಳು ಅವನ ಮೈಮೇಲೆ ಬಿದ್ದಿವೆ. ಆದ್ದರಿಂದಲೇ ಇವನು ನಿಮಗೆ ನೋಡಲು ಅಸಾಧ್ಯನಾಗಿರುವನು. ಅಲ್ಲದೆ ಮರದಿಂದ ಬಿದ್ದ ಈತನು ಪ್ರಾಣಗಳನ್ನು ಸುಖವಾಗಿ ಬಿಟ್ಟನು. ಅಲ್ಲದೇ ಲೋಭ ದಿಂದ ತಡೆದುಕೊಂಡೂ ಇರಲಿಲ್ಲ.

೪೮. ಇವನು ಸೂರ್ಯನ ವಾರದಲ್ಲಿಯಾಗಲೀ. ಪಾಪಕರಗಳಿಂದ ನೆಲ್ಲೀ ಹಣ್ಣನ್ನು ತಿನ್ನಲು ಬಾರದ ದಿನದಲ್ಲಿಯಾಗಲೀ, ತಿಂದಿಲ್ಲ. ಆದ್ದರಿಂದ ಪಾಪಗಳನ್ನು ಕಳೆದುಕೊಂಡಿದ್ದಾನೆ. ಸ್ವರ್ಗಕ್ಕೆ ಹೋಗತಕ್ಕವನು.

೪೯-೫೦. ಪ್ರೇತನು ಹೇಳಿದನು- ಅಯ್ಯಾ! ನಿಮ್ಮನ್ನು ಕೇಳುವುದು ತಿಳಿದು ಕೊಳ್ಳಬೇಕೆಂಬ ಇಚ್ಛೆಯಿಂದಲೇ ಹೊರತು ನಿಂದೆಗೋಸ್ಕರವಲ್ಲ. ವಿಷ್ಣುಲೋಕದಿಂದ ವಿಮಾನವು ಇನ್ನೂ ಬಂದಿಲ್ಲ. ಬರುವುದರೊಳಗೆ ನಾವು ಕೇಳುವುದೆಲ್ಲವನ್ನೂ ತಿಳಿಸಿ.

ಘೋಷ್ಯಂತೇ ಯತ್ರ ವೇದಾಶ್ಚ ಮಂತ್ರಾಣಿ ವಿವಿಧಾನಿ ಚ ।
ಪುರಾಣಸ್ಮೃತಯೋ ಯತ್ರ ತತ್ರ ಸ್ಥಾತುಂ ನ ಶಕ್ನುಮಃ ॥ ೫೧ ॥

ಯಜ್ಞಹೋಮಜಪಸ್ಥಾನದೇವತಾರ್ಚನಕರ್ಮಣಾಂ ।
ಪುರತೋ ನೈವ ತಿಷ್ಠಾಮಸ್ತಸ್ಮಾದ್ವೃತ್ತಂ ಸಮುಚ್ಯತಾಂ ॥ ೫೨ ॥

ಕಿಂ ವೈ ಕೃತ್ವಾ ಪ್ರೇತಯೋನಿಂ ಲಭಂತೇ ಹಿ ನರಾ ದ್ವಿಜಾಃ ।
ಶ್ರೋತುಮಿಚ್ಛಾಮಹೇ ಸಮ್ಯಕ್ಕಥಂ ವೈ ವಿಕೃತಂ ವಪುಃ ॥ ೫೩ ॥

॥ ದ್ವಿಜಾ ಊಚುಃ ॥

ಶೀತವಾತಾತಪಕ್ಲೇಶೈಃ ಕ್ಷುತ್ಪಿಪಾಸಾವಿಶೇಷಕೈಃ ।
ಅನ್ಯೈರಪಿ ಚ ದುಃಖೈಶ್ಚ ಪೀಡಿತಾಃ ಕೂಟಸಾಕ್ಷಿಣಃ ॥ ೫೪ ॥

ವಧಬಂಧಪ್ರಮೀತಾಶ್ಚ ಪ್ರೇತಾಸ್ತೇ ನಿರಯಂ ಗತಾಃ ।
ಛಿದ್ರಾನ್ವೇಷಪರಾ ಯೇ ಚ ದ್ವಿಜಾನಾಂ ಕರ್ಮಘಾತಿನಃ ॥ ೫೫ ॥

---

ಬ್ರಾಹ್ಮಣನು ವೇದಮಂತ್ರಗಳನ್ನೂ, ಶಾಸ್ತ್ರಾರ್ಥಗಳನ್ನೂ, ಪುರಾಣ ಸ್ಮೃತಿಗಳನ್ನೂ ಹೇಳುವುದರೊಳಗೆ ನಮಗೆ ಹೇಳಿ ಕಳುಹಿಸಿ. ಇವುಗಳ ಧ್ವನಿಯಿರುವಲ್ಲಿ ನಮ್ಮಿಂದಿರಲು ಸಾಧ್ಯವಿಲ್ಲ.

೫೨. ಯಜ್ಞ, ಹೋಮ, ಜಪಮಾಡುವುದು, ಈ ಸ್ಥಳಗಳಲ್ಲಿಯೂ, ದೇವರನ್ನು ಪೂಜಿಸುವ ಸ್ಥಳಗಳಲ್ಲಿಯೂ, ಇರಲು ನಮ್ಮಿಂದಾಗುವುದಿಲ್ಲ. ಆದ್ದರಿಂದ ಬೇಗ ಹೇಳಿರಿ.

೫೩. ಯಾವ ಪಾಪಕೆಲಸವನ್ನು ಮಾಡಿದರೆ ಮನುಜರು ಪ್ರೇತಗಳಾಗುತ್ತಾರೆ ? ಈ ವಿಕಾರವಾದ ದೇಹವು ಬರಲು ಕಾರಣವೇನು ? ಇವೆಲ್ಲವನ್ನೂ ಸರಿಯಾಗಿ ಹೇಳಿರಿ.

೫೪-೬೦. ಶೀತ, ವಾತಗಳು, ಬಿಸಿಲು, ಹಸಿವು, ಬಾಯಾರಿಕೆ, ಇನ್ನೂ ಇತರ ದುಃಖಗಳಿಂದಲೂ ತೊಂದರೆಪಡಿಸಿದವರು, ಸುಳ್ಳು ಸಾಕ್ಷಿ ಹೇಳುವವರು, ವಧೆಯಿಂದಲೂ, ಬಂಧನದಿಂದಲೂ, ಸತ್ತವರು, ಪ್ರೇತಗಳಾಗಿ ನರಕವನ್ನು ಹೊಂದುತ್ತಾರೆ. ಇನ್ನೊಬ್ಬರ ಹುಳುಕನ್ನೇ ಹುಡುಕುವವರು, ಬ್ರಾಹ್ಮಣರ ಕೆಲಸಗಳಿಗೆ

ತಥೈವ ಚ ಗುರೂಣಾಂ ಚ ತೇ ಪ್ರೇತಾಶ್ಚ ಪುನರ್ಭವಾಃ ।
ದೀಯಮಾನೇ ದ್ವಿಜಾಗ್ರೇ ತು ದಾತಾರಂ ಪ್ರತಿಷಿಧ್ಯತಿ ॥ ೫೬ ॥

ಚಿರಂ ಪ್ರೇತತ್ವಮಾಶ್ರಿತ್ಯ ನರಕಾನ್ನ ನಿವರ್ತತೇ ।
ಪರಗಾಮಾತ್ಮಗಾಂ ಚೈವ ಕೃತ್ವಾ ಪೀಡನವಾಹನಂ ॥ ೫೭ ॥

ನ ಪಾಲಯಂತಿ ಯೇ ಮೂಢಾ ತೇ ಪ್ರೇತಾ ಕರ್ಮಜಾ ಭುವಿ ।
ಹೀನಪ್ರತಿಜ್ಞಕಾಸ್ಸತ್ಯಾಸ್ತಥಾ ಭಗ್ನವ್ರತಾ ನರಾಃ ॥ ೫೮ ॥

ನಳನೀಧಳಭುಕ್ತಾಶ್ಚ ತೇ ಪ್ರೇತಾಃ ಕರ್ಮಜಾ ಭುವಿ ।
ವಿಕ್ರೀಣಂತಿ ಸುತಾಂ ಶುದ್ಧಾಂ ಸ್ತ್ರಿಯಂ ಸಾಧ್ವೀಮಕಂಟಿಕಾಂ ॥ ೫೯ ॥

ಪಿತೃವ್ಯಮಾತುಲಾದೇಶ್ಚ ತೇ ಪ್ರೇತಾಃ ಕರ್ಮಜಾ ಭುವಿ ।
ಏತೇ ಚಾನ್ಯೇ ಚ ಬಹವೋ ಪ್ರೇತಾ ಜಾತಾಸ್ಸ್ವಕರ್ಮಭಿಃ ॥ ೬೦ ॥

॥ ಪ್ರೇತಾ ಊಚುಃ ॥

ನ ಭವಂತಿ ಕಥಂ ಪ್ರೇತಾಃ ಕರ್ಮಣಾ ಕೇನ ವಾ ದ್ವಿಜಾಃ ।
ಹಿತಾಯ ವದ ನ್ರ ಸ್ತೂರ್ಣಂ ಸರ್ವಲೋಕಹಿತಂ ಪರಂ ॥ ೬೧ ॥

---

ಅಡ್ಡಿ ತರುವವರು ಗುರುಗಳ ಕೆಲಸಕ್ಕೆ ಅಡ್ಡಿಮಾಡುವವರು. ಪ್ರೇತರಾಗಿ ಹುಟ್ಟುತ್ತಾರೆ ಬ್ರಾಹ್ಮಣನಿಗೆ ಕೊಡದಂತೆ ತಡೆಯುವವರು ಬಹುಕಾಲ ಪ್ರೇತಗಳಾಗಿ ನರಕದಲ್ಲಿರುತ್ತಾರೆ. ಇತರದಾಗಲೀ, ತನ್ನದಾಗಲೀ, ಗೋವನ್ನು ವಾಹನಕ್ಕೆ ಕಟ್ಟಿಕೊಂಡು ಅದನ್ನುಪಚರಿಸದೇ ಬಿಟ್ಟುಬಿಟ್ಟರೆ ಪ್ರೇತರಾಗುತ್ತಾರೆ. ಪ್ರತಿಜ್ಞೆಯನ್ನು ಮಾಡಿ ನಡೆಸದವರು, ವ್ರತಗಳನ್ನು ಹಿಡಿದು ಸಾಂಗಮಾಡಿಕೊಳ್ಳದವರು, ಕಮಲದಳದಲ್ಲಿ ಊಟ ಮಾಡುವವರು ಪ್ರೇತಗಳಾಗುತ್ತಾರೆ. ಮಗಳನ್ನು ಮಾರುವವರು, ಯೋಗ್ಯಳಾದ ಹೆಂಗಸನ್ನು ತೊಂದರೆಪಡಿಸುವವರು, ಪ್ರೇತರಾಗುತ್ತಾರೆ. ಇಂತಹವರೂ ಇನ್ನೂ ದುಷ್ಟ ಕೆಲಸವನ್ನು ಮಾಡಿದವರೂ ಪ್ರೇತರಾಗಿ ಹುಟ್ಟುತ್ತಾರೆ.

೬೧. ಪ್ರೇತಗಳು ಹೇಳಿದುವು- ಎಲೈ ದ್ವಿಜರಿರಾ ! ಏನು ಮಾಡಿದರೆ ಪ್ರೇತರಾಗಿ ಹುಟ್ಟುವುದಿಲ್ಲ ? ಅದನ್ನು ನಮಗೆ ಹೇಳಿರಿ ?

॥ ದ್ವಿಜಾ ಊಚುಃ ॥

ಯೇನ ಚೈವ ಕೃತಂ ಸ್ನಾನಂ ಜಲೇ ತೀರ್ಥಸ್ಯ ಧೀಮತಾ ।
ನಮಸ್ಕೃತಂ ಪರಂ ಲಿಂಗಂ ನ ಪ್ರೇತೋ ಜಾಯತೇ ನರಃ ॥ ೬೨ ॥

ಏಕಾದಶ್ಯಾಮುಪೋಷ್ಯೈವ ದ್ವಾದಶ್ಯಾಂ ವಾ ವಿಶೇಷತಃ ।
ಪೂಜಯಿತ್ವಾ ಹರಿಂ ಮರ್ತ್ಯಾಃ ಪ್ರೇತತ್ವಂ ನ ವ್ರಜಂತಿ ವೈ ॥ ೬೩ ॥

ವೇದಾಕ್ಷರಪ್ರಸೂಕ್ತೈಶ್ಚ ಸ್ತೋತ್ರಮಂತ್ರಾದಿಭಿಸ್ತಥಾ ।
ದೇವಾನಾಂ ಪೂಜನೇ ರಕ್ತಾ ನ ವೈ ಪ್ರೇತಾ ಭವಂತಿ ತೇ ॥ ೬೪ ॥

ಶ್ರುತ್ವಾ ಪೌರಾಣಿಕಂ ವಾಕ್ಯಂ ದಿವ್ಯಂ ಚ ಧರ್ಮಸಂಹಿತಂ ।
ಪಾಠಯಿತ್ವಾ ಪಠಿತ್ವಾ ಚ ಪಿಶಾಚತ್ವಂ ನ ಗಚ್ಛತಿ ॥ ೬೫ ॥

ವ್ರತೈಶ್ಚ ವಿವಿಧೈಃ ಪೂತಾ ರುದ್ರಾಕ್ಷಾಧಾರಣೈಸ್ತಥಾ ।
ಜಪ್ತ್ವಾ ರುದ್ರಾಕ್ಷಮಾಲಾಯಾಂ ಪ್ರೇತತ್ವಂ ನೈವ ಗಚ್ಛತಿ ॥ ೬೬ ॥

ಧಾತ್ರೀಫಲದ್ರವೈಸ್ಸ್ನಾತ್ವಾ ನಿತ್ಯಂ ತದ್ಭಕ್ಷಣೇ ರತಾಃ ।
ತೇನ ವಿಷ್ಣುಂ ಸುಸಂಪೂಜ್ಯ ನ ಗಚ್ಛಂತಿ ಪಿಶಾಚತಾಂ ॥ ೬೭ ॥

---

೬೨ ದ್ವಿಜರು ಹೇಳಿದರು- ತೀರ್ಥಸ್ನಾನ ಮಾಡಿದವನೂ, ಲಿಂಗಕ್ಕೆ ನಮಸ್ಕರಿಸಿದವನೂ, ಪ್ರೇತನಾಗುವುದಿಲ್ಲ.

೬೩. ಏಕಾದಶಿಯ ದಿನ ಉಪವಾಸ ಮಾಡಿ ದ್ವಾದಶಿಯ ದಿನ ಹರಿಯನ್ನು ಪೂಜಿಸಿದವರು ಪ್ರೇತರಾಗುವುದಿಲ್ಲ.

೬೪. ವೇದಗಳು ಸೂಕ್ತಗಳು ಸ್ತೋತ್ರಗಳು ಮಂತ್ರಗಳು ಇವುಗಳಿಂದ ದೇವರ ಪೂಜೆಯನ್ನು ಮಾಡಿದವರು ಪ್ರೇತರಾಗುವುದಿಲ್ಲ.

೬೫. ಪುರಾಣದ ಮಾತನ್ನು ಒಳ್ಳೆಯ ಧರ್ಮದ ವಾಕ್ಯಗಳನ್ನು ಕೇಳಿದರೆ ಅಥವಾ ಓದಿದರೆ ಅವನು ಪಿಶಾಚಿಯಾಗುವುದಿಲ್ಲ.

೬೬. ನಾನಾ ವ್ರತಗಳಿಂದ ಶುದ್ಧರಾದವರೂ, ರುದ್ರಾಕ್ಷಿಯನ್ನು ಧರಿಸಿದವರೂ, ರುದ್ರಾಕ್ಷಮಾಲೆಯಲ್ಲಿ ಜಪಮಾಡಿದವರೂ ಪ್ರೇತರಾಗುವುದಿಲ್ಲ.

೬೭. ನೆಲ್ಲಿಯ ರಸದಿಂದ ಸ್ನಾನಮಾಡಿದವನೂ, ಅದನ್ನು ನಿತ್ಯವೂ ತಿನ್ನುವವನೂ, ಅದರಿಂದ ವಿಷ್ಣುವನ್ನು ಪೂಜಿಸುವವನೂ ಪಿಶಾಚಿಯಾಗುವುದಿಲ್ಲ.

॥ ಪ್ರೇತಾ ಊಚುಃ ॥

ಸತಾಂ ಸಂದರ್ಶನಾತ್ಪುಣ್ಯಮಿತಿ ಪೌರಾಣಿಕಾ ವಿದುಃ ।
ತಸ್ಮಾದ್ವೋ ದರ್ಶನಂ ಜಾತಂ ಹಿತಂ ನಃ ಕರ್ತುಮರ್ಹಥ ॥ ೬೮ ॥

ಪ್ರೇತಭಾವಾದ್ಯಥಾ ಮುಕ್ತಿಸ್ಸರ್ವೇಷಾಂ ನೋ ಭವಿಷ್ಯತಿ ।
ಬ್ರೂತೋಪದೇಶಕಂ ಧೀರಾ ಯುಷ್ಮಾಕಂ ಶರಣಂ ಗತಾಃ ॥ ೬೯ ॥

॥ ಈಶ್ವರ ಉವಾಚ ॥

ತತೋ ದಯಾಲವಸ್ಸರ್ವೇ ತಾನೂಚುರ್ದ್ವಿಜಸತ್ತಮಾಃ ॥ ೭೦ ॥

॥ ದ್ವಿಜಾ ಊಚುಃ ॥

ಧಾತ್ರೀಣಾಂ ಭಕ್ಷಣಂ ಶೀಘ್ರಂ ಕುರ್ವತಾಂ ಮುಕ್ತಿಹೇತವೇ ॥ ೭೧ ॥

॥ ಪ್ರೇತಾ ಊಚುಃ ॥

ಧಾತ್ರೀಣಾಂ ದರ್ಶನೇ ವಿಪ್ರಾ ವಯಂ ಸ್ಥಾತುಂ ನ ಶಕ್ನುಮಃ ।
ಕಥಂ ತೇಷಾಂ ಫಲಾನಾಂಚ ಶಕ್ತಾ ವೈ ಭಕ್ಷಣೇಽಧುನಾ ॥ ೭೨ ॥

---

೬೮. ಪ್ರೇತಗಳು ಹೇಳಿದುವು– ಸತ್ಪುರುಷರ ದರ್ಶನವೇ ಪುಣ್ಯಪ್ರದವೆಂದು ಪುರಾಣಜ್ಞರು ಹೇಳುತ್ತಾರೆ ಈಗ ಅಂತಹ ನಿಮ್ಮ ದರ್ಶನವಾಗಿದೆ. ನಮಗೆ ಹಿತವನ್ನು ಮಾಡಿರಿ.

೬೯. ಈ ನಮ್ಮಗಳ ಪ್ರೇತಭಾವವು ಹೋಗುವಂತೆ ನಮಗೆ ಉಪದೇಶಿಸಿರಿ. ನಿಮ್ಮನ್ನು ಮರೆಹೊಕ್ಕಿದ್ದೇವೆ.

೭೦ ಈಶ್ವರನು ಹೇಳಿದನು- ಆಗ ಅವರು ದಯಾವಂತರಾಗಿ ಅವುಗಳನ್ನು ಕುರಿತು ಇಂತೆಂದರು.

೭೧. ಬ್ರಾಹ್ಮರು ಹೇಳಿದರು– ಈ ನೆಲ್ಲಿಯ ಹಣ್ಣುಗಳನ್ನು ತಿನ್ನಿರಿ. ಶೀಘ್ರವಾಗಿ ನಿಮಗೆ ಮೋಕ್ಷವು ಬರುವುದು.

೭೨. ಪ್ರೇತಗಳು ಹೇಳಿದುವು- ಎಲೈ ವಿಪ್ರರಿರ! ನೆಲ್ಲಿಯನ್ನು ನೋಡುವುದಕ್ಕೆ ನಮಗಾಗುವುದಿಲ್ಲ. ಅವುಗಳ ಹಣ್ಣುಗಳನ್ನು ತಿನ್ನಲು ನಾವು ಹೇಗೆ ಶಕ್ತರಾದೇವು?

॥ ದ್ವಿಜಾ ಊಚುಃ ॥

ಅಸ್ಮಾಕಂ ವಚನೇನಾತ್ರ ಧಾತ್ರೀಣಾಂ ಭಕ್ಷಣಂ ಶಿವಂ ।
ಫಲಿಷ್ಯತಿ ಪರಂ ಲೋಕಂ ತಸ್ಮಾದ್ಗಂತುಂ ಸಮರ್ಹಥ ॥ ೭೩ ॥

॥ ಈಶ್ವರ ಉವಾಚ ॥

ಅಥ ತೇಭ್ಯೋ ವರಂ ಲಬ್ಧ್ವಾ ಧಾತ್ರೀವೃಕ್ಷಂ ಪಿಶಾಚಕಾಃ ।
ಸಮಾರುಹ್ಯ ಫಲಂ ಪ್ರಾಪ್ಯ ಭಕ್ಷಿತಂ ಲೀಲಯಾ ತದಾ ॥ ೭೪ ॥

ತತೋ ದೇವಾಲಯಾತ್ತೂರ್ಣಂ ರಥಂ ಪೀತಂ ಸುಶೋಭನಂ ।
ಆಗತಂ ತಂ ಸಮಾರುಹ್ಯ ಸ ಚಾಂಡಾಲಪಿಶಾಚಕಾಃ ॥
ಗತಾಸ್ತೇ ತ್ರಿದಿವಂ ಪುತ್ರ ಪ್ರತ್ಯೈರ್ಯಜ್ಞೈಸ್ಸುದುರ್ಲಭಂ ॥ ೭೫ ॥

॥ ಸ್ಕಂದ ಉವಾಚ ॥

ಧಾತ್ರೀಭಕ್ಷಣಮಾತ್ರೇಣ ಪುಣ್ಯಂ ಮತ್ವಾ ದಿವಂ ಗತಾಃ ।
ತದ್ಭಕ್ಷಣೇ ಕಥಂ ತೂರ್ಣಂ ನ ಗಚ್ಛಂತಿ ನರಾದಯಃ ॥ ೭೬ ॥

---

೭೩. ದ್ವಿಜರು ಹೇಳಿದರು- ನಾವು ಹೇಳಿದುದರಿಂದ ನಿಮಗೆ ತೊಂದರೆ ಕೊಡುವುದಿಲ್ಲ. ತಿನ್ನಲು ಸಾಧ್ಯವಾಗುತ್ತದೆ. ಸ್ವರ್ಗವೂ ಸಿದ್ಧಿಸುತ್ತದೆ. ಹೋಗಿರಿ.

೭೪. ಈಶ್ವರನು ಹೇಳಿದನು- ಹೀಗೆ ಆ ಬ್ರಾಹ್ಮಣರ ವರಬಲದಿಂದ ಅವು ನೆಲ್ಲಿಯ ಮರವನ್ನು ಹತ್ತಿ ಹಣ್ಣನ್ನು ತಿಂದುವು.

೭೫. ಆಗ ದೇವಸ್ಥಾನದಿಂದ ಚೆನ್ನಾಗಿರುವ ರಥವು ಬಂದಿತು. ಆ ರಥದಲ್ಲಿ ಆ ಚಂಡಾಲನೂ, ಈ ಪಿಶಾಚಿಗಳೂ ಕುಳಿತು ಯಜ್ಞಮಾಡಿದವರು ಹೊಂದುವ ಸ್ವರ್ಗವನ್ನು ಹೊಂದಿದುವು.

೭೬. ಸ್ಕಂದನು ಹೇಳಿದನು- ನೆಲ್ಲಿಯಕಾಯನ್ನು ತಿಂದೊಡನೆಯೇ ಆ ಪ್ರೇತಗಳು ಸ್ವರ್ಗವನ್ನು ಹೊಂದಿದುವು. ಅವನ್ನು ತಿಂದ ಕ್ಷಣವೇ ನರರು ಹೇಗೆ ಹೋಗುವುದಿಲ್ಲ ?

॥ ಈಶ್ವರ ಉವಾಚ ॥

ಪೂರ್ವಂ ತೇ ಜ್ಞಾನಲೋಪಾಚ್ಚ ನ ಜಾನಂತಿ ಹಿತಾಹಿತಂ ।
ಉಚ್ಛಿಷ್ಟಂ ಶ್ವಭಿರುತ್ಸೃಷ್ಟಂ ಶ್ಲೇಷ್ಮಮೂತ್ರಶಕೃತ್ತು ವಾ ॥ ೭೭ ॥

ಮತ್ವಾ ಚ ಮೋಹಿತಾಶ್ಶ್ರೇಷ್ಠಂ ಪ್ರೇತಾದಂತಿ ಸದೈವ ಹಿ ।
ಶಕೃಚ್ಛೌಚಜಲಂ ವಾಂತಂ ಬಲಿಸೂಕರಕುಕ್ಕುಟೈಃ ॥ ೭೮ ॥

ಮೃತಕೇ ಸೂತಕೇ ಜಪ್ಯಂ ನ ತ್ಯಕ್ತಂ ಯೇನ ಕೇನಚಿತ್ ।
ತಸ್ಯಾನ್ನಂ ಚ ಜಲಂ ಭಕ್ಷ್ಯಂ ಪ್ರೇತಾದಂತಿ ಸದೈವ ಹಿ ॥ ೭೯ ॥

ದುರ್ದಾಂತಾ ಗೃಹಿಣೀ ಯಸ್ಯ ಶುಚಿಸಂಯಮವರ್ಜಿತಾ ।
ಗುರುನಿಸ್ಸಾರಿತಾ ದುಷ್ಟಾ ಸಂತಿ ಪ್ರೇತಾಶ್ಚ ತತ್ರ ವೈ ॥ ೮೦ ॥

ಅಪುಂಗವಾಃಕುಲೈರ್ಜಾತ್ಯಾ ಬಲೋತ್ಸಾಹವಿವರ್ಜಿತಾಃ ।
ಬಧಿರಾಶ್ಚ ಕೃಶಾ ದೀನಾಃ ಪಿಶಾಚಾಃ ಕರ್ಮಜಾತಯಃ ॥ ೮೧ ॥

---

೭೭-೭೯. ಈಶ್ವರನು ಹೇಳಿದನು- ಅವುಗಳಿಗೆ ಜ್ಞಾನವಿಲ್ಲದಿರುವುದರಿಂದ ಹಿತಾಹಿತವನ್ನು ತಿಳಿಯಲಾರವು. ಆದ್ದರಿಂದಲೇ ಅವು ಎಂಜಲು, ನಾಯಿ ಮುಟ್ಟಿದುದು, ಶ್ಲೇಷ್ಮ, ಮೂತ್ರ ಮಲಗಳಿಂದ ಕೂಡಿದ್ದು ಇವನ್ನು ಶ್ರೇಷ್ಠವೆಂದೇ ತಿನ್ನುತ್ತವೆ ಮಲ, ಶೌಚಮಾಡಿಕೊಂಡ ನೀರು, ವಾಂತಿ ಮಾಡಿದುದು, ಕಾಗೆ ಹಂದಿ, ಕೋಳಿಗಳ ಎಂಜಲು, ಸತ್ತ ಸೂತಕದಲ್ಲಿ ಮಾಡಿದ ಜಪ, ಯಾವನಿಗೂ ಕೊಡದೆ ಊಟಮಾಡುವವನ ಅನ್ನ ನೀರು ಇವನ್ನು ಪ್ರೇತಗಳು ತಿನ್ನುತ್ತವೆ.

೮೦. ಮನೆಯ ಹೆಂಡತಿಯು ಅಧಿಕಾರಮಾಡಿಕೊಂಡು ಗಂಡನಿಗೆ ಸಗ್ಗದಿರುವಲ್ಲಿಯೂ, ಶುಚಿ ವ್ರತಗಳನ್ನು ಮಾಡದವಳಿರುವಲ್ಲಿಯೂ ಪ್ರೇತಗಳಿರುತ್ತವೆ.

೮೧. ಕುಲದಲ್ಲಿ ಅಥವಾ ಜಾತಿಯಲ್ಲಿ ಶ್ರೇಷ್ಠರಲ್ಲದವರು, ಬಲ, ಉತ್ಸಾಹಗಳಿಲ್ಲದವರು, ಕಿವುಡರು, ಬಡವಾಗಿರುವವರು, ದುಃಖಿಗಳು ಇವರು ಪಿಶಾಚದಿಂದ ಬಂದು ಜನ್ಮವೆತ್ತಿದವರು.

ಕ್ಷಣಂ ಚ ಮಂಗಳಂ ನಾಸ್ತಿ ದುಃಖೈರ್ದೇಹಯುತಾ ಭೃಶಂ ।
ತೇನೈವ ವಿಕೃತಾಕಾರಾಸ್ಸರ್ವಭೋಗವಿವರ್ಜಿತಾಃ ॥ ೮೨ ॥

ನಗ್ನಕಾ ರೋಗಸಂತಪ್ತಾ ಮೃತಾ ರೂಕ್ಷಾ ಮಲೀಮಸಾಃ ।
ತೃಷಾರ್ತಾ ವ್ರಣಪೂರ್ಣಾಂಗಾ ಗಾತ್ರಗಂಧೈರ್ಜನಾಪ್ರಿಯಾಃ ॥ ೮೩ ॥

ಜ್ಞಾನಲೋಪಾತ್ಪ್ರಶೋಕಾರ್ತಾಃ ಕ್ಷಣಶರ್ಮವಿವರ್ಜಿತಾಃ ।
ಏತೇ ಚಾನ್ಯೇ ಚ ದುಃಖಾರ್ತಾಸ್ಸದೈವ ಪ್ರೇತಜಾತಯಃ ॥ ೮೪ ॥

ತೇನ ಕರ್ಮವಿಪಾಕೇನ ಜಾಯಂತೇ ಕಾಮಮೀದೃಶಾಃ ।
ಪಿತೃಮಾತೃಗುರೂಣಾಂ ಚ ದೇವನಿಂದಾಪರಾಶ್ಚ ಯೇ ॥ ೮೫ ॥

ಪಾಷಂಡಿಕೌಳಿಕಾಃ ಪಾಪಾಸ್ತೇ ಪ್ರೇತಾಃ ಕರ್ಮಜಾ ಭುವಿ ।
ಗಲಪಾಶೈರ್ಜಲೈಶ್ಶಸ್ತ್ರೈರ್ಗರಳೈರಾತ್ಮಘಾತಕಾಃ ॥ ೮೬ ॥

---

೮೨-೮೪. ಅವರಿಗೆ ಕ್ಷಣಕಾಲವೂ ಮಂಗಳದ ಪ್ರಸಕ್ತಿಯೇ ಇರುವುದಿಲ್ಲ ದುಃಖಕರವಾದ ದೇಹವುಳ್ಳವರಾಗಿರುತ್ತಾರೆ. ವಿಕಾರವುಳ್ಳ ಆಕಾರವಿದೆ ಸುಖವೆಂಬುದೇ ಇಲ್ಲ. ಬೆತ್ತಲೆ ಇರುತ್ತಾರೆ. ರೋಗಿಗಳಾಗಿರುತ್ತಾರೆ. ಹೆಣದಂತಿರುತ್ತಾರೆ ಕ್ರೂರರಾಗಿರುತ್ತಾರೆ. ಮಲಿನರಾಗಿರುತ್ತಾರೆ. ಯಾವಾಗಲೂ ಬಾಯಾರಿರುತ್ತಾರೆ. ಗಾಯವಿದ್ದೇ ಇರುತ್ತದೆ. ದೇಹದಲ್ಲಿ ದುರ್ವಾಸನೆ ತುಂಬಿರುತ್ತದೆ ಜ್ಞಾನವೇ ಇಲ್ಲದೆ ದುಃಖಪಡುತ್ತಿರುತ್ತಾರೆ. ಕ್ಷಣಕಾಲವೂ ಸುಖವೇ ಇರುವುದಿಲ್ಲ. ಇಂತಹವರೆಲ್ಲರೂ ಪ್ರೇತವಾಗಿದ್ದು ಹುಟ್ಟಿದವರು.

೮೫. ಆ ಹಿಂದಿನ ಕರ್ಮದಿಂದಲೇ ಈ ರೀತಿಯಾಗಿ ಹುಟ್ಟುತ್ತಾರೆ. ತಾಯಿ ತಂದೆಗಳ ನಿಂದಕರೂ, ದೇವನಿಂದಕರೂ, ನಾಸ್ತಿಕರೂ, ಮನೆಮನೆ ಸುತ್ತುವವರೂ ಪ್ರೇತರಾಗಿದ್ದು ಹುಟ್ಟಿದವರು.

೮೬-೯೧. ನೇಣು ಹಾಕಿಕೊಳ್ಳುವುದು, ನೀರು, ಶಸ್ತ್ರ, ವಿಷಗಳಿಂದ ಪ್ರಾಣ ಬಿಟ್ಟವರು, ಅವರು ಈ ಲೋಕದಲ್ಲಿ ಪ್ರೇತಜಾತಿಯಿಂದ ಬಂದು ಹುಟ್ಟಿದವರು, ಚಂಡಾಲಜಾತಿಯಲ್ಲಿ ಹುಟ್ಟುತ್ತಾರೆ. ಅಂತ್ಯಜರು, ಪತಿತರು, ಪಾಪರೋಗವುಳ್ಳವರು,

ಇಹ ಲೋಕೇ ಚ ತೇ ಪ್ರೇತಾಶ್ಚಂಡಾಲಾದಿಷು ಸಂಭವಾಃ ।
ಅಂತ್ಯಜಾಃ ಪತಿತಾಶ್ಚೈವ ಪಾಪರೋಗಮೃತಾಶ್ಚ ಯೇ ॥ ೮೭ ॥

ಅಂತ್ಯಜೈರ್ಘಾತಿತಾ ಯುದ್ಧೇ ತೇ ಪ್ರೇತಾ ನಿಶ್ಚಿತಾ ಭುವಿ ।
ಮಹಾಪಾತಕಸಂಯುಕ್ತಾ ವಿವಾಹೇ ಚ ಬಹಿಷ್ಕೃತಾಃ ॥ ೮೮ ॥

ಸೌರ್ಯೋಪಾಸಕಾ ಸಾಹಸಿಕಾ ಯೇ ಚ ತೇ ಪ್ರೇತಾಃ ಕರ್ಮಜಾ ಭುವಿ ।
ರಾಜದ್ರೋಹಕರಾ ಯೇ ಚ ಪಿತೄಣಾಂ ದ್ರೋಹಚಿಂತಕಾಃ ॥ ೮೯ ॥

ಧ್ಯಾನಾಧ್ಯಯನಹೀನಾಶ್ಚ ವ್ರತೈರ್ದೇವಾರ್ಚನಾದಿಭಿಃ ।
ಅಮಂತ್ರಾಸ್ಸ್ನಾನಹೀನಾಶ್ಚ ಗುರುಸ್ತ್ರೀಗಮನೇ ರತಾಃ ॥ ೯೦ ॥

ತಥೈವ ಚಾಂತ್ಯಜಸ್ತ್ರೀಷು ದುರ್ಗತಾಸು ಚ ಸಂಗತಾಃ ।
ಮೃತಾಃ ಕ್ರೂರೋಪವಾಸೇನ ಮ್ಲೇಚ್ಛದೇಶಸ್ಥಿತಾ ಮೃತಾಃ ॥ ೯೧ ॥

ಮ್ಲೇಚ್ಛಭಾಷಾಯುತಾಶುದ್ಧಾ ತಥಾ ಮ್ಲೇಚ್ಛೋಪಜೀವಿನಃ ।
ಅನುವರ್ತಂತಿ ಯೇ ಮ್ಲೇಚ್ಛಾನ್ಸ್ತ್ರೀಧನೈರುಪಜೀವಕಾಃ ॥ ೯೨ ॥

---

ಯುದ್ಧದಲ್ಲಿ ಕೀಳುಜಾತಿಯಿಂದ ಸತ್ತವರು ಇವರು ಪ್ರೇತಗಳಾಗಿದ್ದವರು. ಮಹಾ ಪಾಪಗಳಿಂದ ಕೂಡಿದವರು, ವಿವಾಹವಾಗದವರು, ಸೂರ್ಯೋಪಾಸಕರು, ಸಾಹಸ ಕರ್ಮಮಾಡುವವರು ಅವರು ಪ್ರೇತರಾಗಿದ್ದು ಹಟ್ಟಿದವರು, ರಾಜದ್ರೋಹಿಗಳೂ, ಪಿತೃದ್ರೋಹಿಗಳೂ, ಧ್ಯಾನಮಾಡದವರೂ, ಅಧ್ಯಯನ ಓದದವರೂ, ವ್ರತ ದೇವತಾ ರ್ಚನೆಗಳಿಲ್ಲದವರೂ, ಮಂತ್ರವನ್ನು ತಿಳಿಯದವರೂ, ಸ್ನಾನವಿಲ್ಲದವರೂ, ಗುರುಸ್ತ್ರೀ ಯಲ್ಲಿ ರಮಿಸುವವರೂ, ಅಂತ್ಯಜರ ಸ್ತ್ರೀಯರನ್ನು ಗಮಿಸುವವರೂ, ಪಾಪಸ್ತ್ರೀಗಮನ ಮಾಡುವವರೂ, ಕ್ರೂರವಾದ ಉಪವಾಸದಿಂದ ಸತ್ತವರೂ, ಮ್ಲೇಚ್ಛದೇಶದಲ್ಲಿ ಸತ್ತ ವರೂ, ಪ್ರೇತರಾಗುತ್ತಾರೆ.

೯೨. ಮ್ಲೇಚ್ಛಭಾಷೆಯನ್ನಾಡುವವರು, ಮ್ಲೇಚ್ಛರಿಂದ ಜೀವಿಸುವವರು, ಮ್ಲೇಚ್ಛರನ್ನೇ ಅನುಸರಿಸುವವರು, ಹೆಂಗಸರ ಹಣದಿಂದ ಜೀವಿಸುವವರು ಪ್ರೇತರಾ ಗುತ್ತಾರೆ.

ಸ್ತ್ರಿಯೋಯೈಶ್ಚ ನ ರಕ್ಷ್ಯಂತೇ ತೇ ಪ್ರೇತಾ ನಾತ್ರ ಸಂಶಯಃ ।
ಕ್ಷುಧಾಸಂತಪ್ತದೇಹಂ ತು ಶ್ರಾಂತಂ ವಿಪ್ರಂ ಗೃಹಾಗತಂ ॥ ೯೩ ॥

ಗುಣಪೂರ್ಣಾತಿಥಿಂ ತ್ಯಕ್ತ್ವಾ ಪಿಶಾಚತ್ವಂ ವ್ರಜಂತಿ ತೇ ।
ವಿಕ್ರೀಣಂತಿ ಚ ವೈ ಗಾಶ್ಚ ಮ್ಲೇಚ್ಛೇಷು ಚ ಗವಾಶಿಷು ॥ ೯೪ ॥

ಪ್ರೇತಲೋಕೇ ಸುಖಂ ಸ್ಥಿತ್ವಾ ತೇ ಚ ಯಾಂತ್ಯಪುನರ್ಭವಂ ।
ಅಶೌಚಾಭ್ಯಂತರೇ ಯೇ ಚ ಜಾತಾಶ್ಚ ಪಶವೋ ಮೃತಾಃ ॥ ೯೫ ॥

ಚಿರಂ ಪ್ರೇತಾಃ ಪಿಶಾಚಾಶ್ಚ ಮೃತಾ ಜಾತಾಃ ಪುನಃ ಪುನಃ ।
ಜಾತಕರ್ಮಮುಖೈಶ್ಚೈವ ಸಂಸ್ಕಾರೈರ್ಯೇ ಚ ವರ್ಜಿತಾಃ ॥ ೯೬ ॥

ಏಕೈಕೇ ಚ ಪ್ರಸಂಸ್ಕಾರೇ ಪ್ರೇತತ್ವಂ ಪರಿಹೀಯತೇ ।
ಸ್ನಾನಸಂಧ್ಯಾಸುರಾರ್ಚಾಭಿರ್ವೇದಯಜ್ಞವ್ರತಾಕ್ಷರೈಃ ॥ ೯೭ ॥

ಆಜನ್ಮವರ್ಜಿತಾಃ ಪಾಪಾಸ್ತೇ ಪ್ರೇತಾಶ್ಚಾಪುನರ್ಭವಾಃ ।
ಭೋಜನೋಚ್ಛಿಷ್ಟಪಾತ್ರಾಣಿ ಯಾನಿ ದೇಹಮಲಾನಿ ಚ ॥ ೯೮ ॥

---

೯೩-೧೦೫. ಸ್ತ್ರೀಯನ್ನು ರಕ್ಷಿಸದವರು, ಪ್ರೇತರಾಗುತ್ತಾರೆ. ಗುಣಿಯಾದ ವಿಪ್ರನು ಶ್ರಾಂತನಾಗಿ ಹಸಿವಿನಿಂದ ಬಂದರೆ ಅವನನ್ನು ಉಪಚರಿಸದಿದ್ದರೆ ಅವರು ಪಿಶಾಚರಾಗುತ್ತಾರೆ. ಯಾರು ಮ್ಲೇಚ್ಛರಿಗೂ, ಕಟುಕರಿಗೂ ಹಸುಗಳನ್ನು ಮಾರುತ್ತಾರೆಯೋ ಪ್ರೇತಲೋಕದಲ್ಲಿ ಅವರು ಬಹುಕಾಲವಿರುತ್ತಾರೆ. ಆಶೌಚದ ಮಧ್ಯದಲ್ಲಿ ಹುಟ್ಟಿದವರೂ, ಪಶುಗಳನ್ನು ಕೊಂದವರೂ, ಬಹುಕಾಲ ಪ್ರೇತಪಿಶಾಚಿಗಳಾಗಿರುತ್ತಾರೆ. ಜಾತಕರ್ಮಾದಿಗಳ ಸಂಸ್ಕಾರವಿಲ್ಲದಿದ್ದರೂ ಅವರು ಪ್ರೇತರಾಗುತ್ತಾರೆ ಒಂದೊಂದು ಸಂಸ್ಕಾರಕ್ಕೂ ಪ್ರೇತತ್ವವು ನಾಶವಾಗುತ್ತದೆ. ಸ್ನಾನ, ಸಂಧ್ಯಾವಂದನೆ, ದೇವತಾರ್ಚನೆ, ವೇದಾಧ್ಯಯನ, ಯಜ್ಞಗಳು, ವ್ರತಗಳು, ಇವನ್ನು ಯಾವಾಗಲೂ ಮಾಡದಿರುವವರು ಪ್ರೇತರಾಗುತ್ತಾರೆ ಊಟಮಾಡಿ ಮಿಕ್ಕದ್ದನ್ನೂ ಎಂಜಲೆಲೆಗಳನ್ನೂ

ನಿಪಾತಯಂತಿ ಯೇ ತೀರ್ಥೇ ತೇ ಪ್ರೇತಾ ನಾತ್ರ ಸಂಶಯಃ ।
ದಾನವರ್ಯನಾರ್ಚನೈರ್ನೈವ ಯೈರ್ವಿಪ್ರಾ ಭುವಿ ತರ್ಪಿತಾಃ ॥ ೯೯ ॥

ಪಿತರೋ ಗುರವಶ್ಚೈವ ಪ್ರೇತಾಸ್ತೇ ಕರ್ಮಜಾ ಭೃಶಂ ।
ಪತಿಂ ತ್ಯಕ್ತ್ವಾ ಚ ಯಾ ನಾರ್ಯೋ ವಸಂತಿ ಚೇತರೈರ್ಜನೈಃ ॥ ೧೦೦ ॥

ಪ್ರೇತಲೋಕೇ ಚಿರಂ ಸ್ಥಿತ್ವಾ ಜಾಯಂತೇ ಚಾನ್ಯಯೋನಿಷು ।
ಪತಿಂ ಚ ವಂಚಯಿತ್ವಾ ಯಾ ವಿಷಯೇಂದ್ರಿಯ ಮೋಹಿತಾಃ ॥ ೧೦೧ ॥

ಮಿಷ್ಟಂ ಚಾದಂತಿ ಯಾಃ ಪಾಪಾಸ್ತಾಸ್ತು ಪ್ರೇತಾಶ್ಚಿರಂ ಭುವಿ ।
ವಿಣ್ಮೂತ್ರಭಕ್ಷಕಾ ಯೇ ಚ ಬ್ರಹ್ಮಸ್ವಭಕ್ಷಣೇ ರತಾಃ ॥ ೧೦೨ ॥

ಅಭಕ್ಷ್ಯಭಕ್ಷಕಾಶ್ಚಾನ್ಯೇ ತೇ ಪ್ರೇತಾಶ್ಚ ಪುನರ್ಭುವಾಃ ।
ಬಲಾದ್ಯೇ ಪರವಸ್ತೂನಿ ಗೃಹ್ಣಂತಿ ಚಾದದತ್ಯಪಿ ॥ ೧೦೩ ॥

ಅತಿಥೀನವಮನ್ಯಂತೇ ಪ್ರೇತಾ ನಿರಯಮಾಸ್ಥಿತಾಃ ।
ತಸ್ಮಾದಾಮಲಕೀಂ ಭುಕ್ತ್ವಾ ಸ್ನಾತ್ವಾ ತಸ್ಯ ದ್ರವೇಣ ತು ॥ ೧೦೪ ॥

ಸರ್ವಪಾಪಾದ್ವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ।
ತಸ್ಮಾತ್ಸರ್ವಪ್ರಯತ್ನೇನ ಸೇವಯಾಮಲಕೀಂ ಶಿವಾಂ ॥ ೧೦೫ ॥

---

ದೇಹದ ಮಲಗಳನ್ನೂ ತೀರ್ಥದಲ್ಲಿಹಾಕುವವರು ಪ್ರೇತರಾಗುತ್ತಾರೆ. ದಾನ, ಗೌರವ, ಪೂಜೆಗಳಿಂದ ಬ್ರಾಹ್ಮಣರನ್ನು ಸಂತೋಷಪಡಿಸದವರು ಪಿತೃಗಳನ್ನೂ, ಗುರುಗಳನ್ನೂ, ತೃಪ್ತಿಪಡಿಸದವರೂ ಪ್ರೇತರಾಗುತ್ತಾರೆ. ಗಂಡನನ್ನು ಬಿಟ್ಟು ಪರ ಪುರುಷರೊಡನೆ ಇರುವ ಹೆಂಗಸರು ಪ್ರೇತಗಳಾಗಿ ನೀಚ ಜಾತಿಯಲ್ಲಿ ಹುಟ್ಟುತ್ತಾರೆ. ಇಂದ್ರಿಯಚಾಪಲ್ಯದಿಂದ ಗಂಡನನ್ನು ಬಿಟ್ಟು ಮೃಷ್ಟಾನ್ನವನ್ನು ತಿನ್ನುವವರು ಪ್ರೇತ ರಾಗುತ್ತಾರೆ. ಮೂತ್ರ ಮಲಗಳನ್ನು ತಿನ್ನುವವರೂ, ಬ್ರಹ್ಮಸ್ವತ್ತನ್ನು ತಿನ್ನುವವರೂ ನಿಷಿದ್ಧ ಪದಾರ್ಥಗಳನ್ನು ತಿನ್ನುವವರೂ, ಪ್ರೇತರಾಗುತ್ತಾರೆ ಬಲಾತ್ಕಾರದಿಂದ ಇತರ ಪದಾರ್ಥಗಳನ್ನು ತೆಗೆದುಕೊಳ್ಳುವವರೂ, ಬಲಾತ್ಕಾರದಿಂದ ಅವರಿಗೆ ಕೊಡು ವವರೂ, ಅತಿಥಿಗಳನ್ನು ಅವಮಾನ ಮಾಡುವವರೂ ಪ್ರೇತರಾಗುತ್ತಾರೆ. ಆದ್ದರಿಂದ ನೆಲ್ಲಿಯ ಕಾಯನ್ನು ತಿಂದವನೂ ಅದರ ರಸದಿಂದ ಸ್ನಾನಮಾಡಿದವನೂ ಪಾಪದಿಂದ ಮುಕ್ತನಾಗಿ ವಿಷ್ಣುಲೋಕವನ್ನು ಹೊಂದುತ್ತಾನೆ. ಆದ್ದರಿಂದ ಸರ್ವಪ್ರಯತ್ನ ದಿಂದಲೂ ನೆಲ್ಲಿಯ ಕಾಯನ್ನು ಉಪಯೋಗಿಸಬೇಕು.

ಯ ಇದಂ ಶೃಣುಯಾನ್ನಿತ್ಯಂ ಪುಣ್ಯಾಖ್ಯಾನಮಿದಂ ಶುಭಂ ।
ಸರ್ವಪಾಪಪ್ರಪೂತಾತ್ಮಾ ವಿಷ್ಣುಲೋಕೇ ಮಹೀಯತೇ ॥ ೧೦೬ ॥

ಶ್ರಾವಯೇತ್ಸತತಂ ಲೋಕೇ ವೈಷ್ಣವೇಷು ವಿಶೇಷತಃ ।
ಸ ಯಾತಿ ವಿಷ್ಣುಸಾಯುಜ್ಯಮಿತಿ ಪೌರಾಣಿಕಾ ವಿದುಃ ॥ ೧೦೭ ॥

॥ ಸ್ಕಂದ ಉವಾಚ ॥

ಮಹೀರುಹಫಲಂ ಜ್ಞಾತಂ ಪ್ರಪೂತಂ ದ್ವಿವಿಧಂ ಪ್ರಭೋ ।
ಇದಾನೀಂ ಶ್ರೋತುಮಿಚ್ಛಾಮಿ ಪತ್ರಂ ಪುಷ್ಪಂ ಸುಮೋಕ್ಷದಂ ॥ ೧೦೮ ॥

॥ ಈಶ್ವರ ಉವಾಚ ॥

ಸರ್ವೇಭ್ಯಃ ಪತ್ರಪುಷ್ಪೇಭ್ಯಃ ಸತ್ತಮಾ ತುಳಸೀ ಶಿವಾ ।
ಸರ್ವಕಾಮಪ್ರದಾ ಶುದ್ಧಾ ವೈಷ್ಣವೀ ವಿಷ್ಣುಸುಪ್ರಿಯಾ ॥ ೧೦೯ ॥

---

೧೦೬. ಈ ಪುಣ್ಯಾಖ್ಯಾನವನ್ನು ಕೇಳಿದವನು ಪಾಪದಿಂದ ಮುಕ್ತನಾಗಿ ವಿಷ್ಣು ಲೋಕವನ್ನು ಹೊಂದುವನು.

೧೦೭. ಯಾವನು ಇದನ್ನು ಕೇಳುತ್ತಾನೆಯೋ ವೈಷ್ಣವರಿಗೆ ವಿಶೇಷವಾಗಿ ಹೇಳುತ್ತಾನೆಯೋ ಅವನು ವಿಷ್ಣು ಸಾಯುಜ್ಯವನ್ನು ಹೊಂದುತ್ತಾನೆ. ಎಂದು ಪೌರಾಣಿಕರು ಹೇಳುತ್ತಾರೆ.

೧೦೮. ಸ್ಕಂದನು ಹೇಳಿದನು– ನೆಲ್ಲಿಯ ಕಾಯಿಯ ವಿಷಯವು ತಿಳಿಯಿತು, ಎಲೆ ಹೂಗಳ ವಿಷಯವನ್ನು ಕೇಳಲು ಇಚ್ಛೆಯಿದೆ. ಅವು ಯಾವುವು ? ಎಂಬುದನ್ನು ಹೇಳು.

೧೦೯. ಈಶ್ವರನು ಹೇಳಿದನು- ಎಲೆಗಳಲ್ಲಿ ಎಲ್ಲಾ ಎಲೆಗಳಿಗಿಂತಲೂ ತುಳಸೀ ಎಲೆಯು ಶ್ರೇಷ್ಠವೂ, ಮಂಗಳವೂ, ಆದುದು. ಇಷ್ಟಾರ್ಥಗಳನ್ನು ಕೊಡುತ್ತದೆ. ಅದು ವಿಷ್ಣುವಿಗೆ ಪ್ರಿಯವಾದುದು.

ಭುಕ್ತಿ ಮುಕ್ತಿಪ್ರದಾ ಮುಖ್ಯಾ ಸರ್ವಲೋಕಪರಾ ಶುಭಾ ।
ಯಾಮಾಶ್ರಿತ್ಯ ಗತಾ ಸ್ಸ್ವರ್ಗಮಕ್ಷಯಂ ಮುನಿಸತ್ತಮಾಃ ॥ ೧೧೦ ॥

ಹಿತಾರ್ಥಂ ಸರ್ವಲೋಕಾನಾಂ ವಿಷ್ಣುನಾರೋಪಿತಾ ಪುರಾ ।
ತುಳಸೀಪತ್ರಪುಷ್ಪಂ ಚ ಸರ್ವಧರ್ಮಪ್ರತಿಷ್ಠಿತಂ ॥ ೧೧೧ ॥

ಯಥಾ ವಿಷ್ಣೋಃ ಪ್ರಿಯಾ ಲಕ್ಷ್ಮೀಃ ಯಥಾಹಂ ಪ್ರಿಯ ಏವ ಚ ।
ತಥೇಯಂ ತುಳಸೀ ದೇವೀ ಚತುರ್ಥೋ ನೋಪಪದ್ಯತೇ ॥ ೧೧೨ ॥

ತುಳಸೀಪತ್ರಮೇಕಂ ತು ಶತಹೇಮಫಲಪ್ರದಂ ।
ನಾನ್ಯೈಃ ಪುಷ್ಪೈಸ್ತಥಾಪತ್ರೈ ರ್ನಾನ್ಯೈರ್ಗಂಧಾನುಲೇಪನೈಃ ॥ ೧೧೩ ॥

ತುಷ್ಯತೇ ದೈತ್ಯಹಾ ವಿಷ್ಣುಸ್ತುಳಸ್ಯಾಶ್ಚ ದಳಂ ವಿನಾ ।
ಅನೇನ ಪೂಜಿತೋ ಯೇನ ಹರಿರ್ನಿತ್ಯಂ ಪರಾಶಯಾ ॥ ೧೧೪ ॥

ತೇನ ದತ್ತಂ ಹುತಂ ಜ್ಞಾತಂ ಕೃತಂ ಯಜ್ಞ ವ್ರತಾದಿಕಂ ।
ಜನ್ಮ ಜನ್ಮನಿ ಭಾಸಿತ್ವಂ ಸುಖಂ ಭೋಗ್ಯಂ ಯಶಶ್ಶ್ರಿಯೌ ॥ ೧೧೫ ॥

---

೧೧೦. ಭುಕ್ತಿಯನ್ನೂ, ಮುಕ್ತಿಯನ್ನೂ ಕೊಡುತ್ತದೆ ಸರ್ವಪ್ರಾಣಿಗಳಿಗೂ ಶುಭವಾದುದು. ಮುನಿಗಳೂ ಇದನ್ನೇ ಆಶ್ರಯಿಸಿ ಸ್ವರ್ಗವನ್ನು ಹೊಂದಿದರು.

೧೧೧. ಎಲ್ಲಾ ಪ್ರಾಣಿಗಳಿಗೂ ಹಿತವಾಗಬೇಕೆಂದೇ ವಿಷ್ಣುವು ಇದನ್ನು ಬೆಳೆಸಿದನು. ತುಳಸಿಯ ಪತ್ರವೂ, ಪುಷ್ಪವೂ, ಸರ್ವಧರ್ಮಗಳಿಗೂ ಉತ್ತಮವಾದುದು.

೧೧೨. ವಿಷ್ಣುವಿಗೆ ಲಕ್ಷ್ಮಿಯೂ, ನಾನೂ, ತುಳಸಿಯೂ, ಮೂವರೇ ಪ್ರಿಯರಾದವರು. ನಾಲ್ಕನೆಯವರು ಇಲ್ಲವೇ ಇಲ್ಲ.

೧೧೩-೧೧೪. ಒಂದು ತುಲಸಿಯ ದಳವು ನೂರು ಚಿನ್ನದ ನಾಣ್ಯಗಳ ಫಲವುಳ್ಳದು. ತುಳಸಿ ದಳವಿಲ್ಲದಿದ್ದರೆ ಯಾವ ಹೂವಾಗಲೀ, ಪತ್ರೆಯಾಗಲೀ, ಗಂಧಾದಿಗಳಾಗಲೀ, ವಿಷ್ಣುವಿಗೆ ಸಂತೋಷವನ್ನುಂಟುಮಾಡುವುದಿಲ್ಲ. ಈ ತುಳಸಿಯಿಂದ ಪೂಜಿಸಿದರೆ ಹರಿಯೂ ವರ ಕೊಡುವ ಮನಸ್ಸುಳ್ಳವನಾಗುತ್ತಾನೆ.

೧೧೫-೧೧೭. ಯಾವನು ಹರಿಯನ್ನು ತುಳಸಿಯಿಂದ ಪೂಜಿಸುತ್ತಾನೆಯೋ ಅವನ ದಾನವುಶ್ಲಾಘ್ಯವು ಅವನ ಹೋಮವೇ ಹೋಮವು ತಿಳಿವಳಿಕೆಯೇ ತಿಳಿವಳಿಕೆ. ಅವನ ಯಜ್ಞಾದಿ ವ್ರತಗಳೇ ಸಾರ್ಥಕವು. ಜನ್ಮಜನ್ಮಕ್ಕೂ ಬುದ್ಧಿವಂತನಾಗುತ್ತಾನೆ. ಸುಖ, ಭೋಗ್ಯ, ಯಶಸ್ಸು, ಸಂಪತ್ತುಗಳೆಲ್ಲವೂ ಉತ್ತಮವಾಗಿರುತ್ತವೆ. ಕುಲ,

ಕುಲಂ ಶೀಲಂ ಕಳತ್ರಂ ಚ ಪುತ್ರಾ ದುಹಿತರಸ್ತಥಾ ।
ಧನಂ ಚ ರಾಜ್ಯಮಾರೋಗ್ಯಂ ಜ್ಞಾನಂ ವಿಜ್ಞಾನ ಮೇವ ಚ ॥ ೧೧೬ ॥

ವೇವವೇದಾಂಗಶಾಸ್ತ್ರಂ ಚ ಪುರಾಣಾಗಮಸಂಹಿತಾಃ ।
ಸರ್ವಂ ಕರಗತಂ ಮಧ್ಯೇ ತುಳಸ್ಯಾ ಅರ್ಚನೇ ಹರೇಃ ॥ ೧೧೭ ॥

ಯಥಾ ಗಂಗಾ ಪವಿತ್ರಾಂಗೀ ಸುರಲೋಕವಿನೋಕ್ಷದಾ ।
ಯಥಾ ಭಾಗೀರಥೀ ಪುಣ್ಯಾ ತಥೇಯಂ ತುಳಸೀ ಶಿವಾ ॥ ೧೧೮ ॥

ಕಿಂ ಚ ಗಂಗಾಜಲೇನೈವ ಕಿಂ ಚ ಪುಷ್ಕರಸೇವಯಾ ।
ತುಳಸೀದಳಮಿಶ್ರೇಣ ಜಲೇನೈವ ಪ್ರಮೋದ್ಯತೇ ॥ ೧೧೯ ॥

ಮಾಧವಸ್ಸಂಮುಖೋ ಯಸ್ಯ ಜನ್ಮಜನ್ಮಸು ಧೀಮತಃ ।
ತಸ್ಯ ಶ್ರದ್ಧಾ ಭವೇಚ್ಛ್ರುತ್ವಾ ತುಲಸ್ಯಾ ಹರಿಮರ್ಚಿತುಂ ॥ ೧೨೦ ॥

ಸ ಮಂಜರೀದಳೈರೇವ ತುಲಸ್ಯಾ ವಿಷ್ಣುಮರ್ಚಯೇತ್ ।
ತಸ್ಯ ಪುಣ್ಯಫಲಂ ಸ್ಕಂದ ಕಥಿತುಂ ನೈವ ಶಕ್ಯತೇ ॥ ೧೨೧ ॥

---

ಶೀಲ, ಹೆಂಡತಿ, ಮಕ್ಕಳು, ಧನ, ರಾಜ್ಯ, ಆರೋಗ್ಯ, ಜ್ಞಾನ, ಬುದ್ಧಿವಂತಿಕೆ, ವೇದ, ವೇದಾಂಗ, ಶಾಸ್ತ್ರ, ಪುರಾಣ, ಆಗಮ, ಸಂಹಿತೆ ಎಲ್ಲವೂ ಕೈಯಲ್ಲಿಯೇ ಇರುತ್ತವೆ.

೧೧೮. ಸುರಲೋಕದಲ್ಲಿ ಗಂಗೆಯಂತೆಯೂ, ಈ ಲೋಕದಲ್ಲಿ ಭಾಗೀರಥಿಯಂತೆಯೂ ತುಳಸಿಯು ಪವಿತ್ರವಾದುದು. ಮಂಗಳವಾದುದು.

೧೧೯. ಗಂಗಾಜಲದಿಂದಲೂ, ಪುಷ್ಕರ ಸೇವೆಯಿಂದಲೂ ಜನ್ಮವು ಮೋಕ್ಷ ಹೊಂದುವಂತೆ ಒಂದು ತುಳಸೀ ದಳವನ್ನು ನೀರಿನೊಡನೆ ಸೇವಿಸಿದರೆ ಆ ಫಲವು ಬರುತ್ತದೆ.

೧೨೦. ಮಾಧವನು ಯಾವನಿಗೆ ಜನ್ಮ ಜನ್ಮದಲ್ಲಿಯೂ ಪ್ರಸನ್ನನಾಗಿರುವನೋ ಅವನಿಗೆ ತುಳಸಿಯಿಂದ ಅರ್ಚಿಸಲು ಬುದ್ಧಿ ಹುಟ್ಟುತ್ತದೆ.

೧೨೧. ಹೂವಿಂದ ಕೂಡಿರುವ ತುಳಸಿಯ ದಳಗಳಿಂದಲೇ ವಿಷ್ಣುವನ್ನು ಪೂಜಿಸಿದರೆ ಅದರ ಪುಣ್ಯಫಲವನ್ನು ಹೇಳಲು ಸಾಧ್ಯವೇ ಇರುವುದಿಲ್ಲ.

ತತ್ರ ಕೇಶವ ಸಾನ್ನಿಧ್ಯಂ ಯತ್ರಾಸ್ತಿ ತುಳಸೀವನಂ ।
ತತ್ರ ಬ್ರಹ್ಮಾ ಚ ಕಮಲಾ ಸರ್ವದೇವಗಣೈಸ್ಸಹ　　॥ ೧೨೨ ॥

ತಸ್ಮಾತ್ತಾಂ ಸನ್ನಿಕೃಷ್ಟೇ ತು ಸದಾ ದೇವೀಂ ಪ್ರಪೂಜಯೇತ್ ।
ಸ್ತೋತ್ರಂ ಮಂತ್ರಾದಿಕಂ ಯದ್ವಾ ಸರ್ವಮಾನಂತ್ಯಮಶ್ನುತೇ　　॥ ೧೨೩ ॥

ಯೇ ಚ ಪ್ರೇತಾಶ್ಚ ಕೂಷ್ಮಾಂಡಾ ಪಿಶಾಚಾ ಬ್ರಹ್ಮರಾಕ್ಷಸಾಃ ।
ಭೂತದೈತ್ಯಾದಯಸ್ತತ್ರ ಪಲಾಯಂತೇ ಸದೈವ ಹಿ　　॥ ೧೨೪ ॥

ಅಲಕ್ಷ್ಮೀರ್ನಾಶಿನೀ ಘೋರ್ಣೀ ಯಾ ಡಾಕಿನ್ಯಾದಿಮಾತರಃ ।
ಸರ್ವಾಸ್ಸಂಕೋಚತಾಂ ಯಾಂತಿ ದೃಷ್ಟ್ವಾ ತು ತುಲಸೀದಲಂ　　॥ ೧೨೫ ॥

ಬ್ರಹ್ಮಹತ್ಯಾದಯಃ ಪಾಪಾ ವ್ಯಾಧಯಃ ಪಾಪಸಂಭವಾಃ ।
ಕುಮಂತ್ರಣಾ ಕೃತಾ ಯೇ ಚ ಸರ್ವೇ ನಶ್ಯಂತಿ ತತ್ರ ವೈ　　॥ ೧೨೬ ॥

---

೧೨೨. ತುಳಸೀ ವನವಿರುವಲ್ಲಿ ವಿಷ್ಣುವೂ, ಬ್ರಹ್ಮನೂ, ಲಕ್ಷ್ಮಿಯೂ, ಎಲ್ಲಾ ದೇವತೆಗಳೂ ಇರುತ್ತಾರೆ.

೧೨೩. ಅದರಿಂದ ಆ ವನದ ಸಮೀಪದಲ್ಲಿ ದೇವಿಯನ್ನು ಪೂಜಿಸಬೇಕು. ಆ ವನದ ಬಳಿಯಲ್ಲಿ ಹೇಳಿದ ಸ್ತೋತ್ರವೂ, ಮಂತ್ರಾದಿಗಳೂ, ಅನಂತ ಫಲವನ್ನು ಕೊಡುತ್ತವೆ.

೧೨೪ ಪ್ರೇತಗಳೂ, ಕೂಷ್ಮಾಂಡಗಳೂ, ಪಿಶಾಚಗಳೂ, ಬ್ರಹ್ಮರಾಕ್ಷಸಗಳೂ ಭೂತದೈತ್ಯರೂ ಅಲ್ಲಿರದೆ ಓಡಿಹೋಗುತ್ತಾರೆ.

೧೨೫. ಅಲಕ್ಷ್ಮಿಗಳೂ, ನಾಶಿನಿಗಳೂ, ಘೋರ್ಣಿಗಳೂ, ಡಾಕಿನ್ಯಾದಿಗಳೂ ತುಳಸಿಯ ದಳವನ್ನು ನೋಡಿದೊಡನೆಯೇ ಹಿಂಜರಿಯುತ್ತಾರೆ.

೧೨೬. ಬ್ರಹ್ಮಹತ್ಯಾದಿಗಳೂ, ಪಾಪದಿಂದ ಬಂದ ರೋಗಗಳೂ, ಮಾಟ ಮಂತ್ರದ, ಮಂತ್ರಗಳೂ, ಅವೆಲ್ಲವೂ ಈ ತುಳಸಿಯ ವನದ ಸೇವನೆಯಿಂದ ನಾಶಹೊಂದುತ್ತವೆ.

ಭೂತಲೇ ವಾಪಿ ತಂ ಯೇನ ಹರ್ಯರ್ಥಂ ತುಳಸೀವನಂ ।
ಕೃತಂ ಕ್ರತುಶತಂ ತೇನ ವಿಧಿವತ್ಪ್ರಯದಕ್ಷಿಣಂ ॥ ೧೨೭ ॥

ಹರಿಲಿಂಗೇಷು ಚಾನ್ಯೇಷು ಸಾಲಿಗ್ರಾಮಶಿಲಾಸು ಚ ।
ತುಲಸೀಗ್ರಹಣಂ ಕೃತ್ವಾ ವಿಷ್ಣೋಸ್ಸಾಯುಜ್ಯತಾಂ ವ್ರಜೇತ್ ॥ ೧೨೮ ॥

ನಂದಂತಿ ಪುರುಷಾಸ್ತಸ್ಯ ಮಾಧವಾರ್ಥೇ ಕ್ಷಿತೌ ತು ಯಃ ।
ತುಲಸೀಂ ರೋಪಯೇದ್ಧೀರಃ ಸ ಯಾತಿ ಮಾಧವಾಲಯಂ ॥ ೧೨೯ ॥

ಪೂಜಯಿತ್ವಾ ಹರಿಂ ದೇವಂ ನಿರ್ಮಾಲ್ಯಂ ತುಲಸೀದಳಂ ।
ಧಾರಯೇದ್ಯಸ್ಸ್ವಶೀರ್ಷೇ ತು ಪಾಪಾತ್ಪೂತೋ ದಿವಂ ವ್ರಜೇತ್ ॥ ೧೩೦ ॥

ಪೂಜನೇ ಕೀರ್ತನೇ ಧ್ಯಾನೇ ರೋಪಣೇ ಧಾರಣೇ ಕಲೌ ।
ತುಲಸೀ ದಹತೇ ಪಾಪಂ ಸ್ವರ್ಗಂ ಮೋಕ್ಷಂ ದದಾತಿ ಚ ॥ ೧೩೧ ॥

---

೧೨೭. ಯಾವನು ಹರಿಗೋಸ್ಕರ ತುಳಸಿಯ ವನವನ್ನು ಎಬ್ಬಿಸುವನೋ ಅವನು ವಿಧಿವತ್ತಾಗಿ ದಣೆಕ್ಷಿಯಿಂದ ಕೂಡಿದ ನೂರು ಯಾಗಗಳನ್ನು ಮಾಡಿದಂತಾಗುತ್ತದೆ.

೧೨೮ ಹರಿಯ ಪ್ರತಿಮೆಗೆ ಸಾಲಿಗ್ರಾಮಗಳಿಗೆ ತುಳಸಿಯನ್ನು ಕೊಯ್ದು ಕೊಟ್ಟರೆ ವಿಷ್ಣುವಿನ ಸಾಯುಜ್ಯವು ಬರುತ್ತದೆ.

೧೨೯. ಮಾಧವನಿಗೋಸ್ಕರ ತುಳಸಿಯನ್ನು ಬೆಳೆಸಿದರೆ ಅವನ ಪಿತೃಗಳು ಸಂತೋಷಗೊಳ್ಳುತ್ತಾರೆ. ಅವನು ವೈಕುಂಠಕ್ಕೆ ಹೋಗುತ್ತಾನೆ.

೧೩೦. ಹರಿಯನ್ನು ಪೂಜಿಸಿ ಆ ನಿರ್ಮಾಲ್ಯದ ತುಳಸೀದಳವನ್ನು ತಲೆಯಲ್ಲಿ ಧರಿಸಿದರೆ ಅವನು ಪಾಪಗಳಿಂದ ಮುಕ್ತನಾಗಿ ಸ್ವರ್ಗವನ್ನು ಹೊಂದುತ್ತಾನೆ

೧೩೧. ಕಲಿಯುಗದಲ್ಲಿ ತುಳಸಿಯ ಪೂಜೆ, ಕೀರ್ತನೆ, ಧ್ಯಾನ, ಬೆಳೆಸುವಿಕೆ ಧರಿಸುವಿಕೆಗಳಿಂದ ಪಾಪಗಳನ್ನು ಕಳೆದುಕೊಂಡು ಮೋಕ್ಷವನ್ನು ಹೊಂದುತ್ತಾನೆ.

ಉಪದೇಶಂ ದದೇದಸ್ಯಾಸ್ಸ್ವಯಮಾಚರತೇ ಪುನಃ ।
ಸ ಯಾತಿ ಪರಮಂ ಸ್ಥಾನಂ ಮಾಧವಸ್ಯ ನಿಕೇತನಂ ॥ ೧೩೨ ॥

ಹರೇಃ ಪ್ರಿಯತರಂ ಯಚ್ಚ ತನ್ಮೇ ಪ್ರಿಯತರಂ ಭವೇತ್ ।
ಸರ್ವೇಷಾಮಪಿ ದೇವಾನಾಂ ದೇವೀನಾಂ ಚ ಸಮಂತತಃ ॥ ೧೩೩ ॥

ಶ್ರಾದ್ಧೇಷು ಯಜ್ಞಕಾರ್ಯೇಷು ಪರ್ಣಮೇಕಂ ಷಡಾನನ ।
ತಸ್ಮಾತ್ಸರ್ವಪ್ರಯತ್ನೇನ ತುಳಸೀಸೇವನಂ ಕುರು ॥ ೧೩೪ ॥

ತುಳಸೀ ಸೇವಿತಾ ಯೇನ ತೇನ ಸರ್ವಂ ಸುಸೇವಿತಂ ।
ಗುರುವಿಪ್ರದೇವತೀರ್ಥಂ ತಸ್ಮಾತ್ಸೇವಯ ಷಣ್ಮುಖ ॥ ೧೩೫ ॥

ಶಿಖಾಯಾಂ ತುಲಸೀಂ ಕೃತ್ವಾ ಯಸ್ತು ಪ್ರಾಣಾನ್ಪರಿತ್ಯಜೇತ್ ।
ದುಷ್ಕೃತೌಘಾದ್ವಿನಿರ್ಮುಕ್ತಸ್ಸ್ವರ್ಗಮೇತಿ ನಿರಾಮಯಂ ॥ ೧೩೬ ॥

---

೧೩೨. ಯಾವನು ಪರರಿಗೂ ಉಪದೇಶಮಾಡಿ ತಾನೂ ಅದರಂತೆ ತುಳಸಿಯ ವಿಷಯದಲ್ಲಿ ಆಚರಿಸುತ್ತಾನೆಯೋ ಅವನು ವೈಕುಂಠವನ್ನು ಹೊಂದುತ್ತಾನೆ.

೧೩೩ ಹರಿಗೆ ಪ್ರಿಯವಾದುದು ನನಗೂ ಹೆಚ್ಚು ಪ್ರಿಯವಾಗಿರುತ್ತದೆ. ಅದು ಎಲ್ಲಾ ದೇವತೆಗಳಿಗೂ, ದೇವಿಯರಿಗೂ ಪ್ರಿಯವಾಗಿರುತ್ತದೆ.

೧೩೪. ಶ್ರಾದ್ಧದಲ್ಲಿಯೂ, ಯಜ್ಞಗಳಲ್ಲಿಯೂ, ಒಂದು ಎಲೆಯಾದರೂ ಇದ್ದರೆ ಪರಿಶುದ್ಧವು. ಅವರಿಗೆ ತೃಪ್ತಿಯನ್ನುಂಟುಮಾಡುತ್ತದೆ. ಆದ್ದರಿಂದ ತುಳಸಿಯನ್ನು ಸೇವಿಸು.

೧೩೫. ತುಳಸಿಯನ್ನು ಸೇವಿಸಿದರೆ ಎಲ್ಲರನ್ನೂ ಗೌರವಿಸಿದಂತಾಯಿತು. ಗುರು, ವಿಪ್ರ, ದೇವತೆಗಳ ತೀರ್ಥವೇ ಅದು. ಆದ್ದರಿಂದ ಆ ತುಳಸಿಯನ್ನು ಸೇವಿಸು.

೧೩೬. ತಲೆಯಲ್ಲಿ ತುಳಸಿಯನ್ನು ಇಟ್ಟುಕೊಂಡು ಪ್ರಾಣಬಿಟ್ಟರೆ ಪಾಪಗಳು ಹೋಗಿ ಸ್ವರ್ಗವನ್ನು ಹೊಂದುತ್ತಾನೆ.

ರಾಜಸೂಯಾದಿಭಿರ್ಯಜ್ಞೈರ್ವ್ರತೈಶ್ಚ ವಿವಿಧೈರ್ಯಮೈಃ ।
ಯಾ ಗತಿಃ ಪ್ರಾಪ್ಯತೇ ಧೀರೈಸ್ತುಲಸೀಸೇವಯಾ ವ್ರಜೇತ್ ॥ ೧೩೭ ॥

ತುಲಸೀದಳೇನ ಚೈಕೇನ ಪೂಜಯಿತ್ವಾ ಹರಿಂ ನರಃ ।
ವೈಷ್ಣವತ್ವಮವಾಪ್ನೋತಿ ಕಿಮನ್ಯೈಶ್ಶಾಸ್ತ್ರವಿಸ್ತರೈಃ ॥ ೧೩೮ ॥

ಅರ್ಚಿತಃ ಕೇಶವೋ ಯೇನ ಶಾಖಾಮೃದುಲಪಲ್ಲವೈಃ ।
ನ ಪಿಬೇತ್ಸ ಪಯೋ ಮಾತುಃ ತುಲಸ್ಯಾಃ ಕೋಟಿಸಂಭವೈಃ ॥ ೧೩೯ ॥

ಭಾವಯೇತ್ಪುರುಷಾನ್ಮರ್ತ್ಯಶ್ಶತಶೋಥ ಸಹಸ್ರಶಃ ।
ಪೂಜಯಿತ್ವಾ ಹರಿಂ ನಿತ್ಯಂ ಕೋಮಲೈಸ್ತುಲಸೀದಳೈಃ ॥ ೧೪೦ ॥

ಪ್ರಧಾನತೋ ಗುಣಾಸ್ತಾತ ತುಲಸ್ಯಾ ಗದಿತಾ ಮಯಾ ।
ನಿಖಿಲಂ ಪುರುಕಾಲೇನ ಗುಣಂ ವಕ್ತುಂ ನ ಶಕ್ನುಮಃ ॥ ೧೪೧ ॥

---

೧೩೭. ರಾಜಸೂಯಾದಿ ಯಾಗಗಳಿಂದಲೂ, ಅನೇಕ ವ್ರತಗಳಿಂದಲೂ, ನಿಯಮಗಳಿಂದಲೂ ಹೊಂದುವ ಸ್ಥಾನವು ತುಳಸೀ ಸೇವೆಯಿಂದ ಸಿಕ್ಕುತ್ತದೆ.

೧೩೮. ಒಂದು ತುಳಸೀ ದಳದಿಂದ ಹರಿಯನ್ನು ಪೂಜೆ ಮಾಡಿದರೆ ಮನುಷ್ಯನು ವಿಷ್ಣು ಸ್ಥಾನವನ್ನು ಹೊಂದುತ್ತಾನೆ ಅನೇಕ ಶಾಸ್ತ್ರಗಳಿಂದ ಉಪಯೋಗವೇನು ?

೧೩೯. ಒಂದು ಕೋಟಿ ಮೃದುವಾದ ತುಳಸೀ ದಳಗಳಿಂದ ವಿಷ್ಣುವನ್ನು ಪೂಜಿಸಿದರೆ ಅವನು ಪುನರ್ಜನ್ಮವನ್ನು ಹೊಂದುವುದಿಲ್ಲ.

೧೪೦. ನರನು ಕೋಮಲವಾದ ತುಳಸೀ ದಳಗಳಿಂದ ಹರಿಯನ್ನು ಪೂಜಿಸಿ ಶಕ್ತಿಯನ್ನು ತೋರ್ಪಡಿಸಿಕೊಳ್ಳಬೇಕು. ಅಂಥವನನ್ನು ಅನೇಕ ರೀತಿಯಲ್ಲಿ ಗೌರವಿಸಬೇಕು.

೧೪೧. ತುಳಸಿಯ ಗುಣಗಳಲ್ಲಿ ಮುಖ್ಯವಾದುದನ್ನು ಹೇಳಿದೆನು. ಅದರ ಗುಣವನ್ನು ಹೇಳಲು ಯಾರಿಗೆ ಎಷ್ಟು ಕಾಲ ತಾನೇ ಸಾಧ್ಯವಾದೀತು ?

ಯಸ್ತ್ವಿದಂ ಶೃಣುಯಾನ್ನಿತ್ಯಮಾಖ್ಯಾನಂ ಪುಣ್ಯಸಂಚಯಂ ।
ಪೂರ್ವಜನ್ಮಕೃತಾತ್ಪಾಪಾನ್ಮುಚ್ಯತೇ ಜನ್ಮಬಂಧನಾತ್ ॥ ೧೪೨ ॥

ಸಕೃತ್ಪಠನಮಾತ್ರೇಣ ವಹ್ನಿಷ್ಟೋಮಫಲಂ ಲಭೇತ್ ।
ಅಜಸ್ರಂ ಪಾಠಶೀಲಸ್ಯ ರಾಜಸೂಯಫಲಂ ಲಭೇತ್ ॥ ೧೪೩ ॥

ನ ತಸ್ಯ ವ್ಯಾಧಯಃ ಪುತ್ರ ಮೂರ್ಖತ್ವಂ ನ ಕದಾಚನ ।
ಸರ್ವದಾ ಜಯಮಾಪ್ನೋತಿ ನ ಗಚ್ಛೇತ್ಸ ಪರಾಜಯಂ ॥ ೧೪೪ ॥

ಲೇಖಸ್ತಿಷ್ಠೇದ್ಗೃಹೇ ಯಸ್ಯ ತಸ್ಯ ಲಕ್ಷ್ಮೀಃ ಪ್ರವರ್ತತೇ ।
ನ ಬಾಧಯೋ ನ ಚ ಪ್ರೇತಾ ನ ಶೋಕೋ ನಾವಮಾನತಾ ॥
ನ ತಿಷ್ಠಂತಿ ಕ್ಷಣಂ ತತ್ರ ಯತ್ರೇಯಂ ವರ್ತತೇ ಲಿಪಿಃ ॥ ೧೪೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ತುಲಸೀಮಾಹಾತ್ಮ್ಯ
ಕಥನಂ ನಾಮ ಅಷ್ಟಪಂಚಾಶತ್ತಮೋಽಧ್ಯಾಯಃ

---

೧೪೨ ಈ ಪುಣ್ಯಪ್ರದವಾದ ಕಥೆಯನ್ನು ಕೇಳಿದವನು ಹಿಂದಿನ ಜನ್ಮದ ಪಾಪಗಳನ್ನು ಕಳೆದುಕೊಳ್ಳುತ್ತಾನೆ.

೧೪೩. ಒಂದು ಸಾರಿ ಓದಿದರೆ ಅಗ್ನಿಷ್ಟೋಮಯಾಗದ ಫಲವೂ, ಯಾವಾಗಲೂ ಓದುತ್ತಲೇ ಇದ್ದರೆ ರಾಜಸೂಯಯಾಗದ ಫಲವೂ ಬರುತ್ತದೆ.

೧೪೪. ಓದುವವನಿಗೆ ರೋಗಗಳು ಬರುವುದಿಲ್ಲ. ಮೂರ್ಖತನವು ಹೋಗುತ್ತದೆ. ಯಾವಾಗಲೂ ಜಯವನ್ನೇ ಹೊಂದುತ್ತಾನೆ. ಅಪಜಯವೆಂಬುದೇ ಇಲ್ಲ

೧೪೫. ಈ ಕಥೆಯ ಬರವಣಿಗೆಯು ಮನೆಯಲ್ಲಿದ್ದರೆ ಸಂಪತ್ತುಂಟಾಗುತ್ತದೆ. ಮನೋವ್ಯಥೆಯಿರುವುದಿಲ್ಲ. ಪ್ರೇತಗಳು ಇರುವುದಿಲ್ಲ. ಶೋಕವಾಗಲೀ, ಅವಮಾನವಾಗಲೀ ಉಂಟಾಗುವುದಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ತುಳಸೀ ಮಾಹಾತ್ಮ್ಯೆಯು
ಕಥನವೆಂಬ ಐವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಊನಷಷ್ಟಿತಮೋಽಧ್ಯಾಯಃ ॥



॥ ದ್ವಿಜಾ ಊಚುಃ ॥

ತುಲಸೀಪುಷ್ಪಮಾಹಾತ್ಮ್ಯಂ ಶ್ರುತಂ ತ್ವತ್ತೋ ಹರೇಶ್ಶುಭಂ ।
ತಸ್ಯಾಸ್ತೋತ್ರಂ ಕೃತಂ ಪುಣ್ಯಂ ಶ್ರೋತುಮಿಚ್ಛಾಮಹೇ ವಯಂ ॥ ೧ ॥

॥ ವ್ಯಾಸ ಉವಾಚ ॥

ಪುರಾ ಸ್ಕಾಂದಪುರಾಣೇ ಚ ಯನ್ಮಯಾ ಕೀರ್ತಿತಂ ದ್ವಿಜಾಃ ।
ಕಥಯಾಮಿ ಪುರಾಣಂ ಚ ಪುರತೋ ಮೋಕ್ಷಹೇತವೇ ॥ ೨ ॥

ಶತಾನಂದಮುನೇಶ್ಶಿಷ್ಯಾಃ ಸರ್ವೇ ತೇ ಸಂಶ್ರಿತವ್ರತಾಃ ।
ಪ್ರಣಿಪತ್ಯ ಗುರುಂ ವಿಪ್ರಾಃ ಪಪ್ರಚ್ಛುಃ ಪುಣ್ಯತೋ ಹಿತಂ ॥ ೩ ॥

---

### ಐವತ್ತೊಂಭತ್ತನೆಯ ಅಧ್ಯಾಯವು

೧. ದ್ವಿಜರು ಹೇಳಿದರು- ಸ್ವಾಮಿ ! ತುಳಸಿಯ ಪುಷ್ಪದ ಮಹಿಮೆಯನ್ನು ನಿನ್ನಿಂದ ಕೇಳಿದೆನು. ಅದರ ಸ್ತೋತ್ರವನ್ನು ಕೇಳಬಯಸುತ್ತೇನೆ.

೨. ವ್ಯಾಸನು ಹೇಳಿದನು- ಹಿಂದೆ ಸ್ಕಾಂದಪುರಾಣದಲ್ಲಿ ಮೋಕ್ಷಕ್ಕೋಸ್ಕರ ಹೇಳಿದುದನ್ನೇ ಇಲ್ಲಿಯೂ ಹೇಳುತ್ತೇನೆ.

೩. ನಿಯಮಿಷ್ಠರಾದ ಶತಾನಂದ ಮುನಿಯ ಶಿಷ್ಯರು ಗುರುವನ್ನು ನಮಸ್ಕರಿಸಿ ಇಂತೆಂದರು.

॥ ಶಿಷ್ಯಾ ಊಚುಃ ॥

ಪೂರ್ವಂ ಬ್ರಹ್ಮಮುಖಾನ್ನಾಥ ಯಚ್ಛ್ರುತಸ್ತುಲಸೀಸ್ತವಃ ।
ತಂ ವಯಂ ಶ್ರೋತುಮಿಚ್ಛಾಮಸ್ತ್ವತ್ತೋ ಬ್ರಹ್ಮವಿದಾಂ ವರ ॥ ೪ ॥

॥ ಶತಾನಂದ ಉವಾಚ ॥

ನಾಮೋಚ್ಚಾರೇ ಕೃತೇ ತಸ್ಯಾಃ ಪ್ರೀಣಾತ್ಯಸುರದರ್ಪಹಾ ।
ಪಾಪಾನಿ ನಿಲಯಂ ಯಾಂತಿ ಪುಣ್ಯಂ ಭವತಿ ಚಾಕ್ಷಯಂ ॥ ೫ ॥

ಸಾ ಕಥಂ ತುಲಸೀ ಲೋಕೈಃ ಪೂಜ್ಯತೇ ವಂದ್ಯತೇ ನ ಹಿ ।
ದರ್ಶನಾದೇವ ಯಸ್ಯಾಸ್ತು ದಾನಂ ಕೋಟಿಗವಾಂ ಭವೇತ್ ॥ ೬ ॥

ಧನ್ಯಾಸ್ತೇ ಮಾನವಾ ಲೋಕೇ ಯದ್ಗೃಹೇ ವಿದ್ಯತೇ ಕಲೌ ।
ಶಾಲಿಗ್ರಾಮಶಿಲಾರ್ಥಂ ತು ತುಲಸೀಪ್ರತ್ಯಹಂ ಕ್ಷಿತೌ ॥ ೭ ॥

ತುಲಸೀಂ ಯೇ ವಿಚಿನ್ವಂತಿ ಧನ್ಯಾಸ್ತೇ ಕರಪಲ್ಲವಾಃ ।
ಕೇಶವಾರ್ಥಂ ಕಲೌ ಯೇ ಚ ರೋಪಯನ್ತೀಹ ಭೂತಲೇ ॥ ೮ ॥

---

೪. ಶಿಷ್ಯರು ಹೇಳಿದರು– ಸ್ವಾಮಿ! ಪೂರ್ವದಲ್ಲಿ ಬ್ರಹ್ಮನ ಮುಖದಿಂದ ಕೇಳಿದ ತುಳಸಿಯ ಮಹಿಮೆಯನ್ನು ನಿನ್ನಿಂದ ಕೇಳಲಿಚ್ಛಿಸುತ್ತೇವೆ.

೫. ಶತಾನಂದನು ಹೇಳಿದನು– ಆ ತುಳಸಿಯ ನಾಮವನ್ನು ಹೇಳಿದರೇನೆ ವಿಷ್ಣುವು ಸಂತೋಷಗೊಳ್ಳುತ್ತಾನೆ. ಪಾಪಗಳೆಲ್ಲವೂ ಹೋಗುತ್ತವೆ. ಅಕ್ಷಯವಾದ ಪುಣ್ಯವು ಲಭಿಸುತ್ತದೆ.

೬. ಅಂತಹ ತುಲಸಿಯನ್ನು ಯಾರುತಾನೇ ಪೂಜೆಮಾಡುವುದಿಲ್ಲ? ನಮಸ್ಕರಿಸುವುದಿಲ್ಲ? ಅದರ ದರ್ಶನದಿಂದಲೇ ಕೋಟಿ ಗೋದಾನ ಮಾಡಿದ ಪುಣ್ಯವು ಬರುತ್ತದೆ.

೭. ಕಲಿಯುಗದಲ್ಲಿ ಯಾರ ಮನೆಯಲ್ಲಿ ತುಳಸಿಯು ಇದೆಯೋ ಅವರೇ ಧನ್ಯರು. ಆ ತುಳಸಿಯು ಸಾಲಿಗ್ರಾಮದ ಶಿಲೆಗೋಸ್ಕರವಾಗಿಯೇ ಭೂಮಿಯಲ್ಲಿ ಹುಟ್ಟಿದೆ.

೮- ತುಳಸಿಯನ್ನು ಕೊಯ್ಯುವ ಬೆರಳುಗಳು ಧನ್ಯವಾದುವು. ಕಲಿಯುಗದಲ್ಲಿ ಕೇಶವನಿಗೋಸ್ಕರ ತುಳಸಿಯನ್ನು ಬೆಳೆಯುತಕ್ಕವರು ಧನ್ಯರು.

ಕಿಂ ಕರಿಷ್ಯಸಿ ಸಂರುಷ್ಟೋ ಯಮೋಽಪಿ ಸಹ ಕಿಂಕರೈಃ ।
ತುಳಸೀದಳೇನ ದೇವೇಶಃ ಪೂಜಿತೋ ಯೈರ್ನ ದುಃಖಹಾ ॥ ೯ ॥

ತೀರ್ಥಯಾತ್ರಾದಿಗಮನೈಃ ಫಲೈಸ್ಸಿಧ್ಯಂತಿ ಕಿಂ ನರಾಃ ।
ಸ್ನಾನೇ ದಾನೇ ತಥಾ ಧ್ಯಾನೇ ಪ್ರಾಶನೇ ಕೇಶವಾರ್ಚನೇ ॥ ೧೦ ॥

ತುಲಸೀ ದಹತೇ ಪಾಪಂ ಕೀರ್ತನೇ ರೋಪಣೇ ಕಲೌ ।
ತುಲಸ್ಯಮೃತಜನ್ಮಾಸಿ ತಥಾ ತ್ವಂ ಕೇಶವಪ್ರಿಯೇ ॥ ೧೧ ॥

ಕೇಶವಾರ್ಥಂ ಚಿನೋಮಿ ತ್ವಾಂ ವರದಾ ಭವ ಶೋಭನೇ ।
ತ್ವದಂಗಸಂಭವೈರ್ನಿತ್ಯಂ ಪೂಜಯಾಮಿ ಯಥಾ ಹರಿಂ ॥ ೧೨ ॥

ತಥಾ ಕುರು ಪವಿತ್ರಾಂಗಿ ಕಲೌ ಮಲವಿನಾಶಿನೀ ।
ಮಂತ್ರೇಣಾನೇನ ಯಃ ಕುರ್ಯಾದ್ವಿಚಿತ್ಯ ತುಲಸೀದಳಂ ॥ ೧೩ ॥

ಪೂಜನಂ ವಾಸುದೇವಸ್ಯ ಲಕ್ಷಕೋಟಿಗುಣಂ ಭವೇತ್ ।
ಪ್ರಭಾವಂ ತವ ದೇವೇಶಿ ಗಾಯಂತಿ ಸುರಸತ್ತಮಾಃ ॥ ೧೪ ॥

---

೯-೨೦. ತುಳಸಿಯು ಮನೆಯಲ್ಲಿದ್ದರೆ ಕೋಪಗೊಂಡ ಯಮನೂ, ಅವನ ಆಳುಗಳೂ ಏನು ಮಾಡಬಲ್ಲರು ? ತುಳಸಿಯ ದಳದಿಂದ ಯಾವನು ಸ್ವಾಮಿಯನ್ನು ಪೂಜಿಸುವುದಿಲ್ಲವೋ ಅವನಿಗೆ ತೀರ್ಥಯಾತ್ರೆಗಳಿಂದ ಏನು ಬರುತ್ತದೆ? ಸ್ನಾನ, ದಾನ, ಧ್ಯಾನ, ತಿನ್ನುವುದು, ಕೇಶವನ ಪೂಜೆ, ಹೊಗಳಿಕೆ, ಬೆಳೆಸುವಿಕೆಗಳನ್ನು ಮಾಡಿದರೆ ತುಳಸಿಯು ಪಾಪಗಳನ್ನು ಹಾಳುಮಾಡುತ್ತದೆ. ಎಲೈ ತುಳಸಿಯೇ ! ನೀನು ಅಮೃತದಿಂದ ಹುಟ್ಟಿದ್ದೀಯೆ. ನೀನು ಕೇಶವನಿಗೆ ಪ್ರಿಯೆಯು. ಕೇಶವನ ಪೂಜೆಗೋಸ್ಕರ ನಿನ್ನನ್ನು ಕೊಯ್ಯುತ್ತೇನೆ. ವರವನ್ನು ಕೊಡು. ನಿನ್ನಿಂದ ಉತ್ಪನ್ನವಾದ ದಳಗಳಿಂದ ಹರಿಯನ್ನು ಪೂಜಿಸುವಂತೆ ನನಗೆ ಅನುಗ್ರಹಮಾಡು. ನಿನಗೆ ನಮಸ್ಕಾರವು. ಕಲಿಯುಗದಲ್ಲಿ ಪಾಪಹಾರಕಳೇ ನಿನಗೆ ನಮಸ್ಕಾರವು. ಈ ಮಂತ್ರದಿಂದ ತುಳಸೀ ದಳವನ್ನು ಕೊಯ್ದು ವಾಸುದೇವನ ಪೂಜೆಯನ್ನು ಮಾಡಿದರೆ ಲಕ್ಷಕೋಟಿಯಷ್ಟು ಪುಣ್ಯವು ಹೆಚ್ಚಾಗಿ ಬರುತ್ತದೆ. ಎಲೈ ದೇವೇಶಿಯೇ ! ನಿನ್ನ ಪ್ರಭಾವವನ್ನು ದೇವತೆಗಳೂ ಹಾಡುತ್ತಾರೆ. ಮುನಿಗಳೂ, ಸಿದ್ಧರೂ, ಗಂಧರ್ವರೂ, ಆದಿಶೇಷನೂ, ಕೂಡ ಪಾತಾಳದಲ್ಲಿ ಗಾನ ಮಾಡುತ್ತಾರೆ. ವಿಷ್ಣುವು ಹೊರತಾಗಿ ನಿನ್ನ

ಮುನಯಸ್ಸಿದ್ಧಗಂಧರ್ವಾಃ ಪಾತಾಲೇ ನಾಗರಾಟ್ಸ್ವಯಂ ।
ನ ತೇ ಪ್ರಭಾವಂ ಜಾನಂತಿ ದೇವತಾಃ ಕೇಶವಾದೃತೇ ॥ ೧೫ ॥

ಗುಣಾನಾಂ ಪರಿಮಾಣಂ ತು ಕಲ್ಪಕೋಟಿಶತೈರಪಿ ।
ಕೃಷ್ಣಾನಂದಾತ್ಸಮುದ್ಭೂತಾ ಕ್ಷೀರೋದಮಥನೋದ್ಯಮೇ ॥ ೧೬ ॥

ಉತ್ತಮಾಂಗೇ ಪುರಾ ಯೇನ ತುಳಸೀ ವಿಷ್ಣುನಾ ಧೃತಾ ।
ಪ್ರಾಪ್ಯೈತಾನಿ ತ್ವಯಾ ದೇವಿ ವಿಷ್ಣೋರಂಗಾನಿ ಸರ್ವಶಃ ॥ ೧೭ ॥

ಪವಿತ್ರತಾ ತ್ವಯಾ ಪ್ರಾಪ್ತಾ ತುಲಸೀಂ ತ್ವಾಂ ನಮಾಮ್ಯಹಂ ।
ತ್ವದಂಗ ಸಂಭವೈಃ ಪತ್ರೈಃ ಪೂಜಯಾಮಿ ಯಥಾ ಹರಿಂ ॥ ೧೮ ॥

ತಥಾ ಕುರುಷ್ವ ಮೇಽವಿಘ್ನಂ ಯತೋ ಯಾಮಿ ಪರಾಂ ಗತಿಂ ।
ರೋಪಿತಾ ಗೋಮತೀ ತೀರೇ ಸ್ವಯಂ ಕೃಷ್ಣೇನ ಪಾಲಿತಾ ॥ ೧೯ ॥

ಜಗದ್ಧಿತಾಯ ತುಳಸೀ ಗೋಪೀನಾಂ ಹಿತಹೇತವೇ ।
ವೃಂದಾವನೇ ವಿಚರತಾ ಸೇವಿತಾ ವಿಷ್ಣುನಾ ಸ್ವಯಂ ॥ ೨೦ ॥

ಗೋಕುಲಸ್ಯ ವಿವೃದ್ಧ್ಯರ್ಥಂ ಕಂಸಸ್ಯ ನಿಧನಾಯ ಚ ।
ವಸಿಷ್ಠವಚನಾತ್ಪೂರ್ವಂ ರಾಮೇಣ ಸರಯೂತಟೇ ॥ ೨೧ ॥

---

ಗುಣವನ್ನು ಯಾರೂ ತಿಳಿಯರು. ಅವರು ನಿನ್ನ ಗುಣಗಳ ಲೆಕ್ಕವನ್ನು ಕಲ್ಪಗಳ ಕೋಟಿಗಳಾದರೂ ತಿಳಿಯಲಾರರು. ಕ್ಷೀರಸಮುದ್ರವನ್ನು ಕಡೆಯುವಾಗ ಕೃಷ್ಣನ ಆನಂದದಿಂದ ನೀನುಹುಟ್ಟಿದೆ. ಆಗ ವಿಷ್ಣುವು ನಿನ್ನನ್ನು ತಲೆಯ ಮೇಲೆ ಧರಿಸಿದನು. ಎಲೈ ದೇವಿಯೇ ! ವಿಷ್ಣುವಿನ ಅಂಗಗಳನ್ನು ನೀನು ಎಲ್ಲಾ ಭಾಗದಲ್ಲಿಯೂ ಹೊಂದಿರುವುದರಿಂದ ನೀನು ಪವಿತ್ರಳಾದೆ. ನಿನ್ನನ್ನು ನಮಸ್ಕರಿಸುತ್ತೇನೆ. ಎಲೈ ತುಳಸಿಯೇ! ನಿನ್ನಿಂದ ಹುಟ್ಟಿದ ಪತ್ರಗಳಿಂದ ಹರಿಯನ್ನು ಪೂಜಿಸುವಂತೆ ನಿರ್ವಿಘ್ನವನ್ನುಂಟು ಮಾಡು. ಆದರಿಂದ ಉತ್ತಮ ಗತಿಯನ್ನು ಹೊಂದುವೆನು. ಗೋಮತಿಯ ತೀರದಲ್ಲಿ ಕೃಷ್ಣನೇ ತುಳಸಿಯನ್ನು ಬೆಳೆಸಿ ಪ್ರಪಂಚದ ಹಿತಕ್ಕೂ, ಗೋಪಿಯರ ಹಿತಕ್ಕೂ ಅದನ್ನು ಕಾಪಾಡಿದನು. ವೃಂದಾವನದಲ್ಲಿಯೂ ಕೃಷ್ಣನು ತಾನೇ ಸೇವಿಸಿದನು

೨೧-೨೨- ಈ ಬೃಂದಾವನದಲ್ಲಿ ಗೋವುಗಳ ವೃದ್ಧಿಗೋಸ್ಕರವೂ ಕಂಸನನ್ನು ಕೊಲ್ಲುವುದಕ್ಕೋಸ್ಕರವೂ ಕೃಷ್ಣನು ತಾನು ಸೇವಿಸಿದನು. ಪೂರ್ವದಲ್ಲಿ ರಾಮನು

ರಾಕ್ಷಸಾನಾಂ ವಧಾರ್ಥಾಯ ರೋಪಿತಾ ತ್ವಂ ಜಗತ್ಪ್ರಿಯೇ ।
ರೋಪಿತಾ ತಪಸೋ ವೃದ್ಧ್ಯೈ ತುಳಸೀಂ ತ್ವಾಂ ನಮಾಮ್ಯಹಂ ॥ ೨೨ ॥

ವಿಯೋಗೇ ವಾಸುದೇವಸ್ಯ ಧ್ಯಾತ್ವಾ ತ್ವಾಂ ಜನಕಾತ್ಮಜಾ ।
ಅಶೋಕವನಮಧ್ಯೇ ತು ಪ್ರಿಯೇಣ ಸಹ ಸಂಗತಾ ॥ ೨೩ ॥

ಶಂಕರಾರ್ಥಂ ಪುರಾ ದೇವೀ ಪಾರ್ವತೀ ತ್ವಾಂ ಹಿಮಾಲಯೇ ।
ರೋಪಿತಾ ಸೇವಿತಾ ಸಿದ್ಧ್ಯೈ ತುಳಸೀಂ ತ್ವಾಂ ನಮಾಮ್ಯಹಂ ॥ ೨೪ ॥

ಸರ್ವಾಭಿರ್ದೇವಪತ್ನೀಭಿಃ ಕಿನ್ನರೈಶ್ಚಾಪಿ ನಂದನೇ ।
ದುಸ್ಸ್ವಪ್ನನಾಶನಾರ್ಥಾಯ ಸೇವಿತಾ ತ್ವಂ ನಮೋಽಸ್ತು ತೇ ॥ ೨೫ ॥

ಧರ್ಮಾರಣ್ಯೇ ಗಯಾಯಾಂ ಚ ಸೇವಿತಾ ಪಿತೃಭಿಸ್ಸ್ವಯಂ ।
ಸೇವಿತಾ ತುಳಸೀ ಪುಣ್ಯಾ ಆತ್ಮನೋ ಹಿತಮಿಚ್ಛತಾ ॥ ೨೬ ॥

---

ವಸಿಷ್ಠರ ಮಾತಿನಂತೆ ಸರಯೂ ನದಿಯ ದಡದಲ್ಲಿ ನಿನ್ನನ್ನು ಬೆಳಸಿ ರಾಕ್ಷಸರನ್ನು ಕೊಂದನು. ಆಗ ತಪಸ್ಸಿನ ವೃದ್ಧಿಗೋಸ್ಕರಲೂ ನಿನ್ನನ್ನು ಬೆಳಸಿದನು. ಅಂತಹ ನಿನಗೆ ನಮಸ್ಕಾರವು.

೨೩. ಸೀತೆಯು ತನಗೆ ಗಂಡನಿಂದ ವಿಯೋಗವಾದಾಗ ಆ ಅಶೋಕವನದ ಮಧ್ಯದಲ್ಲಿಯೇ ನಿನ್ನನ್ನು ಧ್ಯಾನಿಸಿ ಗಂಡನೊಡನೆ ಸೇರಿದಳು.

೨೪. ಪೂರ್ವದಲ್ಲಿ ಶಂಕರನನ್ನು ಹೊಂದಲು ಪಾರ್ವತಿಯು ನಿನ್ನನ್ನು ಬೆಳೆಸಿ ಧ್ಯಾನಿಸಿ ತಪಸ್ಸಿದ್ಧಿಯನ್ನು ಹೊಂದಿದಳು. ಅಂತಹ ನಿನಗೆ ನಮಸ್ಕಾರವು.

೨೫. ಎಲ್ಲ ಕಿನ್ನರರೂ, ದೇವತಾಸ್ತ್ರೀಯರೂ, ದುಃಸ್ವಪ್ನಪರಿಹಾರಕ್ಕೋಸ್ಕರ ನಿನ್ನನ್ನು ನಂದನವನದಲ್ಲಿ ಸೇವಿಸಿದರು. ಅಂತಹ ನಿನಗೆ ನಮಸ್ಕಾರವು.

೨೬. ಪಿತೃಗಳು ಧರ್ಮಾರಣ್ಯದಲ್ಲಿಯೂ, ಗಯೆಯಲ್ಲಿಯೂ ಬೆಳಸಿ ತಮ್ಮ ಹಿತಕ್ಕೋಸ್ಕರ ಸೇವಿಸಿದರು. ಅಂತಹ ನಿನಗೆ ನಮಸ್ಕಾರವು.

ರೋಪಿತಾ ರಾಮಚಂದ್ರೇಣ ಸೇವಿತಾ ಲಕ್ಷ್ಮಣೇನ ಚ ।
ಸೀತಯಾ ಪಾಲಿತಾ ಭಕ್ತ್ಯಾ ತುಳಸೀ ದಂಡಕೇ ವನೇ ॥ ೨೭ ॥

ತ್ರೈಲೋಕ್ಯವ್ಯಾಪಿನೀ ಗಂಗಾ ಯಥಾ ಶಾಸ್ತ್ರೇಷು ಗೀಯತೇ ।
ತಥೈವ ತುಳಸೀದೇವೀ ದೃಶ್ಯತೇ ಸಚರಾಚರೇ ॥ ೨೮ ॥

ಋಷ್ಯಮೂಕೇ ಚ ವಸತಾ ಕಪಿರಾಜೇನ ಸೇವಿತಾ ।
ತುಲಸೀ ವಾಲಿನಾಶಾಯ ತಾರಾಸಂಗಮಹೇತವೇ ॥ ೨೯ ॥

ಪ್ರಣಮ್ಯ ತುಳಸೀಂ ದೇವೀಂ ಸಾಗರೋತ್ಕ್ರಮಣಂ ಕೃತಂ ।
ಕೃತಕಾರ್ಯಃ ಪ್ರಹೃಷ್ಟಶ್ಚ ಹನೂಮಾನ್ಪುನರಾಗತಃ ॥ ೩೦ ॥

ತುಳಸೀಗ್ರಹಣಂ ಕೃತ್ವಾ ವಿಮುಕ್ತೋ ಯಾತಿ ಪಾತಕೈಃ ।
ಅಥವಾ ಮುನಿಶಾರ್ದೂಲ ಬ್ರಹ್ಮಹತ್ಯಾಂ ವ್ಯಪೋಹತಿ ॥ ೩೧ ॥

ತುಳಸೀಪತ್ರಗಳಿತಂ ಯಸ್ತೋಯಂ ಶಿರಸಾ ವಹೇತ್ ।
ಗಂಗಾಸ್ನಾನಮವಾಪ್ನೋತಿ ದಶಧೇನುಫಲಪ್ರದಂ ॥ ೩೨ ॥

---

೨೭. ದಂಡಕಾರಣ್ಯದಲ್ಲಿ ರಾಮಚಂದ್ರನೂ, ಲಕ್ಷ್ಮಣನೂ, ಸೀತೆಯೂ ನಿನ್ನನ್ನು ಬೆಳೆಸಿ ಭಕ್ತಿಯಿಂದ ಸೇವಿಸಿದರು. ಅಂತಹ ನಿನಗೆ ನಮಸ್ಕಾರವು

೨೮. ಗಂಗೆಯು ಮೂರುಲೋಕವನ್ನು ವ್ಯಾಪಿಸಿರುವುದೆಂದು ಶಾಸ್ತ್ರದಲ್ಲಿ ಹೇಳಿರುವಂತೆಯೇ ತುಳಸಿಯೂ ಚರಾಚರಗಳಲ್ಲಿ ವ್ಯಾಪಿಸಿದೆ.

೨೯. ಋಷ್ಯಮೂಕಪರ್ವತದಲ್ಲಿ ಸುಗ್ರೀವನು ತುಳಸಿಯನ್ನು ಬೆಳೆಸಿ ಸೇವಿಸಿ ವಾಲಿ ನಾಶವನ್ನು ಮಾಡಿ ತಾರೆಯನ್ನು ಹೊಂದಿದನು.

೩೦. ಹನುಮಂತನು ತುಳಸಿಯನ್ನು ಸೇವಿಸಿ ಸಾಗರವನ್ನು ದಾಟಿ ತನ್ನ ಕಾರ್ಯಸಿದ್ಧಿಯನ್ನು ಹೊಂದಿ ಮತ್ತೆ ಬಂದನು.

೩೧. ತುಳಸಿಯನ್ನು ಕೊಯ್ದರೇನೇ ಪಾಪಗಳು ಹೋಗುತ್ತವೆ. ಕೊನೆಗೆ ಬ್ರಹ್ಮಹತ್ಯೆಯೂ ಕೂಡ ಹೋಗುತ್ತದೆ.

೩೨. ತುಳಸಿಯ ದಳದಿಂದ ಬಿದ್ದ ನೀರನ್ನು ತಲೆಯಮೇಲೆ ಹಾಕಿಕೊಂಡರೆ ಗಂಗಾಸ್ನಾನ ಮಾಡಿದ ಪುಣ್ಯವು ಬರುತ್ತದೆ. ಮತ್ತು ಹತ್ತು ಗೋದಾನದ ಫಲವೂ ಬರುತ್ತದೆ.

ಪ್ರಸೀದ ದೇವಿ ದೇವೇಶಿ ಪ್ರಸೀದ ಹರಿವಲ್ಲಭೇ ।
ಕ್ಷೀರೋದಮಥನೋದ್ಭೂತೇ ತುಳಸಿ ತ್ವಾಂ ನಮಾಮ್ಯಹಂ ॥ ೩೩ ॥

ದ್ವಾದಶ್ಯಾಂ ಜಾಗರೇ ರಾತ್ರೌ ಯಃ ಪಠೇತ್ತುಲಸೀಸ್ತವಂ ।
ದ್ವಾತ್ರಿಂಶದಪರಾಧಾಂಶ್ಚ ಕ್ಷಮತೇ ತಸ್ಯ ಕೇಶವಃ ॥ ೩೪ ॥

ಯತ್ಪಾಪಂ ಯೌವನೇ ಬಾಲ್ಯೇ ಕೌಮಾರೇ ವಾರ್ಧಕೇ ಕೃತಂ ।
ತತ್ಸರ್ವಂ ವಿಲಯಂ ಯಾತಿ ತುಲಸೀಸ್ತವಪಾಠತಃ ॥ ೩೫ ॥

ಪ್ರೀತಿಮಾಯಾತಿ ದೇವೇಶಸ್ತುಷ್ಟೋ ಲಕ್ಷ್ಮೀಂ ಪ್ರಯಚ್ಛತಿ ।
ಕುರುತೇ ಶತ್ರುನಾಶಂ ಚ ಸುಖಂ ವಿದ್ಯಾಂ ಪ್ರಯಚ್ಛತಿ ॥ ೩೬ ॥

ತುಳಸೀನಾಮಮಾತ್ರೇಣ ದೇವಾ ಯಚ್ಛಂತಿ ವಾಂಛಿತಂ ।
ಗರ್ಹ್ಯಾಣಾಮಪಿ ದೇವೇಶೋ ಮುಕ್ತಿಂ ಯಚ್ಛತಿ ದೇಹಿನಾಂ ॥ ೩೭ ॥

ತುಳಸೀಸ್ತವಸಂತುಷ್ಟೋ ಸುಖಂ ವೃದ್ಧಿಂ ದದಾತಿ ಚ ।
ಉದ್ಗತಂ ಹೇಲಯಾ ವಿದ್ಧಿ ಪಾಪಂ ಯಮಪಥೇ ಸ್ಥಿತಂ ॥ ೩೮ ॥

---

೩೩. ದೇವೇಶಿಯೇ! ಹರಿವಲ್ಲಭೆಯೇ! ಪ್ರಸನ್ನಳಾಗು. ಕ್ಷೀರಸಮುದ್ರದ ಕಡೆತದಲ್ಲಿ ಹುಟ್ಟಿದ ತುಳಸಿಯೆ! ನಿನಗೆ ನಮುಸ್ಕಾರವು.

೩೪. ದ್ವಾದಶಿಯ ರಾತ್ರೆ ಜಾಗರಣೆ ಮಾಡುತ್ತಾ ಈ ತುಲಸೀಸ್ತವವನ್ನು ಹೇಳಿದರೆ ಅವನ ಮೂವತ್ತೆರಡು ತಪ್ಪುಗಳನ್ನು ಕೇಶವನು ಕ್ಷಮಿಸುತ್ತಾನೆ.

೩೫. ಬಾಲ್ಯ, ಯೌವನ, ಕೌಮಾರ, ವಾರ್ಧಿಕಗಳಲ್ಲಿ ಮಾಡಿದ ಪಾಪಗಳೆಲ್ಲವೂ ಈ ಸ್ತೋತ್ರವನ್ನು ಪಠಿಸುವುದರಿಂದ ನಾಶವಾಗುತ್ತದೆ.

೩೬. ಇದರಿಂದ ವಿಷ್ಣುವು ತುಷ್ಟನಾಗಿ ಸಂಪತ್ತನ್ನು ಕೊಡುತ್ತಾನೆ. ಶತ್ರುಗಳನ್ನು ನಾಶ ಮಾಡುತ್ತಾನೆ. ಸುಖವನ್ನೂ ವಿದ್ಯೆಯನ್ನೂ ಕೊಡುತ್ತಾನೆ.

೩೭. ತುಳಸಿಯ ಹೆಸರನ್ನು ಹೇಳಿದರೇನೇ ದೇವತೆಗಳು ಇಷ್ಟಾರ್ಥವನ್ನು ಕೊಡುತ್ತಾರೆ. ವಿಷ್ಣುವು ಅಯೋಗ್ಯರಾದರೂ ಅವರಿಗೆ ಮೋಕ್ಷವನ್ನು ಕೊಡುತ್ತಾನೆ.

೩೮. ಈ ಸ್ತವದಿಂದ ತುಷ್ಟನಾದ ವಿಷ್ಣುವು ಸುಖವನ್ನೂ ವೃದ್ಧಿಯನ್ನೂ ಕೊಡುತ್ತಾನೆ. ಅವನ ಪಾಪವೆಲ್ಲವೂ ಹೋದದ್ದನ್ನಾಗಿ ತಿಳಿ.

ಯಸ್ಮಿನ್ಗೃಹೇ ಚ ಲಿಖಿತೋ ವಿದ್ಯತೇ ತುಳಸೀಸ್ತವಃ ।
ನಾಶುಭಂ ವಿದ್ಯತೇ ತಸ್ಯ ಶುಭಮಾಪ್ನೋತಿ ನಿಶ್ಚಿತಂ ॥ ೩೯ ॥

ಸರ್ವಂ ಚ ಮಂಗಳಂ ತಸ್ಯ ನಾಸ್ತಿ ಕಿಂಚಿದಮಂಗಳಂ ।
ಸುಭಿಕ್ಷಂ ಸರ್ವದಾ ತಸ್ಯ ಧನಂ ಧಾನ್ಯಂ ಚ ಪುಷ್ಕಲಂ ॥ ೪೦ ॥

ನಿಶ್ಚಲಾ ಕೇಶವೇ ಭಕ್ತಿರ್ನ ವಿಯೋಗೈಶ್ಚ ವೈಷ್ಣವೈಃ ।
ಜೀವತಿ ವ್ಯಾಧಿನಿರ್ಮುಕ್ತೋ ನಾಧರ್ಮೇ ಜಾಯತೇ ಮತಿಃ ॥ ೪೧ ॥

ದ್ವಾದಶ್ಯಾಂ ಜಾಗರೇ ರಾತ್ರೌ ಯಃ ಪಠೇತ್ತುಳಸೀಸ್ತವಂ ।
ತೀರ್ಥಕೋಟಿಸಹಸ್ರೈಸ್ತು ಯತ್ಫಲಂ ಲಕ್ಷಕೋಟಿಭಿಃ ॥
ತತ್ಫಲಂ ಸಮವಾಪ್ನೋತಿ ಪಠಿತ್ವಾ ತುಳಸೀಸ್ತವಂ ॥ ೪೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ತುಳಸೀಸ್ತವೋ ನಾಮ
ಊನಷಷ್ಟಿತಮೋಽಧ್ಯಾಯಃ

---

೩೯. ಈ ತುಳಸೀಸ್ತವವನ್ನು ಬರೆದು ಯಾರು ಮನೆಯಲ್ಲಿಟ್ಟುಕೊಂಡಿರುವರೋ ಅವರಿಗೆ ಅಶುಭಗಳು ಹೋಗಿ ಶುಭವುಂಟಾಗುತ್ತದೆ. ನಿಶ್ಚಯವು.

೪೦. ಅವನಿಗೆ ಎಲ್ಲವೂ ಮಂಗಳವು. ಅಮಂಗಳವು ಇಲ್ಲವೇ ಇಲ್ಲ. ಅವನಿಗೆ ಧನಧಾನ್ಯಗಳೆಲ್ಲಾ ಸುಭಿಕ್ಷವಾಗಿರುತ್ತವೆ.

೪೧. ಅವನಿಗೆ ಕೇಶವನಲ್ಲಿ ಚಲಿಸದ ಭಕ್ತಿಯು ಹುಟ್ಟುತ್ತದೆ. ವೈಷ್ಣವರೊಡನೆಯೇ ಯಾವಾಗಲೂ ಇರುತ್ತಾನೆ ವ್ಯಾಧಿಯು ಬರುವುದಿಲ್ಲ. ಪಾಪದಲ್ಲಿ ಬುದ್ಧಿಯು ಹುಟ್ಟುವುದಿಲ್ಲ.

೪೨. ದ್ವಾದಶಿಯಲ್ಲಿಯೂ ಹಿಂದಿನ ಜಾಗರಣ ರಾತ್ರಿಯಲ್ಲಿಯೂ ಈ ತುಳಸೀಸ್ತವವನ್ನು ಪಠಿಸಿದರೆ ಕೋಟ್ಯಂತರ ತೀರ್ಥಗಳಿಂದ ಬರುವ ಫಲವು ಬರುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ತುಳಸೀ ಸ್ತವವೆಂಬ
ಐವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಷಷ್ಟಿತಮೋಽಧ್ಯಾಯಃ ॥



॥ ದ್ವಿಜಾ ಊಚುಃ ॥

ಮಜ್ಜನಾದಖಿಲಂ ಪಾಪಂ ಕ್ಷಯಂ ಯಾತಿ ಸುನಿಶ್ಚಿತಂ ।
ಮಹಾಪಾತಕಮನ್ಯಚ್ಚ ತದಾದೇಶಂ ವದಸ್ವ ನಃ ॥ ೧ ॥

ಪಾಪಾತ್ಪೂತೋ ಕ್ಷಯಂ ನಾಕಮುಶ್ನುತೇ ದಿವಿ ಶಕ್ರವತ್ ।
ಸುರಯೋನೇರ್ನ ಹಾನಿಸ್ಸ್ಯಾದುಪದೇಶಂ ವದಸ್ವ ನಃ ॥ ೨ ॥

ಅತ್ರ ಭೋಗ್ಯಂ ಪರಂ ಸರ್ವಂ ಮೃತೇ ಸ್ವರ್ಗೇ ಸುರೋತ್ತಮಃ ।
ಕಲಿಪಾಪಹತಾನಾಂ ಚ ಸ್ವರ್ಗಸೋಪಾನಮುಚ್ಯತೇ ॥ ೩ ॥

---

## ಅರವತ್ತನೆಯ ಅಧ್ಯಾಯವು

೧. ಬ್ರಾಹ್ಮಣರು ಹೇಳಿದರು- ಎಲ್ಲಿ ಸ್ನಾನ ಮಾಡಿದರೆ ಮಹಾಪಾಪಗಳೂ ಉಳಿದ ಪಾಪಗಳೂ ಹೋಗುತ್ತವೆಯೋ ಆ ಜಾಗವನ್ನು ನಮಗೆ ಹೇಳು.

೨. ಪಾಪದಿಂದ ಮುಕ್ತನಾಗಿ ಸ್ವರ್ಗದಲ್ಲಿ ಇಂದ್ರನಂತಿರುತ್ತಾ ಆ ಸ್ವರ್ಗದಿಂದ ಚ್ಯುತನಾಗದ ರೀತಿಯ ಒಂದು ಉಪದೇಶವನ್ನು ಕೊಡು.

೩ ಇಲ್ಲಿಯೂ ಸುಖವನ್ನನುಭವಿಸಿ ಸತ್ತಮೇಲೂ ಸ್ವರ್ಗದಲ್ಲಿ ಸುಖವನ್ನನುಭವಿಸಬೇಕು. ಆ ರೀತಿಯಾಗಿ ಕಲಿಯಲ್ಲಿ ಪಾಪ ಮಾಡಿದವರಿಗೆ ಸ್ವರ್ಗಸೋಪಾನವಾಗಿರುವುದು ಯಾವುದು?

॥ ವ್ಯಾಸ ಉವಾಚ ॥

ಗತಿಂ ಚಿಂತಯತಾಂ ವಿಪ್ರಾಸ್ತೂರ್ಣಂ ಸಾಮಾನ್ಯಜನ್ಮನಾಂ ।
ಸ್ತ್ರೀಪುಂಸಾಮೀಕ್ಷಣಾದ್ಯಸ್ಮಾದ್ಗಂಗಾ ಸಾಮಾನ್ಯಜನ್ಮನಾಂ ॥ ೪ ॥

ಗಂಗೇತಿ ಸ್ಮರಣಾದೇವ ಕ್ಷಯಂ ಯಾತಿ ಚ ಪಾತಕಂ ।
ಕೀರ್ತನಾದತಿಪಾಪಾನಿ ದರ್ಶನಾದ್ಗುರುಕಲ್ಮಷಂ ॥ ೫ ॥

ಸ್ನಾನಾತ್ಪಾನಾಚ್ಚ ಜಾಹ್ನವ್ಯಾಂ ಪಿತೄಣಾಂ ತರ್ಪಣಾತ್ತಥಾ ।
ಮಹಾಪಾತಕವೃಂದಾನಿ ಕ್ಷಯಂ ಯಾಂತಿ ದಿನೇ ದಿನೇ ॥ ೬ ॥

ಅಗ್ನಿನಾ ದಹ್ಯತೇ ತೂಲಂ ತೃಣಂ ಶುಷ್ಕಂ ಕ್ಷಣಾದ್ಯಥಾ ।
ತಥಾ ಗಂಗಾಜಲಸ್ಪರ್ಶಾತ್ಪುಂಸಾಂ ಪಾಪಂ ದಹೇತ್ಕ್ಷಣಾತ್ ॥ ೭ ॥

ಸಂಪ್ರಾಪ್ನೋತ್ಯಕ್ಷಯಂ ಸ್ವರ್ಗಂ ಗಂಗಾಸ್ನಾನೇನ ಕೇಶವಂ ।
ಯಶೋ ರಾಜ್ಯಂ ಲಭೇತ್ಪುಣ್ಯಂ ಸ್ವರ್ಗಂ ತೇ ಚ ಪರಾಂ ಗತಿಂ ॥ ೮ ॥

---

೪. ವ್ಯಾಸನು ಹೇಳಿದನು- ಸಾಮಾನ್ಯವಾಗಿ ಹುಟ್ಟಿ ಉತ್ತಮ ಗತಿಯು ಬೇಕೆಂಬೆನ್ನುವ ಗಂಡಸರು ಹೆಂಗಸರಿಗೆ ದರ್ಶನ ಮಾತ್ರದಿಂದಲೇ ಗಂಗೆಯು ಪಾಪಗಳನ್ನು ನಾಶಮಾಡುತ್ತದೆ.

೫-೬. ಗಂಗೆ ಎಂದು ಸ್ಮರಿಸಿದರೇನೆ ಪಾತಕಗಳು ಹೋಗುತ್ತವೆ. ನಾನುಗಳನ್ನು ಕೀರ್ತಿಸಿದರೆ ಅತಿ ಪಾಪಗಳು ಹೋಗುತ್ತವೆ. ದರ್ಶನಮಾಡಿದರೆ ಇನ್ನೂ ಗುರುವಾದ ಪಾಪಗಳು ಹೋಗುತ್ತವೆ. ಜಾಹ್ನವಿಯಲ್ಲಿ ಸ್ನಾನ, ಪಾನ, ಪಿತೃತರ್ಪಣಗಳನ್ನು ಮಾಡಿದರೆ ಮಹಾಪಾಪಗಳ ಗುಂಪೆಲ್ಲವೂ ನಾಶವಾಗುತ್ತವೆ.

೭. ಹತ್ತಿಯೂ ಒಣಗಿದ ಹುಲ್ಲೂ ಬೆಂಕಿಯು ತಗುಲಿದ ಕೂಡಲೇ ಸುಟ್ಟು ಹೋಗುವಂತೆ ಗಂಗೆಯ ಜಲದ ಸ್ಪರ್ಶನದಿಂದಲೇ ಪಾಪಗಳೆಲ್ಲವೂ ಕ್ಷಣಕಾಲದಲ್ಲಿ ನಾಶವಾಗುತ್ತವೆ.

೮. ಅದರಲ್ಲಿ ಸ್ನಾನಮಾಡಿದವನು ವೈಕುಂಠವನ್ನು ಹೊಂದುತ್ತಾನೆ. ಈ ಈ ಲೋಕದಲ್ಲಿ ಮತ್ತೆ ಹುಟ್ಟಿದಾಗ ಯಶಸ್ಸು, ರಾಜ್ಯ, ಪುಣ್ಯಗಳನ್ನು ಹೊಂದುತ್ತಾನೆ. ಸತ್ತನಂತರ ಮತ್ತೆ ಸ್ವರ್ಗವು ಸಿಕ್ಕುತ್ತದೆ.

ಪಿತೄನುದ್ದಿಶ್ಯ ಗಂಗಾಯಾಂ ಯಸ್ತು ಪಿಂಡಂ ಪ್ರಯಚ್ಛತಿ ।
ವಿಧಿನಾ ವಾಕ್ಯಪೂರ್ವೇಣ ತಸ್ಯ ಪುಣ್ಯಫಲಂ ಶೃಣು ॥ ೯ ॥

ಅನ್ನೈಕೇನ ತು ಸಾಹಸ್ರಂ ವರ್ಷಂ ಪೂಜ್ಯಃ ಸುರಾಲಯೇ ।
ತಿಲೇನ ದ್ವಿಗುಣಂ ವಿದ್ಧಿ ತಥಾ ಮೇಧ್ಯಫಲೇನ ಚ ॥ ೧೦ ॥

ಗವ್ಯೇನ ವಿಧಿನಾ ವಿಪ್ರಾಃ ಸ್ವರ್ಗಸ್ಯಾಂತೋ ನ ವಿದ್ಯತೇ ।
ಏವಂ ಪಿಂಡಪ್ರದಾನೇನ ನಿತ್ಯಂ ಕ್ರತುಶತಂ ಭವೇತ್ ॥ ೧೧ ॥

ಪಿತರೋ ನಿರಯಸ್ಥಾ ಯೇ ಧನ್ಯಾಸ್ತೇ ಮರ್ತ್ಯವಾಸಿನಃ ।
ಧನಪುತ್ರಯುತಾರೋಗ್ಯಾಃ ಸುಖಸಂಮಾನಪೂಜಿತಾಃ ॥ ೧೨ ॥

ರಸಾತಲಗತಾ ಯೇ ಚ ಯೇ ಚ ಕೀಟಾ ಮಹೀತಲೇ ।
ಸ್ಥಾವರೇ ಪಕ್ಷಿಸಂಘಾದೌ ತೇ ಮರ್ತ್ಯಾ ಧನಿನೋ ನೃಪಾಃ ॥ ೧೩ ॥

---

೯. ಗಂಗೆಯಲ್ಲಿ ಪಿತೃಗಳಿಗೆ ಪಿಂಡವನ್ನು ವಿಧಿಪೂರ್ವಕವಾಗಿ ಕೊಟ್ಟರೆ ಅದರ ಪುಣ್ಯಫಲವನ್ನು ಹೇಳುತ್ತೇನೆ, ಕೇಳು.

೧೦. ಅನ್ನದಿಂದ ಪಿಂಡವನ್ನು ಕೊಟ್ಟರೆ ಸಹಸ್ರವರ್ಷಗಳು ಸ್ವರ್ಗದಲ್ಲಿ ಸುಖಿಸುತ್ತಾನೆ. ಎಳ್ಳನ್ನು ಕುಟ್ಟಿ ಅದರಲ್ಲಿ ಉಂಡೆಕಟ್ಟಿ ಪಿಂಡವನ್ನು ಹಾಕಿದರೆ ಅದರ ಎರಡರಷ್ಟು ಪುಣ್ಯವು ಬರುವುದು. ಒಳ್ಳೆಯ ಹಣ್ಣುಗಳಿಂದ ಕೊಟ್ಟರೂ ಕೂಡ ಎಳ್ಳಿನಿಂದ ಕೊಟ್ಟಂತೆಯೇ ಪುಣ್ಯವು ಲಭಿಸುತ್ತದೆ.

೧೧. ಹಾಲು, ಮೊಸರು, ತುಪ್ಪಗಳನ್ನು ಸೇರಿಸಿ ಪಿಂಡವನ್ನು ಕೊಟ್ಟರೆ ಆಗ ಅಕ್ಷಯ ಸ್ವರ್ಗವು ಬರುತ್ತದೆ. ಈ ರೀತಿಯಾಗಿ ಪಿಂಡಗಳನ್ನು ಕೊಡುತ್ತಿದ್ದರೆ ದಿನವೂ ನೂರು ಯಾಗಗಳನ್ನು ಮಾಡಿದಂತೆ ಆಗುತ್ತದೆ.

೧೨. ನರಕದಲ್ಲಿರುವ ಪಿತೃಗಳು ಸ್ವರ್ಗವನ್ನು ಹೊಂದುತ್ತಾರೆ. ಅವರು ಮರ್ತ್ಯಲೋಕದಲ್ಲಿ ಹುಟ್ಟಿದರೆ ಹಣ, ಮಕ್ಕಳು, ಆರೋಗ್ಯ, ಸುಖ, ಮಾನಗಳುಳ್ಳವರಾಗುತ್ತಾರೆ.

೧೩. ಆ ಪಿತೃಗಳೂ ರಸಾತಳದಲ್ಲಿದ್ದರೂ, ಭೂಮಿಯಲ್ಲಿ ಕೀಟಾದಿಗಳಲ್ಲಿ ಹುಟ್ಟಿದ್ದರೂ, ಪಕ್ಷಿ ಸಂಘದಲ್ಲಿ ಹುಟ್ಟಿದ್ದರೂ ಅವರೆಲ್ಲರೂ ಧನ್ಯರಾಗುತ್ತಾರೆ.

ತತ್ತತ್ಪುತ್ರೈಶ್ಚ ಪೌತ್ರೈಶ್ಚ ಗೋತ್ರೈರ್ದೌಹಿತ್ರಕೈಸ್ತಥಾ ।
ಜಾಮಾತೃಭಾಗಿನೇಯೈಶ್ಚ ಸುಹೃನ್ಮಿತ್ರೈಃ ಪ್ರಿಯಾಪ್ರಿಯೈಃ ॥ ೧೪ ॥

ಪ್ರದೀಯತೇ ಜಲಂ ಪಿಂಡಂ ಯಥೋಪಕರಣಾನ್ವಿತಂ ।
ಗಂಗಾತೋಯೇಷು ತೀರೇ ತು ತೇಷಾಂ ಸ್ವರ್ಗೋಽಕ್ಷಯೋ ಭವೇತ್॥೧೫॥

ಪಿಂಡಾದೂರ್ಧ್ವಂ ಸ್ಥಿತಾ ಯೇ ಚ ಪಿತರೋ ಮಾತೃಗೋತ್ರಜಾಃ ।
ಭವಂತಿ ಸುಖಿನಃ ಸರ್ವೇ ಮರ್ತ್ಯಾಃ ಶತಸಹಸ್ರಶಃ ॥ ೧೬ ॥

ಸ್ವರ್ಗೇ ತಸ್ಯ ಸ್ಥಿತಾಃ ಸತ್ವಾ ಅಧಃಸ್ಥಾ ಮಧ್ಯವಾಸಿನಃ ।
ನಿತ್ಯಂ ವಾಂಛಂತಿ ಸದ್ಗಂಗಾಂ ಗಚ್ಛಂತಿ ಸುರನಿಮ್ನಗಾಂ ॥ ೧೭ ॥

ಏಕೋ ಗಚ್ಛತಿ ಗಂಗಾಂ ಯಃ ಪುನಂತಿ ತಸ್ಯ ಪೂರುಷಾಃ ।
ಏತದೇವ ಮಹಾಪುಣ್ಯಂ ತರತೇ ತಾರಯತ್ಯಪಿ ॥ ೧೮ ॥

---

೧೪-೧೫. ಸ್ವರ್ಗಸ್ಥರಾದವರ ಮಕ್ಕಳು, ಮೊಮ್ಮಕ್ಕಳು, ದೌಹಿತ್ರರು, ಗೋತ್ರದವರು, ಅಳಿಯಂದಿರು, ಸೋದರಿಯ ಮಕ್ಕಳು, ಸ್ನೇಹಿತರು, ಪ್ರಿಯರು, ಅಪ್ರಿಯರು, ಯಾರಾದರೂ ಆಗಲಿ ಅವರು ಉಪಕರಣಗಳಿಂದ ಗಂಗಾನದಿಯಲ್ಲಾಗಲಿ ಅದರ ತೀರದಲ್ಲಿಯಾಗಲೀ ಪಿಂಡವನ್ನು ಕೊಟ್ಟರೆ ಸ್ವರ್ಗವನ್ನೂ, ಮೋಕ್ಷವನ್ನೂ ಹೊಂದುತ್ತಾರೆ. ಅವು ಅಕ್ಷಯವಾಗುತ್ತವೆ.

೧೬. ಪಿಂಡಕ್ಕೆ ಮೀರಿದ ಪಿತೃಗಳೂ, ತಾಯಿಯ ಕಡೆಯವರೂ, ಗೋತ್ರ ದವರೂ, ಆದವರೆಲ್ಲರೂ ನೂರಾರು ಜನರು ಸುಖಿಗಳಾಗಿ ಆಗುತ್ತಾರೆ.

೧೭. ಪ್ರಾಣಿಗಳು ಸ್ವರ್ಗದಲ್ಲಿರಲಿ, ಮರ್ತ್ಯದಲ್ಲಿರಲಿ, ನರಕದಲ್ಲಿರಲಿ, ಅವ ರೆಲ್ಲರೂ ಗಂಗೆಯನ್ನು ಯಾವಾಗಲೂ ಅಪೇಕ್ಷಿಸುತ್ತಾರೆ.

೧೮. ಒಬ್ಬನು ಗಂಗೆಗೆ ಹೋದರೂ ಅವನ ಕಡೆಯವರೆಲ್ಲರೂ ಪವಿತ್ರರಾಗು ತ್ತಾರೆ. ಇದೇ ಮಹಾಪುಣ್ಯವು. ತಾನೂ ನರಕವನ್ನು ದಾಟಿ ಉಳಿದವರೆಲ್ಲರನ್ನೂ ದಾಟಿಸುತ್ತಾನೆ.

ಗಂಗಾಕೃತ್ಸ್ನಗುಣಂ ವಕ್ತುಂ ನ ಶಕ್ತಶ್ಚತುರಾನನಃ ।
ಅತಃ ಕಿಂಚಿದ್ವದಾಮ್ಯತ್ರ ಭಾಗೀರಥ್ಯಾ ದ್ವಿಜಾ ಗುಣಂ ॥ ೧೯ ॥

ಮುನಯಃ ಸಿದ್ಧಿಗಂಧರ್ವಾ ಯೇ ಚಾನ್ಯೇ ಸುರಸತ್ತಮಾಃ ।
ಗಂಗಾತೀರೇ ತಪಸ್ತಪ್ತ್ವಾ ಸ್ವರ್ಗಲೋಕೇಽಚ್ಯುತಾಭವನ್ ॥ ೨೦ ॥

ದಿವ್ಯೇನ ವಪುಷಾ ಸರ್ವೇ ಕಾಮುಗೇನ ರಥೇನ ಚ ।
ಅದ್ಯಾಪಿ ನ ನಿವರ್ತಂತೇ ರತ್ನಪೂರ್ಣಾಲಯೇಷು ವೈ ॥ ೨೧ ॥

ಪ್ರಾಸಾದಾ ಯತ್ರ ಸೌವರ್ಣಾಃ ಸರ್ವಲೋಕೋರ್ಧ್ವಗಾಃ ಶಿವಾಃ ।
ಇಷ್ಟದ್ರವ್ಯೈಃ ಸುಸಂಪೂರ್ಣಾಃ ಸ್ತ್ರಿಯೋ ಯತ್ರ ಮನೋರಮಾಃ ॥ ೨೨ ॥

ಪಾರಿಜಾತಸಮಾಃ ಪುಷ್ಪೈರ್ವೃಕ್ಷಾಃ ಕಲ್ಪದ್ರುಮೋಪಮಾಃ ।
ಗಂಗಾತೀರೇ ತಪಸ್ತಪ್ತ್ವಾ ತತ್ರೈಶ್ವರ್ಯಂ ಲಭಂತಿ ಹಿ ॥ ೨೪ ॥

---

೧೯. ಗಂಗೆಯ ಗುಣಗಳೆಲ್ಲವನ್ನೂ ಹೇಳಲು ಬ್ರಹ್ಮನಿಗೇ ಆಗುವುದಿಲ್ಲ. ಆದ್ದರಿಂದ ನಾನು ಅದರ ಸ್ವಲ್ಪ ಗುಣಗಳನ್ನು ಹೇಳುತ್ತೇನೆ.

೨೦. ಮುನಿಗಳೂ, ಸಿದ್ಧರೂ, ಗಂಧರ್ವರೂ, ಉಳಿದ ದೇವತೆಗಳೂ, ಗಂಗಾತೀರದಲ್ಲಿ ತಪಸ್ಸನ್ನು ಮಾಡಿ ಉತ್ತಮವಾದ ಸ್ವರ್ಗವನ್ನು ಹೊಂದಿದರು.

೨೧. ಅವರೆಲ್ಲರೂ ದಿವ್ಯವಾದ ದೇಹವನ್ನು ಹೊಂದಿ ಉತ್ತಮವಾದ ವಿಮಾನದಿಂದ ಹೋದರು. ಆ ಸ್ವರ್ಗದಿಂದ ಇನ್ನೂ ಹಿಂದಿರುಗದೆ ಉತ್ತಮವಾದ ಮನೆಗಳಲ್ಲಿರುತ್ತಾರೆ.

೨೨-೨೪. ಅವರು ಹೋದ ಆ ಸ್ಥಳಗಳಲ್ಲಿ ಚಿನ್ನದ ಮಹಡಿಮನೆಗಳು ಎತ್ತರವಾಗಿಯೂ, ಚೆನ್ನಾಗಿಯೂ ಇವೆ. ಅದರಲ್ಲಿ ಬೇಕಾದ ಪದಾರ್ಥಗಳೆಲ್ಲವೂ ತುಂಬಿವೆ ಅದರಲ್ಲಿ ಮನೋಹರವಾದ ಸ್ತ್ರೀಯರಿರುವರು. ಅಲ್ಲಿರುವ ಮರಗಳು ಪಾರಿಜಾತಕ್ಕೆ ಸಮವಾಗಿ ಹೂಗಳಿಂದ ಕೂಡಿವೆ. ಗಂಗೆಯ ತೀರದಲ್ಲಿ ತಪಸ್ಸುಮಾಡಿದರೆ ಈ ರೀತಿಯಾದ ಐಶ್ವರ್ಯವನ್ನು ಹೊಂದುತ್ತಾರೆ.

ತಪೋಭಿರ್ಬಹುಭಿರ್ಯಜ್ಞೈರ್ವ್ರತೈರ್ನಾನಾವಿಧೈಸ್ತಥಾ ।
ಪುರುದಾನೈರ್ಗತಿರ್ಯಾ ಚ ಗಂಗಾಂ ಸಂಸೇವ್ಯ ತಾಂ ಲಭೇತ್ ॥ ೨೪ ॥

ಜಾರಜಂ ಪತಿತಂ ದುಷ್ಟಮಂತ್ಯಜಂ ಗುರುಘಾತಿನಂ ।
ಸರ್ವದ್ರೋಹೇಣ ಸಂಯುಕ್ತಂ ಸರ್ವಪಾತಕಸಂಯುತಂ ॥ ೨೫ ॥

ತ್ಯಜಂತಿ ಪಿತರಂ ಪುತ್ರಾಃ ಪ್ರಿಯಂ ಪತ್ನ್ಯಃ ಸುಹೃದ್ಗಣಾಃ ।
ಅನ್ಯೇ ಚ ಭಾಂಧವಾಃ ಸರ್ವೇ ಗಂಗಾ ತಾಂ ನ ಪರಿತ್ಯಜೇತ್ ॥ ೨೬ ॥

ಯಥಾ ಮಾತಾ ಸ್ವಯಂ ಜನ್ಮ ಮಲಶೌಚಂ ಚ ಕಾರಯೇತ್ ।
ಕ್ರೋಡೀಕೃತ್ಯ ತಥಾ ತಾಂಸ್ತು ಗಂಗಾ ಪ್ರಕ್ಷಾಲಯೇನ್ಮಲಂ ॥ ೨೭ ॥

ಭವಂತಿ ತೇ ಸುವಿಖ್ಯಾತಾ ಭೋಗ್ಯಾಲಂಕಾರ ಪೂಜಿತಾಃ ।
ದರ್ಶನೀ ಕ್ರಿಯತೇ ಗಂಗಾ ಭುಕ್ತಿಮುಕ್ತಿಪ್ರದಾಯಿನೀ ॥ ೨೮ ॥

---

೨೪. ಬಹುವಾದ ತಪಸ್ಸುಗಳಿಂದಲೂ, ಯಜ್ಞಗಳಿಂದಲೂ, ವ್ರತಗಳಿಂದಲೂ, ಬಹುವಾದ ದಾನಗಳಿಂದಲೂ ಹೊಂದುವ ಗತಿಯನ್ನು ಗಂಗೆಯ ಸೇವೆಯಿಂದ ಹೊಂದುತ್ತಾರೆ.

೨೫-೨೬. ಹಾದರಕ್ಕೆ ಹುಟ್ಟಿದವನು, ಜಾತಿಗೆಟ್ಟವನು, ದುಷ್ಟ, ಅಂತ್ಯ ಜಾತಿಯವನು, ಗುರುಹತ್ಯೆಮಾಡಿದವನು, ಎಲ್ಲಾ ದ್ರೋಹದಿಂದಲೂ, ಕೂಡಿದವನು, ಎಲ್ಲಾ ಪಾಪಗಳಿಂದ ಕೂಡಿದವನು, ಇವರನ್ನು ಗಂಗೆಯು ಬಿಡುವುದಿಲ್ಲ. ಶುದ್ಧ ಮಾಡುತ್ತಾಳೆ. ಮಕ್ಕಳನ್ನು ತಂದೆಯರೂ, ಪ್ರಿಯನನ್ನು ಪತ್ನಿಯರೂ, ಸ್ನೇಹಿತರೂ ಬಾಂಧವರೂ ಬಿಟ್ಟುಬಿಡುವರು. ಗಂಗೆಯು ಮಾತ್ರ ಯಾರನ್ನೂ ಬಿಡುವುದಿಲ್ಲ.

೨೭. ತಾಯಿಯು ಮಕ್ಕಳಿಗೆ ಜನ್ಮವನ್ನು ಕೊಟ್ಟು ಮಲಮೂತ್ರಗಳನ್ನು ತೊಳಯುವಂತೆ, ಗಂಗೆಯೂ ಅವರ ಮಲವನ್ನು ತೊಳೆದು ಉತ್ತಮಗತಿಯನ್ನು ಕೊಡುತ್ತಾಳೆ.

೨೮. ಗಂಗೆಯು ಅವರಿಗೆ ಭುಕ್ತಿಯನ್ನೂ, ಮುಕ್ತಿಯನ್ನೂ ಕೊಟ್ಟು ಭೋಗ ಅಲಂಕಾರಗಳಿಂದ ಪ್ರಕಾಶಿಸುವಂತೆ ಮಾಡುತ್ತಾಳೆ. ಅವರು ಪ್ರಸಿದ್ಧರಾಗುವಂತೆಯೂ ಮಾಡುತ್ತಾಳೆ.

ತಿಷ್ಠೇದ್ಯುಗಸಹಸ್ರಂ ತು ಪಾದೇನೈಕೇನ ಯಃ ಪುಮಾನ್ ।
ಮಾಸಮೇಕಂ ತು ಗಂಗಾಯಾಂ ಸಮೌ ಸ್ಯಾತಾಂ ನ ವಾ ಸಮೌ ॥ ೨೯ ॥

ಯೈರವಗಾಹಿತಾ ಗಂಗಾ ಸಕೃದ್ಭಕ್ತ್ಯಾ ನರೋತ್ತಮೈಃ ।
ತೇಷಾಂ ಕುಲಾನಾಂ ಲಕ್ಷಂ ತು ಭವಾತ್ತಾರಯತೇ ಶಿವಾ ॥ ೩೦ ॥

ಸ್ಮೃತಾರ್ತಿಹಂತ್ರೀ ಯೈರ್ಧ್ಯಾತಾ ಸಂಸ್ತುತಾ ಸಾಧುನೋದಿತಾ ।
ಗಂಗಾ ತಾರಯತೇ ನೄಣಾಮುಭೌ ವಂಶೌ ಭವಾರ್ಣವಾತ್ ॥ ೩೧ ॥

ಸಂಕ್ರಾಂತಿಷು ವ್ಯತೀಪಾತೇ ಗ್ರಹಣೇ ಚಂದ್ರಸೂರ್ಯಯೋಃ ।
ಪುಷ್ಯೇ ಸ್ನಾತ್ವಾ ತು ಗಂಗಾಯಾಂ ಕುಲಕೋಟಿಂ ಸಮುದ್ಧರೇತ್ ॥ ೩೨ ॥

ಶುಕ್ಲಪಕ್ಷೇ ದಿವಾಮರ್ತ್ಯಾ ಗಂಗಾಯಾಮುತ್ತರಾಯಣೇ ।
ಧನ್ಯಾ ದೇಹಂ ವಿಮುಂಚಂತಿ ಹೃದಿಸ್ಥೇ ಚ ಜನಾರ್ದನೇ ॥ ೩೩ ॥

---

೨೯. ಸಾವಿರವರ್ಷಗಳವರೆಗೆ ಒಂದೇ ಕಾಲಿನಲ್ಲಿ ನಿಂತು ತಪಸ್ಸುಮಾಡಿದರೆ, ಅವನೂ, ಗಂಗೆಯಲ್ಲಿ ಒಂದು ತಿಂಗಳು ಸ್ನಾನಮಾಡಿದರೆ ಅವನೂ ಸಮವಾಗುತ್ತಾರೆಯೋ ಇಲ್ಲವೋ ಹೇಳಲಾಗುವುದಿಲ್ಲ.

೩೦. ಭಕ್ತಿಯಿಂದ ಒಂದುಸಾರಿಯಾದರೂ ಯಾರು ಆ ಗಂಗೆಯಲ್ಲಿ ಸ್ನಾನ ಮಾಡುವರೋ ಅವರ ಲಕ್ಷಕುಲಗಳನ್ನೂ ಆ ಗಂಗೆಯು ಸಂಸಾರದಿಂದ ಉದ್ಧರಿಸುತ್ತಾಳೆ.

೩೧. ಗಂಗೆಯನ್ನು ಸ್ಮರಿಸಿದರೆ ದುಃಖವು ಹೋಗುತ್ತದೆ. ಧ್ಯಾನಮಾಡಿದರೂ ಹೊಗಳಿದರೂ ಎರಡು ಕಡೆಯ ವಂಶಗಳನ್ನೂ ಈ ಸಂಸಾರವೆಂಬ ಸಾಗರದಿಂದ ಉದ್ಧರಿಸುತ್ತಾಳೆ.

೩೨. ಸಂಕ್ರಾಂತಿ, ವ್ಯತೀಪಾತ, ಸೂರ್ಯಚಂದ್ರರ ಗ್ರಹಣಗಳು, ಪುಷ್ಯಮಾಸ ಇವುಗಳಲ್ಲಿ ಗಂಗೆಯಲ್ಲಿ ಸ್ನಾನಮಾಡಿದರೆ ತನ್ನ ಕುಲದಲ್ಲಿ ಕೋಟಿ ಜನರನ್ನು ಉದ್ಧರಿಸುತ್ತಾನೆ.

೩೩. ಶುಕ್ಲಪಕ್ಷದ ಹಗಲಿನಲ್ಲಿ ಉತ್ತರಾಯಣದಲ್ಲಿ ಜನಾರ್ದನನನ್ನು ಸ್ಮರಿಸುತ್ತಾ ಧನ್ಯರಾದವರು ಈ ಗಂಗೆಯಲ್ಲಿ ಪ್ರಾಣಬಿಡುವರು.

ಅನೇನ ವಿಧಿನಾ ಯಸ್ತು ಭಾಗೀರಥ್ಯಾ ಜಲೇ ಶುಭೇ ।
ಪ್ರಾಣಾಂಸ್ತ್ಯಕ್ತ್ವಾ ವ್ರಜೇತ್ಸ್ವರ್ಗಂ ಪುನರಾವೃತ್ತಿವರ್ಜಿತಂ ॥ ೩೪ ॥

ಯೋ ಗಂಗಾನುಗತೋ ನಿತ್ಯಂ ಸರ್ವದೇವಾನುಗೋ ಹಿ ಸಃ ।
ಸರ್ವದೇವಮಯೋ ವಿಷ್ಣುರ್ಗಂಗಾ ವಿಷ್ಣುಮಯೀ ಯತಃ ॥ ೩೫ ॥

ಗಂಗಾಯಾಂ ಪಿಂಡದಾನೇನ ಪಿತೄಣಾಂ ವೈ ತಿಲೋದಕೈಃ ।
ನರಕಸ್ಥಾ ದಿವಂ ಯಾಂತಿ ಸ್ವರ್ಗಸ್ಥಾ ಮೋಕ್ಷಮಾಪ್ನುಯುಃ ॥ ೩೬ ॥

ಪರದಾರ ಪರದ್ರವ್ಯಬಾಧಾದ್ರೋಹಪರಸ್ಯ ಚ ।
ಗತಿರ್ಮನುಷ್ಯಮಾತ್ರಸ್ಯ ಗಂಗೈವ ಪರಮಾ ಗತಿಃ ॥ ೩೭ ॥

ವೇದಶಾಸ್ತ್ರವಿಹೀನಸ್ಯ ಗುರುನಿಂದಾಪರಸ್ಯ ಚ ।
ಸಮಯಾಚಾರಹೀನಸ್ಯ ನಾಸ್ತಿ ಗಂಗಾಸಮಾ ಗತಿಃ ॥ ೩೮ ॥

---

೩೪. ಮೇಲೆ ಹೇಳಿದ ರೀತಿಯಲ್ಲಿ ಯಾವನು ಭಾಗೀರಥಿಯ ನೀರಿನಲ್ಲಿ ಪ್ರಾಣಗಳನ್ನು ಬಿಡುತ್ತಾನೋ ಅವನಿಗೆ ಮತ್ತೆ ಹಿಂತಿರುಗಿ ಬಾರದ ಸ್ವರ್ಗವು ಸಿಕ್ಕುತ್ತದೆ.

೩೫. ವಿಷ್ಣುವು ಸರ್ವದೇವತೆಗಳ ಸ್ವರೂಪನು. ಗಂಗೆಯು ವಿಷ್ಣುವಿನ ರೂಪವಾದುದು. ಆದ್ದರಿಂದ ಗಂಗೆಯನ್ನು ಅನುಸರಿಸಿದವನು ಸರ್ವದೇವತೆಗಳಿಂದಲೂ ಅನುಸರಿಸಲ್ಪಟ್ಟವನಾಗುತ್ತಾನೆ.

೩೬. ಗಂಗೆಯಲ್ಲಿ ಪಿಂಡದಾನವನ್ನೂ, ತಿಲೋದಕವನ್ನೂ ಕೊಟ್ಟರೆ, ಅವರ ಸಂಬಂಧಿಗಳು ನರಕದಲ್ಲಿದ್ದರೆ ಅವರು ಸ್ವರ್ಗಕ್ಕೂ, ಸ್ವರ್ಗದಲ್ಲಿರುವವರು ಮೋಕ್ಷಕ್ಕೂ ಹೋಗುವರು.

೩೭. ಪರರ ಹೆಂಡಿರು, ಪರರ ದ್ರವ್ಯ, ಪರಬಾಧೆ, ಪರದ್ರೋಹಗಳಲ್ಲಿ ಆಸಕ್ತನಾದ ದುಷ್ಟನಿಗೆ ಗಂಗೆಯೊಬ್ಬಳೇ ಉತ್ತಮವಾದ ಗತಿಯು.

೩೮. ವೇದಗಳನ್ನೂ, ಶಾಸ್ತ್ರಗಳನ್ನೂ ಓದದ, ಗುರುನಿಂದೆ ಮಾಡುವ ಆಚಾರಗಳೂ, ವ್ಯವಹಾರಗಳೂ ಗೊತ್ತಿಲ್ಲದವನಿಗೆ ಗಂಗೆಗಿಂತಲೂ ಉತ್ತಮಗತಿಯು ಮತ್ತೊಂದಿಲ್ಲ.

ಕಿಂ ಯಜ್ಞೈರ್ಬಹುವಿತ್ತಾಢ್ಯೈಃ ಕಿಂ ತಪೋಭಿಃ ಸುದುಷ್ಕರೈಃ ।
ಸ್ವರ್ಗಮೋಕ್ಷಪ್ರದಾ ಗಂಗಾ ಸುಖಸೌಭಾಗ್ಯ ಪೂಜಿತಾ ॥ ೩೯ ॥

ನಿಯಮೈಃ ಪರಮೈರ್ನಿತ್ಯಂ ಕಿಂ ಯೋಗೈಶ್ಚಿತ್ತರೋಧಕೈಃ ।
ಭುಕ್ತಿಮುಕ್ತಿಪ್ರದಾ ಗಂಗಾ ಸುಖಮೋಕ್ಷಾಗ್ರತಃ ಸ್ಥಿತಾ ॥ ೪೦ ॥

ಅನೇಕಜನ್ಮಸಂಘಾತ ಪಾಪಂ ಪುಂಸಾಂ ವಿನಶ್ಯತಿ ।
ಸ್ನಾನಮಾತ್ರೇಣ ಗಂಗಾಯಾಂ ಸದ್ಯಃ ಸ್ಯಾತ್ಪುಣ್ಯಭಾಙ್ನರಃ ॥ ೪೧ ॥

ಪ್ರಭಾಸೇ ಗೋಸಹಸ್ರಸ್ಯ ರಾಹುಗ್ರಸ್ತೇ ದಿವಾಕರೇ ।
ಲಭತೇ ಯತ್ಫಲಂ ದಾನೇ ಗಂಗಾಸ್ನಾನಾದ್ದಿನೇ ದಿನೇ ॥ ೪೨ ॥

ದೃಷ್ಟ್ವಾ ತು ಹರತೇ ಪಾಪಂ ಸ್ಪೃಷ್ಟ್ವಾ ತು ಲಭತೇ ದಿವಂ ।
ಪ್ರಸಂಗಾದಪಿ ಸಾ ಗಂಗಾ ಮೋಕ್ಷದಾ ತ್ವವಗಾಹಿತಾ ॥ ೪೩ ॥

---

೩೯. ಗಂಗೆಯನ್ನು ಸೇವಿಸಿದರೆ ಸ್ವರ್ಗ ಮೋಕ್ಷಗಳೂ, ಸುಖಸೌಭಾಗ್ಯಗಳೂ ಸಿಕ್ಕುವಾಗ ಬಹುದ್ರವ್ಯದಿಂದ ಸಾಧ್ಯವಾದ ಯಜ್ಞಗಳೂ, ದುಷ್ಕರವಾದ ತಪಸ್ಸುಗಳೂ ಏತಕ್ಕೆ ?

೪೦. ಭುಕ್ತಿಮುಕ್ತಿಗಳನ್ನು ಕೊಡುವ ಗಂಗೆಯು ಎದುರಿಗಿರುವಾಗ ನಿಯಮಗಳಿಂದಲೂ, ಯೋಗಗಳಿಂದಲೂ ಏತಕ್ಕೆ ಕಷ್ಟವನ್ನು ಪಡಬೇಕು ?

೪೧. ಗಂಗೆಯಲ್ಲಿ ಸ್ನಾನಮಾತ್ರದಿಂದ ಅನೇಕ ಜನ್ಮಗಳ ಪಾಪಗಳೆಲ್ಲವನ್ನೂ ಕಳೆದುಕೊಂಡು ಪುಣ್ಯವನ್ನು ಸಂಪಾದಿಸಿಕೊಳ್ಳುತ್ತಾನೆ.

೪೨. ಸೂರ್ಯಗ್ರಹಣದಲ್ಲಿ ಪ್ರಭಾಸಕ್ಷೇತ್ರದಲ್ಲಿ ಸಾವಿರ ಗೋವನ್ನು ದಾನ ಮಾಡಿದರೆ ಬರುವ ಫಲವು ಗಂಗಾಸ್ನಾನದಿಂದ ದಿನದಿನವೂ ಬರುತ್ತದೆ.

೪೩. ಉದ್ದೇಶಪೂರ್ವಕವಾಗಿ ಅಲ್ಲದೆ ಆಕಸ್ಮಿತ್ತಾಗಿ ಗಂಗೆಯನ್ನು ನೋಡಿದರೂ ಪಾಪವು ಹೋಗುತ್ತದೆ. ಮುಟ್ಟಿದರೆ ಸ್ವರ್ಗವನ್ನು ಹೊಂದುತ್ತಾನೆ. ಸ್ನಾನ ಮಾಡಿದರೆ ಮೋಕ್ಷವು ಸಿಕ್ಕುತ್ತದೆ.

ಸರ್ವೇಂದ್ರಿಯಾಣಾಂ ಚಾಪಲ್ಯಂ ವಾಸನಾಶಕ್ತಿಸಂಭವಂ ।
ನಿರ್ಘೃಣತ್ವಂ ತತೋ ಗಂಗಾದರ್ಶನಾತ್ಪ್ರವಿನಶ್ಯತಿ ॥ ೪೪ ॥

ಪರದ್ರವ್ಯಾಭಿಕಾಂಕ್ಷಿತ್ವಂ ಪರದಾರಾಭಿಲಾಷಿತಾ ।
ಪರಧರ್ಮೇ ರುಚಿಶ್ಚೈವ ದರ್ಶನಾದೇವ ನಶ್ಯತಿ ॥ ೪೫ ॥

ಯದೃಚ್ಛಾಲಾಭಸಂತೋಷಃ ಸ್ವಧರ್ಮೇಷು ಪ್ರವರ್ತನಂ ।
ಸರ್ವಭೂತಸಮತ್ವಂ ಚ ಗಂಗಾಯಾಂ ಮಜ್ಜತೋ ಭವೇತ್ ॥ ೪೬ ॥

ಯಸ್ತು ಗಂಗಾಂ ಸಮಾಶ್ರಿತ್ಯ ಸುಖಂ ತಿಷ್ಠತಿ ಮಾನವಃ ।
ಜೀವನ್ಮುಕ್ತಃ ಸ ಏವೇಹ ಸರ್ವೇಷಾಮುತ್ತಮೋತ್ತಮಃ ॥ ೪೭ ॥

ಗಂಗಾಂ ಸಂಶ್ರಿತ್ಯ ಯಸ್ತಿಷ್ಠೇತ್ತಸ್ಯ ಕಾರ್ಯಂ ನ ವಿದ್ಯತೇ ।
ಕೃತಕೃತ್ಯಃ ಸ ವೈ ಮುಕ್ತೋ ಜೀವನ್ಮುಕ್ತಶ್ಚ ಮಾನವಃ ॥ ೪೮ ॥

---

೪೪. ಸರ್ವೇಂದ್ರಿಯಗಳ ಚಪಲತೆಯೂ, ಪೂರ್ವಜನ್ಮದ ವಾಸನೆಯಿಂದ ಬರುವ ಚಾಪಲ್ಯಗಳೂ, ದಯಾಹೀನತೆಯೂ ಇವೆಲ್ಲವೂ ಗಂಗೆಯ ದರ್ಶನದಿಂದ ಹೋಗುತ್ತವೆ.

೪೫. ಪರರ ದ್ರವ್ಯದಲ್ಲಿ ಆಸೆ, ಪರರ ಹೆಂಡಿರಲ್ಲಿ ಆಸೆ, ಪರರ ಧರ್ಮದಲ್ಲಿ ಆಸೆ, ಇವೆಲ್ಲವೂ ಗಂಗೆಯನ್ನು ನೋಡುವುದರಿಂದ ಹೋಗುತ್ತವೆ.

೪೬ ಸಿಕ್ಕಿದಷ್ಟಕ್ಕೇ ಸಂತೋಷಪಡುವುದು, ತಮ್ಮ ಧರ್ಮದಲ್ಲಿ ನಡೆಯುವಿಕೆ, ಎಲ್ಲಾ ಪ್ರಾಣಿಗಳಲ್ಲಿಯೂ ಸಮನಾಗಿರುವಿಕೆ, ಇವೆಲ್ಲವೂ ಗಂಗೆಯಲ್ಲಿ ಸ್ನಾನ ಮಾಡುವುದರಿಂದ ಬರುತ್ತವೆ.

೪೭. ಯಾವನು ಗಂಗೆಯನ್ನು ಆಶ್ರಯಿಸಿ ಸುಖವಾಗಿರುವನೋ ಆತನೇ ಜೀವನ್ಮುಕ್ತನು. ಎಲ್ಲರಲ್ಲಿಯೂ ಉತ್ತಮನು.

೪೮. ಗಂಗೆಯನ್ನು ಆಶ್ರಯಿಸಿದವನು ಬೇರೆ ಪುಣ್ಯಕೆಲಸವನ್ನು ಮಾಡಬೇಕಾಗಿಯೇ ಇರುವುದಿಲ್ಲ. ಅವನೇ ಕೃತಕೃತ್ಯನು. ಜೀವನ್ಮುಕ್ತನು.

ಯಜ್ಞೋ ದಾನಂ ತಪೋ ಜಪ್ಯಂ ಶ್ರಾದ್ಧಂ ಚ ಸುರಪೂಜನಂ ।
ಗಂಗಾಯಾಂ ತು ಕೃತಂ ನಿತ್ಯಂ ಕೋಟಿಕೋಟಿಗುಣಂ ಭವೇತ್ ॥ ೪೯ ॥

ಅನ್ಯಸ್ಥಾನೇ ಕೃತಂ ಪಾಪಂ ಗಂತಾತೀರೇ ವಿನಶ್ಯತಿ ।
ಗಂಗಾತೀರೇ ಕೃತಂ ಪಾಪಂ ಗಂಗಾಸ್ನಾನೇನ ನಶ್ಯತಿ ॥ ೫೦ ॥

ಆತ್ಮನೋ ಜನ್ಮನಕ್ಷತ್ರೇ ಜಾಹ್ನವೀಸಂಗತೇ ದಿನೇ ।
ನರಃ ಸ್ನಾತ್ವಾ ತು ಗಂಗಾಯಾಂ ಸ್ವಕುಲಂ ಚ ಸಮುದ್ಧರೇತ್ ॥ ೫೧ ॥

ಆದರಾದ್ಧಿ ಯಥಾ ಸ್ತೌತಿ ಧನವಂತಂ ಸದಾ ನರಃ ।
ಸಕೃದ್ಗಂಗಾಂ ತಥಾ ಸ್ತುತ್ವಾ ಭವೇತ್ಸ್ವರ್ಗಸ್ಯ ಭಾಜನಂ ॥ ೫೨ ॥

ಅಶ್ರದ್ಧಯಾಪಿ ಗಂಗಾಯಾಂ ಯೋಽಸೌ ನಾಮಾನುಕೀರ್ತನಂ ।
ಕರೋತಿ ಪುಣ್ಯವಾಹಿನ್ಯಾಃ ಸ ವೈ ಸ್ವರ್ಗಸ್ಯ ಭಾಜನಂ ॥ ೫೩ ॥

ಕ್ಷಿತೌ ಭಾವಯತೇ ಮರ್ತ್ಯಾನ್ನಾಗಾಂಸ್ತಾರಯತೇಽಪ್ಯಧಃ ।
ದಿವಿ ತಾರಯತೇ ದೇವಾನ್ ಗಂಗಾ ತ್ರಿಪಥಗಾ ಸ್ಮೃತಾ ॥ ೫೪ ॥

---

೪೯. ಗಂಗೆಯಲ್ಲಿ ಮಾಡಿದ ಯಜ್ಞ, ದಾನ, ತಪಸ್ಸು, ಜಪ, ಶ್ರಾದ್ಧ, ದೇವಪೂಜೆಗಳು ಕೋಟಿಕೋಟಿಯಲ್ಲಿ ಹೆಚ್ಚುತ್ತವೆ.

೫೦. ಬೇರೆಯ ಜಾಗದಲ್ಲಿ ಮಾಡಿದ ಪಾಪವು ಗಂಗಾತೀರದಲ್ಲಿ ನಾಶವಾಗುತ್ತದೆ. ಗಂಗಾತೀರದಲ್ಲಿ ಮಾಡಿದ ಪಾಪವು ಗಂಗಾಸ್ನಾನದಿಂದ ನಾಶವಾಗುತ್ತದೆ.

೫೧. ತನ್ನ ಜನ್ಮನಕ್ಷತ್ರದ ದಿವಸ ಗಂಗೆಯಲ್ಲಿ ಸ್ನಾನಮಾಡಿದರೆ ತನ್ನ ವಂಶವನ್ನೇ ಉದ್ಧಾರಮಾಡಿಕೊಳ್ಳುತ್ತಾನೆ.

೫೨. ಧನವುಳ್ಳವನನ್ನು ನರರು ಸ್ತೋತ್ರಮಾಡುವಂತೆ ಗಂಗೆಯನ್ನು ಸ್ತುತಿಸಿದರೆ ಸ್ವರ್ಗವನ್ನು ಹೊಂದುತ್ತಾರೆ.

೫೩. ಮನಸ್ಸಿಲ್ಲದೆ ಇದ್ದರೂ ಗಂಗೆಯ ಹೆಸರನ್ನು ಹೇಳಿದರೆ ಅವನು ಸ್ವರ್ಗಭಾಗಿಯಾಗುವನು.

೫೪. ಭೂಮಿಯಲ್ಲಿ ಮನುಷ್ಯರನ್ನೂ, ಪಾತಾಳದಲ್ಲಿ ಸರ್ಪಗಳನ್ನೂ, ಅಂತರಿಕ್ಷದಲ್ಲಿ ದೇವತೆಗಳನ್ನೂ ಉದ್ಧಾರಮಾಡುವುದರಿಂದ ಗಂಗೆಗೆ ತ್ರಿಪಥೆಗೆ (ಮೂರುಲೋಕದಲ್ಲಿ ಹೋಗುವವಳು) ಎಂದು ಹೆಸರು ಬಂದಿದೆ.

ಜ್ಞಾನತೋಽಜ್ಞಾನತೋ ವಾಪಿ ಕಾಮತೋಽಕಾಮತೋಽಪಿ ವಾ ।
ಗಂಗಾಯಾಂ ಚ ಮೃತೋ ಮರ್ತ್ಯಃ ಸ್ವರ್ಗಂ ಮೋಕ್ಷಂ ಚ ವಿಂದತಿ॥ ೫೫ ॥

ಯಾ ಗತಿರ್ಯೋಗಯುಕ್ತಸ್ಯ ಸತ್ತ್ವಸ್ಥಸ್ಯ ಮನೀಷಿಣಃ ।
ಸಾ ಗತಿಸ್ತ್ಯಜತಃ ಪ್ರಾಣಾನ್ ಗಂಗಾಯಾಂ ತು ಶರೀರಿಣಃ ॥ ೫೬ ॥

ಚಾಂದ್ರಾಯಣಸಹಸ್ರಾಣಿ ಯಶ್ಚರೇತ್ಕಾಯಶೋಧನಂ ।
ಪಾನಂ ಕುರ್ಯಾದ್ಯಥೇಚ್ಛಂ ಚ ಗಂಗಾಯಾಃ ಸ ವಿಶಿಷ್ಯತೇ ॥ ೫೭ ॥

ತಾವತ್ಪ್ರಭಾವಸ್ತೀರ್ಥಾನಾಂ ದೇವಾನಾಂ ತು ವಿಶೇಷತಃ ।
ತಾವತ್ಪ್ರಭಾವೋ ವೇದಾನಾಂ ಯಾವನ್ನಾಪ್ನೋತಿ ಜಾಹ್ನವೀಂ ॥ ೫೮ ॥

ತಿಸ್ರಃ ಕೋಟ್ಯೋಽರ್ಧಕೋಟೀ ಚ ತೀರ್ಥಾನಾಂ ವಾಯುರಬ್ರವೀತ್ ।
ದಿವಿ ಭುವ್ಯಂತರಿಕ್ಷೇ ಚ ತಾನಿ ತೇ ಸಂತಿ ಜಾಹ್ನವಿ ॥೫೯ ॥

---

೫೫. ತಿಳಿದಾಗಲಿ, ತಿಳಿಯದೆ ಆಗಲಿ, ಇಷ್ಟವಿದ್ದಾಗಲಿ, ಇಷ್ಟವಿಲ್ಲದೆಯಾಗಲಿ ಗಂಗೆಯಲ್ಲಿ ಸತ್ತವನು ಸ್ವರ್ಗವನ್ನೂ, ಮೋಕ್ಷವನ್ನೂ ಹೊಂದುತ್ತಾನೆ.

೫೬. ಸಾತ್ವಿಕವೃತ್ತಿಯಲ್ಲಿದ್ದುಕೊಂಡು ಯೋಗಿಯಾಗಿರುವವನಿಗೆ ಯಾವ ಗತಿಯು ಬರುತ್ತದೆಯೋ, ಗಂಗೆಯಲ್ಲಿ ಪ್ರಾಣಬಿಟ್ಟವನಿಗೆ ಆ ಗತಿಯು ಬರುತ್ತದೆ.

೫೭. ಸಾವಿರ ಚಾಂದ್ರಾಯಣಗಳನ್ನು ಮಾಡಿ ಈ ದೇಹವನ್ನು ಶುದ್ಧಿಮಾಡಿಕೊಂಡವನಿಗಿಂತಲೂ, ಈ ಗಂಗೆಯ ನೀರನ್ನು ಯಥೇಚ್ಛವಾಗಿ ಕುಡಿದವನೇ ಮೇಲಾಗಿರುತ್ತಾನೆ.

೫೮. ಗಂಗಾನದಿಯನ್ನು ಹೊಂದಿ ಸ್ನಾನಮಾಡುವವರೆವಿಗೂ ತೀರ್ಥಗಳ ದೇವತೆಗಳ ವೇದಗಳ ಪ್ರಭಾವವು ಹೆಚ್ಚಾಗಿರುತ್ತದೆ.

೫೯. ಅಂತರಿಕ್ಷ, ಭೂಮಿ, ದೇವಲೋಕಗಳಲ್ಲಿ ಒಟ್ಟು ಮೂರೂವರೆಕೋಟಿ ತೀರ್ಥಗಳಿವೆ ಎಂದು ವಾಯುವು ಹೇಳಿರುವನು. ಅವೆಲ್ಲವೂ ಜಾಹ್ನವಿಯಲ್ಲಿವೆ.

**ವಿಷ್ಣುಪಾದಾರ್ಘಸಂಪೂತೇ ಗಂಗೇ ತ್ರಿಪಥಗಾಮಿನಿ ।**
**ಧರ್ಮದ್ರವೇತಿ ವಿಖ್ಯಾತೇ ಪಾಪಂ ಮೇ ಹರ ಜಾಹ್ನವಿ ॥ ೬೦ ॥**

**ವಿಷ್ಣುಪಾದಪ್ರಸೂತಾಸಿ ವೈಷ್ಣವೀ ವಿಷ್ಣುಪೂಜಿತಾ ।**
**ತ್ರಾಹಿ ಮಾಮೇನಸಸ್ತಸ್ಮಾದಾಜನ್ಮಮರಣಾಂತಿಕಾತ್ ॥ ೬೧ ॥**

**ಶ್ರದ್ಧಯಾ ಧರ್ಮಸಂಪೂರ್ಣೇ ಶ್ರೀಮತಾ ರಜಸಾ ಚ ತೇ ।**
**ಅಮೃತೇನ ಮಹಾದೇವಿ ಭಾಗೀರಥಿ ಪುನೀಹಿ ಮಾಂ ॥ ೬೨ ॥**

**ತ್ರಿಭಿಃ ಶ್ಲೋಕವರೈರೇಭಿರ್ಯಃ ಸ್ನಾಯಾಜ್ಜಾಹ್ನವೀಜಲೇ ।**
**ಜನ್ಮಕೋಟಿಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥ ೬೩ ॥**

**ಮೂಲಮಂತ್ರಂ ಪ್ರವಕ್ಷ್ಯಾಮಿ ಜಾಹ್ನವ್ಯಾ ಹರಿಭಾಷಿತಂ ।**
**ಸಕೃಜ್ಜಪಾನ್ನರಃ ಪೂತೋ ವಿಷ್ಣುದೇಹೇ ಪ್ರತಿಷ್ಠತಿ ॥ ೬೪ ॥**

---

೬೦ ವಿಷ್ಣುವಿನ ಕಾಲಿನ ನೀರಿನಿಂದ ಪವಿತ್ರಳಾದ, ಆಕಾಶದಲ್ಲಿ ಹರಿಯುವ, ಧರ್ಮದ ದ್ರವವನ್ನು ಹರಿಸುವ ಜಾಹ್ನವಿಯೇ ! ನನ್ನ ಪಾಪವನ್ನು ನಾಶಮಾಡು.

೬೧. ಎಲೈ ಜಾಹ್ನವಿಯೇ ! ನೀನು ವಿಷ್ಣುವಿನ ಪಾದದಿಂದ ಹುಟ್ಟಿದ್ದೀಯೆ. ವಿಷ್ಣುವಿನಿಂದ ಗೌರವಿತಳಾಗಿದ್ದೀಯೆ. ಹುಟ್ಟಿದ ಮೊದಲು ಸಾಯುವವರೆಗೂ ಮಾಡಿದ ಪಾಪವನ್ನು ಪರಿಹರಿಸಿ ಕಾಪಾಡು.

೬೨. ಧರ್ಮಿಷ್ಠಳಾದ ಗಂಗೆಯೇ ! ಶ್ರದ್ಧೆಯಿಂದಲೂ ರಜೋಗುಣದಿಂದಲೂ ಕೂಡಿರುವ ನಿನ್ನ ನೀರಿನಿಂದ ನನ್ನನ್ನು ಪವಿತ್ರಳನ್ನಾಗಿ ಮಾಡು.

೬೩. ಈ ಮೂರು ಶ್ಲೋಕಗಳನ್ನು ಹೇಳಿಕೊಂಡು ಸ್ನಾನಮಾಡಿದರೆ ಕೋಟಿ ಜನ್ಮಗಳ ಪಾಪಗಳೂ ನಾಶವಾಗುತ್ತವೆ. ಸಂಶಯವಿಲ್ಲ.

೬೪. ಹರಿಯು ಹೇಳಿರುವ ಜಾಹ್ನವಿಯ ಮಲಮೂತ್ರವನ್ನು ಹೇಳುತ್ತೇನೆ. ಒಂದು ಬಾರಿ ಹೇಳಿದ ಮಾತ್ರದಿಂದಲೇ ಮನುಷ್ಯನು ಪವಿತ್ರನಾಗಿ ವಿಷ್ಣುದೇಹದಲ್ಲಿ ಸೇರುತ್ತಾನೆ.

ಮಂತ್ರಶ್ಚಾಯಂ-ಓಂ ನಮೋ ಗಂಗಾಯೈ ।
ವಿಶ್ವರೂಪಿಣ್ಯೈ ನಾರಾಯಣ್ಯೈ ನಮೋ ನಮಃ ॥ ೬೫ ॥

ಜಾಹ್ನವೀತೀರಸಂಭೂತಾಂ ಮೃದಂ ಮೂರ್ಧ್ನಾ ಬಿಭರ್ತಿ ಯಃ ।
ಸರ್ವಪಾಪವಿನಿರ್ಮುಕ್ತೋ ಗಂಗಾಸ್ನಾನಂ ವಿನಾ ನರಃ ॥ ೬೬ ॥

ಗಂಗಾಜಲೋರ್ಮಿನಿರ್ಧೂತಪವನಂ ಸ್ಪೃಶತೇ ಯದಿ ।
ನ ಪೂತಃ ಕಲ್ಮಷಾದ್ಘೋರಾತ್ಸ್ವರ್ಗಂ ಚಾಕ್ಷಯಮಶ್ನುತೇ ॥ ೬೭ ॥

ಯಾವದಸ್ಥಿ ಮನುಷ್ಯಸ್ಯ ಗಂಗಾತೋಯೇ ಪ್ರತಿಷ್ಠತಿ ।
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೬೮ ॥

ಪಿತ್ರೋರ್ಬಂಧುಜನಾನಾಂ ಚ ಅನಾಥಾನಾಂ ಗುರೋರಪಿ ।
ಗಂಗಾಯಾಮಸ್ಥಿಪಾತೇನ ನರಃ ಸ್ವರ್ಗಾನ್ನ ಹೀಯತೇ ॥ ೬೯ ॥

---

೬೫. ಇದು ಆ ಮಂತ್ರವು. ಓಂ ! ವಿಶ್ವರೂಪಿಣಿಯಾದ ನಾರಾಯಣಿಯಾದ ಗಂಗೆಗೆ ನಮಸ್ಕಾರವು.

೬೬. ಗಂಗೆಯ ದಡದಲ್ಲಿರುವ ಮಣ್ಣನ್ನು ತಲೆಯಲ್ಲಿ ಧರಿಸಿಕೊಂಡರೆ, ಗಂಗೆಯ ಸ್ನಾನವನ್ನು ಮಾಡದೇನೇ ಎಲ್ಲಾ ಪಾಪಗಳನ್ನು ಕಳೆದುಕೊಳ್ಳುತ್ತಾನೆ.

೬೭. ಗಂಗೆಯ-ನೀರಿನ ಅಲೆಯ-ಮೇಲಿನ ಗಾಳಿಯು ಮುಟ್ಟಿದರೆ ಅವನ ಪಾಪಗಳೆಲ್ಲವೂ ಹೋಗಿ ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾನೆ.

೬೮. ಮನುಷ್ಯನ ಮೂಳೆಯು ಎಲ್ಲಿಯವರೆಗೂ ಗಂಗೆಯಲ್ಲಿರುತ್ತದೆಯೋ ಅಷ್ಟು ಸಾವಿರ ವರ್ಷಗಳು ಸ್ವರ್ಗಲೋಕದಲ್ಲಿ ಸುಖಿಸುತ್ತಾನೆ.

೬೯ ಪಿತೃಗಳು, ಬಂಧುಗಳು, ಅನಾಥರು, ಗುರುಗಳು ಇವರ ಮೂಳೆಗಳನ್ನು ಗಂಗೆಯಲ್ಲಿ ಹಾಕುವುದರಿಂದ ಅವರು ಸ್ವರ್ಗದಲ್ಲಿ ವಾಸಿಸುತ್ತಾರೆ.

ಗಂಗಾಂ ಪ್ರತಿ ವಹೇದ್ಯಸ್ತು ಪಿತ್ರ್ಯಾಣಾಮಸ್ಥಿಖಂಡಕಂ ।
ಪದೇ ಪದೇಽಶ್ವಮೇಧಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೭೦ ॥

ಧನ್ಯಾ ಜನಪದಾ ಯೇ ಚ ಪಶವಃ ಪಕ್ಷಿಕೀಟಕಾಃ ।
ಸ್ಥಾವರಾ ಜಂಗಮಾಶ್ಚಾನ್ಯೇ ಗಂಗಾತೀರಸಮಾಶ್ರಿತಾಃ ॥ ೭೧ ॥

ಕ್ರೋಶಾಂತರಮೃತಾ ಯೇ ಚ ಜಾಹ್ನವ್ಯಾ ದ್ವಿಜಸತ್ತಮಾಃ ।
ಮಾನವಾ ದೇವತಾಃ ಸಂತಿ ಇತರೇ ಮಾನವಾ ಭುವಿ ॥ ೭೨ ॥

ಗಂಗಾಸ್ನಾನಾಯ ಸಂಗಚ್ಛನ್ ಪಥೇ ಸಂಮ್ರಿಯತೇ ಯದಿ ।
ಸ ಚ ಸ್ವರ್ಗಮವಾಪ್ನೋತಿ ಗಂಗಾಸ್ನಾನಫಲಂ ಲಭೇತ್ ॥ ೭೩ ॥

ಗಂಗಾಜಲೇ ಪ್ರಯಾಸ್ಯಂತಿ ತೇ ಜೀವಾಃ ಪಥಿ ಯೇ ಮೃತಾಃ ।
ಕೀಟಾಃ ಪತಂಗಾಃ ಶಲಭಾಃ ಪಾದಾಘಾತೇನ ಗಚ್ಛತಾಂ ॥ ೭೪ ॥

---

೭೦. ಯಾವನು ಗಂಗೆಯಲ್ಲಿ ಹಾಕಲು ತಾಯಿತಂದೆಗಳ ಮೂಳೆಗಳನ್ನು ಹೊತ್ತುಕೊಂಡು ಹೋಗುತ್ತಾನೆಯೋ, ಅವನು ಹೆಜ್ಜೆಹೆಜ್ಜೆಗೂ ಅಶ್ವಮೇಧದ ಫಲವನ್ನು ಹೊಂದುತ್ತಾನೆ.

೭೧. ಗಂಗಾತೀರದಲ್ಲಿರುವ ದೇಶಗಳೂ, ಪಶುಗಳೂ, ಪಕ್ಷಿಗಳೂ, ಹುಳುಗಳೂ, ಚರಾಚರಗಳೂ ಧನ್ಯವಾದುವು.

೭೨. ಗಂಗೆಗಿಂತಲೂ ಮೂರು ಮೈಲಿಯ ದೂರದಲ್ಲಿ ಸತ್ತವರು ದೇವತೆಗಳಾಗುತ್ತಾರೆ. ಮಿಕ್ಕವರು ಭೂಮಿಯಲ್ಲಿ ಮನುಷ್ಯರಾಗಿ ಹುಟ್ಟುತ್ತಾರೆ.

೭೩. ಗಂಗೆಯ ಸ್ನಾನಕ್ಕೆಂದು ಹೋಗುತ್ತಾ ದಾರಿಯಲ್ಲಿ ಸತ್ತರೆ ಅವನು ಗಂಗಾಸ್ನಾನದ ಫಲವನ್ನು ಹೊಂದುತ್ತಾನೆ. ಮತ್ತು ಸ್ವರ್ಗವನ್ನೂ ಹೊಂದುತ್ತಾನೆ.

೭೪. ಗಂಗೆಗೆ ಹೋಗುತ್ತಿರುವವರ ಕಾಲಿನ ತುಳಿತದಿಂದ ಸತ್ತ ಸಣ್ಣ ಪ್ರಾಣಿಗಳ ಜೀವವು ಗಂಗೆಗೆ ಹೋಗುತ್ತದೆ. ದಾರಿಯಲ್ಲಿ ಸತ್ತವರ ಜೀವಗಳೂ ಗಂಗೆಗೆ ಹೋಗುತ್ತವೆ.

ಯೇ ವದಂತಿ ಸಮುದ್ದೇಶಂ ಗಂಗಾಂ ಪ್ರತಿ ಜನಂ ದ್ವಿಜಾಃ ।
ತೇ ಚ ಯಾಂತಿ ಪರಂ ಪುಣ್ಯಂ ಗಂಗಾಸ್ನಾನಫಲಂ ನರಾಃ　　॥ ೭೫ ॥

ಜಾಹ್ನವೀಂ ಯೇ ಚ ನಿಂದಂತಿ ಪಾಖಂಡೈರ್ಹತಚೇತಸಃ ।
ತೇ ಯಾಂತಿ ನರಕಂ ಘೋರಂ ಪುನರಾವೃತ್ತಿದುರ್ಲಭಂ　　॥ ೭೬ ॥

ದುಃಸ್ಥೋ ವಾಪಿ ಸ್ಮರನ್ನಿತ್ಯಂ ಗಂಗೇತಿ ಪರಿಕೀರ್ತಯನ್ ।
ಪರಂ ಸ್ವರ್ಗಮವಾಪ್ನೋತಿ ಕಿಮನ್ಯೈರ್ಬಹುಭಾಷಿತೈಃ　　॥ ೭೭ ॥

ಗಂಗಾ ಗಂಗೇತಿ ಯೋ ಬ್ರೂಯಾದ್ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ　　॥ ೭೮ ॥

ಅಂಧಾಶ್ಚ ಪಂಗವಸ್ತೇ ಚ ವೃಥಾಭವಸಮುದ್ಭವಾಃ ।
ಗರ್ಭಪಾತಾದ್ವಿಪದ್ಯಂತೇ ಯೇ ಗಂಗಾಂ ನ ಗತಾ ನರಾಃ　　॥ ೭೯ ॥

---

೭೫. ಗಂಗೆಯ ವಿಷಯದಲ್ಲಿ ಒಳ್ಳೆಯ ವಿಷಯವನ್ನು ಯಾರು ಹೇಳುತ್ತಾರೆಯೋ, ಅವರು ಗಂಗಾ ಸ್ನಾನದ ಪುಣ್ಯವನ್ನು ಹೊಂದುತ್ತಾರೆ.

೭೬. ನಾಸ್ತಿಕರಾದವರ ಮಾತನ್ನು ಕೇಳಿಕೊಂಡು ಜಾಹ್ನವಿಯನ್ನು ನಿಂದಿಸುವವರು ಶಾಶ್ವತವಾದ ನರಕವನ್ನು ಹೊಂದುತ್ತಾರೆ.

೭೭. ಕಷ್ಟದಲ್ಲಿರುವವನು ಗಂಗೆ ಎಂಬುದಾಗಿ ಸ್ಮರಿಸಿದರೆ ಸ್ವರ್ಗವನ್ನು ಹೊಂದುತ್ತಾನೆ. ಬಹಳ ಮಾತಿನಿಂದೇನು ?

೭೮. ನೂರು ಯೋಜನಗಳ ದೂರದಲ್ಲಿರುವವನೂ ಗಂಗೆ ಗಂಗೆ ಎಂದು ಹೇಳಿದರೆ ಪಾಪವನ್ನು ಕಳೆದುಕೊಂಡು ವಿಷ್ಣುಲೋಕವನ್ನು ಹೊಂದುವನು.

೭೯. ಗಂಗೆಗೆ ಹೋಗದವರು ಕುರುಡರು, ಕುಂಟರು, ಇವರು ವ್ಯರ್ಥವಾಗಿ ಹುಟ್ಟಿದವರು. ಅನ್ಯಾಯವಾಗಿ ಗರ್ಭದಿಂದ ಬಿದ್ದವರೆಂದು ತಿಳಿ

ನ ಕೀರ್ತಯಂತಿ ಯೇ ಗಂಗಾಂ ಜಾಡ್ಯತುಲ್ಯಾ ನರಾಧಮಾಃ ।
ಪರಾನ್ನೋಪದಿಶಂತಿ ಸ್ಮ ವಾತುಲಾಶ್ಚಿತ್ತವಿಭ್ರಮಾಃ ॥ ೮೦ ॥

ನ ಪಠಂತಿ ಜನಾ ಯೇ ಚ ತೇಷಾಂ ಶಾಸ್ತ್ರಂ ವಿನಿಷ್ಫಲಂ ।
ಗಂಗಾಪುಣ್ಯಂ ಫಲಂ ವಿಪ್ರಾಃ ಕುಧಿಯಾಃ ಪತಿತಾಧಮಾಃ ॥ ೮೧ ॥

ಪಾದಯಂತಿ ಜನಾ ಯೇ ಚ ಶ್ರದ್ಧಯಾ ನಿಪಠಂತಿ ಚ ।
ಗಚ್ಛಂತಿ ತೇ ದಿವಂ ಧೀರಾಸ್ತಾರಯಂತಿ ಪಿತ್ರ್ಯಾನ್ಗುರೂನ್ ॥ ೮೨ ॥

ಪಾಥೇಯಕಂ ಗಚ್ಛತಾಂ ಯೋ ವಸು ಶಕ್ತ್ಯಾ ಪ್ರಯಚ್ಛತಿ ।
ಭಾಗೀರಥ್ಯಾ ಲಭೇತ್ಸ್ನಾನಂ ಯಃ ಪರಾನ್ನೇನ ಗಚ್ಛತಿ ॥ ೮೩ ॥

ಕರ್ತುಃ ಸ್ನಾನಫಲಂ ವಿದ್ಯಾದ್ದ್ವಿಗುಣಂ ಪ್ರೇರಕಸ್ಯ ಚ ।
ಇಚ್ಛಯಾನಿಚ್ಛಯಾ ವಾಪಿ ಪ್ರೇರಣೇನಾನ್ಯಸೇವಯಾ ॥
ಜಾಹ್ನವೀಂ ಯೋ ಗತಃ ಪುಣ್ಯಾಂ ಸ ಗಚ್ಛೇನ್ನಿರ್ಜರಾಲಯಂ ॥ ೮೪ ॥

---

೮೦. ಗಂಗೆಯನ್ನು ಸ್ಮರಿಸದವನು ಸೋಮಾರಿಯು. ಅಧಮನು. ಪರರಿಗೆ ಹೇಳದವನು ಹುಚ್ಚನು. ಉಪಯೋಗವಿಲ್ಲದ ಮಾತಿನವನು.

೮೧. ಗಂಗೆಯ ನಾಮವನ್ನು ಹೇಳದವನಿಗೆ ಶಾಸ್ತ್ರವು ಫಲವಿಲ್ಲ. ಅವನು ಕೆಟ್ಟಬುದ್ಧಿಯುಳ್ಳವನು. ಪತಿತರಲ್ಲಿಯೂ ಅಧಮನು.

೮೨. ಈ ಸ್ತೋತ್ರವನ್ನು ಹೇಳಿಕೊಡುವವರೂ, ಹೇಳುವವರೂ ತನ್ನ ಪಿತೃಗಳನ್ನೂ, ಗುರುಗಳನ್ನೂ, ಉದ್ಧಾರಮಾಡುತ್ತಾರೆ. ತಾವೂ ಉದ್ಧಾರವಾಗುತ್ತಾರೆ.

೮೩. ಗಂಗೆಗೆ ಹೋಗುವವರಿಗೆ ಹಣವನ್ನೂ, ನೀರನ್ನೂ, ಕೊಡುವವನು ಭಾಗೀರಥಿಯ ಸ್ನಾನವನ್ನು ಹೊಂದುತ್ತಾನೆ. ಪರರ ಅನ್ನದಿಂದಲೇ ಹೋಗುವವನೂ ಆ ಗಂಗಾ ಸ್ನಾನವನ್ನು ಅತ್ಯಂತವಾಗಿ ಹೊಂದುತ್ತಾನೆ.

೮೪. ಸ್ನಾನಮಾಡುವವನಿಗೆ ಸ್ನಾನದ ಫಲವೂ, ಅದನ್ನು ಮಾಡುವಂತೆ ಪ್ರೇರಿಸಿದನಿಗೆ ಅದರ ಎರಡರಷ್ಟೂ ಬರುತ್ತದೆ. ಇಚ್ಛೆಯಿದ್ದಾಗಲೀ, ಇಲ್ಲದಾಗಲಿ, ಪ್ರೇರಿಸಿದರೂ, ಇನ್ನೊಬ್ಬರ ಸೇವೆಯಿಂದ ಗಂಗೆಗೆ ಹೋದವನು ಸ್ವರ್ಗವನ್ನು ಹೊಂದುತ್ತಾನೆ.

॥ ದ್ವಿಜಾ ಊಚುಃ ॥

ಗಂಗಾಯಾಃ ಕೀರ್ತನಂ ವ್ಯಾಸ ಶ್ರುತಂ ತ್ವತ್ತೋ ವಿನಿರ್ಮಲಂ ।
ಗಂಗಾ ತಸ್ಮಾತ್ಕಿಮಾಕಾರಾ ಕುತಃ ಸಾ ಹ್ಯತಿಪಾವನೀ ॥ ೮೫ ॥

॥ ವ್ಯಾಸ ಉವಾಚ ॥

ಶ್ರುಣುಧ್ವಂ ಕಥಯಾಮದ್ಯ ಕಥಾಂ ಪುಣ್ಯಾಂ ಪುರಾತನೀಂ ।
ಯಾಂ ಶ್ರುತ್ವಾ ಮೋಕ್ಷಮಾರ್ಗಂ ಚ ಪ್ರಾಪ್ನೋತಿ ನರಸತ್ತಮಃ ॥ ೮೬ ॥

ಬ್ರಹ್ಮಲೋಕಂ ಪುರಾ ಗತ್ವಾ ನಾರದೋ ಮುನಿಪುಂಗವಃ ।
ನತ್ವಾ ವಿಧಿಂ ಚ ಪಪ್ರಚ್ಛ ಪೂತಂ ತ್ರೈಲೋಕ್ಯಪಾವನಂ ॥ ೮೭ ॥

ಕಿಂ ಸೃಷ್ಟಂ ಚ ತ್ವಯಾ ತಾತ ಸಮ್ಮತಂ ಶಂಭುಕೃಷ್ಣಯೋಃ ।
ಸರ್ವಲೋಕಹಿತಾರ್ಥಾಯ ಭುವಃ ಸ್ಥಾನೇ ಸಮೀಹಿತಂ ॥ ೮೮ ॥

ದೇವೀ ವಾ ದೇವತಾ ಕಾ ವಾ ಸರ್ವಾಸಾಮುತ್ತಮೋತ್ತಮಾ ।
ಯಾಂ ಸಮಾಸಾದ್ಯ ದೇವಾಶ್ಚ ದೈತ್ಯಮಾನುಷಪನ್ನಗಾಃ ॥ ೮೯ ॥

---

೮೫. ದ್ವಿಜರು ಹೇಳಿದರು- ಎಲೈ ವ್ಯಾಸನೇ ನಿರ್ಮಲವಾದ ಕೀರ್ತನೆಯನ್ನು ನಿನ್ನಿಂದ ಕೇಳಿದೆನು. ಆ ಗಂಗೆಯು ಎಲ್ಲಿ ಹುಟ್ಟಿದಳು ? ಅವಳ ಆಕಾರವೇನು ? ಅವಳು ಇಷ್ಟೊಂದು ಪರಿಶುದ್ಧಳಾಗಿರಲು ಕಾರಣವೇನು ?

೮೬. ವ್ಯಾಸನು ಹೇಳಿದನು- ಈ ಪುರಾತನವಾದ ಕಥೆಯನ್ನು ಕೇಳಿರಿ ಇದನ್ನು ಕೇಳಿದರೆ ಜನರು ಮೋಕ್ಷಕ್ಕೆ ಹೋಗುತ್ತಾರೆ.

೮೭. ಪೂರ್ವದಲ್ಲಿ ನಾರದನು ಬ್ರಹ್ಮಲೋಕಕ್ಕೆ ಹೋಗಿದ್ದನು. ಆಗ ಬ್ರಹ್ಮನಿಗೆ ನಮಸ್ಕರಿಸಿ ಪವಿತ್ರವೂ, ಮೂರುಲೋಕಕ್ಕೆ ಪಾವನವೂ ಆದುದನ್ನು ಕೇಳಿದನು.

೮೮. ಎಲೈ ತಂದೆಯೇ ! ಶಿವನಾರಾಯಣರಿಗೆ ಇಷ್ಟವಾದ ಲೋಕಹಿತವಾದ ಯಾವುದನ್ನು ಪ್ರಪಂಚದಲ್ಲಿ ಸೃಷ್ಟಿಸಿದ್ದೀಯೆ ?

೮೯-೯೦. ಅಂತಹ ಉತ್ತಮವಾದ ದೇವಿಯನ್ನಾಗಲಿ, ದೇವತೆಯನ್ನಾಗಲೀ ಯಾರನ್ನು ಸೃಷ್ಟಿಮಾಡಿದ್ದೀಯೆ ? ದೇವತೆಗಳು, ದೈತ್ಯರು, ಮನುಷ್ಯರು, ನಾಗರು,

ಅಂಡಜಾಃ ಸ್ವೇದಜಾ ವೃಕ್ಷಾ ಯೇ ಚಾನ್ಯೇ ಉದ್ಭಿಜಾದಯಃ ।
ಸರ್ವೇ ಯಾಂತಿ ಶಿವಂ ಬ್ರಹ್ಮಂ ಸಮಗ್ರಂ ವಿಭವಂ ಧ್ರುವಂ ॥ ೯೦ ॥

॥ ಬ್ರಹ್ಮೋವಾಚ ॥

ಸೃಜತಾ ಚ ಮಯಾ ಪ್ರೋಕ್ತಾ ಪುರಾ ಪ್ರಕೃತಿರೂಪಿಣೀ ।
ಆದ್ಯಾ ಭವಸ್ವ ಲೋಕಾನಾಂ ತ್ವತ್ತೋ ಭವಂ ಸೃಜಾಮ್ಯಹಂ ॥ ೯೧ ॥

ಏತಚ್ಛ್ರುತ್ವಾ ಪುರಾ ಸಾ ಚ ಸಪ್ತದಾ ಚಾಭವತ್ತದಾ ।
ಗಾಯತ್ರೀ ವಾಕ್ಚ ಸ್ವರ್ಲಕ್ಷ್ಮೀಃ ಸರ್ವಸಸ್ಯವಸುಪ್ರದಾ ॥ ೯೨ ॥

ಜ್ಞಾನವಿದ್ಯಾ ಉಮಾದೇವೀ ಶಕ್ತಿಬೀಜತಪಸ್ವಿನೀ ।
ವರ್ಣಿಕಾ ಧರ್ಮದ್ರವಾ ಚ ಏತಾಃ ಸಪ್ತ ಪ್ರಕೀರ್ತಿತಾಃ ॥ ೯೩ ॥

ಗಾಯತ್ರೀಪ್ರಭವಾ ವೇದಾ ವೇದಾತ್ಸರ್ವಂ ಸ್ಥಿತಂ ಜಗತ್ ।
ಸ್ವಸ್ತಿಸ್ಸ್ವಾಹಾಸ್ವಧಾದೀಕ್ಷಾ ಏತಾ ಗಾಯತ್ರಿಜಾಃ ಸ್ಮೃತಾಃ ॥ ೯೪ ॥

---

ಅಂಡಜರು, ಸ್ವೇದಜಗಳು, ಮರಗಳು, ಉದ್ಭಿಜಗಳು ಎಲ್ಲವೂ ಯಾರನ್ನು ಸೇವಿಸಿ ಉತ್ತಮಗತಿಯನ್ನು ಹೊಂದುವುವೋ ಅಂತಹುದು ಯಾವುದು ?

೯೧. ಬ್ರಹ್ಮನು ಹೇಳಿದನು- ನಾನು ಪ್ರಕೃತಿಯನ್ನು ಸೃಷ್ಟಿಮಾಡುತ್ತಿದ್ದಾಗಲೇ ಆಕೆಯನ್ನು ಕುರಿತು ನೀನು ಲೋಕಗಳಿಗೆ ಮೊದಲನೆಯವಳಾಗು. ನಿನ್ನಿಂದಲೇ ಸಂಸಾರವನ್ನು ಸೃಷ್ಟಿಸುತ್ತೇನೆ. ಎಂದು ಹೇಳಿದನು.

೯೨-೯೩. ಇದನ್ನು ಕೇಳಿ ಆಕೆಯು ಗಾಯತ್ರಿ, ಸ್ವರ್ಗದ ಲಕ್ಷ್ಮಿ, ಸಸ್ಯ ಹಣಗಳನ್ನು ಕೊಡುವ ಲಕ್ಷ್ಮಿ, ಜ್ಞಾನವಿದ್ಯೆ, ಶಕ್ತಿಯಾದ ವಿದ್ಯೆ, ಉಮಾದೇವಿ, ಧರ್ಮದ್ರವಳಾದ ಗಂಗೆ, ಈ ರೀತಿ ಏಳು ಭಾಗವಾದಳು.

೯೪. ಗಾಯತ್ರಿಯಿಂದ ವೇದಗಳು ಹುಟ್ಟಿದುವು. ಜಗತ್ತೆಲ್ಲವೂ ಅದರಲ್ಲಿಯೇ ಇದೆ. ಸ್ವಸ್ತಿ, ಸ್ವಾಹ, ಸ್ವಧಾ, ದೀಕ್ಷೆ, ಇವರು ಗಾಯತ್ರಿಯಿಂದ ಹುಟ್ಟಿದವರು.

ಉಚ್ಚಾರಯೇತ್ಸದಾ ಯಜ್ಞೇ ಗಾಯತ್ರೀಂ ಮಾತೃಕಾದಿಭಿಃ ।
ಕ್ರತೌ ದೇವಾಃ ಸುಧಾಂ ಪ್ರಾಪ್ಯ ಭವೇಯುರಜರಾಮರಾಃ ॥ ೯೫ ॥

ತತಃ ಸುಧಾರಸಂ ದೇವಾ ಮುಮುಚುರ್ಧರಣೀ ತಲೇ ।
ಅಥ ಸಸ್ಯವತೀ ಪೃಥ್ವೀ ಔಷಧೀನಾಂ ಪರಾ ಶುಭಾ ॥ ೯೬ ॥

ಫಲಮೂಲೈ ರಸೈರ್ಭಕ್ಷ್ಯೈರ್ಜನಾಃ ಸುಸ್ಥತರಾ ಭವನ್ ।
ಭಾರತೀ ಸರ್ವಲೋಕಾನಾಂ ಚಾನನೇ ಮಾನಸೇ ಸ್ಥಿತಾ ॥ ೯೭ ॥

ತಥೈವ ಸರ್ವಶಾಸ್ತ್ರೇಷು ಧರ್ಮೋದ್ದೇಶಂ ಕರೋತಿ ಸಾ ।
ವಿಜ್ಞಾನಂ ಕಲಹಂ ಶೋಕಂ ಮೋಹಾಮೋಹಂ ಶಿವಾಶಿವಂ ॥ ೯೮ ॥

ತಯಾ ವಿನಾ ಜಗತ್ಸರ್ವಂ ಯಾಥ್ಯತತ್ವಮಿತಿ ಸ್ಮೃತಂ ।
ಕಮಲಾಸಂಭವಶ್ಚೈವ ವಸ್ತ್ರಭೂಷಣಸಂಚಯಃ ॥ ೯೯ ॥

ಸುಖಂ ರಾಜ್ಯಂ ತ್ರಿಲೋಕೇ ತು ತತಃ ಸಾ ಹರಿವಲ್ಲಭಾ ।
ಉಮಯಾ ಹೇತುನಾ ಶಂಭೋರ್ಜ್ಞಾನಂ ಲೋಕೇಷು ಸಂತತಂ ॥ ೧೦೦ ॥

---

೯೫. ಯಜ್ಞದಲ್ಲಿ ಗಾಯತ್ರಿಯನ್ನು ಮಾತೃಕಾವರ್ಣದೊಡನೆ ಉಚ್ಚರಿಸಬೇಕು. ದೇವತೆಗಳು ಯಜ್ಞದಲ್ಲಿ ಸುಧೆಯನ್ನು ಹೊಂದಿ ಮುಪ್ಪೂ, ಸಾವೂ, ಇಲ್ಲದವರಾದರು.

೯೬-೧೦೩. ಅನಂತರ ದೇವತೆಗಳು ಸುಧೆಯನ್ನು ಭೂಮಿಯಲ್ಲಿ ಬಿಟ್ಟರು. ಆಗ ಭೂಮಿಯು ಸಸ್ಯವನ್ನುಳ್ಳದಾಗಿಯೂ, ಓಷಧಿಯನ್ನುಳ್ಳದಾಗಿಯೂ ಆಯಿತು. ಆಗ ಜನರು ಫಲಗಳು ಮೂಲಗಳನ್ನು ತಿಂದು ಸುಖವನ್ನು ಹೊಂದಿದರು. ಭಾರತಿಯು (ವಾಕ್ಕು) ಎಲ್ಲಾ ಜನಮುಖದಲ್ಲಿಯೂ ಕುಳಿತಿದೆ. ಅದೇ ರೀತಿಯಲ್ಲಿ ಸರ್ವಶಾಸ್ತ್ರದಲ್ಲಿಯೂ ಇದ್ದುಕೊಂಡು ಧರ್ಮವನ್ನು ಉಪದೇಶಿಸುತ್ತಿರುವಳು. ವಿಜ್ಞಾನ, ಕಲಹ, ಶೋಕ, ಮೋಹ, ಮೋಹವನ್ನು ಬಿಡುವಿಕೆ, ಮಂಗಳ, ಅಮಂಗಳ, ಎಲ್ಲವೂ ಅವಳನ್ನು ಆಶ್ರಯಿಸಿವೆ. ಆಕೆಯಿಲ್ಲದಿದ್ದರೆ ಪ್ರಪಂಚವೇ ನಿಜಸ್ಥಿತಿಯನ್ನು ತಿಳಿಯುವುದಿಲ್ಲ. ಲಕ್ಷ್ಮಿಯಿಂದಲೇ ವಸ್ತ್ರ, ಒಡವೆ, ಸುಖ ರಾಜ್ಯಗಳೆಲ್ಲವೂ ಸಿಕ್ಕುತ್ತವೆಂದು ಮೂರು ಲೋಕದಲ್ಲಿಯೂ ಪ್ರಸಿದ್ಧವಾಗಿದೆ. ಆದ್ದರಿಂದಲೇ ಆಕೆಯು ಹರಿವಲ್ಲಭಳು. ಉಮೆಯ ಸಂಬಂಧದಿಂದಲೇ ಶಂಭುವು ಸರ್ವಜ್ಞನಾಗಿರುವುದು. ಆ ಉಮೆಯು

ಜ್ಞಾನಮಾತಾ ಚ ಸಾ ಜ್ಞೇಯಾ ಶಂಭೋರರ್ಧಾಂಗವಾಸಿನೀ ।
ವರ್ಣಿಕಾ ಶಕ್ತಿರತ್ಯುಗ್ರಾ ಸರ್ವಲೋಕಪ್ರಮೋಹಿನೀ ॥ ೧೦೦ ॥

ಸರ್ವಲೋಕೇಷು ಲೋಕಾನಾಂ ಸ್ಥಿತಿಸಂಹಾರಕಾರಿಣೀ ।
ದೇವ್ಯಾ ಚ ನಿಹತೌ ಪೂರ್ವಮಸುರೌ ಮಧುಕೈಟಭೌ ॥ ೧೦೨ ॥

ರುರುಶ್ಚಾಪಿ ಹತೋ ಘೋರಃ ಸರ್ವಲೋಕಪರಿಶ್ರುತಃ ।
ಸರ್ವದೇವೈಕಜೇತಾರಂ ಸಾ ಜಘ್ನೇ ಮಾಹಿಷಾಸುರಂ ॥ ೧೦೩ ॥

ನಿಹತೋ ಲೋಲಯಾ ದೇವ್ಯಾ ಯುದ್ಧೇಷು ಸುವಿಶಾರದಃ ।
ತತಶ್ಚಂಡಶ್ಚ ಮುಂಡಶ್ಚ ರಕ್ತಬೀಜೋ ಮಹಾಸುರಃ ॥ ೧೦೪ ॥

ನಿಶುಂಭಶ್ಚಾಥ ಶುಂಭಶ್ಚ ತಯೋರ್ಯೇ ಚ ಪುರೋಗಮಾಃ ।
ನಿಹತಾ ಲೀಲಯಾ ದೇವ್ಯಾ ಯೇಽಸುರಾ ದೈತ್ಯಪುಂಗವಾಃ ॥ ೧೦೫ ॥

ಏವಂ ಬಲಾನಿ ದೈತ್ಯಾನಾಂ ನಿಹತ್ಯ ಸರ್ವದಾ ತಯಾ ।
ಪಾಲಿತಂ ಮೋಹಿತಂ ಚೈವ ಕೃತ್ಸ್ನಮೇತಜ್ಜಗತ್ತ್ರಯಂ ॥ ೧೦೬ ॥

ಧರ್ಮದ್ರವಾ ಸ್ವರೂಪಾ ಚ ಸರ್ವಧರ್ಮಪ್ರತಿಷ್ಠಿತಾ ।
ಮಹತೀಂ ತಾಂ ಸಮಾಲೋಕ್ಯ ಮಯಾ ಕಮಂಡಲೌ ಧೃತಾ ॥ ೧೦೭ ॥

---

ಜ್ಞಾನದ ತಾಯಿಯೆಂದು ತಿಳಿ. ಆಕೆಯು ಶಂಭುವಿನ ಅರ್ಧಾಂಗಿಯೂ ಆಗಿರುವಳು. ವರ್ಣಿಕೆಯೆಂಬ ದೇವಿಯು ಬಹು ಉಗ್ರಳಾದವಳು. ಸರ್ವಲೋಕವನ್ನು ಮೋಹಿಸುವಂತೆ ಮಾಡುವವಳು. ಲೋಕದ ಸ್ಥಿತಿ ಪರಿಹಾರಗಳನ್ನು ಮಾಡುವವಳು, ಈಕೆಯೇ ಪೂರ್ವದಲ್ಲಿ ಮಧುಕೈಟಭರನ್ನು ಕೊಂದಳು. ಪ್ರಸಿದ್ಧನಾದ ರುರುವನ್ನು ಈಕೆಯೇ ಕೊಂದಳು. ಮಹಿಷಾಸುರನನ್ನು ಈಕೆಯೇ ಸಂಹರಿಸಿದವಳು.

೧೦೪-೧೦೬. ಯುದ್ಧದಲ್ಲಿ ರಕ್ತಬೀಜಾಸುರ, ಶುಂಭ, ನಿಶುಂಭ, ಇವರೆಲ್ಲರನ್ನೂ ಲೀಲೆಯಿಂದಲೇ ಕೊಂದಳು. ಈ ರೀತಿ ದೈತ್ಯಶ್ರೇಷ್ಠರೆಲ್ಲರನ್ನೂ ಕೊಂದು ಈ ಮೂರು ಲೋಕವನ್ನೂ ಮೋಹಿಸುವಂತೆ ಮಾಡುತ್ತಾ ಕಾಪಾಡುವಳು.

೧೦೭. ಧರ್ಮದ್ರವಳಾದ ಆ ಗಂಗೆಯು ಸರ್ವಧರ್ಮಗಳುಳ್ಳವಳು. ಆಕೆಯ ಆ ದೊಡ್ಡಸ್ತಿಕೆಯನ್ನು ನೋಡಿ ನಾನು ಕಮಂಡಲುವಿನಲ್ಲಿ ಧರಿಸಿದೆನು.

ತಸ್ಯಾಃ ಪ್ರಸಾದತೋಽಯೇನ ವಿತತಂ ದೇವಸವ್ಮೃತಂ ।
ಅಸ್ಮಾಭಿಶ್ಚ ತ್ರಿಭಿರ್ಯುಕ್ತಾ ಬ್ರಹ್ಮವಿಷ್ಣುಮಹೇಶ್ವರೈಃ ॥ ೧೦೮ ॥

ಧರ್ಮದ್ರವಾ ಪರಿಖ್ಯಾತಾ ಜಲರೂಪಾ ಕಮಂಡಲೌ ।
ಬಲಿಯಜ್ಞೇಷು ಸಂಭೂತಾ ವಿಷ್ಣುನಾ ಪ್ರಭವಿಷ್ಣುನಾ ॥ ೧೦೯ ॥

ಛದ್ಮನಾ ಛಲಿತಃ ಪೂರ್ವಂ ಬಲಿರ್ಬಲವತಾಂ ವರಃ ।
ತತಃ ಪದದ್ವಯೇನೈವ ವ್ಯಾಪ್ತಂ ಸರ್ವಂ ಮಹೀತಲಂ ॥ ೧೧೦ ॥

ನಭಃ ಪಾದಶ್ಚ ಬ್ರಹ್ಮಾಂಡಂ ಭಿತ್ವಾ ಮಮ ಪುರಃ ಸ್ಥಿತಃ ।
ಮಯಾ ಸಂಪೂಜಿತಃ ಪಾದಃ ಕಮಂಡಲುಜಲೇನ ವೈ ॥ ೧೧೧ ॥

ಪ್ರಕ್ಷಾಲ್ಯೈವಾರ್ಚಿತಾತ್ಪಾದಾದ್ಧೇಮಕೂಟೇಽಪತಜ್ಜಲಂ ।
ತತ್ಕೂಟಾಚ್ಛಂಕರಂ ಪ್ರಾಪ್ಯ ಭ್ರಮತೇ ಸಾ ಜಟಾಸ್ಥಿತಾ ॥ ೧೧೨ ॥

ತತೋ ಭಗೀರಥೇನೈವ ಸಮಾರಾಧ್ಯ ಶಿವಂ ಭುವಿ ।
ಆನೀಯಾರಾಧಿತೋ ನಿತ್ಯಂ ತಪಸಾ ಗಜಪುಂಗವಃ ॥ ೧೧೩ ॥

---

೧೦೮. ಆವಳ ಅನುಗ್ರಹದಿಂದಲೇ ದೇವತೆಗಳೆಲ್ಲರೂ ವಿಸ್ತರಿಸಿಕೊಂಡಿರುವರು ತ್ರಿಮೂರ್ತಿಗಳಾದ ನಾವೂ ಅವಳನ್ನೇ ಆಶ್ರಯಿಸಿಕೊಂಡಿದ್ದೇವೆ.

೧೦೯-೧೧೦. ನನ್ನ ಕಮಂಡಲುವಿನಲ್ಲಿ ಸೇರಿಕೊಂಡು ಧರ್ಮದ್ರವಳೆಂದು ಪ್ರಸಿದ್ಧಳಾಗಿರುವಳು. ಬಲಿಯು ಯಾಗಮಾಡಿದಾಗ ವಿಷ್ಣುವಿನಿಂದ ಹುಟ್ಟಿರುವಳು. ಯಾಗ ಮಾಡುವಾಗ ಬಲಿಷ್ಠನಾದ ಬಲಿಯನ್ನು ವಿಷ್ಣುವು ವಂಚಿಸಿದನು ಆಗ ಎರಡು ಕಾಲಿನಿಂದ ವಿಷ್ಣುವು ಭೂಮಿಯನ್ನೆಲ್ಲಾ ಆವರಿಸಿಕೊಂಡನು.

೧೧೧. ಮತ್ತೊಂದು ಕಾಲು ಬ್ರಹ್ಮಾಂಡವನ್ನು ಭೇದಿಸಿಕೊಂಡು ನನ್ನ ಮುಂದೆ ಬಂದಿತು. ಆಗ ನಾನು ಆ ಕಮಂಡಲುವಿನ ನೀರಿನಿಂದ ಆ ಪಾದವನ್ನು ತೊಳೆದು ಪೂಜಿಸಿದೆನು.

೧೧೨-೧೧೩. ಕಾಲನ್ನು ತೊಳೆದು ಪೂಜಿಸಿದ ಆ ನೀರು ಹೇಮಕೂಟದಲ್ಲಿ ಬಿದ್ದಿತು. ಆ ಹೇಮಕೂಟದ ಶಿಖರದಿಂದ ಶಂಕರನ ತಲೆಯಮೇಲೆ ಬಿದ್ದು ಒಳಗೆ ಸುತ್ತುತ್ತಿದ್ದಿತು. ಅನಂತರ ಭಗೀರಥನು ಶಿವನನ್ನು ಆರಾಧಿಸಿದನು. ಅದನ್ನು ಬಿಡಲು ಅನಂತರ ಆನೆಗಳಲ್ಲಿ ಶ್ರೇಷ್ಠವಾದ ಐರಾವತವನ್ನು ಭಗೀರಥನು ಆರಾಧಿಸಿದನು.

ತೇನ ಭಿತ್ವಾ ನಗಂ ವಿರ್ಯಾತ್ರಿಭಿರ್ದಂತೈಃ ಕೃತಂ ಬಿಲಂ ।
ತತಸ್ತ್ರೀಬಿಲಗಾ ಯಸ್ಮಾತ್ತ್ರಿಸ್ರೋತಾ ಲೋಕವಿಶ್ರುತಾ ॥ ೧೧೪ ॥

ಹರಬ್ರಹ್ಮಹರೇಯೋರ್ಗಾತ್ಪೂತಾ ಲೋಕಸ್ಯ ಪಾವನೀ ।
ಸಮಾಸಾದ್ಯ ಚ ತಾಂ ದೇವೀಂ ಸರ್ವಧರ್ಮಫಲಂ ಲಭೇತ್ ॥ ೧೧೫ ॥

ಪಾಠ್ಯಯಜ್ಞಪರೈಃ ಸರ್ವೈರ್ಮಂತ್ರಹೋಮಸುರಾರ್ಚನೈಃ ।
ಸಾ ಗತಿರ್ನ ಭವೇಜ್ಜಂತೋರ್ಗಂಗಾಸಂಸೇವಯಾ ಚ ಯಾ ॥ ೧೧೬ ॥

ಧರ್ಮಸ್ಯ ಸಾಧನೋಪಾಯೋ ಹ್ಯತಃ ಪರೋ ನ ವಿದ್ಯತೇ ।
ತ್ರೈಲೋಕ್ಯಪುಣ್ಯಸಂಯೋಗಾತ್ತಸ್ಮಾತ್ತಾಂ ವ್ರಜ ನಾರದ ॥ ೧೧೭ ॥

ಗಂಗಾತೋಯಾಸ್ಥಿಸಂಯೋಗಾತ್ಸುತಾಸ್ತೇ ಸಗರಸ್ಯ ಚ ।
ಸ್ವರ್ಗತಾಃ ಪಿತೃಭಿಶ್ಚೈವ ಸ್ವಪೂರ್ವಾಪರಜೈಃ ಸಹ ॥ ೧೧೮ ॥

---

೧೧೪. ಆಗ ಆ ಐರಾವತವು ಮೂರು ದಂತಗಳಿಂದ ತಿವಿದು ಮೂರು ಬಿಲಗಳನ್ನು ಮಾಡಿತು. ಆಗ ಆ ನದಿಯು ಮೂರು ಬಿಲಗಳಿಂದ ಹೊರಟು ತ್ರಿಸ್ರೋತಸಗಳೆಂದು ಹೆಸರು ಪಡೆದಳು.

೧೧೫. ಹರ, ಬ್ರಹ್ಮ, ಹರಿಯರ ಸಂಬಂಧದಿಂದ ಪವಿತ್ರವಾಗಿರುವ ಆ ನದಿಯನ್ನು ಹೊಂದಿ ಸೇವಿಸಿದರೆ ಎಲ್ಲಾ ಧರ್ಮಗಳನ್ನು ಹೊಂದುವರು.

೧೧೬. ಜನಗಳು ಗಂಗಾಸೇವೆಯಿಂದ ಹೊಂದಿದ ಸೇವೆಯ ಫಲವನ್ನು ಪಾಠ ಹೇಳುವುದು, ಯಜ್ಞಮಾಡುವುದು, ಮಂತ್ರ ಜಪಿಸುವುದು, ಹೋಮ ಮಾಡುವುದು ದೇವತಾರ್ಚನೆ ಮಾಡುವುದು, ಇವುಗಳಿಂದ ಹೊಂದಲಾರರು.

೧೧೭. ಧರ್ಮವನ್ನು ಹೊಂದುವುದಕ್ಕೆ ಇದಕ್ಕಿಂತಲೂ ಸುಲಭವಾದ ಬೇರೆ ವಿಧಾನವು ಇಲ್ಲ. ಎಲೈ ನಾರದನೆ ! ಆದ್ದರಿಂದ ನೀನು ಗಂಗೆಯನ್ನು ಸೇವಿಸು.

೧೧೮ ಗಂಗೆಯ ನೀರಿನಲ್ಲಿ ಆ ಸಗರನ ಮಕ್ಕಳು ತಮ್ಮ ಹಿಂದಿನವರೊಡನೆ ಸ್ವರ್ಗವನ್ನು ಹೊಂದಿದರು.

॥ ವ್ಯಾಸ ಉವಾಚ ॥

ತತೋ ಬ್ರಹ್ಮಮುಖಾಚ್ಛ್ರುತ್ವಾ ನಾರದೋ ಮುನಿಪುಂಗವಃ ।
ಗಂಗಾದ್ವಾರೇ ತಪಃ ಕೃತ್ವಾ ಬ್ರಹ್ಮಣಃ ಸದೃಶೋಽಭವತ್ ॥ ೧೧೯ ॥

ಸರ್ವತ್ರ ಸುಲಭಾ ಗಂಗಾ ತ್ರಿಷು ಸ್ಥಾನೇಷು ದುರ್ಲಭಾ ।
ಗಂಗಾದ್ವಾರೇ ಪ್ರಯಾಗೇ ಚ ಗಂಗಾಸಾಗರಸಂಗಮೇ ॥ ೧೨೦ ॥

ತ್ರಿರಾತ್ರೇಣೈಕರಾತ್ರೇಣ ನರೋ ಯಾತಿ ಪರಾಂ ಗತಿಂ ।
ತಸ್ಮಾತ್ಸರ್ವಪ್ರಯತ್ನೇನ ಸದ್ಯೋ ಮುಕ್ತಿಂ ವಿಚಿಂತಯೇತ್ ॥ ೧೨೧ ॥

ತತೋ ಗಚ್ಛತ ಧರ್ಮಜ್ಞಾಃ ಶಿವಾಂ ಭಾಗೀರಥೀಮಿಹ ।
ಅಚಿರೇಣೈವ ಕಾಲೇನ ಸ್ವರ್ಗಂ ಮೋಕ್ಷಂ ಪ್ರಗಚ್ಛಥ ॥ ೧೨೨ ॥

ವಿಶೇಷಾತ್ಕಲಿಕಾಲೇ ಚ ಗಂಗಾ ಮೋಕ್ಷಪ್ರದಾ ನೃಣಾಂ ।
ಕೃಚ್ಛ್ರಾಚ್ಚ ಕ್ಷೀಣಸತ್ವಾನಾಮನಂತಃ ಪುಣ್ಯಸಂಭವಃ ॥ ೧೨೩ ॥

---

೧೧೯. ವ್ಯಾಸನು ಹೇಳಿದನು-ನಾರದನು ಬ್ರಹ್ಮನ ಮುಖದಿಂದ ಈ ಮಾತನ್ನು ಕೇಳಿ ಆ ಗಂಗೆಯ ದ್ವಾರದಲ್ಲಿ ತಪಸ್ಸನ್ನು ಮಾಡಿ ಬ್ರಹ್ಮನಿಗೆ ಸಮನಾದನು.

೧೨೦. ಗಂಗೆಯು ಎಲ್ಲಾ ಕಡೆಯಲ್ಲಿಯೂ ಸುಲಭವಾಗಿ ಸಿಕ್ಕಿದರೂ ಗಂಗಾ ದ್ವಾರ, ಪ್ರಯಾಗ, ಸಾಗರ ಸಂಗಮಗಳಲ್ಲಿ ಅದನ್ನು ಹೊಂದಲು ಕಷ್ಟವು.

೧೨೧. ಅಲ್ಲಿದ್ದರೆ ಒಂದು ರಾತ್ರಿ ಅಥವಾ ಮೂರು ರಾತ್ರಿಯೊಳಗೆ ಮುಕ್ತಿಯನ್ನು ಹೊಂದುತ್ತಾನೆ. ಆದ್ದರಿಂದ ಸರ್ವಪ್ರಯತ್ನದಿಂದಲೂ ಮುಕ್ತಿಯನ್ನು ಅಪೇಕ್ಷಿಸು.

೧೨೨. ಆದ್ದರಿಂದ ಎಲೈ ಧರ್ಮವನ್ನು ಬಲ್ಲವರಿರಾ ! ನೀವು ಭಾಗೀರಥಿಗೆ ಹೋಗಿರಿ. ಅಲ್ಲಿ ಸ್ವಲ್ಪಕಾಲದಿಂದಲೇ ಸ್ವರ್ಗ ಮೋಕ್ಷಗಳನ್ನು ಹೊಂದುತ್ತೀರಿ.

೧೨೩. ಜನರಿಗೆ ಮೋಕ್ಷಕ್ಕೆ ಅನುಕೂಲವಾದ ಮಾರ್ಗವು. ಬಲಹೀನರಿಗೂ ಬಹು ಸುಲಭವಾಗಿಯೇ ಪುಣ್ಯವು ಸಿಕ್ಕುತ್ತದೆ.

॥ ಪುಲಸ್ತ್ಯ ಉವಾಚ ॥

ತತಸ್ತೇ ಬ್ರಾಹ್ಮಣಾ ಹೃಷ್ಟಾಃ ಶ್ರುತ್ವಾ ವ್ಯಾಸಾದ್ಗಿರಂ ಶುಭಾಂ ।
ಗಂಗಾಯಾಂ ತು ತಪಸ್ತಪ್ತ್ವಾ ಮೋಕ್ಷಮಾರ್ಗಂ ಯಯುಸ್ತದಾ॥ ೧೨೪ ॥

ಯ ಇದಂ ಶೃಣುಯಾನ್ಮರ್ತ್ಯಃ ಪುಣ್ಯಾಖ್ಯಾನಮನುತ್ತಮಂ ।
ಸರ್ವಂ ತರತಿ ದುಃಖೌಘಂ ಗಂಗಾಸ್ನಾನಫಲಂ ಲಭೇತ್ ॥ ೧೨೫ ॥

ಸಕೃದುಚ್ಚರಿತೇ ಚೈವ ಸರ್ವಯಜ್ಞಫಲಂ ಭವೇತ್ ।
ದಾನಂ ಜಪ್ಯಂ ತಥಾ ಧ್ಯಾನಂ ಸ್ತೋತ್ರಮಂತ್ರಸುರಾರ್ಚನಂ ॥ ೧೨೬ ॥

ತತ್ರೈವ ಕಾರಯೇದ್ಯಸ್ತು ಚಾನಂತಫಲಮಶ್ನುತೇ ।
ತಸ್ಮಾತ್ತತ್ರೈವ ಕರ್ತವ್ಯಂ ಜಪಹೋಮಾದಿಕಂ ನರೈಃ ॥
ಅನಂತಂ ಚ ಫಲಂ ಪ್ರೋಕ್ತಂ ಜನ್ಮಜನ್ಮಸು ಲಭ್ಯತೇ ॥ ೧೨೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಗಂಗಾಮಾಹಾತ್ಮ್ಯ
ಕಥನಂ ನಾಮ ಷಷ್ಟಿತಮೋಽಧ್ಯಾಯಃ

---

೧೨೪. ಪುಲಸ್ತ್ಯನು ಹೇಳಿದನು-ಆಗ ವ್ಯಾಸನಿಂದ ಅವರೆಲ್ಲರೂ ಈ ಮಾತನ್ನು ಕೇಳಿ ಗಂಗೆಯಲ್ಲಿ ತಪಸ್ಸುಮಾಡಿ ಮೋಕ್ಷವನ್ನು ಹೊಂದಿದರು.

೧೨೫ ಈ ಪುಣ್ಯಕಥೆಯನ್ನು ಕೇಳಿದವನು ದುಃಖವನ್ನು ಕಳೆದುಕೊಂಡು ಗಂಗಾಸ್ನಾನದ ಫಲವನ್ನು ಹೊಂದುತ್ತಾನೆ.

೧೨೬-೧೨೭. ಒಂದುಬಾರಿ ಈ ಕಥೆಯನ್ನು ಹೇಳಿದುದರಿಂದಲೇ ಸರ್ವಯಜ್ಞದ ಫಲವನ್ನು ಹೊಂದುತ್ತಾನೆ ದಾನ, ಜಪ, ಧ್ಯಾನ, ಸ್ತೋತ್ರ, ಮಂತ್ರ, ದೇವತಾರ್ಚನೆಗಳನ್ನು ಆ ಗಂಗೆಯ ಸಮೀಪದಲ್ಲಿ ಮಾಡಿದರೆ ಅನಂತವಾದ ಫಲವು ಬರುತ್ತದೆ ಆದ್ದರಿಂದ ಜನರು ಆ ಗಂಗೆಯ ದಡದಲ್ಲಿಯೇ ಜಪಾದಿಗಳನ್ನು ಮಾಡಬೇಕು. ಆದರಿಂದ ಅನಂತವಾದ ಫಲವನ್ನು ಹೊಂದಿ ಅದನ್ನು ಜನ್ಮಜನ್ಮದಲ್ಲಿಯೂ, ಅನುಭವಿಸುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಗಂಗಾಮಹಾತ್ಮ್ಯಕಥನವೆಂಬ
ಅರವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಅಥೈಕಷಷ್ಟಿತಮೋಽಧ್ಯಾಯಃ ॥



॥ ಪುಲಸ್ತ್ಯ ಉವಾಚ ॥

ಏತಸ್ಮಿನ್ನಂತರೇ ಪೂರ್ವಂ ವ್ಯಾಸಶಿಷ್ಯೋ ಮಹಾಮುನಿಃ ।
ನಮಸ್ಕೃತ್ಯ ಗುರುಂ ಭೀಷ್ಮ ಸಂಜಯಃ ಪರಿಪೃಚ್ಛತಿ ॥ ೧ ॥

॥ ಸಂಜಯ ಉವಾಚ ॥

ದೇವಾನಾಂ ಪೂಜನೋಪಾಯಂ ಕ್ರಮಂ ಬ್ರೂಹಿ ಸುನಿಶ್ಚಿತಂ ।
ಅಗ್ರೇ ಪೂಜ್ಯತಮಃ ಕೋಽಸೌ ಕೋ ಮಧ್ಯೇ ನಿತ್ಯಪೂಜನೇ ॥ ೨ ॥

ಅಂತೇ ಚ ಪೂಜಾ ಕಸ್ಯೈವ ಕಸ್ಯ ಕೋ ವಾ ಪ್ರಭಾವಕಃ ।
ಕಿಂ ವಾ ಕಂ ಚ ಫಲಂ ಬ್ರಹ್ಮನ್ ಪೂಜಯಿತ್ವಾ ಲಭೇನ್ನರಃ ॥ ೩ ॥

---

### ಅರವತ್ತೊಂದನೆಯ ಅಧ್ಯಾಯವು

೧. ಪುಲಸ್ತ್ಯನು ಹೇಳಿದನು- ಪೂರ್ವದಲ್ಲಿ ವ್ಯಾಸಶಿಷ್ಯನಾದ ಸಂಜಯನು ಗುರುವನ್ನು ನಮಸ್ಕರಿಸಿ ಇಂತೆಂದನು.

೨-೩. ಸಂಜಯನು ಹೇಳಿದನು- ಎಲೈ ಗುರುವೇ! ದೇವರ ಪೂಜೆಯ ಉಪಾಯವನ್ನೂ, ಅದರ ಕ್ರಮವನ್ನೂ, ಹೇಳು. ಮೊದಲು ಯಾರನ್ನು ಪೂಜಿಸಬೇಕು ? ಮಧ್ಯದಲ್ಲಿ ಕೊನೆಯಲ್ಲಿ ಯಾರು ಯಾರನ್ನು ಪೂಜಿಸಬೇಕು ? ಯಾರ ಯಾರ ಮಹಿಮೆಯೇನು ? ಅವರನ್ನು ಪೂಜಿಸಿದರೆ ಬರುವ ಫಲವೇನು ?

॥ ವ್ಯಾಸ ಉವಾಚ ॥

ಗಣೇಶಂ ಪೂಜಯೇದಗ್ರೇ ಅವಿಘ್ನಾರ್ಥಂ ಪರೇಹ ಚ ।
ವಿನಾಯಕತ್ವಪ್ರಾಪ್ನೋತಿ ಯಥಾ ಗೌರೀಸುತೋ ಹಿ ಸಃ ॥ ೪ ॥

ಪಾರ್ವತ್ಯಜನಯತ್ಪೂರ್ವಂ ಸುತೌ ಮಹೇಶ್ವರಾದಿಮೌ ।
ಸರ್ವಲೋಕಧರೌ ಶೂರೌ ದೇವೌ ಸ್ಕಂದಗಣಾಧಿಪೌ ॥ ೫ ॥

ತೌ ಚ ದೃಷ್ಟ್ವಾ ಚ ತ್ರಿದಶಾಃ ಶ್ರದ್ಧಯಾ ಪರಯಾನ್ವಿತಾಃ ।
ಸುಧಯೋತ್ಪಾದಿತಂ ದಿವ್ಯಂ ತಸ್ಯೈ ದತ್ತಂ ಪ್ರಮೋದಕಂ ॥ ೬ ॥

ದೃಷ್ಟ್ವಾ ತು ಮೋದಕಂ ತಾಭ್ಯಾಂ ಜನನ್ಯಾಮರ್ಥಿತಂ ತದಾ ।
ತತಸ್ತು ವಿಸ್ಮಿತಾ ದೇವೀ ಸುತಾವೇವಾಭ್ಯಭಾಷತ ॥ ೭ ॥

॥ ಪಾರ್ವತ್ಯುವಾಚ ॥

ಇದಂ ತು ಮೋದಕಂ ಪುತ್ರೌ ದೇವೈರ್ದತ್ತಂ ಮುದಾನ್ವಿತೈಃ ।
ಮಹಾಬುದ್ಧೀತಿ ವಿಖ್ಯಾತಂ ಸುಧಯಾ ಪರಿನಿರ್ಮಿತಂ ॥ ೮ ॥

---

೪. ವ್ಯಾಸನು ಹೇಳಿದನು–ಮೊದಲು ವಿಘ್ನಪರಿಹಾರಕ್ಕೋಸ್ಕರ ಗಣೇಶನನ್ನು ಪೂಜಿಸಬೇಕು. ಗೌರಿಯ ಮಗನಾದ ಅವನು ವಿನಾಯಕನಾದಂತೆಯೇ ಇತರರಿಗೂ ವಿನಾಯಕತನವನ್ನು ಕೊಡುತ್ತಾನೆ.

೫. ಹಿಂದೆ ಪಾರ್ವತಿಯು ಮಾಹೇಶ್ವರನಿಂದ ಶೂರರಾದ ಸ್ಕಂದನನ್ನೂ, ಗಣಾಧಿಪನನ್ನೂ ಹೆತ್ತಳು. ಇವರು ಶೂರರಾಗಿ ಎಲ್ಲಾ ಲೋಕಗಳನ್ನೂ ಧರಿಸಿದ್ದಾರೆ.

೬. ದೇವತೆಗಳು ಆ ಇಬ್ಬರು ಮಕ್ಕಳನ್ನೂ ನೋಡಿ ಶ್ರದ್ಧೆಯಿಂದಲೂ, ಸಂತೋಷದಿಂದಲೂ ಅಮೃತದಲ್ಲಿ ಕಡುಬನ್ನು ಮಾಡಿ ಆ ಪಾರ್ವತಿಯ ಕೈಗೆ ಕೊಟ್ಟರು.

೭. ಆ ಕಡುಬನ್ನು ನೋಡಿ ಅವರು ತಾಯಿಯನ್ನು ಕೊಡೆಂದು ಕೇಳಿದರು. ಆಗ ಆಶ್ಚರ್ಯಗೊಂಡು ಆ ಪಾರ್ವತಿಯು ಮಕ್ಕಳಿಗೆ ಇಂತೆಂದಳು.

೮. ಪಾರ್ವತಿಯು ಹೇಳಿದಳು- ಎಲೈ ಮಕ್ಕಳಿರಾ ! ಈ ಮೋದಕವನ್ನು ದೇವತೆಗಳು ಅಮೃತದಿಂದ ಮಾಡಿದ್ದಾರೆ. ಅದರ ಹೆಸರು ಮಹಾಬುದ್ಧಿಯೆಂದು ಪ್ರಸಿದ್ಧವಾಗಿದೆ.

**ಗುಣಂ ಚಾಸ್ಯ ಪ್ರವಕ್ಷ್ಯಾಮಿ ಶೃಣುತಂ ವಾ ಸಮಾಹಿತೌ ।**
**ಅಸ್ಯೈವಾಘ್ರಾಣಮಾತ್ರೇಣ ಅಮರತ್ವಂ ಭವೇದ್ಧ್ರುವಂ ॥ ೯ ॥**

**ಸರ್ವಶಾಸ್ತ್ರಾರ್ಥತತ್ವಜ್ಞಃ ಸರ್ವಶಸ್ತ್ರಾಸ್ತ್ರಕೋವಿದಃ ।**
**ನಿಪುಣಃ ಸರ್ವತಂತ್ರೇಷು ಲೇಖಕಶ್ಚಿತ್ರಕೃತ್ಸುಧೀಃ ॥ ೧೦ ॥**

**ಜ್ಞಾನವಿಜ್ಞಾನತತ್ವಜ್ಞಃ ಸರ್ವಜ್ಞೋ ನಾತ್ರ ಸಂಶಯಃ ।**
**ಪುತ್ರೌ ಧರ್ಮಾದಧಿಕತಾಂ ಪ್ರಾಪ್ಯ ಸಿದ್ಧಿಶತಂ ವ್ರಜೇತ್ ॥**
**ಯಸ್ತಸ್ಯ ವೈ ಪ್ರದಾಸ್ಯಾಮಿ ಪಿತುಸ್ತೇ ಸಂಮತಂ ತ್ವಿದಂ ॥ ೧೧ ॥**

**॥ ವ್ಯಾಸ ಉವಾಚ ॥**

**ಶ್ರುತ್ವಾ ಮಾತೃಮುಖಾದೇವಂ ವಚಃ ಪರಮಕೋವಿದಃ ।**
**ಸ್ಕಂದಸ್ತೀರ್ಥಂ ಯಯೌ ಸದ್ಯಃ ಸರ್ವಂ ತ್ರಿಭುವನಸ್ಥಿತಂ ॥ ೧೨ ॥**

**ಬರ್ಹಿಣಂ ಸ್ವಂ ಸಮಾರುಹ್ಯ ತ್ವಭಿಷೇಕಃ ಕೃತಃ ಕ್ಷಣಾತ್ ।**
**ಪಿತರೌ ಪ್ರದಕ್ಷಿಣಂ ಕೃತ್ವಾ ಲಂಬೋದರಧರಃ ಸುಧೀಃ ॥ ೧೩ ॥**

---

೯. ಇದರ ಗುಣವನ್ನು ಹೇಳುತ್ತೇನೆ, ಕೇಳಿರಿ. ಇದನ್ನು ಮೂಸಿನೋಡು ವುದರಿಂದ ಅಮರನಾಗುತ್ತಾನೆ. ಇದು ಖಂಡಿತ.

೧೦. ಸರ್ವ ಶಾಸ್ತ್ರಗಳನ್ನೂ ಬಲ್ಲವನಾಗುತ್ತಾನೆ. ಸರ್ವ ಶಸ್ತ್ರಾಸ್ತ್ರಗಳಲ್ಲಿ ಪಂಡಿತನಾಗುತ್ತಾನೆ. ತಂತ್ರಗಳೆಲ್ಲವನ್ನೂ ಬಲ್ಲವನಾಗುತ್ತಾನೆ. ಚೆನ್ನಾಗಿ ಬರೆಯು ವವನೂ, ಬುದ್ಧಿವಂತನೂ ಆಗುತ್ತಾನೆ. ಚಿತ್ರದಲ್ಲಿ ನಿಪುಣನಾಗುವನು.

೧೧. ಜ್ಞಾನ, ವಿಜ್ಞಾನ, ತತ್ವಗಳನ್ನು ಬಲ್ಲವನಾಗುತ್ತಾನೆ. ಸರ್ವಜ್ಞನಾ ಗುವುದರಲ್ಲಿ ಸಂಶಯವಿಲ್ಲ ಅನೇಕ ಧರ್ಮಗಳನ್ನು ತಿಳಿದು ಅನೇಕ ಸಿದ್ಧಿಗಳನ್ನು ಹೊಂದುತ್ತಾನೆ. ಇದನ್ನು ಯಾರಿಗೆ ಬೇಕಾದರೂ ಕೊಡುತ್ತೇನೆ. ಇದು ನಿಮ್ಮ ತಂದೆಗೂ ಇಷ್ಟವಾದುದು.

೧೨-೧೪. ವ್ಯಾಸನು ಹೇಳಿದನು- ತಾಯಿಯು ಹೀಗೆ ಹೇಳಿದುದನ್ನು ಕೇಳಿ ಬುದ್ಧಿವಂತನಾದ ಸ್ಕಂದನು ನವಿಲಿನ ಮೇಲೆ ಕುಳಿತುಕೊಂಡು ಎಲ್ಲಾ ತೀರ್ಥಗಳ ಲ್ಲಿಯೂ ಸ್ನಾನಮಾಡಿಕೊಂಡು ಬಂದನು. ಇಷ್ಟರಲ್ಲಿ ಈ ಲಂಬೋದರನು ತಾಯಿ ತಂದೆಗಳನ್ನು ಪ್ರದಕ್ಷಿಣೆ ಮಾಡಿ ಸಂತೋಷದಿಂದ ಎದುರಿನಲ್ಲಿ ನಿಂತುಕೊಂಡನು.

ಲಂಬೋದರೋ ಮುದಾ ಯುಕ್ತಃ ಪಿತುರಗ್ರಾಗ್ರತಃ ಸ್ಥಿತಃ।
ಪುರತಶ್ಚ ತಥಾ ಸ್ಕಂದೋ ದೇಹಿ ಮಾಂ ಹಿ ಬ್ರುವನ್ ಸ್ಥಿತಃ ॥
ತತಃ ಸುತೌ ಸಮೀಕ್ಷ್ಯಾಥ ಪಾರ್ವತೀ ವಿಸ್ಮಿತಾಬ್ರವೀತ್ ॥ ೧೪ ॥

॥ ಪಾರ್ವತ್ಯುವಾಚ ॥

ಸರ್ವತೀರ್ಥಾಭಿಷೇಕೈಸ್ತು ಸರ್ವದೇವನತೈಸ್ತಥಾ ।
ಸರ್ವಯಜ್ಞವ್ರತೈರ್ಮಂತ್ರೈರ್ಯೋಗೈರನ್ಯೈರ್ಯಮೈಸ್ತಥಾ ॥ ೧೫ ॥

ಪಿತ್ರೋರರ್ಚಾಕೃತಸ್ಯೈವ ಕಲಾಂ ನಾರ್ಹತಿ ಷೋಡಶೀಂ ।
ತಸ್ಮಾತ್ಸುತಶತೈರೇಷೋಽಧಿಕಃ ಶತಗಣೈರಪಿ ॥ ೧೬ ॥

ಅತೋ ದದಾಮಿ ಹೇರಂಬೇ ಮೋದಕಂ ದೇವನಿರ್ಮಿತಂ ।
ಅಸ್ಯೈವ ಕಾರಣಾದಸ್ಯ ಅಗ್ರೇ ಪೂಜಾ ಮಖೇಷು ಚ ॥ ೧೭ ॥

ವೇದಶಾಸ್ತ್ರಸ್ತವಾದೌ ಚ ನಿತ್ಯಂ ಪೂಜಾವಿಧಾಸು ಚ ॥ ೧೮ ॥

॥ ವ್ಯಾಸ ಉವಾಚ ॥

ಪಾರ್ವತ್ಯಾ ಸಹ ಭೂತೇಶೋ ದದೌ ತಸ್ಮೈ ವರಂ ಮಹತ್ ॥ ೧೯ ॥

---

ಸ್ಕಂದನೂ ಇವರೆದುರಿಗೆ ಬಂದು ನಿಂತು ಆ ಮೋದಕವನ್ನು ಕೊಡೆಂದು ಕೇಳಲು ಪಾರ್ವತಿಯು ಆಶ್ಚರ್ಯದಿಂದ ಇಂತೆಂದಳು.

೧೫-೧೮. ಪಾರ್ವತಿಯು ಹೇಳಿದಳು- ಸರ್ವತೀರ್ಥಗಳಲ್ಲಿ ಸ್ನಾನಮಾಡಿ ಎಲ್ಲ ದೇವರನ್ನೂ ಪೂಜಿಸಿ ಯಜ್ಞಗಳನ್ನೂ, ವ್ರತಗಳನ್ನೂ, ಮಾಡಿ ಮಂತ್ರ, ಯೋಗ ಯಮಗಳಿಂದ ಸಿದ್ಧನಾಗಿರುವನು, ತಾಯಿತಂದೆಗಳ ಪೂಜೆಯನ್ನು ಮಾಡಿದವನ ಪುಣ್ಯದ ಹದಿನಾರನೆಯ ಒಂದು ಭಾಗಕ್ಕೂ ಅರ್ಹನಾಗುವುದಿಲ್ಲ ಆದ್ದರಿಂದ ಅನೇಕ ಮಕ್ಕಳಿಗಿಂತಲೂ ಅನೇಕ ಗುಣಗಳಿಗಿಂತಲೂ ಈ ವಿನಾಯಕನೇ ಹೆಚ್ಚಿನವನು. ಆದ್ದರಿಂದ ಈ ದೇವನಿರ್ಮಿತವಾದ ಕಡುಬನ್ನು ಲಂಬೋದರನಿಗೆ ಕೊಡುವೆನು. ಮೊದಲ ಪೂಜೆಯು ಸಲ್ಲಲಿ. ವೇದಶಾಸ್ತ್ರಗಳ ಆದಿಯಲ್ಲಿಯೂ ಈತನಿಗೆ ನಿತ್ಯವೂ ಪೂಜೆಯು ಸಲ್ಲಲಿ.

೧೯. ವ್ಯಾಸನು ಹೇಳಿದನು- ಆಗ ಈಶ್ವರನೂ ಕೂಡ ಪಾರ್ವತಿಯ ಜತೆಯಲ್ಲಿಯೇ ಅವನಿಗೆ ಬೇಕಾದಷ್ಟು ವರಗಳನ್ನೂ ಕೊಟ್ಟನು.

॥ ಮಹಾದೇವ ಉವಾಚ ॥

ಅಸ್ಯೈವ ಪೂಜನಾದಗ್ರೇ ದೇವಾಸ್ತುಷ್ಟಾ ಭವಂತು ಚ ।
ಸರ್ವಾಸಾಮಪಿ ದೇವೀನಾಂ ಪಿತೄಣಾಂ ಚ ಸಮಂತತಃ ॥
ತೋಷೋ ಭವತು ನಿತ್ಯಂ ಚ ಪೂಜಿತೇಽಗ್ರೇ ಗಣೇಶ್ವರೇ ॥ ೨೦ ॥

॥ ವ್ಯಾಸ ಉವಾಚ ॥

ತತಃ ಸರ್ವೇಷು ಯಜ್ಞೇಷು ಪೂಜಯೇದ್ಗಣಪಂ ದ್ವಿಜಃ ।
ಕೋಟಿಕೋಟಿಗುಣಂ ತೇಷು ದೇವದೇವೀವಚೋ ಯಥಾ ॥ ೨೧ ॥

ದತ್ವಾ ಸರ್ವಗುಣಂ ಪುಣ್ಯಂ ದೇವದೇವ್ಯಾ ತಥಾ ಮುದಾ ।
ಕೃತಂ ಗಣಾಧಿಪತ್ಯಂ ಚ ಸರ್ವದೇವಾಗ್ರತಸ್ತದಾ ॥ ೨೨ ॥

ತಸ್ಮಾತ್ಪ್ರಾಜ್ಞೇಷು ಯಜ್ಞೇಷು ಸ್ತೋತ್ರೇಷು ನಿತ್ಯಪೂಜನೇ ।
ಗಣೇಶಂ ಪೂಜಯಿತ್ವಾ ತು ಸರ್ವಸಿದ್ಧಿಂ ಲಭೇನ್ನರಃ ॥ ॥ ೨೩ ॥

ಏವಂ ಜ್ಞಾತ್ವಾ ತು ದೇವೈಸ್ತು ದಯಿತಪ್ರಾಪ್ತಿಕಾಮ್ಯಯಾ ।
ಪೂಜಿತಶ್ಚಾಥ ಸರ್ವೈಸ್ತು ಸ್ವರ್ಗಮೋಕ್ಷಾರ್ಥತೋ ಧ್ರುವಂ ॥ ೨೪ ॥

---

೨೦. ಮಹಾದೇವನು ಹೇಳಿದನು- ಇವನನ್ನು ಮೊದಲು ಪೂಜೆ ಮಾಡುವುದರಿಂದ ದೇವತೆಗಳು ತೃಪ್ತರಾಗಲಿ. ದೇವಿಯರಿಗೂ, ಪಿತೃಗಳಿಗೂ, ಗಣೇಶ್ವರನ ಮೊದಲನೆಯ ಪೂಜೆಯು ತೃಪ್ತಿಯನ್ನುಂಟುಮಾಡಲಿ.

೨೧. ವ್ಯಾಸನು ಹೇಳಿದನು- ಆದ್ದರಿಂದ ಎಲ್ಲಾ ಪೂಜೆಗಳಲ್ಲಿಯೂ ಮೊದಲು ಗಣಪನನ್ನು ಪೂಜಿಸಬೇಕು. ಅದರಿಂದ ಕೋಟಿಯಷ್ಟು ಗುಣವುಂಟು. ಪಾರ್ವತಿ ಪರಮೇಶ್ವರರೇ ಹಾಗೆ ಹೇಳಿದ್ದಾರೆ.

೨೨. ಈ ರೀತಿ ದೇವನೂ ದೇವಿಯೂ ಸಂತೋಷದಿಂದ ವರವನ್ನು ಕೊಟ್ಟರು ಮತ್ತು ಸರ್ವ ದೇವತೆಗಳ ಎದುರಿಗೂ ಗಣಗಳಿಗೆ ಒಡೆತನವನ್ನು ಕೊಟ್ಟರು.

೨೩. ಆದ್ದರಿಂದ ಯಜ್ಞಗಳಲ್ಲಿಯೂ ಸ್ತೋತ್ರಗಳಲ್ಲಿಯೂ, ಪೂಜೆಗಳಲ್ಲಿಯೂ ಗಣೇಶನನ್ನು ಪೂಜಿಸಿದರೆ ಮನುಷ್ಯನು ಎಲ್ಲಾ ಸಿದ್ಧಿಯನ್ನೂ ಹೊಂದುವನು.

೨೪. ಇದನ್ನು ತಿಳಿದು ಆ ದೇವತೆಗಳೆಲ್ಲರೂ ತಮ್ಮ ಇಷ್ಟಪ್ರಾಪ್ತಿಗೋಸ್ಕರ ಆ ಗಣೇಶನನ್ನು ಪೂಜಿಸಿದರು.

ನಕ್ತಾಹಾರಶ್ಚತುರ್ಥ್ಯಾಂ ತು ಪೂಜಯಿತ್ವಾ ಗಣಾಧಿಪಂ ।
ಲಿಂಗೇ ವಾ ಪ್ರತಿಮಾಚಿತ್ರೇ ದೇವಃ ಪೂಜ್ಯೋ ಭವೇದ್ಯದಿ ॥ ೨೫ ॥

ಗಣಾಧಿಪ ನಮಸ್ತುಭ್ಯಂ ಸರ್ವವಿಘ್ನಪ್ರಶಾಂತಿದ ।
ಉಮಾನಂದಪ್ರದ ಪ್ರಾಜ್ಞ ತ್ರಾಹಿ ಮಾಂ ಭವಸಾಗರಾತ್ ॥ ೨೬ ॥

ಹರಾನಂದಕರಾಧ್ಯಾನ ಜ್ಞಾನವಿಜ್ಞಾನದ ಪ್ರಭೋ ।
ವಿಘ್ನರಾಜ ನಮಸ್ತುಭ್ಯಂ ಸರ್ವದೈತ್ಯೈಕಸೂದನ ॥ ೨೭ ॥

ಸರ್ವಪ್ರೀತಿಪ್ರದ ಶ್ರೀದ ಸರ್ವಯಜ್ಞೈಕರಕ್ಷಕ ।
ಸರ್ವಾಭೀಷ್ಟಪ್ರದ ಪ್ರೀತ್ಯಾ ನಮಾಮಿ ತ್ವಾಂ ಗಣಾಧಿಪ ॥ ೨೮ ॥

ಏಭಿರ್ಮಂತ್ರೈರ್ಗಣಾಧ್ಯಕ್ಷಂ ಪೂಜಯೇದ್ಯೋ ನರೋ ಮುದಾ ।
ಸರ್ವಪಾಪಾದ್ವಿನಿರ್ಮುಕ್ತಃ ಸುರಲೋಕೇ ಮಹೀಯತೇ ॥ ೨೯ ॥

---

೨೫. ಆದ್ದರಿಂದ ಲಿಂಗದಲ್ಲಿಯಾಗಲಿ, ಪ್ರತಿಮೆಯಲ್ಲಿಯಾಗಲಿ, ಚಿತ್ರದಲ್ಲಿಯಾಗಲಿ, ಆ ಗಣೇಶನನ್ನು ಪೂಜಿಸಬೇಕು

೨೬. ಗಣಾಧಿಪನೇ ! ಸರ್ವವಿಘ್ನಗಳನ್ನೂ ನಾಶಮಾಡುವವನೇ ! ನಿನಗೆ ನಮಸ್ಕಾರವು. ಉಮೆಯ ಪ್ರೀತಿಪಾತ್ರನೇ ! ಸಂಸಾರವೆಂಬ ಸಮುದ್ರದಿಂದ ನನ್ನನ್ನು ಉದ್ಧರಿಸು.

೨೭. ಹರನಿಗೆ ಆನಂದಕರನೇ ! ಧ್ಯಾನ, ವಿಜ್ಞಾನ, ಜ್ಞಾನಗಳನ್ನು ಕೊಡುವವನೇ ! ವಿಘ್ನರಾಜನೇ ! ದೈತ್ಯನಾಶಕನೇ ! ನಿನಗೆ ನಮಸ್ಕಾರವು.

೨೮. ಸರ್ವರಿಗೂ ಪ್ರೀತಿಯನ್ನುಂಟುಮಾಡುವವನೇ ! ಯಜ್ಞಗಳನ್ನು ಕಾಪಾಡುವವನೇ ! ಇಷ್ಟವಾದುದನ್ನು ಕೊಡುವವನೇ ! ಗಣಾಧಿಪನೇ ! ನಿನ್ನನ್ನು ನಮಸ್ಕರಿಸುತ್ತೇನೆ.

೨೯. ಈ ಮಂತ್ರಗಳಿಂದ ಗಣಪನನ್ನು ಪೂಜಿಸಿದವನಿಗೆ ಪಾಪಗಳೆಲ್ಲವೂ, ಹೋಗಿ ಸ್ವರ್ಗದಲ್ಲಿ ಸುಖಿಸುತ್ತಾನೆ.

ಸ್ತೋತ್ರಂ ತಸ್ಯ ಪ್ರವಕ್ಷ್ಯಾಮಿ ನಾಮದ್ವಾದಶಕಂ ಶುಭಂ ।
ಓಂ ನಮೋ ಗಣಪತಯೇ ಮಂತ್ರ ಏಷ ಉದಾಹೃತಃ ॥ ೩೦ ॥

ಗಣಪತಿರ್ವಿಘ್ನರಾಜೋ ಲಂಬತುಂಡೋ ಗಜಾನನಃ ।
ದ್ವೈಮಾತುರಶ್ಚ ಹೇರಂಬ ಏಕದಂತೋ ಗಣಾಧಿಪಃ ॥ ೩೧ ॥

ವಿನಾಯಕಶ್ಚಾರುಕರ್ಣಃ ಪಶುಪಾಲೋ ಭವಾತ್ಮಜಃ ।
ದ್ವಾದಶೈತಾನಿ ನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ॥ ೩೨ ॥

ವಿಶ್ವಂ ತಸ್ಯ ಭವೇದ್ವಶ್ಯಂ ನ ಚ ವಿಘ್ನಂ ಭವೇತ್ಕ್ವಚಿತ್ ।
ಮಹಾ ಪ್ರೇತಾಃ ಶಮಂ ಯಾಂತಿ ಪೀಡ್ಯತೇ ವ್ಯಾಧಿಭಿರ್ನ ಚ ॥
ಸರ್ವಪಾಪಾದ್ವಿನಿರ್ಮುಕ್ತೋ ಹ್ಯಕ್ಷಯಂ ಸ್ವರ್ಗಮಶ್ನುತೇ ॥ ೩೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಗಣಪತಿಸ್ತೋತ್ರ
ನಿರೂಪಣಂ ನಾಮೈಕಷಷ್ಟಿತಮೋಧ್ಯಾಯಃ

---

೩೦. ಆ ಗಣಾಧಿಪನ ಸ್ತೋತ್ರವನ್ನು ಹೇಳುತ್ತೇನೆ. ಅದು ಹನ್ನೆರಡಿದೆ. ಶುಭವಾದುದು. ಓಂ ನಮೋ ಗಣಾಧಿಪತಯೇ ಎಂಬುದು ಮಂತ್ರವು

೩೧-೩೨. ವಿಘ್ನರಾಜ, ಗಣಪತಿ, ಲಂಬತುಂಡ, ಗಜಾನನ, ದ್ವೈಮಾತುರ ಹೇರಂಬ, ಏಕದಂತ, ಭವಾತ್ಮಜ, ಈ ಹನ್ನೆರಡು ನಾಮಗಳನ್ನು ಬೆಳಗ್ಗೆ ಎದ್ದು ಓದಿದರೆ ಅವನಿಗೆ ವಿಘ್ನವುಂಟಾಗುವುದೇ ಇಲ್ಲ.

೩೩. ಮಹಾಪ್ರೇತಗಳೆಲ್ಲವೂ ಹೊರಟುಹೋಗುತ್ತವೆ. ರೋಗಗಳು ಬರುವುದಿಲ್ಲ. ಪಾಪಗಳೆಲ್ಲವೂ ಹೋಗಿ ಅಕ್ಷಯ ಸ್ವರ್ಗವು ಸಿಕ್ಕುತ್ತದೆ.

ಇಂತು ಶ್ರೀಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಗಣಪತಿಸ್ತೋತ್ರ ನಿರೂಪಣವೆಂಬ
ಅರವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ದ್ವಿಷಷ್ಟಿತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

ಪುನರನ್ಯತ್ಪ್ರವಕ್ಷ್ಯಾಮಿ ಸ್ತೋತ್ರಂ ಗಣಾಧಿಪಸ್ಯ ಚ ।
ಸರ್ವಸಿದ್ಧಿಕರಂ ಪೂತಂ ಸರ್ವಾಭೀಷ್ಟಫಲಪ್ರದಂ ॥ ೧ ॥

ಏಕದಂತಂ ಮಹಾಕಾಯಂ ತಪ್ತಕಾಂಚನಸನ್ನಿಭಂ ।
ಲಂಬೋದರಂ ವಿಶಾಲಾಕ್ಷಂ ವಂದೇಽಹಂ ಗಣನಾಯಕಂ ॥ ೨ ॥

ಮುಂಜಕೃಷ್ಣಾಜಿನಧರಂ ನಾಗಯಜ್ಞೋಪವೀತಿನಂ ।
ಬಾಲೇಂದುಕಲಿಕಾಮೌಲಿಂ ವಂದೇಽಹಂ ಗಣನಾಯಕಂ ॥ ೩ ॥

---

### ಅರವತ್ತೆರಡನೆಯ ಅಧ್ಯಾಯವು

೧. ವ್ಯಾಸನು ಹೇಳಿದನು- ಗಣಾಧಿಪನ ಮತ್ತೊಂದು ಸ್ತೋತ್ರವನ್ನು ಹೇಳುತ್ತೇನೆ. ಅದು ಪವಿತ್ರವೂ, ಸಿದ್ಧಿಕರವೂ ಆಗಿ ಇಷ್ಟಾರ್ಥವನ್ನು ಕೊಡತಕ್ಕದ್ದಾಗಿರುತ್ತದೆ.

೨. ಒಂದು ದಂತವುಳ್ಳ, ದೊಡ್ಡ ದೇಹವುಳ್ಳ, ಪುಟಕ್ಕೆ ಹಾಕಿದ ಬಂಗಾರದಂತಿರುವ, ಲಂಬೋದರನಾದ, ವಿಶಾಲವಾದ ಕಣ್ಣುಳ್ಳ, ಗಣಪತಿಯನ್ನು ನಮಸ್ಕರಿಸುತ್ತೇನೆ.

೩. ಮೌಂಜಿ, ಕೃಷ್ಣಾಜಿನ, ನಾಗಯಜ್ಞೋಪವೀತಗಳನ್ನು ಧರಿಸಿರುವ, ಬಾಲಚಂದ್ರನನ್ನು ತಲೆಯಲ್ಲಿ ಹೊಂದಿರುವ ಗಣಪತಿಯನ್ನು ನಮಸ್ಕರಿಸುತ್ತೇನೆ.

ಸರ್ವವಿಘ್ನಹರಂ ದೇವಂ ಸರ್ವವಿಘ್ನವಿವರ್ಜಿತಂ ।
ಮೂಷಕೋತ್ತಮಮಾರುಹ್ಯ ದೇವಾಸುರಮಹಾಹವೇ ॥ ೪ ॥

ಯೋದ್ಧುಕಾಮಂ ಮಹಾಬಾಹುಂ ವಂದೇಽಹಂ ಗಣನಾಯಕಂ ।
ಅಂಬಿಕಾಹೃದಯಾನಂದಂ ಮಾತೃಕಾಪರಿವೇಷ್ಟಿತಂ ॥ ೫ ॥

ಭಕ್ತಪ್ರಿಯಂ ಮದೋನ್ಮತ್ತಂ ವಂದೇಽಹಂ ಗಣನಾಯಕಂ ।
ಚಿತ್ರರತ್ನವಿಚಿತ್ರಾಂಗಂ ಚಿತ್ರಮಾಲ್ಯವಿಭೂಷಣಂ ॥ ೬ ॥

ಕಾಮರೂಪಧರಂ ದೇವಂ ವಂದೇಽಹಂ ಗಣನಾಯಕಂ ।
ಗಜವಕ್ತ್ರಂ ಸುರಶ್ರೇಷ್ಠಂ ಚಾರುಕರ್ಣವಿಭೂಷಿತಂ ॥ ೭ ॥

ಪಾಶಾಂಕುಶಧರಂ ದೇವಂ ವಂದೇಽಹಂ ಗಣನಾಯಕಂ ।
ಯಕ್ಷಕಿನ್ನರಗಂಧರ್ವೈಃ ಸಿದ್ಧವಿದ್ಯಾಧರೈಃ ಸದಾ ॥ ೮ ॥

ಸ್ತೂಯಮಾನಂ ಮಹಾದೇಹಂ ವಂದೇಽಹಂ ಗಣನಾಯಕಂ ।
ಗಣಾಷ್ಟಕಮಿದಂ ಪುಣ್ಯಂ ಭಕ್ತಿತೋ ಯಃ ಪಠೇನ್ನರಃ ॥ ೯ ॥

---

೪-೧೦. ಎಲ್ಲಾ ವಿಘ್ನಗಳನ್ನೂ ನಾಶಮಾಡುವ, ವಿಘ್ನಗಳು ತನಗೆ ಇಲ್ಲದೆ ಇರುವ, ಯುದ್ಧದಲ್ಲಿ ಇಲಿಯ ಮೇಲೆ ಕುಳಿತು ಯುದ್ಧಮಾಡುವ, ದೊಡ್ಡ ತೋಳುಗಳುಳ್ಳ ಗಣಪನನ್ನು ನಮಸ್ಕರಿಸುತ್ತೇನೆ. ಮಾತೃಗಳೆಂಬ ಗಣದಿಂದ ಕೂಡಿರುವ, ಭಕ್ತರಲ್ಲಿ ಪ್ರೀತಿಯುಳ್ಳ, ಮದಿಸಿರುವ ಗಣಪನನ್ನು ನಮಸ್ಕರಿಸುತ್ತೇನೆ. ನಾನಾಬಗೆಯಾದ ರತ್ನಗಳಿಂದ ಅಲಂಕೃತನಾದ, ಚಿತ್ರವಾದ ಮಾಲೆಯನ್ನು ಹಾಕಿಕೊಂಡಿರುವ, ಕಾಮರೂಪವನ್ನು ಹೊಂದುವ ವಿನಾಯಕನನ್ನು ನಮಸ್ಕರಿಸುತ್ತೇನೆ. ಆನೆಯ ಮುಖವುಳ್ಳ, ದೇವಶ್ರೇಷ್ಠನಾದ, ಚೆನ್ನಾಗಿರುವ ಕಿವಿಗಳುಳ್ಳ, ಪಾಶ ಅಂಕುಶಗಳನ್ನು ಧರಿಸಿರುವ ಗಣಪನನ್ನು ನಮಸ್ಕರಿಸುತ್ತೇನೆ. ಯಕ್ಷರು, ಕಿನ್ನರರು, ಗಂಧರ್ವರು, ಸಿದ್ಧರು, ವಿದ್ಯಾಧರರು, ಇವರಿಂದ ಯಾವಾಗಲೂ ಹೊಗಳಲ್ಪಡುತ್ತಿರುವ, ದೊಡ್ಡ ದೇಹವುಳ್ಳ ಗಣಪತಿಯನ್ನು ನಮಸ್ಕರಿಸುತ್ತೇನೆ. ಈ ಗಣಪತಿಯ ಅಷ್ಟಕವನ್ನು

ಸರ್ವಸಿದ್ಧಿಮವಾಪ್ನೋತಿ ರುದ್ರಲೋಕೇ ಮಹೀಯತೇ ।
ನ ನಿಸ್ಸ್ವತಾಂ ತಥಾಭ್ಯೇತಿ ಸಪ್ತಜನ್ಮಸು ಮಾನವಃ ॥ ೧೦ ॥

ಯ ಇದಂ ಶೃಣುಯಾನ್ನಿತ್ಯಂ ಮಹಾನ್ ರಾಜಾ ಭವೇನ್ನರಃ ।
ವಶ್ಯಂ ಕರೋತಿ ತ್ರೈಲೋಕ್ಯಂ ಪಠನಾಚ್ಛ್ರವಣಾದಪಿ ॥
ಸ್ತೋತ್ರಂ ಪರಂ ಮಹಾಪುಣ್ಯಂ ಗಣಪಸ್ಯ ಮಹಾತ್ಮನಃ ॥ ೧೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಗಣಪತಿಸ್ತೋತ್ರ ನಿರೂಪಣಂ ನಾಮ ದ್ವಿಷಷ್ಟಿತಮೋಽಧ್ಯಾಯಃ

---

ಭಕ್ತಿಯಿಂದ ಪಠಿಸಿದವನು ಎಲ್ಲಾ ಸಿದ್ಧಿಯನ್ನೂ ಹೊಂದಿ ರುದ್ರಲೋಕದಲ್ಲಿ ಸುಖಿಸುತ್ತಾನೆ. ಏಳು ಜನ್ಮಗಳವರೆಗೂ ಬಡವನಾಗುವುದೇ ಇಲ್ಲ.

೧೧. ಈ ಸ್ತೋತ್ರವನ್ನು ಕೇಳಿದವನು ದೊಡ್ಡರಾಜನಾಗುತ್ತಾನೆ. ಓದುವುದರಿಂದಲೂ ಕೇಳುವುದರಿಂದಲೂ ಮೂರು ಲೋಕವನ್ನೂ ವಶಮಾಡಿಕೊಳ್ಳುತ್ತಾನೆ. ಈ ಗಣಪತಿಯ ಸ್ತೋತ್ರವು ಬಹು ಪುಣ್ಯಪ್ರದವಾದುದು.

ಇಂತು ಶ್ರೀಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಗಣಪತಿಸ್ತೋತ್ರ ನಿರೂಪಣವೆಂಬ ಅರವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ತ್ರಿಷಷ್ಟಿತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

ನಾಂದೀಮುಖೇಷು ಸರ್ವೇಷು ಪೂಜಯೇದ್ಯೋ ಗಣಾಧಿಪಂ ।
ತಸ್ಯ ಸರ್ವೇ ಭವೇದ್ವಶ್ಯಃ ಪುಣ್ಯಂ ಭವತಿ ಚಾಕ್ಷಯಂ ॥ ೧ ॥

ಗಣಾನಾಂ ತ್ವೇತಿ ಮಂತ್ರೇಣ ಸರ್ವಯಜ್ಞಘಟೇಷು ಚ ।
ಸರ್ವಸಿದ್ಧಿಮವಾಪ್ನೋತಿ ಸ್ವರ್ಗಂ ಮೋಕ್ಷಂ ಲಭೇನ್ನರಃ ॥ ೨ ॥

ಮೃಣ್ಮಯೇ ಪ್ರತಿಮಾಯಾಂ ಚ ಚಿತ್ರೇ ವಾಥ ದೃಷನ್ಮಯೇ ।
ದ್ವಾರದಾರುಣಿ ಪಾತ್ರೇ ಚ ಹೇರಂಬಂ ಲೇಖಯೇದ್ಬುಧಃ ॥ ೩ ॥

---

### ಅರವತ್ತಮೂರನೆಯ ಅಧ್ಯಾಯವು

೧ ವ್ಯಾಸನು ಹೇಳಿದನು- ಎಲ್ಲಾ ನಾಂದೀಮುಖದಲ್ಲಿಯೂ ಗಣಪತಿಯನ್ನು ಪೂಜಿಸಿದರೆ ಅವನಿಗೆ ಎಲ್ಲರೂ ಸ್ವಾಧೀನವಾಗುತ್ತಾರೆ. ಬಹುವಾದ ಪುಣ್ಯವೂ ಬರುತ್ತದೆ.

೨. ಗಣಾನಾಂತ್ವಾ ಎಂಬ ಮಂತ್ರದಿಂದ ಕಲಶಗಳಲ್ಲಿ ವಿನಾಯಕನನ್ನು ಆವಾಹನೆ ಮಾಡಬೇಕು. ಹಾಗೆ ಮಾಡಿ ಪೂಜಿಸಿದರೆ ಸಿದ್ಧಿಯುಂಟಾಗಿ ಸ್ವರ್ಗಮೋಕ್ಷಗಳು ಸಿಕ್ಕುತ್ತವೆ.

೩-೪. ಮಣ್ಣಿನ ಬೊಂಬೆಯಲ್ಲಾಗಲಿ, ಚಿತ್ರದಲ್ಲಾಗಲಿ, ಕಲ್ಲಿನ ಬೊಂಬೆಯಲ್ಲಾಗಲಿ, ಗಣಪತಿಯನ್ನು ಆವಾಹನೆ ಮಾಡಬಹುದು. ಆ ಮಂಟಪದ ಬಾಗಿಲಿನ ಮರದಲ್ಲಿಯಾಗಲಿ, ಯಾವುದಾದರೂ ಪಾತ್ರೆಯಲ್ಲಾಗಲಿ ಚಿತ್ರವನ್ನು ಬರೆದು

**ಅನ್ಯಸ್ಮಿನ್ನಪಿ ದೇಶೇ ತು ಸಾತತ್ಯಾದ್ದೃಷ್ಟಿಗೋಚರೇ ।**
**ಸ್ಥಾಪಯಿತ್ವಾ ತು ಹೇರಂಬಂ ಶಕ್ತ್ಯಾ ಯಃ ಪೂಜಯೇದ್ಬುಧಃ ॥ ೪ ॥**

**ತಸ್ಯ ಕಾರ್ಯಾಣಿ ಸಿದ್ಧ್ಯಂತಿ ದಯಿತಾನಿ ಸಮಂತತಃ ।**
**ನ ವಿಘ್ನಂ ಜಾಯತೇ ಕಿಂಚಿತ್ತ್ರೈಲೋಕ್ಯಂ ವಶಮಾನಯೇತ್ ॥ ೫ ॥**

**ವಿದ್ಯಾರ್ಥೀ ಲಭತೇ ವಿದ್ಯಾಂ ವೇದಶಾಸ್ತ್ರಸಮುದ್ಭವಾಂ ।**
**ಅನ್ಯಾಂ ಚ ಶಿಲ್ಪವಿದ್ಯಾಂ ಚ ವಿಜಯಾಂ ಮೋಕ್ಷದಾಯಿನೀಂ ॥ ೬ ॥**

**ಧನಾರ್ಥೀ ವಿಪುಲಂ ವಿತ್ತಂ ಕನ್ಯಾಂ ಸಾಧ್ವೀಂ ಮನೋರಮಾಂ ।**
**ಐಶ್ವರ್ಯಂ ಧರ್ಮಸಾಧ್ಯಂ ಚ ತನಯಂ ಕುಲಮೋಕ್ಷದಂ ॥ ೭ ॥**

**ನ ರೋಗೈಃ ಪೀಡ್ಯತೇ ಕಶ್ಚಿನ್ನ ಗ್ರಹೈಃ ಪ್ರೇತಯೋನಿಭಿಃ ।**
**ಶೃಂಗಿಭಿರ್ನಾಪಿರಕ್ಷೋಭಿರ್ವಿದ್ಯುದ್ಭಿರ್ವಜ್ರತಸ್ಕರೈಃ ॥ ೮ ॥**

---

ಪೂಜಿಸಬಹುದು. ಇಲ್ಲದಿದ್ದರೆ ಇನ್ನು ಯಾವುದರಲ್ಲಿ ಬೇಕಾದರೂ ಆಗಬಹುದು. ಪೂಜೆ ಮಾಡತಕ್ಕ ಪ್ರಧಾನದೇವರ ಸಮೀಪದಲ್ಲಿ ಕಣ್ಣಿಗೆ ಕಾಣುತ್ತಿರುವಂತೆಯೇ ಆ ಗಣಪತಿಯನ್ನಿಟ್ಟು ಶಕ್ತಿಗನುಗುಣವಾಗಿ ಪೂಜಿಸಬೇಕು.

೫. ಅವನ ಕೆಲಸಗಳೆಲ್ಲವೂ ಸಿದ್ಧಿಹೊಂದುತ್ತವೆ. ಎಲ್ಲರೂ ಅವನಲ್ಲಿ ಪ್ರೀತಿಯುಳ್ಳವರಾಗುತ್ತಾರೆ. ವಿಘ್ನಗಳೆಂಬುದು ಉಂಟಾಗುವುದೇ ಇಲ್ಲ. ಮೂರು ಲೋಕವೂ ವಶವಾಗುತ್ತದೆ.

೬-೭. ವೇದಶಾಸ್ತ್ರಗಳಿಗೆ ಸಂಬಂಧಪಟ್ಟ ವಿದ್ಯೆಗಳನ್ನೂ, ಮತ್ತು ಇತರ ವಿದ್ಯೆಯನ್ನೂ, ಶಿಲ್ಪವಿದ್ಯೆಯನ್ನೂ, ಮೋಕ್ಷವನ್ನು ಕೊಡತಕ್ಕ ವಿದ್ಯೆಯನ್ನೂ ಹೊಂದುತ್ತಾನೆ. ಎಲ್ಲಾ ಕಡೆಯಲ್ಲಿಯೂ ವಿಜಯವನ್ನು ಹೊಂದುತ್ತಾನೆ ಧನವನ್ನು ಅಪೇಕ್ಷಿಸುವವನು ಬಹುವಾದ ಹಣವನ್ನೂ, ಕನ್ಯಾರ್ಥಿಯು ಯೋಗ್ಯಳೂ, ಸುಂದರಳೂ, ಆದ ಕನ್ಯೆಯನ್ನೂ, ಐಶ್ವರ್ಯವನ್ನು ಅಪೇಕ್ಷಿಸುವವನು ಧರ್ಮವನ್ನು ಮಾಡಲು ಯೋಗ್ಯವಾದ ಐಶ್ವರ್ಯವನ್ನೂ, ಪುತ್ರಾರ್ಥಿಯು ಕುಲಕ್ಕೇ ಮೋಕ್ಷವನ್ನು ಕೊಡುವ ಮಗನನ್ನೂ ಹೊಂದುತ್ತಾನೆ.

೮. ಅವನಿಗೆ ರೋಗಗಳು ಬರುವುದಿಲ್ಲ. ಗ್ರಹಗಳೂ, ಪಿಶಾಚಗಳೂ ತೊಂದರೆ ಪಡಿಸುವುದಿಲ್ಲ. ಕೊಂಬುಳ್ಳ ಪ್ರಾಣಿಗಳು, ರಾಕ್ಷಸರು ಬಾಧೆಕೊಡುವುದಿಲ್ಲ. ಬೆಂಕಿ, ಸಿಡಿಲು, ಕಳ್ಳರು ಬಾಧಿಸುವುದಿಲ್ಲ.

ನ ರಾಜಾ ಕುಪ್ಯತೇ ಗೇಹೇ ನ ಚ ಮಾರೀ ಪ್ರವರ್ತತೇ ।
ನ ದೌರ್ಭಿಕ್ಷ್ಯಂ ದುರ್ಬಲತ್ವಂ ಪೂಜಯಿತ್ವಾ ವಿನಾಯಕಂ ॥ ೯ ॥

ಅಭಿಪ್ರೇತಾರ್ಥಸಿದ್ಧ್ಯರ್ಥಂ ಪೂಜಿತೋ ಯಃ ಸುರೈರಪಿ ।
ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥ ೧೦ ॥

ಮಂತ್ರಶ್ಚಾಯಂ :- ಓಂ ನಮೋ ಗಣಪತಯೇ ॥

ನಾರಾಯಣಪ್ರಿಯೈಃ ಪುಷ್ಪೈರನ್ಯೈಶ್ಚಾಪಿ ಸುಗಂಧಿಭಿಃ ।
ಮೋದಕೈಃ ಫಲಮೂಲೈಶ್ಚ ದ್ರವ್ಯೈಃ ಕಾಲೋದ್ಭವೈಸ್ತಥಾ ॥ ೧೧ ॥

ದಧಿದುಗ್ಧೈಃ ಪ್ರಿಯೈರ್ವಾದ್ಯೈರ್ದೀಪಧೂಪೈಃ ಸುಗಂಧಿಭಿಃ ।
ಪೂಜಯೇದ್ಗಣಪಂ ಯಸ್ತು ಸರ್ವಸಿದ್ಧಿಮವಾಪ್ನುಯಾತ್ ॥ ೧೨ ॥

ವಿಶೇಷಾತ್ತಸ್ಯ ಲಿಂಗೇ ತು ಯೋ ದದಾತಿ ವಸು ಪ್ರಿಯಂ ।
ಪೂಜೋಪಕರಣಂ ವಸ್ತ್ರಂ ಸರ್ವಂ ಲಕ್ಷಗುಣಂ ಭವೇತ್ ॥ ೧೩ ॥

---

೯. ರಾಜನು ಕೋಪಗೊಳ್ಳುವುದಿಲ್ಲ ಮನೆಯಲ್ಲಿ ಮಾರಿಯೇ ಮೊದಲಾದ ಕ್ರೂರದೇವತೆಗಳು ಬರುವುದಿಲ್ಲ. ದುರ್ಭಿಕ್ಷವೂ, ದುರ್ಬಲತನವೂ, ಅವನಿಗೆ ಉಂಟಾಗುವುದೇ ಇಲ್ಲ.

೧೦. ಇಷ್ಟಾರ್ಥವನ್ನು ಹೊಂದುವುದಕ್ಕೋಸ್ಕರ ದೇವತೆಗಳು ಪೂಜಿಸಿದ ವಿಘ್ನಗಳನ್ನೆಲ್ಲಾ ನಾಶಮಾಡುವ ಗಣಾಧಿಪತಿಗೆ ನಮಸ್ಕಾರವು. ಅದಕ್ಕೆ ಇದು ಮಂತ್ರವು " ಓಂ ನಮೋ ಗಣಪತಯೇ " ಎಂದು.

೧೧-೧೨. ನಾರಾಯಣನಿಗೆ ಪ್ರೀತಿಯನ್ನುಂಟುಮಾಡುವ, ಹೂಗಳಿಂದಲೂ, ಮತ್ತೂ ಅನೇಕ ವಾಸನೆಯುಳ್ಳ ಹೂಗಳಿಂದಲೂ, ಕಡುಬುಗಳಿಂದಲೂ, ಗೆಡ್ಡೆಗೆಣಸುಗಳಿಂದಲೂ, ಆ ಕಾಲದಲ್ಲಿ ಸಿಕ್ಕುವ ಪದಾರ್ಥಗಳಿಂದಲೂ, ಹಾಲುಮೊಸರುಗಳಿಂದಲೂ ಚೆನ್ನಾಗಿರುವ ವಾದ್ಯಗಳಿಂದಲೂ, ವಾಸನೆಯುಳ್ಳ ಧೂಪದೀಪಗಳಿಂದಲೂ ಗಣಪತಿಯನ್ನು ಪೂಜಿಸುವವನು ಸರ್ವಸಿದ್ಧಿಯನ್ನೂ ಹೊಂದುತ್ತಾನೆ.

೧೩. ಆ ಗಣಪನ ಪ್ರತಿಮೆಗೋಸ್ಕರ, ಪೂಜಾಸಾಮಗ್ರಿಗಳನ್ನೂ ವಸ್ತ್ರಗಳನ್ನೂ ಹಣವನ್ನೂ ಕೊಡುವವನು ಲಕ್ಷದಷ್ಟು ಹೆಚ್ಚು ಫಲವನ್ನು ಹೊಂದುತ್ತಾನೆ.

ದೇಶೇ ಚ ಭಾರತೇ ವರ್ಷೇ ವನಿತಾಪೂರ್ವಸನ್ನಿಧೌ ।
ಲೌಹಿತ್ಯದಕ್ಷಿಣೇ ತೀರೇ ಲಿಂಗರೂಪೋ ವಿನಾಯಕಃ ॥ ೧೪ ॥

ಹರಗೌರೀಸಮಾದೇಶಾದ್ದೇವಾನಾಂ ಸಮ್ಮತೇನ ಚ ।
ಸ್ಥಿತೋ ಲೋಕಪ್ರಶಾಂತ್ಯರ್ಥಂ ಸರ್ವವಿಘ್ನವಿನಾಶನಾತ್ ॥ ೧೫ ॥

ಪೂಜಯಿತ್ವಾ ತು ತಂ ದೇವಂ ಶಕ್ತಿತೋ ದ್ರವ್ಯಸಂಚಯೈಃ ।
ವಿನಾಯಕತ್ವಮಾಪ್ನೋತಿ ವೇದಶಾಸ್ತ್ರಾರ್ಥಪಾರಗಃ ॥ ೧೬ ॥

ಸಕೃತ್ಪ್ರದಕ್ಷಿಣಂ ಕೃತ್ವಾ ದೃಷ್ಟ್ವಾ ಸ್ಪೃಷ್ಟ್ವಾ ತು ಮಾನವಃ ।
ಅಕ್ಷಯಂ ಲಭತೇ ಸ್ವರ್ಗಂ ಸದಾ ದೇವೈಃ ಪ್ರಪೂಜ್ಯತೇ ॥ ೧೭ ॥

ಸಂಸರ್ಗಿಣಾಂ ಚ ಮ್ಲೇಚ್ಛಾನಾಂ ಗತ್ಯರ್ಥಂ ಸುತಪಸ್ವಿನಾಂ ।
ಪುತ್ರಾರ್ಥಂ ಸರ್ವಲೋಕಾನಾಂ ತತ್ರ ಶಂಭುರ್ವಿನಾಯಕಃ ॥ ೧೮ ॥

---

೧೪. ಭಾರತ ದೇಶದಲ್ಲಿಯೂ, ಗಂಗೆಯ ಪೂರ್ವತೀರದಲ್ಲಿಯೂ, ಶೋಣಾ ನದಿಯ ದಕ್ಷಿಣದಲ್ಲಿಯೂ, ವಿನಾಯಕನು ಲಿಂಗರೂಪನಾಗಿರುತ್ತಾನೆ.

೧೫. ಪಾರ್ವತಿಪರಮೇಶ್ವರರ ಅಪ್ಪಣೆಯಂತೆಯೂ, ದೇವತೆಗಳ ಇಷ್ಟದಂತೆಯೂ, ಲೋಕ ಶಾಂತಿಗೋಸ್ಕರವಾಗಿ ಸರ್ವವಿಘ್ನಗಳನ್ನೂ ನಾಶಮಾಡುತ್ತ ವಿನಾಯಕನು ಇದ್ದುಕೊಂಡಿರುವನು.

೧೬. ಆ ವಿನಾಯಕನನ್ನು ಶಕ್ತ್ಯಾನುಸಾರವಾಗಿ ಹಣ ಮುಂತಾದುವುಗಳಿಂದ ಪೂಜಿಸಿದರೆ ವೇದಶಾಸ್ತ್ರಗಳನ್ನೂ, ತಿಳಿದುಕೊಂಡು ವಿನಾಯಕನ ಸಾರೂಪ್ಯವನ್ನು ಹೊಂದುತ್ತಾನೆ.

೧೭. ಮನುಷ್ಯನು ಒಂದುಬಾರಿ ಪ್ರದಕ್ಷಿಣೆಮಾಡಿ ದರ್ಶನಮಾಡಿ ಮುಟ್ಟಿದರೆ ಅಕ್ಷಯವಾದ ಸ್ವರ್ಗವನ್ನು ಹೊಂದುತ್ತಾನೆ. ದೇವತೆಗಳು ಅವನನ್ನು ಪೂಜಿಸುತ್ತಾರೆ.

೧೮. ಮ್ಲೇಚ್ಛರ ಸಂಸರ್ಗವನ್ನು ಹೊಂದಿದವರಿಗೂ ತಪಸ್ವಿಗಳಿಗೂ ಗತಿಯನ್ನು ಕೊಡುವುದಕ್ಕೂ, ಪುತ್ರರನ್ನು ಕೊಡುವುದಕ್ಕೂ ಅಲ್ಲಿ ವಿನಾಯಕನು ಲಿಂಗ ರೂಪವಾಗಿರುವನು.

ಕೃತ್ವಾಭಿಷೇಕಂ ಲೌಹಿತ್ಯೇ ಸ್ಪೃಶೇದ್ಯಸ್ತು ಗಣಾಧಿಪಂ ।
ಸಪ್ತಜನ್ಮಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥ ೧೯ ॥

ನ ವೈಧವ್ಯಂ ನ ಕಾರ್ಪಣ್ಯಂ ನ ಶೋಕಂ ನ ಚ ಮತ್ಸರಂ ।
ವಿನಾಯಕಂ ಸಮಾಸಾದ್ಯ ಜನ್ಮಜನ್ಮನಿ ಸಂಲಭೇತ್ ॥ ೨೦ ॥

ಪುನಃ ಸಿದ್ಧಿಃ ಪುನರ್ಭೋಗ್ಯಂ ಪುನಃ ಕೀರ್ತಿಃ ಪುನರ್ಬಲಂ ।
ಪೂಜಯಿತ್ವಾ ತು ಗಣಪಂ ನರಸ್ಯ ನಾತ್ರ ಸಂಶಯಃ ॥ ೨೧ ॥

ಅಸ್ಯ ಪೂಜಾಮಕೃತ್ವಾ ಚ ಸರ್ವಾಭೀಷ್ಟಂ ವಿನಶ್ಯತಿ ।
ತತ್ರ ದೇವಾಶ್ಚ ಸುಪ್ರೀತಾ ಬ್ರಹ್ಮವಿಷ್ಣುಹರಾದಯಃ ॥ ೨೨ ॥

ಮೋಹಾದ್ಭ್ರಾಂತ್ಯಾ ಚ ನ ಕೃತಂ ಹರಿಣಾಸ್ಯಾರ್ಚನಂ ಪುನಃ ।
ತತೋ ವಿಘ್ನಂ ಸಮುತ್ಪನ್ನಂ ದೇವರಾಜಸ್ಯ ಧೀಮತಃ ॥ ೨೩ ॥

---

೧೯. ಶೋಣಾನದಿಯಲ್ಲಿ ಸ್ನಾನಮಾಡಿ ಗಣಪತಿಯನ್ನು ಮುಟ್ಟಿದರೆ ಏಳು ಜನ್ಮಗಳಲ್ಲಿ ಮಾಡಿದ ಪಾಪವು ನಾಶವಾಗುತ್ತದೆ. ಸಂಶಯವಿಲ್ಲ.

೨೦. ಆ ವಿನಾಯಕನಿಗೆ ಪೂಜೆಮಾಡಿದರೆ ವಿಧವೆಯಾಗುವುದಿಲ್ಲ. ಲೋಭಿತನ ಬರುವುದಿಲ್ಲ. ಶೋಕ, ಮಾತ್ಸರ್ಯಗಳು ಉಂಟಾಗುವುದಿಲ್ಲ. ಆ ವಿನಾಯಕನನ್ನೇ ಹೊಂದಿ ಜನ್ಮಜನ್ಮಕ್ಕೂ ಅವನನ್ನು ಪೂಜಿಸುತ್ತಾರೆ.

೨೧. ಈ ಗಣೇಶನಿಗೆ ಪೂಜೆ ಮಾಡಿದರೆ ಸಿದ್ಧಿ, ಭೋಗ, ಕೀರ್ತಿ, ಬಲಗಳು ಮತ್ತೆ ಮತ್ತೆ ಜನ್ಮಜನ್ಮದಲ್ಲಿಯೂ ಉಂಟಾಗುತ್ತವೆ. ಸಂಶಯವಿಲ್ಲ.

೨೨. ಈತನಿಗೆ ಪೂಜೆ ಮಾಡದಿದ್ದರೆ ಇಷ್ಟಾರ್ಥಗಳೆಲ್ಲವೂ ನಾಶವಾಗುತ್ತವೆ. ಅವನಿಗೆ ಪೂಜೆ ಮಾಡಿದರೆ ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ರುದ್ರರು ಕೂಡ ಸಂತೋಷಗೊಳ್ಳುತ್ತಾರೆ.

೨೩. ಅಜ್ಞಾನದಿಂದಲೋ ಭ್ರಾಂತಿಯಿಂದಲೋ ಇಂದ್ರನು ವಿನಾಯಕನಿಗೆ ಪೂಜೆಯನ್ನು ಮಾಡಲಿಲ್ಲ. ಆದ್ದರಿಂದ ಅವನಿಗೆ ವಿಘ್ನವು ಉಂಟಾಯಿತು.

ಮಘೋನೋ ಗಣಪಸ್ಯಾಥ ಪೂಜಾವಿರಹಿತಸ್ಯ ಚ ।
ಅಥಾಸುರೈರ್ಮಹಾವೀರ್ಯೈರ್ಹಿರಣ್ಯಾಕ್ಷಮುಖೈ ರಣೇ ॥ ೨೪ ॥

ಮಘವಾ ತು ಜಿತೋ ವೀರ್ಯಾದ್ಧಿರಣ್ಯಾಕ್ಷೇಣ ವೈ ತದಾ ।
ತತಃ ಸುರಾಶ್ಚ ನಿರ್ವೀರ್ಯಾ ಯಾವದ್ವರ್ಷಶತಂ ಪುರಾ ॥ ೨೫ ॥

ದೇವಾಸುರಮಹಾಯುದ್ಧೇ ಸುರಾಣಾಂ ಚ ಪರಾಜಯಃ ।
ತತೋ ದೇವಾಧಿದೇವೇ ತು ಶಿವೇ ದೇವೈರ್ನಿವೇದಿತಂ ॥ ೨೬ ॥

॥ ದೇವಾ ಊಚುಃ ॥

ಭಗವನ್ನಸುರೈರ್ನೋ ಹಿ ಜಿತಂ ರಾಜ್ಯಂ ಗತಾ ಮಖಾಃ ॥ ೨೭ ॥

॥ ವ್ಯಾಸ ಉವಾಚ ॥

ಏತಸ್ಮಿನ್ನಂತರೇ ಶಂಭುರ್ದೇವಾನ್ವಚನಮಬ್ರವೀತ್ ॥ ೨೮ ॥

---

೨೪-೨೫. ಗಣಪತಿಯ ಪೂಜೆಯನ್ನು ಮಾಡದುದರಿಂದ ಇಂದ್ರನೊಡನೆ ಮಹಾಬಲಿಷ್ಠರಾದ ಹಿರಣ್ಯಾಕ್ಷಾದಿಗಳು ಯುದ್ಧಕ್ಕೆ ಬಂದು ಇಂದ್ರನನ್ನು ಸೋಲಿಸಿದರು. ಅನಂತರ ನೂರು ವರ್ಷಗಳವರೆಗೂ ದೇವತೆಗಳು ಸೋತು ಆಳುಗಳಾಗಿಯೇ ಇದ್ದರು.

೨೬. ಈ ರೀತಿಯಾಗಿ ಸುರಾಸುರರಿಗೆ ಯುದ್ಧ ನಡೆದು ದೇವತೆಗಳಿಗೆ ಅಪಜಯವಾಗಲು ಅದನ್ನು ಅವರೆಲ್ಲರೂ ಶ್ರೀ ಮಹಾಶಿವನಲ್ಲಿ ವಿಜ್ಞಾಪಿಸಿಕೊಂಡರು.

೨೭. ದೇವತೆಗಳು ಹೇಳಿದರು- ಸ್ವಾಮಿ ! ಅಸುರರು ನಮ್ಮನ್ನು ಜಯಿಸಿದರು. ರಾಜ್ಯವೂ ಹೋಯಿತು. ಯಜ್ಞಗಳೆಲ್ಲವೂ ನಾಶವಾದುವು.

೨೮ ವ್ಯಾಸನು ಹೇಳಿದನು- ಆಗ ಶಂಭುವು ದೇವತೆಗಳನ್ನು ಕುರಿತು ಇಂತೆಂದನು.

॥ ಶಂಭುರುವಾಚ ॥

ಹೇರಂಬಾಯ ವರೋ ದತ್ತ ಉಮಯಾ ಪ್ರೀತಯಾ ಮುದಾ ।
ಪೂಜಯಾ ವಃ ಪರಾ ಸಿದ್ಧಿರ್ದೇವಾದೀನಾಂ ಭವತ್ವಿತಿ ॥ ೨೯ ॥

ಅವಜಾನಾತಿ ಯೋ ಮೋಹಾತ್ಪುರುಷಸ್ತು ಮಹೋತ್ಸವೇ ।
ನ ಭವೇತ್ತಸ್ಯ ಸಿದ್ಧಿಶ್ಚ ರಣೇ ವಾಪಿ ಪರಾಜಯಃ ॥ ೩೦ ॥

ಮಹಾಮುಖೇ ತು ಯುಷ್ಮಾಭಿಃ ಪೂಜಾ ಗಣಪತೇಃ ಕೃತಾ ।
ಹೇಲಯಾ ನ ಕೃತಾ ಮೋಹಾತ್ತಸ್ಮಾತ್ಪ್ರಾಪ್ತಃ ಪರಾಜಯಃ ॥ ೩೧ ॥

ಶೀಘ್ರಂ ಗಚ್ಛತ ವೈ ಯೂಯಂ ಗಣಪಸ್ಯ ಮಹಾತ್ಮನಃ ।
ಪೂಜಾಂ ಕುರುತ ಧರ್ಮಜ್ಞಾ ಜಯಸ್ತೂರ್ಣಂ ಭವಿಷ್ಯತಿ ॥ ೩೨ ॥

॥ ವ್ಯಾಸ ಉವಾಚ ॥

ತತೋ ಹರಮುಖಾಚ್ಛ್ರುತ್ವಾ ವಚಃ ಕ್ಷೇಮಪರಂ ಹಿತಂ ।
ಪ್ರಹೃಷ್ಟಾ ವಿಬುಧಾಃ ಸರ್ವೇ ಗಣಪಸ್ಯ ಪುರಃ ಸ್ಥಿತಾಃ ॥ ೩೩ ॥

---

೨೯. ಶಂಭುವು ಹೇಳಿದನು- ಗಣಪತಿಗೆ ಸಂತೋಷದಿಂದ ನಿನ್ನನ್ನು ಪೂಜೆ ಮಾಡಿದರೆ ದೇವತೆಗಳಿಗೆ ಸಿದ್ಧಿಯುಂಟಾಗಲೆಂದು ವರವನ್ನು ಕೊಟ್ಟಿದ್ದಾಳೆ.

೩೦. ತನ್ನ ಏಳಿಗೆಯ ಕಾಲದಲ್ಲಿ ಯಾವನು ಅಜ್ಞಾನದಿಂದ ಈ ಗಣಪನನ್ನು ಗೌರವಿಸುವುದಿಲ್ಲವೋ ಅವನಿಗೆ ಸಿದ್ಧಿಯೂ ಉಂಟಾಗುವುದಿಲ್ಲ. ಮತ್ತು ಯುದ್ಧದಲ್ಲಿ ಅಪಜಯವು ಖಂಡಿತವು.

೩೧. ನೀವು ಯುದ್ಧ, ಯಾಗ, ಮುಂತಾದುವುಗಳಲ್ಲಿ ಗಣಪತಿಗೆ ಪೂಜೆಮಾಡಬೇಕೆಂದು ವಿಹಿತವಾಗಿರುವಲ್ಲಿ ಅಜ್ಞಾನದಿಂದಲೋ, ತಿರಸ್ಕಾರದಿಂದಲೋ ಆ ಪೂಜೆಯನ್ನು ಮಾಡಲಿಲ್ಲ. ಆದ್ದರಿಂದಲೇ ನಿಮಗೆ ಅಪಜಯವು ಪ್ರಾಪ್ತವಾಯಿತು.

೩೨. ನೀವು ಬೇಗ ಹೋಗಿ ಮಹಾತ್ಮನಾದ ಗಣಪನನ್ನು ಪೂಜಿಸಿರಿ. ಶೀಘ್ರವಾಗಿ ಜಯವನ್ನು ಪಡೆಯುತ್ತೀರಿ.

೩೩. ವ್ಯಾಸನು ಹೇಳಿದನು- ಇದನ್ನು ಶಿವನ ಬಾಯಿಯಿಂದ ಕೇಳಿದ ಮೇಲೆ ಇದು ಕ್ಷೇಮವೆಂದು ತಿಳಿದು ದೇವತೆಗಳು ಸಂತೋಷಗೊಂಡು ಗಣಪನಲ್ಲಿಗೆ ಹೋದರು.

॥ ದೇವಾ ಊಚುಃ ॥

ಗಣಾಧಿಪ ನಮಸ್ತುಭ್ಯಂ ಸರ್ವದೇವೈಕಪಾಲಕ ।
ಭುಕ್ತಿಮುಕ್ತಿಪ್ರದ ಪ್ರೀತ್ಯಾ ಹೇರಂಬ ತ್ವಾಂ ನತಾಃ ಸ್ಮಃ ॥ ೩೪ ॥

ಜಯದಂ ಸರ್ವಕಾರ್ಯೇಷು ಸಿದ್ಧಿದಂ ಸರ್ವಕರ್ಮಸು ।
ಮಹಾಮಾಯಂ ಮಹಾಕಾಯಂ ಹೇರಂಬಂ ತ್ವಾಂ ನತಾಃ ಸ್ಮಃ ॥ ೩೫ ॥

ಏಕದಂತಂ ಮಹಾಪ್ರಾಜ್ಞಂ ವಕ್ರತುಂಡಂ ವಿನಾಯಕಂ ।
ಮೂಷಿಕಾವಾಹನಂ ದೇವಂ ವಿಘ್ನನಾಶಂ ನತಾ ವಯಂ ॥ ೩೬ ॥

॥ ವ್ಯಾಸ ಉವಾಚ ॥

ಏತಾಃ ಶ್ರುತ್ವಾ ಗಿರಸ್ತೇಷಾಂ ತ್ರಿದಶಾನಾಂ ಮಹಾತ್ಮನಾಂ ।
ವಿಸ್ಮಿತೋ ಗಣಪೋ ದೇವಾನಿದಂ ವಚನಮಬ್ರವೀತ್ ॥ ೩೭ ॥

॥ ಗಣೇಶ ಉವಾಚ ॥

ಕೃತೋ ಮೇ ತರಸಾ ಸ್ತೋತ್ರಂ ಪೂಜಾಂ ಕುರುಥ ಸಾಂಪ್ರತಂ ।
ಕರಿಷ್ಯಾಮಿ ಹಿತಾರ್ಥಂ ವೈ ತೂರ್ಣಂ ಕಾಮಂ ಸಮುಚ್ಯತಾಂ ॥ ೩೮ ॥

---

೩೪. ದೇವತೆಗಳು ಹೇಳಿದರು- ಎಲ್ಲಾ ದೇವತೆಗಳನ್ನೂ ಕಾಪಾಡುವ ಗಣಾಧಿಪತಿಯೇ ! ನಿನಗೆ ನಮಸ್ಕಾರವು. ಪ್ರೀತಿಯಿಂದ ಭುಕ್ತಿ (ಆಹಾರ) ಮೋಕ್ಷಗಳನ್ನು ಕೊಡತಕ್ಕವನೇ ! ನಿನಗೆ ನಮಸ್ಕಾರವು.

೩೫. ಎಲ್ಲಾ ಕೆಲಸಗಳಲ್ಲಿಯೂ ಜಯವನ್ನು ಕೊಡುವ, ಎಲ್ಲಾ ಕರ್ಮದ ಸಿದ್ಧಿಯನ್ನು ಕೊಡುವ, ದೊಡ್ಡ ದೇಹವುಳ್ಳ ಮಾಯಾವಿಯಾದ ನಿನ್ನನ್ನು ನಮಸ್ಕರಿಸುತ್ತೇನೆ.

೩೬- ಒಂದು ದಂತವುಳ್ಳ, ಡೊಂಕಾದ ಮುಖವುಳ್ಳ, ಇಲಿಯೇ ವಾಹನವಾಗಿ ಉಳ್ಳ, ವಿಘ್ನನಾಶಕನಾದ ನಿನಗೆ ನಮಸ್ಕಾರವು.

೩೭. ವ್ಯಾಸನು ಹೇಳಿದನು- ದೇವತೆಗಳ ಈ ಮಾತನ್ನು ಕೇಳಿ ಗಣೇಶನು ಆಶ್ಚರ್ಯಪಟ್ಟು ದೇವತೆಗಳನ್ನು ಕುರಿತು ಇಂತೆಂದನು.

೩೮. ಗಣೇಶನು ಹೇಳಿದನು- ಇದೇಕೆ ಅಕಸ್ಮತ್ತಾಗಿ ನನ್ನನ್ನು ಸ್ತುತಿಸುವಿರಿ? ನನಗೆ ಪೂಜೆಯನ್ನು ಮಾಡಿ. ನಿಮ್ಮ ಇಷ್ಟವನ್ನು ಬೇಗ ನೆರವೇರಿಸುತ್ತೇನೆ. ಅದನ್ನು ಹೇಳಿರಿ.

॥ ವ್ಯಾಸ ಉವಾಚ ॥

ಏತಸ್ಮಿನ್ನಂತರೇ ಸೂರಿಃ ಸುರಾಣಾಂ ಯಾಚಕಃ ಸುಧೀಃ ।
ಉವಾಚ ವಚನಂ ಸ್ಮೇರಂ ಬೃಹಸ್ಪತಿರ್ವಿನಾಯಕಂ ॥ ೩೯ ॥

॥ ಬೃಹಸ್ಪತಿರುವಾಚ ॥

ದೋಷಂ ಮಹರ್ಷಿದೇವಾನಾಮಿಂದ್ರಸ್ಯ ಚ ವಿನಾಯಕಂ ।
ಯತ್ತೇ ಪುರಾರ್ಚನಂ ಯಜ್ಞೇ ನ ಕೃತಂ ತತ್‌ಕ್ಷಮಸ್ವ ನಃ ॥ ೪೦ ॥

॥ ವ್ಯಾಸ ಉವಾಚ ॥

ಸುರಾಚಾರ್ಯಗಿರಃ ಶ್ರುತ್ವಾ ಗಣಪೋ ವಾಕ್ಯಮಬ್ರವೀತ್ ॥ ೪೧ ॥

॥ ಗಣೇಶ ಉವಾಚ ॥

ಯುಷ್ಮಾಭಿರ್ವ್ರಿಯತಾಂ ದೇವಾ ವರೋ ಮತ್ತೋ ಹಿ ವಾಂಛಿತಃ ॥ ೪೨ ॥

॥ ವ್ಯಾಸ ಉವಾಚ ॥

ತತಃ ಶಕ್ರಾದಯಃ ಸರ್ವೇ ಬೃಹಸ್ಪತಿಪುರೋಗಮಾಃ ।
ಊಚುರ್ಗಣಪತಿಂ ದೇವಾ ಜಯೋಽಸ್ಮಾಕಂ ಭವತ್ವಿತಿ ॥
ದೇವಾನಾಂ ವಚನಂ ಶ್ರುತ್ವಾ ಗಣೇಶೋ ವಾಕ್ಯಮಬ್ರವೀತ್ ॥ ೪೩ ॥

---

೩೯. ವ್ಯಾಸನು ಹೇಳಿದನು- ಆಗ ಬುದ್ಧಿವಂತನಾದ, ದೇವತೆಗಳ ಪುರೋಹಿತನಾದ ಬೃಹಸ್ಪತಿಯು ವಿನಾಯಕನನ್ನು ಕುರಿತು ಇಂತೆಂದನು.

೪೦ ಬೃಹಸ್ಪತಿಯು ಹೇಳಿದನು- ಎಲೈ ವಿನಾಯಕನೇ ! ಮಹರ್ಷಿಗಳು ಮತ್ತು ಇಂದ್ರನು ಹಿಂದೆ ಯಜ್ಞದಲ್ಲಿ ನಿನ್ನನ್ನು ಪೂಜೆಮಾಡದ ತಪ್ಪನ್ನು ಕ್ಷಮಿಸು.

೪೧. ವ್ಯಾಸನು ಹೇಳಿದನು- ಬೃಹಸ್ಪತಿಯ ಮಾತನ್ನು ಕೇಳಿ ವಿನಾಯಕನು ಇಂತೆಂದನು.

೪೨. ಗಣೇಶನು ಹೇಳಿದನು- ಎಲೈ ದೇವತೆಗಳಿರಾ ! ನನ್ನಿಂದ ಬೇಕಾದ ವರವನ್ನು ಕೇಳಿಕೊಳ್ಳಿರಿ.

೪೩. ವ್ಯಾಸನು ಹೇಳಿದನು- ಆಗ ಇಂದ್ರನೇ ಮುಂತಾದ ದೇವತೆಗಳೂ ಬೃಹಸ್ಪತಿಯೂ ನಮಗೆ ಜಯವಾಗಬೇಕೆಂದು ಕೇಳಿಕೊಳ್ಳಲು, ಅದನ್ನು ಕೇಳಿ ಗಣೇಶನು ಇಂತೆಂದನು.

॥ ಗಣೇಶ ಉವಾಚ ॥

ಬಾಢಮೇವ ಸುರಶ್ರೇಷ್ಠಾ ಜಯೋ ವೋ ಭವತು ದ್ರುತಂ ॥ ೪೪ ॥

॥ ವ್ಯಾಸ ಉವಾಚ ॥

ತತೋ ದೇವಗಣಾಃ ಸರ್ವೇ ಹರ್ಷನಿರ್ಭರಮಾನಸಾಃ ।
ಗಣೇಶಂ ಪೂಜಯಾಮಾಸುರ್ಗಂಧಸಾರೈಸ್ತು ಮಂಡನೈಃ ॥ ೪೫ ॥

ದಿವ್ಯಧೂಪೈಃ ಸುವಸ್ತ್ರೈಶ್ಚ ಕುಸುಮೈರ್ನಂದನೋದ್ಭವೈಃ ।
ಪಾರಿಜಾತಾದಿಭಿಃ ಪುಷ್ಪೈರನ್ಯೈರ್ದೇವಮನೋಹರೈಃ ॥
ಪೂಜಿತೋ ಗಣಪೋ ದೇವೈರುವಾಚ ಸುರಸತ್ತಮಾನ್ ॥ ೪೬ ॥

॥ ಗಣೇಶ ಉವಾಚ ॥

ಗಚ್ಛಧ್ವಂ ವಿಬುಧಾ ದೇವಂ ವಿಷ್ಣುಮದ್ಭುತ ಸಾಹಸಂ ।
ಸ ವಿಧಾಸ್ಯತಿ ವಃ ಕಾಮಂ ವಾಂಛಿತಂ ಚ ತತಃ ಸುರಾಃ ॥ ೪೭ ॥

॥ ವ್ಯಾಸ ಉವಾಚ ॥

ಸ್ವಂ ಸ್ವಂ ರಥಂ ಸಮಾರುಹ್ಯ ಗತಾಸ್ತೇ ಹರಿಮವ್ಯಯಂ ।
ಪೀತಾಂಬರಂ ನಮಸ್ಕೃತ್ಯ ಊಚುರ್ದೇವಗಣಾ ಮುದಾ ॥ ೪೮ ॥

---

೪೪. ಗಣೇಶನು ಹೇಳಿದನು- ಎಲೈ ದೇವತೆಗಳಿರಾ ! ಹಾಗೆಯೇ ಆಗಲಿ. ನಿಮಗೆ ಖಂಡಿತವಾಗಿ ಜಯವಾಗಲಿ.

೪೫-೪೬. ವ್ಯಾಸನು ಹೇಳಿದನು- ಆಗ ದೇವತೆಗಳೆಲ್ಲರೂ ಸಂತೋಷದಿಂದ ಗಂಧ, ಧೂಪ, ದೀಪ, ವಸ್ತ್ರ, ಹೂವು, ನೈವೇದ್ಯ ಎಲ್ಲದರಿಂದಲೂ ಆ ಗಣನಾಥನನ್ನು ಪೂಜಿಸಿದರು. ಆ ಪೂಜೆಯಿಂದ ಸಂತೋಷಗೊಂಡ ವಿನಾಯಕನು ದೇವತೆಗಳನ್ನು ಕುರಿತು ಇಂತೆಂದನು.

೪೭. ಗಣೇಶನು ಹೇಳಿದನು- ಎಲೈ ದೇವತೆಗಳಿರಾ ! ನೀವೆಲ್ಲರೂ ಸಾಹಸಿಕನಾದ ವಿಷ್ಣುವಿನ ಬಳಿಗೆ ಹೋಗಿರಿ. ಅವನು ನಿಮಗೆ ಬೇಕಾದುದನ್ನು ಮಾಡಿಕೊಡುವನು.

೪೮. ವ್ಯಾಸನು ಹೇಳಿದನು- ಆಗ ದೇವತೆಗಳು ತಮ್ಮ ತಮ್ಮ ರಥದಲ್ಲಿ ಕುಳಿತುಕೊಂಡು ಪೀತಾಂಬರಧಾರಿಯಾದ ಹರಿಯನ್ನು ಹೊಂದಿ ನಮಸ್ಕರಿಸಿ ಇಂತೆಂದರು.

॥ ದೇವಾ ಊಚುಃ ॥

ಹರಾತ್ಮಜಂ ತು ಸಂಪ್ರಾಪ್ಯ ಪೂಜಯಿತ್ವಾ ಗಣಾಧಿಪಂ ।
ಆಗತಾಸ್ತ್ವತ್ಸಕಾಶಂ ವೈ ಮಹಾತ್ಮನ್ನದ್ಯ ಕೇಶವ ॥ ೪೯ ॥

॥ ವ್ಯಾಸ ಉವಾಚ ॥

ಏತಚ್ಛ್ರುತ್ವಾ ತು ದೇವಾನಾಂ ವಚನಂ ಹರಿರವ್ಯಯಃ ।
ಯಾಥಾತಥ್ಯಮುವಾಚೇದಂ ಹನಿಷ್ಯೇ ದೈತ್ಯಪುಂಗವಾನ್ ॥ ೫೦ ॥

ಶ್ರುತ್ವಾ ವಾಗಮೃತಂ ದೇವಾ ನಾರಾಯಣಮುಖಾಚ್ಚ್ಯುತಂ ।
ಹೃಷ್ಟಾಶ್ಚ ಸಮುದಾವಿಷ್ಟಾ ದ್ರವ್ಯೈರಿಷ್ಟೈಃ ಸಮರ್ಚಯನ್ ॥
ಪುನರ್ವಿಷ್ಣುರುವಾಚೇದಂ ದೇವಾನಿಂದ್ರಪುರೋಗಮಾನ್ ॥ ೫೧ ॥

॥ ವಿಷ್ಣುರುವಾಚ ॥

ಸ್ವಂ ಸ್ವಂ ಬಲಂ ಸಮಾಹೃತ್ಯ ಸಜ್ಜೀ ಭವತ ನಿರ್ಜರಾಃ ।
ಹನಿಷ್ಯೇ ತಾನ್ದುರಾಚಾರಾನ್ಬಲಂ ಚೈವ ಸಮಂತತಃ ॥
ಅಸ್ತ್ರವೃಂದಂ ಸುಸಂಗೃಹ್ಯ ಯೂಯಂ ತಿಷ್ಠತ ನಿರ್ಭಯಾಃ ॥ ೫೨ ॥

---

೪೯. ದೇವತೆಗಳು ಹೇಳಿದರು- ಎಲೈ ವಿಷ್ಣುವೇ ! ಹರನ ಮಗನಾದ ಗಣಾಧಿಪನ ಬಳಿಗೆ ಹೋಗಿ ಅವನನ್ನು ಪೂಜಿಸಿದೆವು ಅವನ ಮಾತಿನಂತೆ ನಿನ್ನ ಬಳಿಗೆ ಬಂದಿರುವೆವು.

೫೦. ವ್ಯಾಸನು ಹೇಳಿದನು– ಹರಿಯು ದೇವತೆಗಳ ಈ ಮಾತನ್ನು ಕೇಳಿ ನಾನು ದೈತ್ಯರನ್ನು ಕೊಲ್ಲುತ್ತೇನೆಂದು ಸತ್ಯವಾದ ಮಾತನ್ನು ಹೇಳಿದನು.

೫೧. ನಾರಾಯಣನು ಹೇಳಿದ ಈ ಮಾತನ್ನು ಕೇಳಿ ದೇವತೆಗಳು ಸಂತೋಷದಿಂದ ಆತನನ್ನು ಪೂಜಿಸಿದರು ಆಗ ವಿಷ್ಣುವು ಇಂದ್ರಾದಿಗಳನ್ನು ಕುರಿತು ಇಂತೆಂದನು.

೫೨. ವಿಷ್ಣುವು ಹೇಳಿದನು- ನೀವುಗಳೆಲ್ಲರೂ ನಿಮ್ಮ ನಿಮ್ಮ ಸೈನ್ಯಗಳನ್ನು ಸೇರಿಸಿಕೊಂಡು ಸಿದ್ಧರಾಗಿರಿ. ಆ ದೈತ್ಯರೆಲ್ಲರನ್ನೂ ನಾನು ಕೊಲ್ಲುತ್ತೇನೆ. ಅಸ್ತ್ರಗಳೆಲ್ಲವನ್ನೂ ಸೇರಿಸಿಕೊಂಡು ನೀವು ಧೈರ್ಯವಾಗಿರಿ.

॥ ವ್ಯಾಸ ಉವಾಚ ॥

ಮಾಧವಸ್ಯ ವಚಃ ಶ್ರುತ್ವಾ ಪ್ರಗತಃ ಸುರಪುಂಗವಾಃ ।
ವಿಮಾನಾನಿ ಸಮಾರುಹ್ಯ ಸರ್ವೇ ದಿವ್ಯಾಸ್ತ್ರಧಾರಿಣಃ ॥ ೫೩ ॥

ದೇವಾನಾಂ ಹರ್ಷವಾಕ್ಯಾನಿ ದೈತ್ಯಚಾರಾಃ ಶ್ರುತಾನಿ ವೈ ।
ರಾಜಾನಂ ಕಥಯಾಮಾಸುರ್ಹಿರಣ್ಯಾಕ್ಷಂ ಮಹಾಬಲಂ ॥ ೫೪ ॥

ಶ್ರುತ್ವಾ ದೈತ್ಯಪತಿಸ್ತತ್ರ ಚುಕೋಪಾತಿಮಹಾಬಲಃ ।
ಸಚಿವಾಂಸ್ತು ಸಮಾಹೂಯ ಕ್ರುದ್ಧೋ ವಚನಮಬ್ರವೀತ್ ॥ ೫೫ ॥

॥ ದೈತ್ಯರಾಜ ಉವಾಚ ॥

ಅಧುನೇಂದ್ರಾದಿದೇವಾಶ್ಚ ನಿಖಿಲಾಃ ಕ್ರೂರಬುದ್ಧಯಃ ।
ಮಾಧವಂ ಚ ಪರೀಪ್ಸಂತಃ ಶಂಭೌ ಸರ್ವಂ ನ್ಯವೇದಯನ್ ॥ ೫೬ ॥

ಕಥಂ ಜಯಂ ಚ ಲಪ್ಸ್ಯಾಮೋ ದೈತ್ಯವೃಂದೇಽತಿದಾರುಣೇ ।
ತ್ರಿಪುರಾರಿರುವಾಚೇದಂ ಗಣೇಶಂ ಯಜತಾಮರಾಃ ॥ ೫೭ ॥

---

೫೩. ವ್ಯಾಸನು ಹೇಳಿದನು- ವಿಷ್ಣುವಿನ ಈ ಮಾತನ್ನು ಕೇಳಿ ಅಸ್ತ್ರಗಳನ್ನು ಧರಿಸಿ ದೇವತೆಗಳು ವಿಮಾನಗಳ ಮೇಲೆ ಕುಳಿತು ಯುದ್ಧಕ್ಕೆ ಹೊರಟರು.

೫೪. ದೇವತೆಗಳು ಹರ್ಷದಿಂದ ಒಂದು ಆಡುತ್ತಿರುವ ಮಾತನ್ನು ಕೇಳಿ ಹಿರಣ್ಯಾಕ್ಷನ ಚಾರರು ಬಂದು ಎಲ್ಲವನ್ನೂ ಹೇಳಿದರು.

೫೫. ಇದನ್ನು ಕೇಳಿ ಆ ಹಿರಣ್ಯಾಕ್ಷನು ಕೋಪಗೊಂಡನು. ಮಂತ್ರಿಗಳನ್ನು ಕರೆದು ಕೋಪದಿಂದ ಇಂತೆಂದನು.

೫೬. ದೈತ್ಯರಾಜನು ಹೇಳಿದನು- ಇಂದ್ರಾದಿ ದೇವತೆಗಳು ಈಗ ಕ್ರೂರಬುದ್ಧಿಯುಳ್ಳವರಾಗಿದ್ದಾರೆ. ವಿಷ್ಣುವನ್ನು ಮುಂದುಮಾಡಿಕೊಂಡು ಶಂಭುವಿನಲ್ಲಿ ಎಲ್ಲವನ್ನೂ ಹೇಳಿಕೊಂಡರು.

೫೭. ಕ್ರೂರರಾದ ದೈತ್ಯರಲ್ಲಿ ಹೇಗೆ ಜಯವನ್ನು ಹೊಂದಿಯೇವು ? ಎಂದು ಕೇಳಲು, ಆ ಈಶ್ವರನು ನೀವು ಗಣೇಶನನ್ನು ಪೂಜಿಸಿರಿ.

ಪೂಜಯಿತ್ವಾ ತು ತಂ ದೇವಂ ಜೇಷ್ಯಥಾಸುರದಾನವಾರ್ ।
ತತೋ ದೇವಗಣೈರ್ಹೃಷ್ಟೈಃ ಪೂಜಿತೋ ಗಣನಾಯಕಃ　　॥ ೫೮ ॥

ಗಣಾಧಿಪೇನ ತುಷ್ಟೇನ ಕ್ರೂರೋ ದತ್ತೋ ವರೋ ಮಹಾರ್ ।
ಜೇಷ್ಯಥಾದ್ಯಾಸುರಾನ್ಸರ್ವಾಂಸ್ತತ್ರ ದೇವಾ ಮುದಾನ್ವಿತಾಃ　　॥ ೫೯ ॥

ಹರಿಂ ನಿವೇದಯಾಮಾಸುರಸ್ಮದ್ವಧಪರೀಪ್ಸವಃ ।
ಹರೇರ್ಬಾಢಮುಪಶ್ರುತ್ಯ ರಥಿನಃ ಶಸ್ತ್ರಪಾಣಯಃ　　॥ ೬೦ ॥

ಯುದ್ಧಾರ್ಥಮಭಿತಿಷ್ಠಂತಿ ನಿರ್ಜರಾಸ್ತ್ವಭಯಾ ಮಯಿ ।
ಯಸ್ಯ ಯಾ ಶಕ್ತಿರಸ್ತೀತಿ ದೇವಾಜ್ಞೇತುಂ ವದತ್ವಲಂ　　॥ ೬೧ ॥

॥ ವ್ಯಾಸ ಉವಾಚ ॥

ತತೋ ರಾಜ್ಞೋ ವಚಃ ಶ್ರುತ್ವಾ ಮಧುರ್ವಚನಮಬ್ರವೀತ್　　॥ ೬೨ ॥

---

೫೮. ಆ ಗಣಪನನ್ನು ಪೂಜಿಸಿದರೆ ದಾನವರನ್ನು ಜಯಿಸುತ್ತೀರಿ ಎಂದನು. ಅನಂತರ ದೇವತೆಗಳು ಆ ಗಣಪನನ್ನು ಪೂಜಿಸಿದರು. ಆ ಗಣಪನು ಸಂತೋಷ ಗೊಂಡನು.

೫೯. ಆಗ ಗಣೇಶನು ಸಂತೋಷಗೊಂಡು ಈಗ ನೀವು ಸಂತೋಷದಿಂದ ದಾನವರನ್ನು ಜಯಿಸುತ್ತೀರಿ. ಎಂದು ಉಗ್ರವಾದ ವರವನ್ನು ಕೊಟ್ಟನು.

೬೦-೬೧. ಅನಂತರ ನಮ್ಮನ್ನು ಕೊಲ್ಲಬೇಕೆಂದು ಹರಿಯನ್ನು ಕೇಳಲು ಅವನು ಆಗಲಿ ಎಂದನು. ಅನಂತರ ದೇವತೆಗಳು ಶಸ್ತ್ರಗಳನ್ನು ಹಿಡಿದು ಭಯವಿಲ್ಲದೆ ಸಿದ್ಧರಾಗಿ ಬಂದಿದ್ದಾರೆ. ಈಗ ನೀವು ಯಾರಿಗೆ ಎಷ್ಟು ಬಲವಿದೆ. ಎಂಬುದನ್ನು ತಿಳಿಸಿ.

೬೨. ವ್ಯಾಸನು ಹೇಳಿದನು- ಆಗ ಹಿರಣ್ಯಾಕ್ಷನ ಮಾತನ್ನು ಕೇಳಿ ಮಧುವು ಇಂತೆಂದನು.

॥ ಮಧುರುವಾಚ ॥

ಜೇಷ್ಯಾಮಿ ಚ ಹರಿಂ ರಾಜನ್ ಸಹಾಯಂ ಮೇ ನಿಯೋಜಯ ।
ಜಿತೇ ನಾರಾಯಣೇ ದೇವಾಃ ಸಭಯಾಸ್ತ್ರಿದಶಾ ಧ್ರುವಂ ॥
ತಸ್ಮಾನ್ನಾರಾಯಣೋಽಸ್ಮಾಕಂ ಭಾಗಃ ಸರ್ವಪುರಂಜಯಃ ॥ ೬೩ ॥

॥ ವ್ಯಾಸ ಉವಾಚ ॥

ತತೋ ಧುಂಧುಶ್ಚ ಸುಂದಶ್ಚ ಕಾಲಕೇಯೋ ಮಹಾಬಲಃ ।
ಸಹಾಯಾಶ್ಚ ಮಧೋಸ್ತಸ್ಯ ಜೇಷ್ಯಾಮೋ ಮಾಧವಂ ನೃಪ ॥ ೬೪ ॥

ಸರ್ವದೈತ್ಯಬಲೇ ಮುಖ್ಯಾಶ್ಚತ್ವಾರೋ ದೃಢವಿಕ್ರಮಾಃ ।
ಕಾಲಮೃತ್ಯುಸಮಾ ವೀರಾಃ ಸರ್ವಾಸ್ತ್ರವಿಧಿಪಾರಗಾಃ ॥ ೬೫ ॥

ಬಲಸ್ತತ್ರಾಬ್ರವೀದ್ವಾಕ್ಯಂ ಯಸ್ಮಿಂಜಯ ಉಪಸ್ಥಿತಃ ।
ತಂ ಚ ಜೇಷ್ಯಾಮಿ ಜಿಷ್ಣುಂ ಚ ಪ್ರತಿಜ್ಞಾ ಮೇ ದೃಢಾ ನೃಪ ॥ ೬೬ ॥

---

೬೩. ಮಧುವು ಹೇಳಿದನು- ಎಲೈ ದೊರೆಯೇ ! ನನಗೆ ಸಹಾಯಕರನ್ನು ಕೊಡು. ನಾನು ಹರಿಯನ್ನು ಜಯಿಸುತ್ತೇನೆ. ನಾರಾಯಣನು ಸೋತರೆ ದೇವತೆಗಳು ಭಯಗೊಂಡು ಓಡುತ್ತಾರೆ. ಆದ್ದರಿಂದ ನಾರಾಯಣನನ್ನು ಜಯಿಸುವ ಭಾರವು ನನ್ನದಾಗಿರಲಿ.

೬೪. ವ್ಯಾಸನು ಹೇಳಿದನು- ಅನಂತರ ಧುಂಧು, ಸುಂದ, ಕಾಲಕೇಯ, ಮಹಾಬಲರು ಮಧುವಿಗೆ ಸಹಾಯಕರಾಗಿ ಮಾಧವನನ್ನು ಜಯಿಸಲು ನಿಂತರು.

೬೫. ಈ ನಾಲ್ಕು ಜನರೂ ಆ ದೈತ್ಯರ ಸೈನ್ಯದಲ್ಲಿ ಮುಖ್ಯರು. ಹೆಚ್ಚು ಪರಾಕ್ರಮಿಗಳು. ಕಾಲಮೃತ್ಯುವಿಗೆ ಸಮರಾದವರು, ಶಸ್ತ್ರಾಸ್ತ್ರಗಳನ್ನು ಚೆನ್ನಾಗಿ ಬಲ್ಲವರು.

೬೬. ಬಲನೆಂಬುವನು, ಯಾವ ವಿಷ್ಣುವಿನಲ್ಲಿ ಜಯವೆಂಬುದು ಸ್ಥಿರವೋ, ಅವನನ್ನು ನಾನು ಜಯಿಸುತ್ತೇನೆ. ಇದೇ ನನ್ನ ಪ್ರತಿಜ್ಞೆಯು ಎಂದನು.

ನಮುಚಿಶ್ಚ ಮುಚಿಶ್ಚೈವ ಭ್ರಾತರೌ ಬಲದರ್ಪಿತೌ ।
ಊಚತುಸ್ತು ನೃಪಂ ವಾಚಂ ಜೇಷ್ಯಾವೋ ವೈ ಬಲಾಧ್ಬಲೌ ॥ ೬೭ ॥

ಜಂಭಶ್ಚೈವಾಬ್ರವೀದ್ವಾಕ್ಯಮಿಂದ್ರಮಿಂದ್ರಪುರೋಗಮಾನ್ ।
ಜೇಷ್ಯಾಮಿ ನಾತ್ರ ಸಂದೇಹೋ ದೈತ್ಯಾ ಭವಂತಿ ವಿಜ್ವರಾಃ ॥ ೬೮ ॥

ತ್ರಿಪುರಶ್ಚಾಬ್ರವೀದ್ವಾಕ್ಯಂ ಜೇಷ್ಯಾಮಿ ಚ ವಿನಾಯಕಂ ।
ತಾವದೂಚೇಽಥ ಸೇನಾನಿರ್ಮಯೋ ದೇವಾಂತಕೋ ಬಲೀ ॥ ೬೯ ॥

ಕುಬೇರಂ ಪ್ರತಿ ರಕ್ಷೋಭಿಃ ಸರ್ವಾಂಶ್ಚೈವ ಹಿರಣ್ಯಕಾನ್ ।
ಏತಸ್ಮಿನ್ನಂತರೇ ತತ್ರ ನಾರದೋ ಮುನಿಸತ್ತಮಃ ॥ ೭೦ ॥

ಗತ್ವೋವಾಚ ಹಿರಣ್ಯಾಕ್ಷಂ ಜಿಷ್ಣುದೂತೋಽಹಮಾಗತಃ ।
ರಾಜ್ಯಂ ತ್ಯಜಸ್ವ ವಾಚಾ ನಃ ಪ್ರಾಣೇಷು ಯದಿ ತೇ ಹಿತಂ ॥ ೭೧ ॥

ನ ಚೇದ್ಯುಧ್ಯಸ್ವ ಮಾಮುಷ್ಯ ನ ವಾ ಗಚ್ಛ ರಸಾತಲಂ ।
ತತಃ ಕೋಪಾದುವಾಚೇದಂ ನಾರದಂ ಮುನಿಸತ್ತಮಂ ॥ ೭೨ ॥

---

೬೭. ನಮುಚಿಯೂ, ಮುಚಿಯೂ, ಅಣ್ಣತಮ್ಮಂದಿರು. ಬಲಿಷ್ಠರು ಅವರಿಬ್ಬರೂ ಎಂತಹ ಬಲಿಷ್ಠನನ್ನು ಬೇಕಾದರೂ ಜಯಿಸಬಲ್ಲೆವು. ಎಂದರು.

೬೮. ಜಂಭನು ನಾನು ಇಂದ್ರನನ್ನೂ ಇಂದ್ರನ ಅನುಯಾಯಿಗಳನ್ನೂ ಜಯಿಸುತ್ತೇನೆ, ನೀವು ಸುಖವಾಗಿರಿ ಎಂದನು.

೬೯-೭೧. ತ್ರಿಪುರನು, ನಾನು ವಿನಾಯಕನನ್ನು ಜಯಿಸುತ್ತೇನೆ ಎಂದನು. ಆಮೇಲೆ ಸೇನಾಧಿಪತಿಯಾದ ಮಯನು ನಾನು ಕುಬೇರನನ್ನೂ, ಅವನ ಅನುಯಾಯಿಗಳನ್ನೂ ಜಯಿಸುತ್ತೇನೆ, ಎಂದನು. ಇಷ್ಟರಲ್ಲಿ ನಾರದಮುನಿಯು ಹಿರಣ್ಯಾಕ್ಷನ ಬಳಿಗೆ ಹೋಗಿ, ಅಯ್ಯಾ ! ನಾನು ಇಂದ್ರನ ದೂತನು ಬಂದಿದ್ದೇನೆ. ನಿನಗೆ ಪ್ರಾಣದ ಮೇಲೆ ಇಚ್ಛೆಯಿದ್ದರೆ ರಾಜ್ಯವನ್ನು ಬಿಟ್ಟುಬಿಡು

೭೨. ಹಾಗೆ ರಾಜ್ಯವನ್ನು ಬಿಡದಿದ್ದರೆ ನನ್ನೊಡನೆ ಯುದ್ಧಮಾಡು. ಯುದ್ಧ ಮಾಡಲು ಕೈಲಾಗದಿದ್ದರೆ ಪಾತಾಳಲೋಕಕ್ಕೆ ಹೋಗು, ಎಂದು ಹೇಳಿದುವನು ಎಂದನು. ಇದನ್ನು ಕೇಳಿ ಹಿರಣ್ಯಾಕ್ಷನು ಕೋಪದಿಂದ ನಾರದನನ್ನು ಕುರಿತು ಇಂತೆಂದನು.

॥ ದೈತ್ಯರಾಜ ಉವಾಚ ॥

ಅಹಿಂಸ್ಯಸ್ತ್ವಂ ಬ್ರಾಹ್ಮಣಾದ್ಯ ಗಚ್ಛ ತೂರ್ಣಂ ಮಮಾಗ್ರತಃ ।
ದೇವಾನಾಂ ಚ ವಿಪತ್ತಿಂ ಚ ಕದನಂ ನಿಧನಂ ಪುರಃ ॥
ಪಶ್ಯ ವಿಪ್ರ ಕ್ಷಣೇ ಜಾತಂ ಪ್ರಾಪ್ತಂ ಹರಿಹರಾದಿಕಂ ॥ ೭೩ ॥

॥ ವ್ಯಾಸ ಉವಾಚ ॥

ಏವಮುಕ್ತ್ವಾ ಸ ದೈತ್ಯೇಂದ್ರೋ ಬಲಾಧ್ಯಕ್ಷಾನುವಾಚ ಹ ॥ ೭೪ ॥

॥ ದೈತ್ಯರಾಜ ಉವಾಚ ॥

ಸಜ್ಜೀಕೃತ್ವಾ ಬಲಂ ಸರ್ವಾನ್ ರಥಾಂಶ್ಚಾನಯತ ದ್ರುತಂ ॥ ೭೫ ॥

॥ ವ್ಯಾಸ ಉವಾಚ ॥

ದೈತ್ಯರಾಜವಚಃ ಶ್ರುತ್ವಾ ಬಲಾಧ್ಯಕ್ಷಾಃ ಸಮಂತತಃ ।
ಬಲಾನ್ಯಾಹೂಯ ಸಹಸಾ ಸಂತ್ರಸ್ತಾಸ್ತೂರ್ಣಮಾಗತಾಃ ॥ ೭೬ ॥

---

೭೩. ದೈತ್ಯರಾಜನು ಹೇಳಿದನು- ಎಲೈ ಬ್ರಾಹ್ಮಣನೇ! ನೀನು ಬ್ರಾಹ್ಮಣನಾದುದರಿಂದ ನಿನ್ನನ್ನು ಕೊಲ್ಲಬಾರದು. ನನ್ನ ಮುಂದೆ ನಿಲ್ಲಬೇಡ, ಹೊರಡು. ದೇವತೆಗಳ ವಿಪತ್ತು, ಯುದ್ಧ, ಸಾವುಗಳನ್ನೂ, ಹರಿಹರರಿಗೆ ಪ್ರಾಪ್ತವಾಗುವ ಸ್ಥಿತಿಯನ್ನೂ ಕ್ಷಣಕಾಲದಲ್ಲಿ ನೋಡುತ್ತೀಯೆ.

೭೪. ವ್ಯಾಸನು ಹೇಳಿದನು- ಹಿರಣ್ಯಾಕ್ಷನು ನಾರದನಿಗೆ ಇಂತೆಂದು ಹೇಳಿ, ಸೇನಾಪತಿಗಳನ್ನು ಕುರಿತು ಇಂತೆಂದನು.

೭೫. ದೈತ್ಯರಾಜನು ಹೇಳಿದನು- ಸೈನ್ಯಗಳೆಲ್ಲವನ್ನೂ ಸಿದ್ಧಮಾಡಿಕೊಂಡು ರಥಗಳನ್ನೂ ಸಿದ್ಧಮಾಡಿಕೊಂಡು ಶೀಘ್ರವಾಗಿ ಬನ್ನಿರಿ.

೭೬. ದೈತ್ಯರಾಜನ ಈ ಮಾತನ್ನು ಕೇಳಿ ಸೇನಾಪತಿಗಳು ಸೈನ್ಯಗಳನ್ನು ಸಿದ್ಧಮಾಡಿಕೊಂಡು ಜಾಗ್ರತೆಯಾಗಿ ಬಂದು ಸೇರಿದರು.

ಕೋಟಿಕೋಟಿಸಹಸ್ರಾಣಿ ಲಕ್ಷಾಹಿಣ್ಯೋ ಬಲಾನಿ ಚ ।
ಏಕೈಕಸ್ಯ ಚ ವೀರಸ್ಯ ವಾಹನಾನಿ ಮಹಾಂತಿ ಚ ॥ ೭೭ ॥

ಸ್ಯಂದನಾನಿ ವಿಚಿತ್ರಾಣಿ ಗಜೋಷ್ಟ್ರಾಶ್ಚ ಖರಾನಪಿ ।
ಸಿಂಹವ್ಯಾಘ್ರಲುಲಾಯಾಂಶ್ಚ ಸಮಾರುಹ್ಯ ಯಯುಸ್ತದಾ ॥ ೭೮ ॥

ವಾದ್ಯೈಃ ಸರ್ವೈಶ್ಚ ಭೂಯಿಷ್ಠೈಃ ಸಿಂಹನಾದೈರ್ಭಯಾನಕೈಃ ।
ದಿಶಸ್ತು ಪೂರಯಾಮಾಸುಃ ಸಿಂಧುವೇಲಾಚಲಾಧರಾಃ ॥ ೭೯ ॥

ಸರ್ವಲೋಕಾಶ್ಚ ವಿತ್ರೇಸುಃ ಸಮುದ್ರಾಶ್ಚ ಚಕಂಪಿರೇ ।
ದೇವದುಂದುಭಯೋ ನೇದುಃ ಸರ್ವದೇವೈಃ ಸಮೀರಿತಾಃ ॥ ೮೦ ॥

ವಾದ್ಯೈಶ್ಚ ವಿವಿಧೈರನ್ಯೈರ್ವಾಯುಪೂರ್ಣೈರ್ಘನಸ್ವನೈಃ ।
ಸರ್ವಲೋಕಾ ಭಯತ್ರಸ್ತಾ ಯೇ ಚ ತ್ರೈಲೋಕ್ಯವಾಸಿನಃ ॥ ೮೧ ॥

---

೭೭-೭೮. ಕೋಟಿ ಕೋಟಿ ಸಾವಿರಗಳ ರೀತಿಯಲ್ಲಿ ಸೇನೆಗಳು ಬಂದುವು. ಒಬ್ಬೊಬ್ಬನಿಗೂ, ವಾಹನಗಳು ಬಹುವಾಗಿದ್ದುವು. ನಾನಾಬಗೆಯಾದ ರಥಗಳನ್ನೂ ಆನೆ, ಕುದುರೆ, ಒಂಟೆ, ಹೇಸರಗತ್ತೆ, ಸಿಂಹ, ಹುಲಿ, ಕೋಣಗಳನ್ನು ಹತ್ತಿಕೊಂಡು ಹೊರಟರು.

೭೯. ಅನೇಕವಾದ ವಾದ್ಯಗಳಿಂದಲೂ, ಭಯಂಕರವಾದ ಸಿಂಹನಾದಗಳಿಂದಲೂ, ಸಮುದ್ರಬೆಟ್ಟಗಳಿಂದ ಕೂಡಿದ ಭೂಮಿಯೆಲ್ಲವನ್ನೂ ತುಂಬಿದುವು.

೮೦. ಪ್ರಪಂಚವೆಲ್ಲವೂ ಭಯಪಟ್ಟುವು. ಸಮುದ್ರಗಳು ನಡುಗಿದುವು. ದೇವತೆಗಳು ದೇವದುಂದುಭಿಗಳನ್ನು ಬಾರಿಸಿದರು.

೮೧. ಬಹುವಾಗಿ ಶಬ್ದಮಾಡುತ್ತಿರುವ ಉಳಿದ ವಾದ್ಯಗಳೂ, ಧ್ವನಿಮಾಡಿದುವು. ಆಗ ಮೂರು ಲೋಕಗಳೂ ಅವುಗಳಲ್ಲಿರುವ ಪ್ರಾಣಿಗಳೂ ಹೆದರಿದುವು.

ಭ್ರಷ್ಟಕಾಮಾಗತಾಕಾಶಂ ಘೋರಂ ತೀವ್ರಂ ಮಹಾಹವಂ ।
ಪರಿಘೈಃ ಪಾಶಶೂಲೈಶ್ಚ ಖಡ್ಗಯಷ್ಟಿಪರಶ್ವಥೈಃ ॥ ೮೨ ॥

ಶರೈಶ್ಚ ನಿಶಿತೈರ್ಘೋರೈರ್ಜಘ್ನುರನ್ಯೋಽನ್ಯಮಾಹವೇ ।
ಶಸ್ತ್ರಾಸ್ತ್ರೈರ್ಬಹುಧಾ ಮುಕ್ತೈರ್ದಿಶಃ ಸರ್ವಾ ನಿರಂತರಂ ॥ ೮೩ ॥

ನಿಗ್ರಹೇಷು ಧರಣ್ಯಾಂ ಚ ಪರ್ವತೇಷು ಜಲೇಷು ಚ ।
ದೇವಸ್ಥಾನೇ ತಥಾಕಾಶೇ ಪರ್ವತಾಗ್ರೇಷು ಸಾನುಷು ॥ ೮೪ ॥

ಗಹ್ವರೇಷು ಮಹಾರಣ್ಯೇ ತಯೋರ್ಯುದ್ಧಮವರ್ತತ ।
ಪುಷ್ಕರಾದಿಘನಾನಾಂ ಚ ವರ್ಷಧಾರಾಜಲಂ ಯಥಾ ॥ ೮೫ ॥

ಪತನ್ತ್ಯಸ್ತ್ರಾಣಿ ಸೈನ್ಯೇಷು ಶತಶೋಽಥ ಸಹಸ್ರಶಃ ।
ಕೇಚಿತ್ಪೇತುಃ ಪೃಥಿವ್ಯಾಂ ತು ಶರೈಃ ಸಂಭಿನ್ನವಿಗ್ರಹಾಃ ॥ ೮೬ ॥

ಶಕ್ತಿಭಿರ್ಮುಸಲೈಶ್ಚಾನ್ಯೇ ಚಕ್ರಶೂಲಪರಶ್ವಥೈಃ ।
ಪತಿತಾಃ ಸಮ್ಮುಖೇ ಶೂರಾ ಯುದ್ಧೇಷು ನ್ಯಾಯವರ್ತಿನಃ ॥ ೮೭ ॥

---

೮೨-೮೩. ಆ ಮೂರು ಲೋಕಗಳವರೂ ಜೀವಿತದಲ್ಲಿ ನಿರಾಶರಾಗಿ ಆಕಾಶವನ್ನು ಬಂದು ಸೇರಿದರು. ಆಗ ಆ ಯುದ್ಧವು ತೀವ್ರವಾಗಿ ನಡೆಯಿತು. ಪರಿಘ, ಪಾಶ, ಶೂಲ, ಖಡ್ಗ, ದೊಣ್ಣೆ ಕೊಡಲಿ, ಬಾಣ ಇವುಗಳಿಂದ ಹೊಡೆದಾಡಿದರು. ಅವರು ಬಿಟ್ಟ ಅನೇಕ ಬಗೆಯಾದ ಶಸ್ತ್ರಾಸ್ತ್ರಗಳಿಂದ ಆಕಾಶವೇ ತುಂಬಿಹೋಯಿತು

೮೪-೯೦. ಹಳ್ಳಗಳು, ತಿಟ್ಟುಗಳು, ಬೆಟ್ಟಗಳು, ನೀರುಗಳು, ದೇವಸ್ಥಾನಗಳು, ಆಕಾಶ, ಬೆಟ್ಟದ ತುದಿ, ತಪ್ಪಲು, ಗುಹೆಗಳು, ಅರಣ್ಯಗಳು, ಇವೆಲ್ಲ ಸ್ಥಳಗಳಲ್ಲಿಯೂ ಅವರಿಗೆ ಯುದ್ಧವು ನಡೆಯಿತು. ಪುಷ್ಕರಾವರ್ತಕ ಮೋಡದಿಂದ ನೀರಿನ ಹನಿಗಳು ಬೀಳುವಂತೆ ಸೈನ್ಯಗಳ ಮೇಲೆ ಸಾವಿರಗಟ್ಟಲೆಯಾಗಿ ಅಸ್ತ್ರಗಳು ಬೀಳುತ್ತಿದ್ದುವು. ಬಾಣಗಳಿಂದಲೂ, ಶಕ್ತಿ, ಮುಸಲ, ಚಕ್ರ, ಶೂಲ, ಪರಶುಗಳಿಂದಲೂ, ಅನೇಕರು ಏಟುತಿಂದು ಬಿದ್ದುಬಿಟ್ಟರು· ನ್ಯಾಯವಾಗಿ ಹೆದರದೆ ಯುದ್ಧಮಾಡಿ ಸತ್ತವರು ಸ್ವರ್ಗವನ್ನು ಹೊಂದಿದರು. ಹೆದರಿದವರೂ, ಅನ್ಯಾಯದಿಂದ ಯುದ್ಧ

ಗಚ್ಛಂತಿ ಸುರಸದ್ಮಾನಿ ಸ್ವಾಮ್ಯರ್ಥೇ ಯೇ ತ್ವಭೀರವಃ ।
ಯೇ ಚಾನ್ಯೇ ಕಾತರಾಃ ಪಾಪಾ ಹಂತಾರೋ ವಿಮುಖಾ ರಣೇ ॥ ೮೮ ॥

ಅನ್ಯಾಯ್ಯೈರ್ಯೇ ಚ ಯೋದ್ಧಾರಸ್ತೇ ಯಾಂತಿ ಯಮಮಂದಿರಂ ।
ತ್ರಿದಿವಸ್ಥಾ ಗಜಾರೋಹಾಃ ಸೈಂಧವಸ್ಥಾಸ್ತಥಾ ಪರಾ ॥ ೮೯ ॥

ರಥಸ್ಥಾಂಶ್ಚ ರಥಾರೋಹಾಃ ಪದಗಾಂಶ್ಚ ಪದಾತಯಃ ।
ಪರಸ್ಪರಂ ವಿನಿಘ್ನಂತಿ ಶೂರಾ ಯುದ್ಧಾಭಿಕಾಂಕ್ಷಿಣಃ ॥ ೯೦ ॥

ಮುದಿತಾಃ ಸತ್ತ್ವಸಂಪನ್ನಾ ಧರ್ಮಿಷ್ಠಾ ಬಲಸಂವೃತಾಃ ।
ಕೇಷಾಂ ಚಿದ್ಬಾಹವಶ್ಛಿನ್ನಾ ಮುಶಲೈರ್ಭಿನ್ನಮಸ್ತಕಾಃ ॥ ೯೧ ॥

ಕೇಶಾಃ ಶಿರಾಂಸಿ ವಸ್ತ್ರಾಣಿ ನಿಪೇತುರ್ಧರಣೀತಲೇ ।
ಮಧ್ಯಚ್ಛಿನ್ನಾಸ್ತಥಾ ಭಿನ್ನಾಃ ಪೇತುರುರ್ವ್ಯಾಂ ಮಹಾಬಲಾಃ ॥ ೯೨ ॥

ಖಡ್ಗಪಾತೈಸ್ತಥಾ ಚೋಗ್ರೈಶ್ಛಿನ್ನಭಿನ್ನಾಃ ಪರಶ್ವಧೈಃ ।
ಗಾಮೇವ ಪತಿತಾ ಧೀರಾ ದಿವ್ಯಾಲಂಕಾರಭೂಷಿತಾಃ ॥ ೯೩ ॥

---

ಮಾಡಿದವರೂ, ಯಮಮಂದಿರವನ್ನು ಹೊಂದಿದರು. ರಥದವರು ರಥದವರನ್ನೂ, ಆನೆ ಕುದುರೆಗಳಮೇಲೆ ಕುಳಿತುಕೊಂಡಿರುವವರು ಅವರವರಿಗೆ ಸರಿಯಾದವರ ಮೇಲೆಯೂ ಕಾಲಾಳುಗಳು ಕಾಲಾಳುಗಳ ಮೇಲೆಯೂ ಅನ್ಯೋನ್ಯವಾಗಿ ಯುದ್ಧಮಾಡುತ್ತಿದ್ದರು.

೯೧-೯೨ ಶೂರರಾದವರು ಸಂತೋಷದಿಂದಲೂ, ಧರ್ಮದಿಂದಲೂ ಯುದ್ಧ ಮಾಡುತ್ತಿದ್ದರು. ಕೆಲವರುಗಳ ತೋಳೂ, ಕೆಲವರ ತಲೆಯೂ ಕಡಿದುಹೋಗಿ ಕೆಳಗೆ ಬೀಳುತ್ತಿದ್ದುವು ಕೆಲವರು ದೇಹದಲ್ಲಿ ಅಲ್ಲಲ್ಲಿಯೇ ಏಟು ಬಿದ್ದು ನೆಲದಲ್ಲಿ ಬಿದ್ದರು.

೯೩. ಅನೇಕರು ಕತ್ತಿಯ ಏಟುಗಳಿಂದಲೂ, ಕೊಡಲಿಯ ಏಟುಗಳಿಂದಲೂ ಚೂರುಚೂರಾದ ದೇಹವುಳ್ಳವರಾಗಿ ತಾವು ಹಾಕಿಕೊಂಡಿದ್ದ ಅಲಂಕಾರದೊಡನೆಯೇ ಕೆಳಗೆ ಬಿದ್ದರು.

ಪ್ರದೀಪ್ತೋಽಭೂದ್ಧರಾದೇಶೋ ವೀರೈರ್ನಾಗೈರ್ಹಯೈ ರಥೈಃ ।
ವಿವಿಧಾಭರಣೈರ್ನಷ್ಟೈಃ ಪತಾಕಾಭಿಶ್ಚ ಕೇತುಭಿಃ ॥ ೯೪ ॥

ತತೋ ವಸುಂಧರಾ ಸರ್ವಾ ಸಶೈಲವನಕಾನನಾ ।
ರುಧಿರೌಘಪ್ಲುತಾ ತತ್ರ ವಿಬುಧಾಸುರಯೋರ್ಯುಧಿ ॥ ೯೫ ॥

ಕ್ರವ್ಯಾದೈರ್ಬಹುಭಿಸ್ತತ್ರ ಖಾದಿತೋ ದ್ರವ್ಯಸಂಚಯಃ ।
ಲೋಹಿತಂ ಪ್ರಚುರಂ ಪೀತಂ ರಕ್ಷೋಭಿಶ್ಚ ವೃಕಾದಿಭಿಃ ॥ ೯೬ ॥

ಅನ್ಯೈರ್ಮಹಾಗಣೈರೇವ ಕ್ಷತಜಂ ಪವನಾನ್ವಿತಂ ।
ಖಾದಿತಂ ಪ್ರೀತಿಮದ್ಭಿಶ್ಚ ಫೇರುಗೃಧ್ರಗಣೈರ್ಮುದಾ ॥ ೯೭ ॥

ಏತಸ್ಮಿನ್ನಂತರೇ ಸೂರಿಃ ಸುರಪೂಜ್ಯೋ ಬೃಹಸ್ಪತಿಃ ।
ಮೃತಸಂಜೀವಿನೀಂ ವಿದ್ಯಾಂ ಸುರಾಣಾಂ ಸಂಜಜಾಪ ಹ ॥ ೯೮ ॥

---

೯೪. ವೀರರು, ಆನೆಗಳು, ರಥಗಳು. ಕುದುರೆಗಳು, ನಾನಾಬಗೆಯಾದ ಆಭರಣಗಳು, ಧ್ವಜಗಳು, ಇವು ಭೂಮಿಯಲ್ಲಿ ಬಿದ್ದಿದ್ದದರಿಂದ ಆ ಭೂಮಿಯು ಪ್ರಕಾಶಿಸುತ್ತಿದ್ದಿತು.

೯೫. ಆಗ ಬೆಟ್ಟ ಕಾಡುಗಳಿಂದ ಕೂಡಿದ ಈ ಭೂಮಿಯೆಲ್ಲವೂ ಯುದ್ಧದಲ್ಲಿ ದೇವದಾನವರ ರಕ್ತದಿಂದ ನೆನೆದುಹೋಯಿತು.

೯೬. ಆ ಯುದ್ಧರಂಗದಲ್ಲಿ ಬಹುಜನ ರಾಕ್ಷಸರು ಕ್ರೂರಮೃಗಗಳೂ, ಕೂಡ ರಕ್ತವನ್ನು ಯಥೇಚ್ಛವಾಗಿ ಕುಡಿದುವು.

೯೭. ಈ ಮಧ್ಯದಲ್ಲಿಯೇ ಗಣಗಳೂ, ನರಿ, ಹದ್ದು ಮುಂತಾದುವೂ ಖಂಡಗಳನ್ನು ತಿನ್ನುತ್ತಾ ರಕ್ತವನ್ನು ಕುಡಿದುವು.

೯೮-೧೦೦. ಇದನ್ನು ನೋಡಿ ಬೃಹಸ್ಪತಿಯು ದೇವತೆಗಳು ಬದುಕಲು ಮೃತಸಂಜೀವನಿಯೆಂಬ ಸತ್ತವರನ್ನು ಬದುಕಿಸುವ ಮಂತ್ರವನ್ನೂ ಮತ್ತು ವಿಶಲ್ಯ

ವಿಶಲ್ಯಕರಣೀಂ ದಿವ್ಯಾಂ ಬ್ರಹ್ಮವಿದ್ಯಾಂ ಮಹಾಬಲಾಂ ।
ತತೋ ಧನ್ವಂತರಿರ್ವಿದ್ವಾನ್ಸುರವೈದ್ಯೋ ಮನೋಜವಃ　॥ ೯೯ ॥

ಔಷಧೈಸ್ತತ್ಪ್ರಯೋಗೈಶ್ಚ ರಣೇ ಪರ್ಯಟತೇ ಮುದಾ ।
ತತ್ರ ದೇವಾಶ್ಚ ಜೀವಂತಿ ಯೇ ಮೃತಾಶ್ಚ ಮಹಾಹವೇ　॥ ೧೦೦ ॥

ಅವ್ರಣಾ ಬಲಸಂಪನ್ನಾಃ ಪ್ರಯುಧ್ಯಂತಿ ಭೃಶಂ ಪುನಃ ।
ಏವಂ ಶತಸಹಸ್ರಂ ತು ಗಣಂ ದೈತ್ಯಸ್ಯ ಚೋದ್ಧತಂ　॥ ೧೦೧ ॥

ಪತಿತಂ ಪುಣ್ಯಯೋಗಾಚ್ಚ ಶರೈರ್ನಿರ್ಭಿನ್ನಕಂಧರಂ ।
ತತಸ್ತು ಜಯಶಬ್ದೇನ ನಂದಂತಿ ಸಿದ್ಧಚಾರಣಾಃ　॥ ೧೦೨ ॥

ಋಷಯಃ ಖೇಚರಾಶ್ಚಾನ್ಯೇ ಯೇ ಚೈವಾಪ್ಸರಸಾಂ ಗಣಾಃ ।
ಅಥ ಸರ್ವಾ ದಿಶೋ ಭೀತಾ ದೈತೇಯಾ ದುದ್ರುವುರ್ಬಲಾತ್　॥ ೧೦೩ ॥

---

ಕರಿಣಿಯೆಂಬ ನೋವು ಮುಳ್ಳುಗಳು, ಹೋಗುವ ಬ್ರಹ್ಮವಿದ್ಯೆಯನ್ನೂ ಜಪಿಸಿದನು. ದೇವವೈದ್ಯನಾದ ಧನ್ವಂತರಿಯು ಎಲ್ಲರಿಗೂ ಔಷಧವನ್ನು ಹಾಕುತ್ತಲೂ, ಅದಕ್ಕೆ ಬೇಕಾದ ಕೆಲಸಗಳನ್ನು ಮಾಡುತ್ತಲೂ, ಮನೋವೇಗದಿಂದ ಎಲ್ಲಾ ಕಡೆಯಲ್ಲಿ ಸುತ್ತಿ ಉಪಚರಿಸಿದನು. ಆಗ ಸತ್ತ ದೇವತೆಗಳೆಲ್ಲರೂ ಬದುಕುತ್ತಿದ್ದರು.

೧೦೧. ಆಗ ಅವರೆಲ್ಲರೂ ಗಾಯಮಾದು ಬಲವುಳ್ಳವರಾಗಿ ಮತ್ತೆ ಯುದ್ಧಮಾಡಿದರು. ಹೀಗೆ ಯುದ್ಧಮಾಡುತ್ತಲೂ ನೂರಾರು ಜನ ದೈತ್ಯರನ್ನೂ ಕೊಂದರು.

೧೦೨. ಅನಂತರ ಆ ದೇವತೆಗಳು ತಾವು ಮಾಡಿದ ಪುಣ್ಯಕೆಲಸದಿಂದ ಆ ದೈತ್ಯರನ್ನು ಕತ್ತರಿಸುತ್ತಾ ಬಂದರು. ಆಗ ಸಿದ್ಧಚಾರಣರು ಜಯಜಯಶಬ್ದದಿಂದ ಹೊಗಳಿದರು.

೧೦೩. ಋಷಿಗಳೂ, ಅಂತರಿಕ್ಷದಲ್ಲಿ ಓಡಾಡುವವರೂ, ಅಪ್ಸರಸ್ಸುಗಳೂ ಜಯಜಯಶಬ್ಧಮಾಡಿದರು. ಆಗ ದೈತ್ಯರು ಹೆದರಿ ವಾಯುವೇಗದಿಂದ ಸಿಕ್ಕಿದ ಕಡೆಗೆ ಓಡುತ್ತಿದ್ದರು.

**ದೇವದುಂದುಭಯೋ ನೇದುರ್ನನೃತುಶ್ಚಾಪ್ಸರೋಗಣಾಃ ।**
**ಗೀತಂ ಗಾಯಂತಿ ಗಂಧರ್ವಾಃ ಶಶಂಸುಃ ಪರಮರ್ಷಯಃ ॥ ೧೦೪ ॥**

**ಅಥ ಕ್ರುದ್ಧೋ ಮಹಾತೇಜಾ ದೈತ್ಯಮುಖ್ಯ ಮಹಾಬಲಃ ।**
**ಕಾಲಕೇಯ ಇತಿ ಖ್ಯಾತಃ ಸೇನಾನಿರ್ದೈತ್ಯಪಸ್ಯ ಚ ॥ ೧೦೫ ॥**

**ಸ್ಯಂದನಸ್ಥೋ ಮಹಾವೀರ್ಯೋ ಧನುರಾದಾಯ ತತ್ರ ಚ ।**
**ಜಘಾನ ಸುರಸಂಘಾಂಸ್ತಾನ್ನನರ್ದ ಚ ಮುದಾನ್ವಿತಃ ॥ ೧೦೬ ॥**

**ಸ ಗಜಾಂಶ್ಚ ಗಜಾರೋಹಾನಶ್ವಾರೋಹಾಂಸ್ತಥೈವ ಚ ।**
**ರಥಿನಂ ಸರಥಂ ಸೂತಂ ಪಾತಯಾಮಾಸ ಭೂತಲೇ ॥ ೧೦೭ ॥**

**ನಿರಂತರಂ ಶರೌಘೇಣ ಚ್ಛಾದಿತಂ ಗಗನಂ ತದಾ ।**
**ನಿಪತಂತಿ ಶರಾಃ ಸೈನ್ಯೇ ಕೋಟಿಕೋಟಿಸಹಸ್ರಶಃ ॥ ೧೦೮ ॥**

**ನಿಪತಂತಿ ತದಾ ದೇವಾಃ ಸಂಯುಗೇಷ್ವನಿವರ್ತಿನಃ ।**
**ರುಧಿರೋದ್ಗಾರಿಣಃ ಸರ್ವೇ ಸಿದ್ಧಗಂಧರ್ವಕಿನ್ನರಾಃ ॥ ೧೦೯ ॥**

---

೧೦೪. ದೇವದುಂದುಭಿಗಳು ಧ್ವನಿಮಾಡಿದುವು. ಅಪ್ಸರ ಸ್ತ್ರಿಯರು ಕುಣಿದರು. ಗಂಧರ್ವರು ಸಂಗೀತವನ್ನು ಹಾಡುತ್ತಿದ್ದರು. ಋಷಿಗಳು ಹೊಗಳುತ್ತ ಇದ್ದರು.

೧೦೫-೧೦೬. ಆಗ ದೈತ್ಯರ ಸೇನಾಧಿಪತಿಯಾದ ಕಾಲಕೇಯನು ಕೋಪಗೊಂಡು ರಥದಲ್ಲಿ ಕುಳಿತು ಧನುಸ್ಸನ್ನು ಹಿಡಿದು ಆ ದೇವತೆಗಳೆಲ್ಲರನ್ನೂ ಹೊಡೆದು ಸಂತೋಷದಿಂದ ಸಿಂಹನಾದ ಮಾಡಿದನು.

೧೦೭. ಆ ಕಾಲಕೇಯನು ಕುದುರೆಯ ರಾವುತರನ್ನು ಕುದುರೆಯೊಡನೆಯೂ ಮಾವಟಿಗರನ್ನು ಆನೆಯೊಡನೆಯೂ, ರಥಿಕರನ್ನು ರಥದೊಡನೆಯೂ ಕೆಳಕ್ಕೆ ಕೆಡವಿದನು.

೧೦೮. ಬಾಣಗಳಿಂದ ಆಕಾಶವೆಲ್ಲವೂ ಮುಚ್ಚಲ್ಪಟ್ಟಿತು. ಈರೀತಿ ಬಾಣಗಳನ್ನು ಕೋಟಿಕೋಟಿಗಟ್ಟಲೆಯಾಗಿ ಬಿಡುತ್ತಿದ್ದರು.

೧೦೯. ಯುದ್ಧದಲ್ಲಿ ಹಿಂತಿರುಗದೆ ಯುದ್ಧಮಾಡುತ್ತಿದ್ದ ದೇವತೆಗಳೂ, ಸಿದ್ಧರೂ, ಗಂಧರ್ವರೂ ರಕ್ತವನ್ನು ಕಾರುತ್ತ ಬೀಳುತ್ತಿದ್ದರು.

ನಿಶಾತೈಃ ಪೀಡಿತಾ ದೇವಾ ನಿಪೇತುರ್ಧರಣೀತಲೇ ।
ಕೇಚಿಚ್ಛರಶತೈರ್ಭಿನ್ನಾಃ ಸಹಸ್ರೈರಯುತೈಸ್ತಥಾ ॥ ೧೧೦ ॥

ಪೇತುರುರ್ವ್ಯಾಂ ಮಹಾವೀರ್ಯಾ ಯೇ ರಣೇ ಸುರಪುಂಗವಾಃ ।
ವ್ಯಥಿತಾಶ್ಚಾಭವನ್ಸರ್ವೇ ಸ್ಯಂದನಸ್ಥಾ ದಿವೌಕಸಃ । ॥ ೧೧೧ ॥

ಶರೈಃ ಪ್ರವ್ಯಥಿತಾಸ್ತೇ ತು ಸ್ಥಾತುಂ ಶಕ್ತಾ ನ ಸಮ್ಮುಖೇ ।
ತೇನಾವಗಾಹಿತಂ ಸೈನ್ಯಂ ಗಜೇನೇವ ಸರೋವನಂ ॥ ೧೧೨ ॥

ಶರೈಸ್ತಸ್ಯಾರ್ದಿತಾ ದೇವಾ ವಜ್ರಾನಲಸಮಪ್ರಭೈಃ ।
ನ ಶೇಕುಃ ಸಮರೇ ಸ್ಥಾತುಂ ಮಘವಂತಂ ಯಯುಸ್ತದಾ ॥ ೧೧೩ ॥

ಚಿತ್ರರಥ ಇತಿ ಖ್ಯಾತೋ ದೇವಃ ಶಸ್ತ್ರಭೃತಾಂ ವರಃ ।
ಯಯೌ ಸ್ಯಂದನಮಾರುಹ್ಯ ಯುದ್ಧಂ ಪ್ರತಿ ಧನುರ್ಧರಃ ॥
ಅಬ್ರವೀದ್ವಚನಂ ಸೋಽಪಿ ಸೇನಾನ್ಯಂ ತು ಮಹಾಸುರಂ ॥ ೧೧೪ ॥

---

೧೧೦-೧೧೧. ಈರೀತಿ ಅನೇಕ ಬಾಣಗಳಿಂದ ನೊಂದ ದೇವತೆಗಳು ಭೂಮಿ ಯಲ್ಲಿ ಬಿದ್ದರು. ಮಹಾಬಲಿಷ್ಠರಾದ ಮತ್ತೆ ಕೆಲವರು ರಥದಲ್ಲಿಯೇ ಇದ್ದುಕೊಂಡು ನೊಂದರು.

೧೧೨. ಆ ದೇವತೆಗಳು ವ್ಯಥೆಗೊಂಡು ಯುದ್ಧದಲ್ಲಿ ಎದುರಿಗೆ ನಿಲ್ಲಲಾರದೆ ಹೋದರು. ಆ ಕಾಲಕೇಯನು ಆನೆಯು ಸರೋವರವನ್ನು ಕಲಕುವಂತೆ ಆ ದೇವ ಸೈನ್ಯವೆಲ್ಲವನ್ನೂ ಕಲಕಿದನು.

೧೧೩. ವಜ್ರಾಯುಧದಂತಿರುವ ಆ ಕಾಲಕೇಯನ ಬಾಣಗಳಿಂದ ತೊಂದರೆ ಪಟ್ಟ ಆ ದೇವತೆಗಳು ಯುದ್ಧದಲ್ಲಿ ನಿಲ್ಲಲಾರದೆ ಇಂದ್ರನನ್ನು ಮರೆಹೊಕ್ಕರು.

೧೧೪. ಆಗ ಉತ್ತಮಯೋಧನಾದ ಚಿತ್ರರಥನೆಂಬುವನು ಯುದ್ಧಸನ್ನದ್ಧ ನಾಗಿ ರಥವನ್ನೇರಿ ಯುದ್ಧಕ್ಕೆ ಹೋಗಿ ಆ ಸೇನಾಧಿಪತಿಯಾದ ಕಾಲಕೇಯನನ್ನು ಕುರಿತು ಇಂತೆಂದನು.

॥ ಚಿತ್ರರಥ ಉವಾಚ ॥

ಯಥಾ ಹಂಸಿ ಮಹಾಶೂರ ಸುರಸೇನಾಂ ಮುದನ್ವಿತಃ ।
ಸ ತ್ವಂ ಪ್ರಶಂಸನೀಯಶ್ಚ ಶೂರರೋಸಿ ಶೂರಸಮ್ಮತಃ ॥ ೧೧೫ ॥

ಹಿರಣ್ಯಾಕ್ಷಪ್ರಿಯಂ ಕರ್ಮ ಕೃತಂ ಯುದ್ಧೇ ತ್ವಯಾಧುನಾ ।
ಇದಾನೀಂ ಮಮ ಬಾಣೈಶ್ಚ ಗಚ್ಛಸ್ವ ಯಮಮಂದಿರಂ ॥ ೧೧೬ ॥

॥ ವ್ಯಾಸ ಉವಾಚ ॥

ತತಶ್ಚ ಕಾಲಕೇಯಸ್ತು ಸ್ಮಿತೋ ವಚನಮಬ್ರವೀತ್ ॥ ೧೧೭ ॥

ಪುರ್ವೈವ ವಿಜಿತೋ ದೇವಗಣಃ ಸರ್ವಃ ಪ್ರಲೀಲಯಾ ।
ಇದಾನೀಂ ತು ಸ್ಥಿತಂ ಯುದ್ಧೇ ಬಲಂ ಸರ್ವಂ ತು ಹೇಲಯಾ ॥ ೧೧೮ ॥

ಯದಿ ತೇ ನಿಧನೇ ಪ್ರೀತಿರಸ್ತೀತಿ ಸುರಪುಂಗವ ।
ಏಭಿಸ್ತ್ವಾಂ ನಿಶಿತೈರ್ಬಾಣೈರ್ನಯಾಮಿ ಯಮಮಂದಿರಂ ॥ ೧೧೯ ॥

---

೧೧೫. ಚಿತ್ರರಥನು ಹೇಳಿದನು- ಎಲೈ ಶೂರನೆ! ಒಳ್ಳೆಯ ಸಂತೋಷದಿಂದ ದೇವಸೇನೆಯನ್ನು ನಾಶಮಾಡುತ್ತಿದ್ದೀಯೆ. ನೀನು ಹೊಗಳಿಕೆಗೆ ಪಾತ್ರನಾದವನು. ಶೂರನು ಶೂರರು ನಿನ್ನನ್ನು ಹೊಗಳಬೇಕಾದುದೇ.

೧೧೬. ನೀನು ಯುದ್ಧದಲ್ಲಿ ಹಿರಣ್ಯಾಕ್ಷನಿಗೆ ಪ್ರಿಯವಾದ ಕೆಲಸವನ್ನು ಮಾಡಿದ್ದೀಯೆ. ಈಗ ನನ್ನ ಬಾಣಗಳಿಂದ ಯಮನ ಪಟ್ಟಣವನ್ನು ಹೊಂದು.

೧೧೭ ವ್ಯಾಸನು ಹೇಳಿದನು- ಆಗ ಕಾಲಕೇಯನು ನಗುತ್ತಾ ಇಂತೆಂದನು-

೧೧೮. ಕಾಲಕೇಯನು ಹೇಳಿದನು- ಮೊದಲೇನೆ ದೇವತೆಗಳನ್ನು ಲೀಲೆಯಿಂದ ಜಯಿಸಿದ್ದೇನೆ. ಈಗಲಂತೂ ಕಳೆದುಳಿದವರನ್ನೂ ಸುಲಭವಾಗಿ ಜಯಿಸುತ್ತಿದ್ದೇನೆ.

೧೧೯. ಆದರೆ ಎಲೈ ದೇವಶ್ರೇಷ್ಠನೆ! ಈಗ ನಿನಗೆ ಸಾವಿನಲ್ಲಿ ಪ್ರೀತಿಯಿದ್ದರೆ ಈ ಹರಿತವಾದ ಬಾಣಗಳಿಂದ ನಿನ್ನನ್ನು ಯಮಲೋಕಕ್ಕೆ ಕಳುಹಿಸುತ್ತೇನೆ.

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಪರಮುಕ್ರುದ್ಧೋ ಬಾಣಮಂತಕಸನ್ನಿಭಂ ।
ಜಘಾನ ಸಮರೇ ವೀರಸ್ತ್ರಿಭಿಶ್ಛಿಚ್ಛೇದ ಸೋಽಮ್ಯರೇ ॥ ೧೨೦ ॥

ಪುನರ್ಬಾಣಾಂಶ್ಚ ಸಮರೇ ಯೋಜಯಿತ್ವಾ ದ್ರುತಂ ರುಷಾ ।
ಜಘಾನ ಪ್ರಚುರಾರ್ ದೈತ್ಯಾಂಸ್ತಾಂಶ್ಚಕರ್ತ ಸ ಲಾಘವಾತ್ ॥ ೧೨೧ ॥

ತತೋಽನ್ಯೋನ್ಯಂ ಶರೈಸ್ತೀಕ್ಷ್ಣೈಃ ಕಾಲಾನಲಸಮುಪ್ರಭೈಃ ।
ಯುದ್ಧೇ ಧನುಷ್ಮತಾಂ ಶ್ರೇಷ್ಠಶ್ಛಿಚ್ಛೇದ ಭುವಿ ವೇಗತಃ ॥ ೧೨೨ ॥

ತದ್ಯುದ್ಧಮಭವದ್ದೇವದೈತ್ಯಯೋರ್ಧರ್ಮತೋ ಭೃಶಂ ।
ದ್ರಷ್ಟುಕಾಮಾ ಗತಾಃ ಪಾರ್ಶ್ವಮೃಷಿದೇವಾಃ ಸುರೋರಗಾಃ ॥ ೧೨೩ ॥

ಏವಂ ಶತಸಹಸ್ರಾಣಿ ಬಾಣಾನಾಂ ವಿಧೃತಾನಿ ಚ ।
ಅನ್ಯೋನ್ಯಸಮರೇ ವೀರೌ ವಿಜಯಾಯ ವಿರೇಜತುಃ ॥ ೧೨೪ ॥

ಅಥ ಕ್ರುದ್ಧೋ ಮಹಾತೇಜಾ ಗಂಧರ್ವಾಣಾಂ ಪತಿಸ್ತದಾ ।
ತ್ರಿಭಿರ್ಬಿಭೇದ ಬಾಣೈಶ್ಚ ಲಲಾಟೇ ಹೃದಿ ಪಂಚಭಿಃ ॥ ೧೨೫ ॥

---

೧೨೦. ವ್ಯಾಸನು ಹೇಳಿದನು- ಹೀಗೆಂದು ಹೇಳಿ ಆ ಕಾಲಕೇಯನು ಕ್ರೂರವಾದ ಬಾಣಗಳನ್ನು ಬಿಡಲು ಚಿತ್ರರಥನು ಮೂರು ಬಾಣಗಳಿಂದ ಅವನ್ನು ಕತ್ತರಿಸಿದನು.

೧೨೧. ಮತ್ತೆ ಬಾಣಗಳನ್ನು ಹೂಡಿ ಅನೇಕ ಜನ ದೈತ್ಯರನ್ನು ಹೊಡೆಯಲು ಅವನ್ನು ಸೂಕ್ಷ್ಮದಿಂದ ಆ ಕಾಲಕೇಯನು ಕತ್ತರಿಸಿದನು.

೧೨೨. ಆಗ ಒಬ್ಬರಿಗೊಬ್ಬರು ಪ್ರಳಯಕಾಲದ ಅಗ್ನಿಯಂತಿರುವ ಬಾಣಗಳನ್ನು ಬಿಡುತ್ತಾ ಬಂದರು. ಅದನ್ನು ಒಬ್ಬೊಬ್ಬರೂ ಕತ್ತರಿಸುತ್ತಾ ಬಂದರು.

೧೨೩. ಆ ದೈತ್ಯದಾನವರ ಯುದ್ಧವು ಧರ್ಮದಿಂದ ಚೆನ್ನಾಗಿ ನಡೆಯುತ್ತಿದ್ದಿತು. ಅದನ್ನು ನೋಡಲು ಋಷಿಗಳೂ ದೇವತೆಗಳೂ ಹತ್ತಿರಕ್ಕೆ ಬಂದರು.

೧೨೪. ಈ ರೀತಿಯಾಗಿ ಅವರು ನೂರಾರು ಬಾಣಗಳನ್ನು ಬಿಡುತ್ತಿದ್ದರು. ಈ ರೀತಿ ಒಬ್ಬರನ್ನು ಒಬ್ಬರು ಜಯಿಸಬೇಕೆಂದು ಆತುರ ಪಡುತ್ತಿದ್ದರು.

೧೨೫-೧೨೬. ಆಗ ಚಿತ್ರರಥನು ಕೋಪಗೊಂಡು ಆ ಕಾಲಕೇಯನ ಹಣೆಗೆ ಮೂರು, ಹೃದಯಕ್ಕೆ ಐದು, ಹೊಟ್ಟೆಗೆ ಏಳು, ಹೊಕ್ಕಳು ಅಡಿಹೊಟ್ಟೆಗಳಿಗೆ ಐದೈದು

ಸಪ್ತಭಿರ್ಜಠರೇ ನಾಭೌ ಬಸ್ತೌ ತಸ್ಯ ಸ ಪಂಚಭಿಃ ।
ಶರೈಃ ಸಂಪಾತಿತೋ ದೈತ್ಯೋ ಮುಗ್ಧಃ ಕಶ್ಮಲತಾಂ ಗತಃ ॥ ೧೨೬ ॥

ಶಿಥಿಲೀಕೃತಚಾಪಶ್ಚ ಲೇಭೇ ಸಂಜ್ಞಾಂ ಚಿರಾದ್ಬಲೀ ।
ಲಬ್ಧಸಂಜ್ಞಸ್ತ್ರಿಭಿರ್ಬಾಣೈಃ ಸ ಬಿಭೇದ ಸುರೋತ್ತಮಂ ॥ ೧೨೭ ॥

ಚಕರ್ತ ಧನುರಸ್ತ್ರೈಶ್ಚ ದೈತ್ಯರಾಜಸ್ಯ ಪಶ್ಯತಃ ।
ಮಹತೀಂ ಶಕ್ತಿಮುದ್ಧೃತ್ಯ ಸುರಂ ದೈತ್ಯೋ ಬಿಭೇದ ಚ ॥ ೧೨೮ ॥

ಶಕ್ತ್ಯಾ ವಿಭಿನ್ನದೇಹೋಽಸೌ ವೀರ್ಯಾನ್ನೈವ ಪ್ರಪಶ್ಯತಿ ।
ತತೋ ಬಾಣಸಹಸ್ರೈಸ್ತು ಕಾಲಾಂತಕಸಮಪ್ರಭೈಃ ॥ ೧೨೯ ॥

ಬಿಭೇದ ದೈತ್ಯಸಿಂಹಂ ತು ಸುರಾಣಾಮುತ್ತಮೋ ಬಲೀ ।
ಹತಚೇತಾಃ ಸ ದೈತ್ಯೇಂದ್ರೋ ಬಹುಶೋಣಿತಸಂಸ್ರವಃ ॥ ೧೩೦ ॥

ವಿಹ್ವಲೋ ಬಹುಬಾಣಾರ್ತಃ ಶೂಲಂ ಜಗ್ರಾಹ ದಾನವಃ ।
ಶೂಲಹಸ್ತಸ್ಯ ತಸ್ಯೈವ ಚತುರ್ಭಿಸ್ತುರಗಾನ್ ಶರೈಃ ॥ ೧೩೧ ॥

---

ಬಾಣಗಳನ್ನು ಬಿಟ್ಟು ಹೊಡೆದನು. ಈ ಏಟಿನಿಂದ ಆ ಕಾಲಕೇಯನು ಸ್ವಲ್ಪ ಜ್ಞಾನ ತಪ್ಪಿದಂತಾದನು.

೧೨೭. ಆ ಮಬ್ಬಿನಿಂದ ಕೈಯಿನಿಂದ ಧನುಸ್ಸು ಸ್ವಲ್ಪ ಸಡಿಲವಾಯಿತು. ಒಡನೆಯೇ ಜ್ಞಾನವನ್ನು ಹೊಂದಿ ಮೂರು ಬಾಣಗಳಿಂದ ಆ ಚಿತ್ರರಥನನ್ನು ಹೊಡೆದನು.

೧೨೮. ಆಗ ಚಿತ್ರರಥನು ಬಾಣವನ್ನು ಬಿಟ್ಟು ಕಾಲಕೇಯನ ಧನುಸ್ಸನ್ನೇ ಕತ್ತರಿಸಿದನು. ಆಗ ಆ ದೈತ್ಯನು ಶಕ್ತ್ಯಾಯುಧವನ್ನು ತೆಗೆದುಕೊಂಡು ಚಿತ್ರರಥನನ್ನು ಹೊಡೆದನು.

೧೨೯-೧೩೦. ಶಕ್ತ್ಯಾಯುಧದಿಂದ ಹೊಡೆದರೂ ಈ ಚಿತ್ರರಥನು ಬಲಗುಂದಲಿಲ್ಲ. ಅನಂತರ ಕ್ರೂರವಾದ ಬಾಣಗಳನ್ನು ಸಾವಿರಗಟ್ಟಲೆಯುಲ್ಲಿ ಬಿಟ್ಟು ಆ ದೈತ್ಯನನ್ನು ಹೊಡೆಯಲು ಅವನು ರಕ್ತವನ್ನು ಸುರಿಸುತ್ತಾ ಮನಕುಗ್ಗಿದನು.

೧೩೧-೧೩೩ ಹೀಗೆ ಏಟುತಿಂದ ಆ ದೈತ್ಯನು ಶೂಲಾಯುಧವನ್ನು ತೆಗೆದುಕೊಂಡನು. ಇದನ್ನು ನೋಡಿ ಚಿತ್ರರಥನು ಅವನ ಕುದುರೆಗಳಿಗೆ ನಾಲ್ಕುಬಾಣಗಳನ್ನೂ

ಹಿತ್ವಾ ಚ ಪಾತಯಾಮಾಸ ತ್ರಿಭಿರ್ಯಂತಾರಮೇವ ಚ ।
ಜಘಾನ ಶೂಲಂ ಸಂವಿಷ್ಟಸ್ತತೋ ಗಂಧರ್ವಸತ್ತಮಂ ॥ ೧೩೨ ॥

ವಿಚಕರ್ತ ತ್ರಿಭಿರ್ಬಾಣೈಃ ಶೂಲಂ ಚಿತ್ರರಥೋ ಬಲೀ ।
ಶೂಲಂ ಚ ನಷ್ಟಕಂ ದೃಷ್ಟ್ವಾ ಹೃತಭೋಗಮಿವೋರಗಂ ॥ ೧೩೩ ॥

ಗೃಹೀತ್ವಾ ಮುದ್ಗರಂ ಘೋರಂ ಪ್ರದುದ್ರಾವ ಸುರಂ ಬಲೀ ।
ಸಮುದ್ಗರಂ ಸಮಾಯಾಂತಂ ದೈತ್ಯಮಾಲೋಕ್ಯ ತಂ ಸುರಂ ॥ ೧೩೪ ॥

ವಿಚಕರ್ತ ಶಿರೋ ದೇಹಾದರ್ಧಚಂದ್ರೇಣ ಸಂಭ್ರಮಾತ್ ।
ಸ ಪಪಾತ ಮಹೀಪೃಷ್ಠೇ ಸಂಚಚಾಲ ವಸುಂಧರಾ ॥
ತತೋ ದೈತ್ಯಗಣಾಃ ಸರ್ವೇ ವಿಮುಖಾ ವಿಪ್ರದುದ್ರುವುಃ ॥ ೧೩೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಕಾಲಕೇಯವಧೋ ನಾಮ ತ್ರಿಷಷ್ಟಿತಮೋಽಧ್ಯಾಯಃ

---

ಸಾರಥಿಗೆ ಮೂರುಬಾಣಗಳ್ನೂ ಬಿಟ್ಟು ಅವರನ್ನು ಕೆಡವಿದನು. ಇದನ್ನು ನೋಡಿ.

೧೩೩-೧೩೪. ಬಲಿಷ್ಠನಾದ ಆ ಚಿತ್ರರಥನು ಮೂರು ಬಾಣಗಳಿಂದ ಆ ಶೂಲವನ್ನು ಕತ್ತರಿಸಿದನು. ಶೂಲವು ವ್ಯರ್ಥವಾದುದನ್ನು ನೋಡಿ ಹೆಡೆಯನ್ನು ಕಳೆದುಕೊಂಡ ಸರ್ಪದಂತೆ ಇರುವ ಕ್ರೂರವಾದ ಮುದ್ಗರವನ್ನು ತೆಗೆದುಕೊಂಡು ಆ ಚಿತ್ರರಥನ ಮೇಲೆ ನುಗ್ಗಿದನು. ಮುದ್ಗರವನ್ನು ಹಿಡಿದು ಬರುತ್ತಿರುವುದನ್ನು ಚಿತ್ರರಥನು ನೋಡಿದನು.

೧೩೫. ಒಡನೆಯೇ ಅರ್ಧಚಂದ್ರಾಕಾರದ ಬಾಣವನ್ನು ತೆಗೆದುಕೊಂಡು ಆ ಕಾಲಕೇಯನ ತಲೆಯನ್ನು ಕತ್ತರಿಸಲು ಆತನ ದೇಹವು ಕೆಳಗೆ ಬಿದ್ದಿತು. ಅದರ ಭಾರಕ್ಕೆ ಭೂಮಿಯೂ ನಡುಗಿತು. ಆಗ ದೈತ್ಯರೆಲ್ಲರೂ ಹೆದರಿ ಓಡಿಹೋದರು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಕಾಲಕೇಯವಧವೆಂಬ ಅರವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಚತುಷ್ಷಷ್ಟಿತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

ಭ್ರಾತರಂ ನಿಹತಂ ದೃಷ್ಟ್ವಾ ಕಾಲೇಯೋ ನಾಮ ದಾನವಃ ।
ಚಿತ್ರರಥಂ ಪ್ರದುದ್ರಾವ ಧೃತ್ವಾ ಬಾಣಂ ಸಕಾರ್ಮುಕಂ ॥ ೧ ॥

ದೃಷ್ಟ್ವಾಽಸುರಂ ವಿಧಾವಂತಂ ಕಾಲಮೃತ್ಯುಸಮಪ್ರಭಂ
ಅರೌತ್ಸೀತ್ತಂ ಮಹಾವೀರ್ಯೋ ಜಯಂತಃ ಪಾಕಶಾಸನಿಃ ॥ ೨ ॥

ಅಬ್ರವೀಚ್ಚ ಮಹಾತೇಜಾ ದೈತೇಯಂ ಸುರಸತ್ತಮಃ ।
ತಥ್ಯಂ ಧರ್ಮಾಭಿಸಂಯುಕ್ತಂ ಲೋಕದ್ವಯಹಿತಂ ಧ್ರುವಂ ॥ ೩ ॥

---

### ಅರವತ್ತನಾಲ್ಕನೆಯ ಅಧ್ಯಾಯವು

೧. ವ್ಯಾಸನು ಹೇಳಿದನು- ಅನಂತರ ಕಾಲೇಯನೆಂಬ ರಾಕ್ಷಸನು ಸಹೋದರನು ಸತ್ತದ್ದನ್ನು ನೋಡಿ ಬಿಲ್ಲುಬಾಣಗಳನ್ನು ಧರಿಸಿ ಆ ಚಿತ್ರರಥನನ್ನು ಎದುರಿಸಿದನು.

೨. ಕಾಲಮೃತ್ಯುವಿನಂತೆ ಬರುತ್ತಿರುವ ಆ ರಾಕ್ಷಸನನ್ನು ಕಂಡು ಇಂದ್ರನ ಮಗನಾದ ಜಯಂತನು ಆತನನ್ನು ಎದುರಿಸಿದನು.

೩. ಮಹಾ ತೇಜೋವಂತನಾದ ಜಯಂತನು ಲೋಕದ್ವಯಗಳಿಗೆ ವಿರುದ್ಧವಲ್ಲದ ಧರ್ಮವಾದ ಮಾತನ್ನು ಆ ರಾಕ್ಷಸನನ್ನು ಕುರಿತು ಹೇಳಿದನು

॥ ಜಯಂತ ಉವಾಚ ॥
ಶಸ್ತ್ರಾಭಿಘಾತದುಃಖಾರ್ತಂ ಕಶ್ಮಲಂ ಚಾನ್ಯಸಂಯುತಂ ।
ಪ್ರಭಗ್ನಂ ಚ ನಿರಸ್ತಂ ಚ ಯೋ ಹಂತಿ ಸ ಚ ಬಾಲಿಶಃ ॥ ೪ ॥

ಸುಚಿರಂ ರೌರವಂ ಭುಕ್ತ್ವಾ ತಸ್ಯ ದಾಸೋ ಭವೇಚ್ಚಿರಂ ।
ತಸ್ಮಾನ್ಮಾಮುಂ ಪ್ರಯುಧ್ಯಸ್ವ ಯುದ್ಧಧರ್ಮಸ್ಥಿತೋ ಭವ ॥ ೫ ॥

॥ ವ್ಯಾಸ ಉವಾಚ ॥
ಜಯಂತಮಬ್ರವೀದ್ವಾಕ್ಯಂ ಕಾಲೇಯಃ ಕ್ರೋಧಮೂರ್ಛಿತಃ ॥ ೬ ॥

॥ ಕಾಲೇಯ ಉವಾಚ ॥
ನಿಹತ್ಯ ಭ್ರಾತೃಹಂತಾರಮಥ ತ್ವಾಂ ಹನ್ಮಿ ಸಾಂಪ್ರತಂ ॥ ೭ ॥

॥ ವ್ಯಾಸ ಉವಾಚ ॥
ತತಸ್ತಂ ಚಾಸುರಶ್ರೇಷ್ಠಂ ಕಾಲಾನಲಸಮಪ್ರಭಂ ।
ಜಯಂತೋ ನಿಶಿತೈರ್ಬಾಣೈರ್ಜಘಾನ ಸುರಸತ್ತಮಃ ॥ ೮ ॥

---

೪. ಜಯಂತನು ಹೇಳಿದನು- ಶಸ್ತ್ರದ ಏಟುಬಿದ್ದು ದುಃಖಗೊಂಡವನನ್ನೂ, ಜ್ಞಾನತಪ್ಪಿರುವವನನ್ನೂ ಸೋತು ಇರುವವನ್ನೂ ತಿರಸ್ಕೃತನಾದವನನ್ನೂ, ಕೊಲ್ಲುವವನು ಬುದ್ಧಿಯಿಲ್ಲದವನು.

೫. ಅಲ್ಲದೆ ಅವನು ರೌರವ ನರಕವನ್ನು ಅನುಭವಿಸಿ ಅನಂತರ ತಾನು ಹೊಡೆದವನಿಗೆ ಆಳಾಗುತ್ತಾನೆ. ಆದ್ದರಿಂದ ಈ ಚಿತ್ರರಥನು ಏಟುತಿಂದು ಇರುವುದರಿಂದ ಇವನ ಮೇಲೆ ಹೋಗದೆ ಯುದ್ಧದ ಧರ್ಮವನ್ನು ಪಾಲಿಸು.

೬. ವ್ಯಾಸನು ಹೇಳಿದನು- ಆಗ ಕೋಪಗೊಂಡ ಕಾಲಕೇಯನು ಜಯಂತನನ್ನು ಕುರಿತು ಇಂತೆಂದನು.

೭. ಕಾಲೇಯನು ಹೇಳಿದನು- ನನ್ನ ಸಹೋದರನನ್ನು ಕೊಂದವನನ್ನು ಮೊದಲು ಕೊಂದು ಅನಂತರ ನಿನ್ನನ್ನು ಕೊಲ್ಲುತ್ತೇನೆ.

೮. ವ್ಯಾಸನು ಹೇಳಿದನು–ಅನಂತರ ಜಯಂತನು ಹರಿತವಾದ ಬಾಣಗಳಿಂದ ಆ ಕಾಲೇಯನನ್ನು ಹೊಡೆದನು.

ನಿಚಕರ್ತ ಶರಾನ್ಸೋಽಪಿ ತ್ರಿಭಿರ್ವಿವ್ಯಾಧ ಚಾಸುರಃ ।
ತತಃ ಕೋಪಸಮಾವಿಷ್ಟೋ ನಾರಾಚೈರ್ದ ಶಭಿಸ್ತಥಾ ॥ ೯ ॥

ಶರಾಂಶ್ಚಿಚ್ಛೇದತುಸ್ತತ್ರ ಬಿಭೇದತುಃ ಪರಸ್ಪರಂ ।
ಸ್ಯಂದನಾಚ್ಚ ತಯೋರೇವ ಬಹು ಸುಸ್ರಾವ ಶೋಣಿತಂ ॥ ೧೦ ॥

ಯಥಾ ವೃಷ್ಟಿಗಣಂ ಪ್ರಾಪ್ಯ ನದೀ ಗೈರಿಕವಾಹಿನೀ ।
ತಥಾ ತೌ ಚ ಮಹಾವೀರ್ಯೌ ನ ಕ್ಷೀಣೌ ನ ಚ ಕಾತರೌ ॥ ೧೧ ॥

ನ ಶರ್ಮ ಪರಿಲೇಭಾತೇ ಪರಸ್ಪರಜಯೈಷಿಣೌ ।
ಅಥ ತಸ್ಯ ಚ ದೈತ್ಯಸ್ಯ ಧನುಶ್ಚಿಚ್ಛೇದ ಚೇಷುಣಾ ॥ ೧೨ ॥

ಯನ್ತಾರಂ ಪಂಚಭಿರ್ಬಾಣೈಃ ಪಾತಯಾಮಾಸ ಭೂತಲೇ ।
ಅಷ್ಟಾಭಿರ್ನಿಶಿತೈರ್ಬಾಣೈಶ್ಚತುರೋಽಶ್ವಾನಪಾತಯತ್ ॥ ೧೩ ॥

ಶಕ್ತಿಂ ಸಂಗೃಹ್ಯ ಭೂಮಿಷ್ಠಃ ಕುಮಾರಂ ಚ ಜಘಾನ ಹ ।
ಆಯಾಂತೀಂ ವಹ್ನಿಕೂಟಾಭಾಂ ಶರೈಶ್ಚಿಚ್ಛೇದ ಪಂಚಭಿಃ ॥ ೧೪ ॥

---

೯-೧೦. ಆ ಕಾಲೇಯನೂ ಆ ಬಾಣಗಳನ್ನು ಕತ್ತರಿಸಿದನು. ಅನಂತರ ಕೋಪಗೊಂಡ ಇಬ್ಬರೂ ಬಾಣಗಳನ್ನು ಬಿಡುತ್ತಾ ಕತ್ತರಿಸುತ್ತಾ ಬಂದರು. ಅವರ ರಥಗಳಿಂದ ರಕ್ತ ಹರಿಯತೊಡಗಿತು.

೧೧. ಮಳೆಯು ಬಂದಾಗ ಗೈರಿಕಾದಿ ಧಾತುಗಳಿಂದ ಕೂಡಿ ನದಿಯು ಕೆಂಪಗೆ ಹರಿಯುವಂತೆ ರಕ್ತವನ್ನು ಸುರಿಸುತ್ತಿದ್ದರು, ಈ ರೀತಿಯಾದರೂ ಆ ಶೂರರು ಬಳಲಲೂ ಇಲ್ಲ. ಹೆದರಲೂ ಇಲ್ಲ.

೧೨. ಒಬ್ಬರಿಗೊಬ್ಬರು ಜಯವನ್ನು ಹೊಂದಬೇಕೆನ್ನುತ್ತಾ ಸಮಾಧಾನ ಪಡಲೇ ಇಲ್ಲ. ಅನಂತರ ಜಯವಂತನು ಒಂದು ಬಾಣದಿಂದ ಕಾಲಕೇಯನ ಧನುಸ್ಸನ್ನು ಕತ್ತರಿಸಿದನು.

೧೩. ಸಾರಥಿಯನ್ನು ಐದು ಬಾಣದಿಂದ ಕೆಡೆವಿದುದಲ್ಲದೆ, ಎಂಟು ಬಾಣಗಳಿಂದ ಕುದುರೆಗಳನ್ನು ಕೆಡವಿದನು.

೧೪ ಆಗ ಕಾಲೇಯನು ಭೂಮಿಯಲ್ಲಿ ನಿಂತೇ ಶಕ್ತ್ಯಾಯುಧವನ್ನು ತೆಗೆದುಕೊಂಡು ಹೊಡೆಯಲು ಅದನ್ನು ಐದು ಬಾಣಗಳಿಂದ ಕತ್ತರಿಸಿದನು.

ಗದಾಮಾದಾಯ ವೇಗಾಚ್ಚ ಜಯಂತಂ ಸ ಜಘಾನ ಹ ।
ಗದಯಾ ಪೀಡಿತಂ ಸಾಶ್ವಂ ಸವರೂಥಂ ಸಕೂಬರಂ ॥ ೧೫ ॥

ಪಾತಯಿತ್ವಾ ಧರಣ್ಯಾಂ ಚ ಸಿಂಹನಾದಂ ನನಾದ ಹ ।
ಲಾಘವಾತ್ಸ ಧರಾಂ ಗತ್ವಾ ಗದಾಪಾಣಿರುಪಸ್ಥಿತಃ ॥ ೧೬ ॥

ವಜ್ರಪಾತಾದ್ಯಥಾ ಶಬ್ದೋ ಲೋಕಾನಾಂ ದುಸ್ಸಹೋ ಭವೇತ್ ।
ತಥಾ ತಯೋರ್ಗದಾಪಾತೇ ಶಬ್ದಃ ಸ್ಯಾತ್ತು ಮುಹುರ್ಮುಹುಃ ॥ ೧೭ ॥

ಏವಂ ತಯೋರ್ಗದಾಯುದ್ಧಂ ಯಾವದ್ದಂಡಚತುಷ್ಟಯಂ ।
ಪ್ರಭಗ್ನೇ ತೇ ಗದೇ ಸ್ವಸ್ಥೌ ಖಡ್ಗಚರ್ಮಧರಾವುಭೌ ॥ ೧೮ ॥

ತದಾ ಪದಾತಯೋರ್ಯುದ್ಧಮದ್ಭುತಂ ಲೋಮಹರ್ಷಣಂ ।
ದೃಷ್ಟ್ವಾ ಚ ವಿಸ್ಮಯಂ ಜಗ್ಮುರ್ದೇವಾಸುರಮಹೋರಗಾಃ ॥ ೧೯ ॥

---

೧೫-೧೬. ಒಡನೆಯೇ ಗದೆಯನ್ನು ತೆಗೆದುಕೊಂಡು ಜಯಂತನನ್ನೂ ಹೊಡೆದು, ಕುದುರೆಗಳನ್ನೂ ಹೊಡೆದು, ರಥವನ್ನೂ ಹೊಡೆದು, ಅಚ್ಚುಮುರಿದು ಕೆಡವಿದನು. ಮತ್ತು ಸಿಂಹನಾದವನ್ನು ಮಾಡಿದನು. ಆಗ ಜಯಂತನು ತನ್ನ ಕೌಶಲ್ಯದಿಂದ ತಪ್ಪಿಸಿಕೊಂಡು ನೆಲಕ್ಕೆ ಧುಮುಕ್ಕಿ ಗದೆಯನ್ನು ಹಿಡಿದು ತಾನೂ ನಿಂತನು.

೧೭. ಸಿಡಿಲು ಬೀಳುವ ಶಬ್ದವು ಜನಗಳಿಗೆ ಹೇಗೆ ಸಹಿಸಲಾಗುವುದಿಲ್ಲವೋ, ಹಾಗೆ ಅವರ ಗದಾಶಬ್ದವು ಕೇಳಲು ಕಠಿಣವಾಗಿದ್ದಿತು.

೧೮. ಈ ರೀತಿ ಅವರಿಬ್ಬರಿಗೂ ಗದಾಯುದ್ಧವು ನಾಲ್ಕು ಗಂಟೆಗಳ ಕಾಲ ನಡೆಯಿತು. ಅನಂತರ ಆ ಗದೆಗಳು ಮುರಿದುಹೋಗಲು ಕತ್ತಿ ಮತ್ತು ಗುರಾಣಿಗಳನ್ನು ಇಬ್ಬರೂ ಹಿಡಿದರು.

೧೯. ನೆಲದಲ್ಲಿ ನಿಂತು ಅವರಿಬ್ಬರಿಗೂ ಆಶ್ಚರ್ಯಕರವಾದ ಯುದ್ಧ ಮಾಡುತ್ತಿರಲು ಇದನ್ನು ನೋಡಿ ದೇವಾಸುರರೂ ನಾಗರೂ ಆಶ್ಚರ್ಯಪಟ್ಟರು.

ಖಡ್ಗಪಾತೈರ್ಮುಹೂರ್ತಾಂತೇ ಶಯೋಶ್ಛಿನ್ನೇ ತು ಚರ್ಮಣೀ ।
ಅಭವತ್ಖಡ್ಗಯುದ್ಧಂ ಚ ತಯೋರ್ಯುದ್ಧಾತಿಶಾಲಿನೋಃ ॥ ೨೦ ॥

ದಧಾರ ಚಿಕುರೇ ತಸ್ಯ ಜಯಂತೋ ಭೀಮವಿಕ್ರಮಃ ।
ಶಿರಶ್ಛಿತ್ತ್ವಾಸ್ಯ ಖಡ್ಗೇನ ಪಾತಯಾಮಾಸ ಭೂತಲೇ ॥ ೨೧ ॥

ತತಸ್ತು ಜಯಶಬ್ದೇನ ದೇವಾಃ ಸರ್ವೇ ನನಂದಿರೇ ।
ಪ್ರಭಗ್ನಾ ದೈತ್ಯಸಂಘಾಶ್ಚ ದಿಶಃ ಸರ್ವಾಃ ಪ್ರದುದ್ರುವುಃ ॥ ೨೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಕಾಲೇಯವಧೋ ನಾಮ
ಚತುಷ್ಷಷ್ಟಿತಮೋಽಧ್ಯಾಯಃ

---

೨೦. ಆ ಕತ್ತಿಗಳ ಏಟುಗಳಿಂದ ಸ್ವಲ್ಪಹೊತ್ತಿನಲ್ಲಿಯೇ ಆ ಚರ್ಮಾಯುಧಗಳೂ ನಾಶವಾದುವು. ಅನಂತರ ಕತ್ತಿಯೊಂದರಿಂದಲೇ ಯುದ್ಧಮಾಡತೊಡಗಿದರು.

೨೧ ಆಗ ಬಲಿಷ್ಠನಾದ ಜಯಂತನು ಆ ಕಾಲೇಯನ ಜುಟ್ಟನ್ನು ಹಿಡಿದುಕೊಂಡು ತಲೆಯನ್ನು ಕತ್ತರಿಸಿ ಕೆಳಗೆ ಕೆಡವಿದನು.

೨೨ ಆಗ ದೇವತೆಗಳೆಲ್ಲರೂ ಜಯಜಯಕಾರ ಮಾಡಿದರು. ದೈತ್ಯರೆಲ್ಲರೂ ಸೋತು ದಿಕ್ಕಿದ ಕಡೆಗೆ ಓಡಿದರು.

ಇಂತು ಶ್ರೀಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಕಾಲೇಯವಧವೆಂಬ
ಅರವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಪಂಚಷಷ್ಟಿತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

ಏತಚ್ಛ್ರುತ್ವಾ ತು ದೈತ್ಯೇಂದ್ರೋ ಹಿರಣ್ಯಾಕ್ಷೋ ಮಹಾಬಲಃ ।
ಸರೋಷಶ್ಚಾತಿತಾಮ್ರಾಕ್ಷೋಽಸುರಾನಾದಿದೇಶ ಹ ॥ ೧ ॥

॥ ಹಿರಣ್ಯಾಕ್ಷ ಉವಾಚ ॥

ಸ್ವಯಂ ಗಚ್ಛೇ ತು ಯುದ್ಧಾಯ ದೇವಾನಾಂ ವಿಜಘಾಂಸಯಾ ।
ನಾಗಚ್ಛಂತಿ ನ ಯುಧ್ಯಂತೇ ತೇ ನ ಮಾರ್ಗಾದ್ವಿಶನ್ತ್ವಿತಃ ॥ ೨ ॥

॥ ವ್ಯಾಸ ಉವಾಚ ॥

ಏತಚ್ಛ್ರುತ್ವಾ ತು ವಚನಂ ಶೇಷಾಂ ದೈತ್ಯಗಣಾಧಿಪಾಃ ।
ಯುದ್ಧಾಯ ಪ್ರಯಯುಸ್ಸರ್ವೇ ಶೂಲಪಾಶಾತಿಪಂಡಿತಾಃ ॥ ೩ ॥

---

### ಅರವತ್ತೈದನೆಯ ಅಧ್ಯಾಯವು

೧ ವ್ಯಾಸನು ಹೇಳಿದನು– ದೈತ್ಯೇಂದ್ರನಾದ ಹಿರಣ್ಯಾಕ್ಷನು ಇದನ್ನು ಕೇಳಿ ಕೋಪಗೊಂಡು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ದೈತ್ಯರಿಗೆ ಇಂತೆಂದು ಅಪ್ಪಣೆ ಮಾಡಿದನು.

೨. ಹಿರಣ್ಯಾಕ್ಷನು ಹೇಳಿದನು–ನಾನೇ ದೇವತೆಗಳನ್ನು ಜಯಿಸಲು ಹೊರಡುತ್ತೇನೆ. ಬರದಿರುವವರೂ ಯುದ್ಧಮಾಡದವರೂ ಈ ದಾರಿಯಲ್ಲಿ ತಿರುಗಲೇ ಕೂಡದು.

೩. ವ್ಯಾಸನು ಹೇಳಿದನು– ಅವನ ಆ ಮಾತನ್ನು ಕೇಳಿ ಉಳಿದಿರುವ ಭಟರು ಶೂಲಪಾಶಗಳನ್ನು ತೆಗೆದುಕೊಂಡು ಯುದ್ಧಕ್ಕೆ ಹೊರಟರು.

ಅಧಿಕಂ ಪೂರ್ವಸೈನ್ಯಾಚ್ಚ ತಥಾ ಶತಗುಣೈರಪಿ ।
ನಿರಂತರಂ ತಥಾಕಾಶಂ ಪ್ರಯಯುಃ ಯುದ್ಧಕಾಂಕ್ಷಿಣಃ ॥ ೪ ॥

ತತೋ ರುದ್ರಾಶ್ಚ ಸಾಧ್ಯಾಶ್ಚ ವಿಶ್ವೇ ಚ ವಸವಸ್ತಥಾ ।
ಸ್ಕಂದಶ್ಚ ಗಣಪಶ್ಚೈವ ವಿಷ್ಣು ಜಿಷ್ಣು ಪುರೋಗಮಾಃ ॥ ೫ ॥

ಸರ್ವೇ ಯೋದ್ಧುಂ ಗತಾಸ್ತೇ ಚ ಹೃಷ್ಟಾ ರಣಸಮುತ್ಸುಕಾಃ ।
ಏತಸ್ಮಿನ್ನಂತರೇ ಯುದ್ಧಂ ದೇವದಾನವಯೋರಪಿ ॥ ೬ ॥

ನ ಭೂತಂ ನ ಶ್ರುತಂ ಪೂರ್ವಂ ಸರ್ವಲೋಕಭಯಂಕರಂ ।
ಶಸ್ತ್ರಾಸ್ತ್ರೈರ್ಬಹುಧಾ ಯುಕ್ತಂ ಶಿಶಿರೇಣೇವ ಕಾನನಂ ॥ ೭ ॥

ಧರಾಂ ಸ್ವರ್ಗೌಕಮಾಕಾಶಂ ಸಂರುಧ್ಯ ಯುದ್ಧಮಾಬಭೌ ।
ಅನ್ಯೋನ್ಯಂ ಜಘ್ನುರಾಕಾಶೇ ತಥಾನ್ಯೋನ್ಯಂ ಮಹೀತಳೇ ॥ ೮ ॥

ಶಕ್ತಿಭಿರ್ಮುಸಲೈರ್ಭಲ್ಲೈರ್ಬಹುಭಿಃ ಶರವೃಷ್ಟಿಭಿಃ ।
ದಾರುಣೈಃ ಖಡ್ಗಪಾತೈಶ್ಚ ತಥಾ ಚಕ್ರಪರಶ್ವಧೈಃ ॥ ೯ ॥

---

೪. ಆ ಸೈನ್ಯವು ಮೊದಲಿದ್ದುದಕ್ಕಿಂತ ನೂರರಷ್ಟು ಹೆಚ್ಚಿತು. ಅವರೆಲ್ಲರೂ ಯುದ್ಧಮಾಡಲು ಆಕಾಶದಲ್ಲಿಯೂ ಸ್ಥಳವಿಲ್ಲದಂತೆ ಹೊರಟರು.

೫-೭. ಆಗ ರುದ್ರರು, ಸಾಧ್ಯರು, ವಿಶ್ವೇದೇವರು, ಸ್ಕಂದ, ಗಣಪತಿ, ವಿಷ್ಣು ಇಂದ್ರ, ಮುಂತಾಗಿ ಎಲ್ಲರೂ ಕೂಡ ಯುದ್ಧಮಾಡಲು ಸಂತೋಷದಿಂದ ಹೊರಟರು. ಇಷ್ಟರವರವರೆಗೂ ದೇವತೆಗಳಿಗೂ, ದಾನವರಿಗೂ ಈ ರೀತಿಯಾದ ಯುದ್ಧವು ಹಿಂದೆ ಎಂದೂ ನಡೆದೂ ಇರಲಿಲ್ಲ. ಕೇಳಿಯೂ ಇರಲಿಲ್ಲ. ಅಷ್ಟು ಭಯಂಕರವಾಗಿ ನಡೆಯಿತು ಮಂಜು ಕಾಡನ್ನು ಮುಸುಕುವಂತೆ, ಶಸ್ತ್ರಾಸ್ತ್ರಗಳು ಆ ಯುದ್ಧರಂಗದಲ್ಲಿ ಮುಸುಕುತ್ತಿದ್ದುವು.

೮-೧೫. ಭೂಮಿ, ಸ್ವರ್ಗ ಆಕಾಶಗಳನ್ನು ಆವರಿಸಿಕೊಂಡು ಆ ಯುದ್ಧವು ರಂಜಿಸಿತು. ಆಕಾಶದಲ್ಲಿ ಭೂಮಿಯಲ್ಲಿ ಒಬ್ಬರನ್ನೊಬ್ಬರು ಶಕ್ತಿ ಮುಸಲ ಭಲ್ಲವೇ ಮುಂತಾದ ಆಯುಧಗಳಿಂದಲೂ, ಚಕ್ರ, ಖಡ್ಗ, ಪರಶ್ವಧಗಳಿಂದಲೂ ಹೊಡೆದಾಡಿದರು.

ಅನ್ಯಾಯುಧೈಶ್ಚ ವಿವಿಧೈರ್ಜಘ್ನುಸ್ತೇ ಚ ಪರಸ್ಪರಂ ।
ಅಭವನ್ಘೋರರೂಪಾಣಿ ಧರಾಕಾಶೇವ್ಯಯಾನಿ ಚ ॥ ೧೦ ॥

ಶಸ್ತ್ರೈಶ್ಶರೈರಸೃಕ್ಪಾತೈಃ ಕಂಕವಾಯಸಜಂಬುಕೈಃ ।
ಯಥಾ ಮುಸಲಧಾರಾಭಿರ್ಘನಾ ವರ್ಷಂತಿ ಲೋಹಿತಂ ॥ ೧೧ ॥

ತಥೈವ ಕ್ಷತಜೈಃ ಪ್ರಾಶ್ಯೈಃ ಸ್ವಾಂಗಾಚ್ಚ ದೇವದಾನವಾಃ ।
ಕೇಚಿತ್ಪತಂತಿ ಮುಹ್ಯಂತಿ ಸ್ಖಲಂತಿ ಚ ಹಸಂತಿ ಚ ॥ ೧೨ ॥

ನದಂತಿ ಚಾರ್ತನಾದಾಂಶ್ಚ ಸಿಂಹನಾದಂ ಮುಹುರ್ಮುಹುಃ ।
ಕೇಷಾಂಚಿದ್ಬಾಹವಶ್ಛಿನ್ನಾಶ್ಛಿನ್ನಾ ಪಾದಾಸ್ತಥಾಪರೇ ॥ ೧೩ ॥

ಭಿನ್ನಪಾರ್ಶ್ವೋದರಾಃ ಕೇಚಿನ್ನಿಪೇತುಃ ಶತಶೋ ಭುವಿ ।
ಕೋಟಿಕೋಟಿಸಹಸ್ರಾಣಿ ಗಜವಾಜ್ಯಸುರಾಣಿ ಚ ॥ ೧೪ ॥

ಅಪತನ್ಧರಣೀಪೃಷ್ಠೇ ರಕ್ತೌಘೇ ಬಹುದಾ ಭುವಿ ।
ತತಸ್ತು ಧರಣೀಪೃಷ್ಠೇ ಅಭವಲ್ಲೋಹಿತಾರ್ಣವಃ ॥ ೧೫ ॥

---

ಅಲ್ಲದೆ ಬೇರೆಬೇರೆ ಆಯುಧಗಳಿಂದಲೂ ಹೊಡೆದಾಡಿದರು ಶಸ್ತ್ರಗಳು, ಶರಗಳು, ಇವುಗಳಿಂದ ಬರುವ ರಕ್ತದಿಂದಲೂ, ಹದ್ದು, ಕಾಗೆ, ನಾಯಿ, ನರಿಗಳಿಂದಲೂ ಭೂಮ್ಯಾಕಾಶಗಳು ಎಡಬಿಡದಂತೆ ಭಯಂಕರವಾಗಿದ್ದುವು. ಮೇಘಗಳು ಮುಸಲದಂತೆ ಮಳೆಯನ್ನು ಸುರಿಸುವಂತೆ ದೇವದಾನವರು ಗಾಯಗಳಿಂದ ರಕ್ತವನ್ನು ಸುರಿಸುತ್ತಿದ್ದರು. ಕೆಲವರು ಬೀಳುತ್ತಿದ್ದರು. ಕೆಲವರು ಮೂರ್ಛೆ ಹೊಂದಿದ್ದರು. ಕೆಲವರು ನಡೆಯಲಾರದೇ ಎಡವಿ ಬೀಳುತ್ತಿದ್ದರು. ಕೆಲವರು ನಗುತ್ತಿದ್ದರು. ಕೆಲವರು ಗರ್ಜಿಸುತ್ತಿದ್ದರು. ಕೆಲವರು ದುಃಖಕರವಾಗಿ ಕೂಗುತ್ತಿದ್ದರು. ಮತ್ತೆ ಕೆಲವರು ಸಿಂಹನಾದಮಾಡುತ್ತಿದ್ದರು ಕೆಲವರ ಕೈಯಿ ಕತ್ತರಿಸಿಹೋಯಿತು. ಕೆಲವರ ಕಾಲು ಕತ್ತರಿಸಿತು. ಕೆಲವರು ಪಕ್ಕೆ ಹೊಟ್ಟೆಗಳಲ್ಲಿ ಏಟುತಿಂದು ಸಾಪಿರಗಟ್ಟಲೆಯಾಗಿ ಬಿದ್ದರು. ಆನೆ, ಕುದುರೆ, ಕತ್ತೆ, ರಾಕ್ಷಸರು ಮುಂತಾದುವು ಕೋಟಿಕೋಟಿಗಟ್ಟಲೆಯಲ್ಲಿ ಆ ರಕ್ತದಲ್ಲಿಯೇ ಬಿದ್ದುವು. ಆಗ ಭೂಮಿಯೆಲ್ಲವೂ ರಕ್ತದ ಸಮುದ್ರದಂತಾಯಿತು.

ವಿಪರೀತಾಸ್ತತೋ ನದ್ಯಃ ಸದ್ಯಸ್ತತ್ರ ವಿಸಸ್ರುವುಃ ।
ತೃಣಕಾಷ್ಠಪರಾಸ್ತತ್ರ ಶಕ್ತಯೋ ದಾರುಸಂಚಯೋಃ ॥ ೧೬ ॥

ಮುದ್ಗರಾ ಮುಸಲಾಶ್ಶೂಲಾ ಮಕರಾದ್ಯಾ ಭವಂತಿ ಹಿ ।
ಜಯಂತಿಕಾ ಧ್ವಜಾ ಮೀನಾಃ ಕಮಠಾಶ್ಚರ್ಮಕಾಯಕಾಃ ॥ ೧೭ ॥

ಶರಾದಿಭಿರ್ಮಹೋಷ್ಟ್ರೈಶ್ಚ ನಿರುದ್ಧಾಃ ಪ್ರಚುರೈಸ್ತಥಾ ।
ಕೇಶಚಾಮರಶೈವಾಲಾಃ ಸಂಪೂರ್ಣಾಸ್ತಾಸ್ತತಸ್ತತಃ ॥ ೧೮ ॥

ಪತದ್ಭಿಶ್ಚ ತಥಾನ್ಯೈಶ್ಚ ವಿವಿಧೈಃ ಕ್ಷತಜಾರ್ಣವಃ ।
ತದಾ ವಸುಂಧರಾ ಸರ್ವಾ ಸಶೈಲವನಕಾನನಾ ॥ ೧೯ ॥

ರುಧಿರೌಘಾ ಮಹಾಸಿಂಹಾ ಸರ್ವಲೋಕಭಯಂಕರಾ ।
ಸ್ಕಂದಸ್ಯ ಶಕ್ತಿಪಾತೇನ ಗತಾ ದೈತ್ಯಾ ಯಮಕ್ಷಯಂ ॥ ೨೦ ॥

ಪರ್ಶುನಾ ಪರಮೇಣೈವ ಅಗ್ನಿನಾಗ್ನಿಶಿಖೈಶ್ಶರೈಃ ।
ವರುಣಸ್ಯ ಚ ಪಾಶೇನ ಬದ್ಧಾ ಮಗ್ನಾ ಯಮಕ್ಷಯೇ ॥ ೨೧ ॥

---

೧೬-೧೭. ಆಗ ಅಲ್ಲಿಂದ ನದಿಗಳು ಒಡನೆಯೇ ಹೊರಟುವು. ಆ ನದಿಯಲ್ಲಿ ಶಕ್ತ್ಯಾಯುಧಗಳು, ಕಡ್ಡಿ, ಕಸ, ಮರಗಳಾಗಿ ತೇಲಿದುವು. ಮುದ್ಗರ, ಮುಸಲ, ಶೂಲಾಯುಧಗಳು, ಮೊಸಳೆಗಳಾದುವು. ಜಯಂತಿಕೆಯೇ ಮುಂತಾದ ಧ್ವಜಗಳು ಮೀನುಗಳಾದುವು. ಚರ್ಮಾಯುಧಗಳು ಆಮೆಗಳಾದುವು.

೧೮. ಕೂದಲುಗಳೂ, ಚಾಮರಗಳೂ, ದೊಡ್ಡ ದೊಡ್ಡ ಆನೆ ಒಂಟೆ ಬಾಣ ಗಳಿಂದ ತಡೆಯಲ್ಪಟ್ಟು ಗುಂಪುಗುಂಪಾಗಿ ಪಾಚಿಗಳಂತೆ ಪ್ರಕಾಶಿಸುತ್ತಿದ್ದುವು.

೧೯-೨೦. ಇನ್ನೂ ಅನೇಕ ಪ್ರಾಣಿಗಳು ಪೆಟ್ಟು ತಿಂದು ಬಿದ್ದುದರಿಂದ ರಕ್ತವು ಹರಿಯಿತು. ಆಗ ಭೂಮಿಯೆಲ್ಲವೂ ರಕ್ತಮಯವಾಗಿ ಭಯಂಕರವಾಗಿದ್ದಿತು. ಈ ರೀತಿಯಾಗಿ ಸ್ಕಂದನ ಶಕ್ತ್ಯಾಯುಧದಿಂದ ದೈತ್ಯರೆಲ್ಲರೂ ಸತ್ತರು.

೨೧. ಪರಶು ಆಯುಧದಿಂದಲೂ ಅಗ್ನಿಯ ಬಾಣದಿಂದಲೂ, ವರುಣನ ಪಾಶ ದಿಂದಲೂ, ಸತ್ತು ಯಮನ ಪಟ್ಟಣಕ್ಕೆ ದೈತ್ಯರು ಹೋದರು.

ಏಷಾಂ ಪುತ್ರೈಶ್ಚ ಪೌತ್ರೈಶ್ಚ ಪುರೋಗೈಸ್ಸಚಿವೈಸ್ತಥಾ ।
ನಿಪಾತಿತಾಶ್ಚ ದೈತೇಯಾಃ ಶರಶಕ್ತ್ಯೃಷ್ಟಿವೃಷ್ಟಿಭಿಃ ॥ ೨೨ ॥

ಗ್ರಹೈಶ್ಚ ಶ್ವಸನೈರೇವ ಯಕ್ಷಗಂಧರ್ವಕಿನ್ನರೈಃ ।
ಮಹತ್ಯಾ ಗದಯಾ ಚೈವ ಕುಬೇರೇಣ ಚ ಧೀಮತಾ ॥ ೨೩ ॥

ಘನಾನಾಂ ನಿಕರೈರ್ವಜ್ರೈಸ್ತುಷಾರೈರ್ವಿಧುನೇರಿತೈಃ ।
ಪನ್ನಗಾನಾಂ ವಿಷೈರ್ಘೋರೈರ್ದೈತ್ಯಾಃ ಪೇತುರ್ಧರಾತಳೇ ॥
ಅನ್ಯೈಶ್ಚ ವಿವಿಧೈರ್ದೇವೈಃ ಕೋಟಿಕೋಟಿಸಹಸ್ರಶಃ ॥ ೨೪ ॥

ಪತಿತಾಶ್ಚ ಯಯುಸ್ಸರ್ವೇ ಧರಣ್ಯಾಂ ತು ಗತಾಸವಃ ।
ದೇಹಾಂಸ್ತ್ಯಕ್ತ್ವಾ ದಿವಂ ಯಾಂತಿ ಕೇಚಿಚ್ಚ ಯಮಮಂದಿರಂ ॥ ೨೫ ॥

ಕೇಚಿದಿಚ್ಛಂತಿ ಪಾತಾಳಂ ಪುಣ್ಯಾಪುಣ್ಯಪ್ರಯೋಗತಃ ।
ಏತಸ್ಮಿನ್ನಂತರೇ ವೇದಾರ್ಜಜಲ್ಪುಃ ಪರಮರ್ಷಯಃ ॥ ೨೬ ॥

ಸ್ವಸ್ತ್ಯಸ್ತು ಬ್ರಾಹ್ಮಣೇಭ್ಯಶ್ಚ ಗೋಭ್ಯಸ್ತ್ರೀಭ್ಯಸ್ತಪಸ್ವಿಷು ।
ಪ್ರಯುಧ್ಯಮಾನೇಷ್ವನ್ಯೇಷು ಸಾಂಪ್ರತಂ ಸರ್ವಜಂತುಷು ॥ ೨೭ ॥

---

೨೨-೨೪. ಈ ಇಂದ್ರಾದಿಗಳ ಮಕ್ಕಳು, ಮೊಮ್ಮಕ್ಕಳು, ಪುರೋಹಿತರು, ಮಂತ್ರಿಗಳು, ಇವರ ಬಾಣ, ಶಕ್ತಿ, ಮುಂತಾದ ಆಯುಧಗಳಿಂದ ಅಸುರರು ಕೆಡವಲ್ಪಟ್ಟರು. ಗ್ರಹಗಳು, ವಾಯುಗಳು, ಯಕ್ಷರು, ಗಂಧರ್ವರು, ಕಿನ್ನರರು, ಇವರ ಗದೆ ಮುಂತಾದುವುಗಳಿಂದಲೂ, ಕುಬೇರನ ಗದೆಯಿಂದಲೂ, ಮೋಡಗಳಿಂದಲೂ, ಸಿಡಿಲಿನಿಂದಲೂ, ಚಂದ್ರನು ಬಿಟ್ಟ ಶೀತದಿಂದಲೂ, ಆ ದೈತ್ಯರು ಸತ್ತರು. ಹಾವುಗಳ ಕೆಟ್ಟವಿಷಗಳಿಂದಲೂ ದೇವತೆಗಳ ಇನ್ನೂ ಬೇರೆಯಾದ ತೊಂದರೆಗಳಿಂದಲೂ ಕೋಟಿಗಟ್ಟಲೆಯಾಗಿ ದೈತ್ಯರು ಭೂಮಿಯಲ್ಲಿ ಬಿದ್ದರು.

೨೫-೨೭. ಅವರವರ ಪಾಪಪುಣ್ಯಗಳಿಗನುಸಾರವಾಗಿ ಕೆಲವರು ಸತ್ತಮೇಲೆ ಸ್ವರ್ಗಕ್ಕೂ ಮತ್ತೆ ಕೆಲವರು ನರಕಕ್ಕೂ ಮತ್ತೆ ಕೆಲವರು ಪಾತಾಳಕ್ಕೂ ಹೋಗುತ್ತಿದ್ದರು. ಈ ಮಧ್ಯದಲ್ಲಿ ಋಷಿಗಳು ಗೋವುಗಳಿಗೂ, ಬ್ರಾಹ್ಮಣರಿಗೂ, ಸ್ತ್ರೀಯರಿಗೂ, ತಪಸ್ವಿಗಳಿಗೂ ಒಳ್ಳೆಯದಾಗಲೆಂಬುದಾಗಿ ವೇದಮಂತ್ರಗಳನ್ನು ಜಪಿಸುತ್ತಿದ್ದರು. ಮಿಕ್ಕವರೆಲ್ಲರೂ ಯುದ್ಧಮಾಡುತ್ತಲೇ ಇದ್ದರು.

ವಿಬುಧೈರರ್ದಿತಾ ದೈತ್ಯಾ ಶೇಷಾಃ ಪರ್ವತಮಾಶ್ರಿತಾಃ ।
ಪ್ರಜಗ್ಮುಶ್ಚ ದಿಶಸ್ಸರ್ವಾ ಕಾತರಾ ರಣಭೀರವಃ ॥ ೨೮ ॥

ದೈತ್ಯವ್ಯೂಹೇ ಪ್ರಭಗ್ನೇ ಚ ಬಲೋ ನಾಮ ಮಹಾಬಲಃ ।
ಅರ್ದಯಾಮಾಸ ದೇವಾಂಶ್ಚ ಸಂಯುಮಾಗ್ನಿಸಮೈಶ್ಶರೈಃ ॥ ೨೯ ॥

ತಸ್ಯ ಬಾಣಾರ್ದಿತಾ ದೇವಾ ಬಹವೋ ಬಲದರ್ಪಿತಾ ।
ಪತಿತಾ ಧರಣೀಪೃಷ್ಠೇ ಕೇಚಿದ್ಭಗ್ನಾ ರಣಾಜಿರೇ ॥ ೩೦ ॥

ದೃಷ್ಟ್ವಾ ತಸ್ಯ ಮಹತ್ಕರ್ಮ ದಾರುಣಂ ಲೋಕಭೀಷಣಂ ।
ಶಶಂಸುಃ ಋಷಯೋ ದೇವಾಃ ಶುಕ್ರಶಿಷ್ಯಾಃ ಪ್ರಚುಕ್ರುಶಃ ॥ ೩೧ ॥

ಅಥ ಕ್ರುದ್ಧೋ ಮಹಾತೇಜಾಃ ಶತಕ್ರತುರರಿಂದಮಃ ।
ಜಘಾನ ಶರಸಂದೋಹೈರ್ಬಲಂ ಬಲವತಾಂ ವರಂ ॥ ೩೨ ॥

ಪರಸ್ಪರಂ ಜಘಾನಾಥ ತೌ ಚ ವೀರೌ ಮಹಾಬಲೌ ।
ನ ಶ್ರಮಶ್ಚ ತಯೋರ್ಯುದ್ಧೇ ನ ವ್ಯಥಾ ನ ತು ವಿಭ್ರಮಃ ॥ ೩೩ ॥

---

೨೮. ಈ ರೀತಿ ದೇವತೆಗಳಿಂದ ಹೊಡೆಯಲ್ಪಟ್ಟ ದೈತ್ಯರು ಕೆಲವರು ಪರ್ವತಗಳಿಗೂ, ಮತ್ತೆ ಕೆಲವರು ಸಿಕ್ಕಿದ ಕಡೆಗೂ ಹೆದರಿ ಓಡುತ್ತಿದ್ದರು.

೨೯. ಈರೀತಿ ರಾಕ್ಷಸಸೈನ್ಯವು ಓಡುತ್ತಿರಲು ಬಲಿಷ್ಠನಾದ ಬಲನೆಂಬುವನು ದೇವತೆಗಳನ್ನು ಉಗ್ರವಾದ ಬಾಣಗಳಿಂದ ನೋಯಿಸಿದನು.

೩೦. ಈತನ ಬಾಣದ ಪೆಟ್ಟಿನಿಂದ ಬಲದರ್ಪಿತರಾದ ಅನೇಕರು ಬಿದ್ದು ಸತ್ತರು. ಮತ್ತೆ ಕೆಲವರು ಓಡಿದರು. ರಣರಂಗವು ಈರೀತಿ ಭಯಂಕರವಾಗಿದ್ದಿತು.

೩೧. ಆ ಬಲನೆಂಬುವನ ಈ ಮಹಾಕಾರ್ಯವನ್ನು ನೋಡಿ ಋಷಿಗಳೂ, ದೇವತೆಗಳೂ ಹೊಗಳಿದರು. ದೈತ್ಯರು ಕೂಗಿಕೊಂಡರು.

೩೨ ಆಗ ಇಂದ್ರನಿಗೆ ಕೋಪಬಂದು ಬಲನೆಂಬ ರಾಕ್ಷಸನನ್ನು ಅನೇಕ ಬಾಣಗಳಿಂದ ಹೊಡೆದನು.

೩೩. ಅವರಿಬ್ಬರಿಗೂ ಯುದ್ಧವೊದಲಾಯಿತು. ಹೀಗೆ ಅವರಿಬ್ಬರೂ ಯುದ್ಧ ಮಾಡುತ್ತಿರುವಲ್ಲಿ ಒಬ್ಬರೂ ಶ್ರಮಪಡಲಿಲ್ಲ ವ್ಯಥೆ ಹೊಂದಲಿಲ್ಲ ಭ್ರಮೆಯನ್ನೂ ಹೊಂದಲಿಲ್ಲ.

ರುಧಿರೇಣಾವಸಿಕ್ತಾಂಗೌ ಪ್ರಸ್ರುತೇನ ಮಹಾಬಲೌ ।
ಯಥೈವ ಮಾಧವೇ ಮಾಸಿ ಪುಷ್ಪಿತೌ ಕಿಂಶುಕದ್ರುಮೌ ॥ ೩೪ ॥

ಸೋಽಪಿಕ್ರುದ್ಧೋ ಬಲೋ ಯುದ್ಧೇ ವಿನಿಷ್ಕ್ರಮ್ಯ ತಂ ಶಿತೈಶ್ಶರೈಃ ।
ಅರ್ದಯಾಮಾಸ ಸಹಸಾ ದರ್ಶಯನ್ಹಸ್ತಲಾಘವಂ ॥ ೩೫ ॥

ಚಕ್ರಾಣಿ ಚ ಸಹಸ್ರಾಣಿ ಶೂಲಾನಿ ಮುಸಲಾನಿ ಚ ।
ನಿಚಖಾನ ರಣೇ ಶಕ್ರೇ ಚಪಲೇ ಚಾಸುರೋತ್ತಮಃ ॥ ೩೬ ॥

ತಾನಿ ಚಕ್ರಾಣಿ ಶೂಲಾನಿ ನಿಚಕರ್ತ ಶರೋತ್ತಮೈಃ ।
ಸುರರಾಟ್ಸಹಸಾ ಭ್ರಾನ್ತೋ ಲೀಲಯಾ ಸಮರೇ ಬಲೀ ॥ ೩೭ ॥

ಸ ಚ ದೈತ್ಯೋ ಮಹಾತೇಜಾಃ ಶಕ್ತ್ಯಾ ಚೈವ ಪುರಂದರಂ ।
ನಿಜಘಾನ ತದಾ ತೂರ್ಣಂ ಗಜಸ್ಥಂ ಚ ಸ್ತನಾಂತರೇ ॥ ೩೮ ॥

ತಯಾ ವಿನಿಹತಶ್ಶಕ್ರಃ ಪ್ರಚಚಾಲ ಗಜೋಪರಿ ।
ಲಬ್ಧಸಂಜ್ಞೋ ಬಲಂ ಜಿಷ್ಣುರ್ಬಿಭೇದ ದನುಜಂ ಕ್ಷಣಾತ್ ॥ ೩೯ ॥

---

೩೪-೩೫. ಹೀಗೆ ಯುದ್ಧಮಾಡುತ್ತಿರಲು ರಕ್ತವು ಸೋರುತ್ತಿತ್ತು. ಇದರಿಂದ ಅವರ ಮೈ ನೆನೆದು ಆ ಇಬ್ಬರೂ ವೈಶಾಖ ಮಾಸದಲ್ಲಿ ಹೂಬಿಟ್ಟ ಮುತ್ತುಗದ ಮರದಂತೆ ಕಾಣುತ್ತಿದ್ದರು.

೩೬. ಆಗ ದೈತ್ಯನಾದ ಬಲನು ಚಕ್ರಗಳನ್ನೂ, ಶೂಲಗಳನ್ನೂ, ಮುಸಲಗಳನ್ನೂ, ಇಂದ್ರನ ಮೇಲೆ ಸಾವಿರಗಟ್ಟಲೆಯಾಗಿ ಎಸೆದನು.

೩೭. ಇಂದ್ರನು ಸ್ವಲ್ಪವೂ ಕಾತರನಾಗದೆ ಆ ಚಕ್ರಶೂಲಗಳನ್ನೆಲ್ಲಾ ಬಾಣದಿಂದ ಸುಲಭವಾಗಿ ಕತ್ತರಿಸಿದನು.

೩೮. ಆಗ ಶೂರನಾದ ಬಲನು ಕೋಪಗೊಂಡು ಆನೆಯ ಮೇಲಿರುವ ಇಂದ್ರನ ಎದೆಗೆ ಶಕ್ತಿಯಿಂದ ಹೊಡೆದನು.

೩೯. ಆ ಏಟಿನಿಂದ ಇಂದ್ರನು ಆನೆಯ ಮೇಲೆಯೇ ಮೂರ್ಛಿತನಾದನು. ಸ್ವಲ್ಪ ಹೊತ್ತಿನ ಮೇಲೆ ಜ್ಞಾನಬಂದು ಆ ದನುಜನನ್ನು ಬಲವಾಗಿ ಹೊಡೆದನು.

ರಥಸ್ಥಸ್ಯ ಚ ಹಸ್ತಾಚ್ಚ ಧನುಶ್ಛಿಚ್ಛೇದ ಜೇಷುಣಾ ।
ಚರ್ಮ ತೀಕ್ಷ್ಣಂ ಧ್ವಜಂ ತಸ್ಯ ಶರೇಣೈಕೇನ ವೀರಹಾ ॥ ೪೦ ॥

ಚತುರ್ಭಿರ್ನಿಶಿತೈರ್ಬಾಣೈರ್ವಿನ್ಯಾಧ ಚತುರೋ ಹಯಾನ್ ।
ಶರೇಣೈಕೇನ ಸೂತಸ್ಯ ಶಿರಶ್ಛಿಚ್ಛೇದ ತತ್ಕ್ಷಣಾತ್ ॥ ೪೧ ॥

ಛಿನ್ನಧನ್ವಾ ಹತರಥೋ ಹತಾಶ್ವೋ ಹತಸಾರಥಿಃ ।
ನಿಪತ್ಯ ಮೂರ್ಛಿತಃ ಪೃಥ್ವ್ಯಾಂ ಮುಹೂರ್ತಾನ್ಮೃತ್ಯುಮಾಪ ಸಃ ॥ ೪೨ ॥

ಅಥ ಕ್ರುದ್ಧೋ ಮಹಾದೈತ್ಯೋ ನಮುಚಿಸ್ಸುರದರ್ಪಹಾ ।
ಗದಾಮಾದಾಯ ಸಾಹಸಾ ಸ ಜಘಾನ ಮಹಾಗಜಂ ॥ ೪೩ ॥

ಯಥಾ ಮೇರುಗಿರೇಃ ಶೃಂಗೇ ವಜ್ರಪಾತೋ ಭವೇದ್ಧ್ರುವಂ ।
ತಥೈವ ಚ ಮಹಾಶಬ್ದೋ ಹ್ಯಭವಲ್ಲೋಮಹರ್ಷಣಃ ॥ ೪೪ ॥

ಪ್ರಹಾರೇಣಾರ್ದಿತಃ ಪದ್ಮೀ ಸಂಚಚಾಲ ಸ ವಿಹ್ವಲಃ ।
ರುಧಿರೇಣಾವಸಿಕ್ತಾಂಗೋ ವಿಮುಖೋ ವೇದನಾತುರಃ ॥ ೪೫ ॥

---

೪೦-೪೧. ರಥದಲ್ಲಿದ್ದ ಅವನ ಧನುಸ್ಸನ್ನು ಒಂದು ಬಾಣದಿಂದ ಕತ್ತರಿಸಿದನು. ಚರ್ಮಾಯುಧವನ್ನೂ, ಧ್ವಜವನ್ನೂ, ಒಂದೊಂದು ಬಾಣದಿಂದ ಕತ್ತರಿಸಿದನು. ನಾಲ್ಕು ಬಾಣಗಳಿಂದ ನಾಲ್ಕು ಕುದುರೆಗಳನ್ನು ಕೊಂದನು. ಒಂದು ಬಾಣದಿಂದ ಸಾರಥಿಯ ತಲೆಯನ್ನು ಹಾರಿಸಿದನು.

೪೨. ಈರೀತಿ ಧನುಸ್ಸು, ಸಾರಥಿ, ರಥ, ಕುದುರೆಗಳು ನಾಶವಾಗಲು ಆ ಬಲನು ಮೂರ್ಛೆಬಂದು ನೆಲದಲ್ಲಿ ಬಿದ್ದು ಸತ್ತನು.

೪೩. ಅನಂತರ ನಮುಚಿಯು ಕೋಪಗೊಂಡು ಗದೆಯನ್ನು ತೆಗೆದುಕೊಂಡು ಬಂದು ಅದರಿಂದ ಆ ಇಂದ್ರನ ಆನೆಯನ್ನು ಹೊಡೆದನು.

೪೪. ಮೇರುಪರ್ವತದ ಕೋಡುಗಲ್ಲಿನ ಮೇಲೆ ಸಿಡಿಲು ಬಿದ್ದಂತೆ ಭಯಂಕರವಾದ ಶಬ್ದವಾಯಿತು ಅದು ರೋಮಾಂಚವನ್ನುಂಟುಮಾಡಿತು.

೪೫. ಆ ಏಟಿನಿಂದ ದುಃಖಗೊಂಡ ಆ ಆನೆಯು ರಕ್ತವನ್ನು ಸುರಿಸತೊಡಗಿತು. ಮತ್ತು ಆ ನೋವನ್ನು ತಡೆಯಲಾರದೆ ಹಿಂದಕ್ಕೆ ತಿರುಗಿಬಿಟ್ಟಿತು.

ಶತಕ್ರತುಂ ವಿಧಾವಂತಿ ಶತಶೋಽಥ ಸಹಸ್ರಶಃ ।
ಅರ್ಧಚಂದ್ರೈಃ ಕ್ಷುರಪ್ರೈಶ್ಚ ಚಿಚ್ಛೇದ ಪಾಕಶಾಸನಃ ॥ ೪೬ ॥

ಜನ್ತುಭಿಸ್ತಸ್ಯ ಮಾಯಾಭಿರರ್ದಿತಾಸ್ಸುರಪುಂಗವಾಃ ।
ಭೂಮೌ ನಿಪತಿತಾಃ ಕೇಚಿತ್ಕೇಽಚಿತ್ಸಪ್ತಾ ರಥೋಽಪರಿ ॥ ೪೭ ॥

ದೃಷ್ಟ್ವಾತಸ್ಯ ಮಹತ್ಕರ್ಮ ಮಾಧವೋಽ ವಿಶಿಖಾಂಸ್ತದಾ ।
ಜಂತುಭೂತಾನ್ಸಚಕ್ರೇಣ ಚಿಚ್ಛೇದ ದೇಹಲಗ್ನಕಾನ್ ॥ ೪೮ ॥

ತತೋಽ ಜಿಷ್ಣುಸ್ತ್ರಿಭಿರ್ಬಾಣೈಃ ಪಾತಯಾಮಾಸ ಭೂತಳೇ ।
ಪೃಥಿವ್ಯಾಂ ಪತಿತೋಽ ದೈತ್ಯೋಽ ಮೂರ್ಛಿತಸ್ಸ್ಖಲಿತಃ ಪುನಃ ॥ ೪೯ ॥

ದಧಾರ ಮುದ್ಗರಂ ಘೋರಂ ಶಕ್ರಂ ಹನ್ತುಂ ಸಮುದ್ಯತಃ ।
ತತೋಽ ಜಘಾನ ಬಲವಾನ್ಕುಲಿಶೇನ ಮಹಾಸುರಂ ॥ ೫೦ ॥

---

೪೬. ಮತ್ತು ಆವನು ಇಂದ್ರನ ಮೇಲೆ ಅನೇಕಬಾಣಗಳನ್ನು ಬಿಡಲು ಅವನ್ನು ಇಂದ್ರನು ಅರ್ಧಚಂದ್ರಬಾಣಗಳಿಂದ ಕಡಿದನು.

೪೭. ಆಗ ನಮುಚಿಯು ಮಾಯೆಯನ್ನಾಶ್ರಯಿಸಿದನು. ಮಾಯೆಯಿಂದ ಉತ್ಪನ್ನವಾದ ಪ್ರಾಣಿಗಳಿಂದ ತೊಂದರೆ ಹೊಂದಿ ಕೆಲವರು ದೇವತೆಗಳು ನೆಲದ ಮೇಲೆ ಬಿದ್ದರು. ಕೆಲವರು ರಥದಮೇಲೆಯೇ ಬಿದ್ದರು.

೪೮. ನಮುಚಿಯ ಈ ಮಹಾಕಾರ್ಯವನ್ನು ವಿಷ್ಣುವು ನೋಡಿ ದೇಹದಲ್ಲಿ ಅಂಟಿಕೊಂಡಿರುವ ಆ ಜಂತುಗಳನ್ನು ಚಕ್ರದಿಂದ ಕತ್ತರಿಸಿದನು.

೪೯. ಅನಂತರ ಆ ಇಂದ್ರನು ಮೂರು ಬಾಣಗಳನ್ನು ಬಿಟ್ಟು ಈ ನಮುಚಿಯನ್ನು ಮೂರ್ಛೆಗೊಳಿಸಿದನು. ಅದರಿಂದ ನೆಲದ ಮೇಲೆ ಬಿದ್ದನು. ಕೊಂಚ ಹೊತ್ತಿನ ಮೇಲೆ ಒಡನೆಯೇ ಎದ್ದನು.

೫೦. ಎದ್ದು ಒಡನೆಯೇ ಮುದ್ಗರ ಆಯುಧವನ್ನು ತೆಗೆದುಕೊಂಡು ಇಂದ್ರನನ್ನು ಕೊಲ್ಲಲು ಹೋದನು. ಇಂದ್ರನು ವಜ್ರಾಯುಧವನ್ನು ತೆಗೆದುಕೊಂಡು ಹೊಡೆದನು.

ಸ ಪಪಾತ ಮಹೀಪೃಷ್ಠೇ ಕ್ಷತವಕ್ಷಾ ಮಹಾಬಲಃ ।
ಸಾಧುಸಾಧ್ವಿತಿ ದೇವಾಶ್ಚ ಸಿದ್ಧಾಶ್ಚೈವ ಮಹರ್ಷಯಃ॥ ॥ ೫೧ ॥

ಅಪೂಜಯಂಸ್ತದಾ ಶಕ್ರಂ ಬಹುಭಿಃ ಪುಷ್ಪವೃಷ್ಟಿಭಿಃ ।
ತತೋ ದೈತ್ಯಗಣಾಸ್ಸರ್ವೇ ಭೀತಾಸ್ತತ್ರಪ್ತದುದ್ರುವುಃ ॥
ಗೀತಂ ಗಾಯಂತಿ ಗಂಧರ್ವಾ ನನೃತುಶ್ಚಾಪ್ಸರೋಗಣಾಃ ॥ ೫೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಬಲ ನಮುಚಿ ವಧೋ ನಾಮ ಪಂಚಷಷ್ಟಿತಮೋಽಧ್ಯಾಯಃ

---

೫೧-೫೨. ಇಂದ್ರನು ವಜ್ರಾಯುಧದಿಂದ ಹೊಡೆದ ಆ ಏಟು ಎದೆಯಲ್ಲಿ ಬೀಳಲು ನಮುಚಿಯು ನೆಲದ ಮೇಲೆ ಬಿದ್ದನು. ದೇವತೆಗಳೂ ಮಹರ್ಷಿಗಳೂ ಸಾಧು ಸಾಧು ಎಂದು ಹೊಗಳಿದರು. ಮತ್ತು ಪುಷ್ಪವೃಷ್ಟಿಗಳಿಂದ ಆ ಶಕ್ರನನ್ನೂ ಗೌರವಿಸಿದರು. ಆಗ ನಮುಚಿಯ ಸೈನಿಕರಾದ ದೈತ್ಯರೆಲ್ಲರೂ ಹೆದರಿ ಓಡಿದರು. ಗಂಧರ್ವರು ಸಂತೋಷದಿಂದ ಗಾನಮಾಡಿದರು. ಅಪ್ಸರಸ್ತ್ರೀಯರು ಕುಣಿಯುತ್ತಾ ಇದ್ದರು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಬಲ ನಮುಚಿಯರ ವಧವೆಂಬ ಅರವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಷಟ್‌ಷಷ್ಟಿತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

ಬಲಂ ಚ ನಿಹತಂ ದೃಷ್ಟ್ವಾ ನಮುಚಿಂ ಚ ಸ್ವಕಾಗ್ರಜಂ ।
ಮುಚಿಸ್ತತ್ರಾಬ್ರವೀದ್ವಾಕ್ಯಂ ಜ್ಯೇಷ್ಠೋ ಮೇ ಸೂದಿತಸ್ತ್ವಯಾ ॥ ೧ ॥

ಪರೋಕ್ಷೇಣಾಧುನಾ ತ್ವಾಂ ಚ ಶರ್ರೈನೇಷ್ಯಾಮಿ ಭಾಸ್ಕರೀಂ
ತಮಬ್ರವೀನ್ಮಹಾತೇಜಾಃ ಶಕ್ರಸ್ಸರ್ವಸುರಾರ್ಚಿತಃ ॥ ೨ ॥

॥ ಶಕ್ರ ಉವಾಚ ॥

ಭ್ರಾತುಸ್ತೇ ಧರ್ಮಪಂಥಾನಮಿದಾನೀಂ ಲಪ್ಸ್ಯಸೇ ಧ್ರುವಂ ।
ವಹ್ನೇರುಷ್ಣಮವಿಜ್ಞಾಯ ಪ್ರಮೋದಾಚ್ಛಲಭಾ ಯಥಾ
ಸಹಸಾ ಪ್ರವಿಶಂತ್ಯಗ್ನಿಂ ತಥಾ ಮಾಂ ಯೋದ್ಧುಮಿಚ್ಛಸಿ ॥ ೩ ॥

---

### ಅರವತ್ತಾರನೆಯ ಅಧ್ಯಾಯವು

೧-೨. ವ್ಯಾಸನು ಹೇಳಿದನು–ಬಲನನ್ನೂ, ನಮುಚಿಯನ್ನೂ ಕೊಂದುದನ್ನು ನೋಡಿ ಮುಚಿ ಎಂಬುವನು ಇಂದ್ರನಿಗೆದುರಾಗಿ ಬಂದು ಎಲೈ ಇಂದ್ರನೇ ! ನಾನು ಇಲ್ಲದಿದ್ದಾಗ ನನ್ನ ಅಣ್ಣನಾದ ನಮುಚಿಯನ್ನು ಕೊಂದೆ. ಈಗ ನಿನ್ನನ್ನು ಯಮನ ಮನೆಗೆ ಕಳುಹಿಸುತ್ತೇನೆ. ಆಗ ಬಲಶಾಲಿಯಾದ ಇಂದ್ರನು ಅವನನ್ನು ಕುರಿತಿಂತೆಂದನು.

೩. ಶಕ್ರನು ಹೇಳಿದನು- ಎಲೈ ಮುಚಿಯೇ ! ನಿನ್ನ ಅಣ್ಣನ ಧರ್ಮದ ದಾರಿಯನ್ನು ನೀನು ಈಗ ಹಿಡಿಯುತ್ತೀಯೆ. ಬೆಂಕಿಯ ಬಿಸಿಯನ್ನು ತಿಳಿಯದೇ ಪತಂಗದ ಹುಳುಗಳು ಅದರಲ್ಲಿ ಬೀಳುವಂತೆ ನೀನು ನನ್ನೊಡನೆ ಯುದ್ಧಮಾಡಲು ಬಯಸುತ್ತೀಯೆ.

॥ ವ್ಯಾಸ ಉವಾಚ ॥

ಏವಂ ಬ್ರುವಾಣಂ ಇದ್ರಂ ಚ ಜಘಾನ ವಿಶಿಖೈಸ್ತ್ರಿಭಿಃ ।
ಸ ಚಿಚ್ಛೇದ ತ್ರಿಭಿರ್ಬಾಣೈಃ ಶಕ್ರಃ ಪರಪುರಂಜಯಃ ॥ ೪ ॥

ತತೋ ಜಘಾನ ದಶಭಿರಿಂದ್ರಮೈರಾವಣಂ ತ್ರಿಭಿಃ ।
ಸಪ್ತಭಿರ್ಮಾತಲಿಂ ಭಿತ್ವಾ ನಾದೈರುಚ್ಚೈರ್ನನಾದ ಹ ॥ ೫ ॥

ಶಕ್ರಂ ಪ್ರತಿ ಪುನರ್ದೈತ್ಯೋ ಭ್ರಾಮಯಾಮಾಸ ಸಂಭ್ರಮಾತ್ ।
ಆಯಸೀಂ ತಾಂ ಗದಾಂ ಕೋಪಾನ್ಮಹಾಬಲಪರಾಕ್ರಮಃ ॥ ೬ ॥

ತತಸ್ತು ಲಾಘವಾಚ್ಛಕ್ರೋ ಜಘಾನ ಕುಲಿಶೇನ ಹಿ ।
ಭಿದುರಸ್ಯಾವಘಾತೇನ ಗತಾಸುರ್ನಿಪಪಾತ ಹ ॥ ೭ ॥

---

೪. ವ್ಯಾಸನು ಹೇಳಿದನು- ಹೀಗೆ ಹೇಳುತ್ತಿರುವಾಗಲೇ ಮುಚಿಯು ಬಾಣಗಳನ್ನು ಇಂದ್ರನ ಮೇಲೆ ಬಿಟ್ಟನು. ಇಂದ್ರನು ಮೂರು ಬಾಣಗಳಿಂದ ಅವನ್ನು ಕತ್ತರಿಸಿದನು.

೫. ಆಗ ಮುಚಿಯು ಹತ್ತು ಬಾಣಗಳನ್ನು ಇಂದ್ರನಿಗೂ, ಮೂರು ಬಾಣಗಳನ್ನು ಐರಾವತಕ್ಕೂ, ಏಳು ಬಾಣಗಳನ್ನು ಮಾತಳಿಗೂ ಬಿಟ್ಟು ಹೊಡೆದು ಸಿಂಹನಾದ ಮಾಡಿದನು.

೬. ಇಷ್ಟಲ್ಲದೆ ಇನ್ನೂ ಇಂದ್ರನ ಮೇಲೆ ಬಿಡಲು ಕಬ್ಬಿಣದ ಗದೆಯನ್ನು ಕೋಪದಿಂದ ತೂಗುತ್ತಿದ್ದನು.

೭. ಆಗ ಇಂದ್ರನು ವಜ್ರಾಯುಧದಿಂದ ಆ ಗದೆಯನ್ನು ಚಳಕದಿಂದ ಕತ್ತರಿಸಿ ಆ ಮುಚಿಯ ಮೇಲೆ ಬೀಳುವಂತೆ ಹೊಡೆದನು. ಆ ಹೊಡೆತದಿಂದ ಆ ಮುಚಿಯು ಪ್ರಾಣಬಿಟ್ಟನು.

**ದನುಜಸ್ಯ ಪ್ರಪಾತೇನ ಸಂಚಚಾಲ ವಸುಂಧರಾ ।**
**ದೇವಾಃ ಪ್ರಚಕ್ರುರ್ನೃತ್ಯಾನಿ ದಾನವಾ ವಿಪ್ರದುದ್ರುವುಃ　　　　॥ ೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಮುಚಿವಧೋನಾಮ ಷಟ್‌ಷಷ್ಟಿತಮೋಽಧ್ಯಾಯಃ**

---

೮. ಈ ಮುಚಿಯು ಬೀಳಲು ಭೂಮಿಯು ಅಲ್ಲಾಡಿತು. ದೇವತೆಗಳು ಸಂತೋಷದಿಂದ ಕುಣಿದಾಡಿದರು. ದೈತ್ಯರು ಹೆದರಿ ಓಡಿದರು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಮುಚಿವಧವೆಂಬ ಅರವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಸಪ್ತಷಷ್ಟಿತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

ತಾರೇಯೋ ಬಲಸಂಪನ್ನೋ ಶಕ್ರತುಲ್ಯಪರಾಕ್ರಮಃ ।
ಜಘಾನ ವಿಶಿಖೈಸ್ಸ್ಕಂಧಂ ಪಿತೃಘಾತಿನಮಾಹವೇ ॥ ೧ ॥

ತತಸ್ಕಂದೋ ಮಹಾಬಾಹುಹರಿತುಲ್ಯಪರಾಕ್ರಮಃ ।
ವಿಚಕರ್ತ ಶರಾಂಸ್ತಾಂಸ್ತಾನ್ನಿರ್ಬಿಭೇದ ಶರೋತ್ತಮೈಃ ॥ ೨ ॥

ಸದೈತ್ಯಸ್ಸಹಸಾ ಸ್ಕಂದಂ ಛಾದಯಾಮಾಸ ಮಾರ್ಗಣೈಃ ।
ಅಸಂಭ್ರಾಂತಃ ಪ್ರಚಿಚ್ಛೇದ ವಿಶಾಖೋ ವಿಶಿಖೈಸ್ತದಾ ॥ ೩ ॥

---

## ಅರವತ್ತೇಳನೆಯ ಅಧ್ಯಾಯವು

೧. ವ್ಯಾಸನು ಹೇಳಿದನು- ಇಂದ್ರನಿಗೆ ಸಮವಾದ ಪರಾಕ್ರಮವುಳ್ಳ ತಾರೇಯು ಎಂಬುವನು ತನ್ನ ತಂದೆಯನ್ನು ಕೊಂದ ಸ್ಕಂದನನ್ನು ಎದುರಿಸಿ ಬಾಣಗಳನ್ನು ಬಿಟ್ಟು ಹೊಡೆದನು.

೨. ವಿಷ್ಣುವಿನಂತೆ ಪರಾಕ್ರಮವುಳ್ಳ ಸ್ಕಂದನು ಆ ಬಾಣಗಳನ್ನು ಕತ್ತರಿಸಿ ಅವನನ್ನೂ ಹೊಡೆದನು.

೩. ಆ ರಾಕ್ಷಸನು ಜಾಗ್ರತೆಯಾಗಿ ಸ್ಕಂದನಮೇಲೆ ಬಾಣಗಳನ್ನು ಬಿಡಲು ಅವನು ಸ್ವಲ್ಪವೂ ಕಾತರಗೊಳ್ಳದೆ ಆ ಬಾಣಗಳನ್ನೆಲ್ಲಾ ಕತ್ತರಿಸಿದನು.

ತಾರೇಯೋಽಗ್ನಿಶರೈಸ್ಸ್ಕಂದಂ ಜಘಾನ ರಣಮೂರ್ಧನಿ ।
ವಿಶಿಖಂ ಭಿದುರಪ್ರಖ್ಯಂ ಚಖಾನ ಹರನಂದನೇ ॥ ೪ ॥

ವೈಶ್ವಾನರೇಣ ಸೇನಾನೀಃ ತಂ ಚ ಸಂಪ್ರತ್ಯವಾರಯತ್ ।
ರೌದ್ರಮಸ್ತ್ರಂ ಪುನರ್ದೈತ್ಯಃ ಪ್ರೇಷಯಾಮಾಸ ತಂ ಪ್ರತಿ ॥ ೫ ॥

ತನ್ನಿರಸ್ತಂ ಕೃತಂ ತೇನ ಬಾಣೇನಾಸ್ಖಲಿತೇನ ಚ ।
ಅಘೋರಂ ಪ್ರಾಕ್ಷಿಪದ್ದೈತ್ಯೋ ಘೋರರೂಪಂ ಸುದಾರುಣಂ ॥ ೬ ॥

ಭೂಧರಾವಿಟಪಾಸ್ಸಿಂಹಾಸ್ತಥಾ ಸರ್ಪಾದಯಃ ಶರಾಃ ।
ಧಾವಂತಿ ಪಾರ್ವತೀಪುತ್ರಂ ಕೋಟಿಕೋಟಿಸಹಸ್ರಶಃ ॥ ೭ ॥

ಛಿತ್ವಾ ತಾಂಸ್ತು ಶರಾನ್ ಸ್ಕಂದೋ ಬಿಭೇದ ದೈತ್ಯಪುಂಗವಂ ।
ಆಪಾದಶೀರ್ಷಪರ್ಯಂತಂ ಶರೈರಗ್ನ್ಯರ್ಕಸನ್ನಿಭೈಃ ॥ ೮ ॥

ಸ್ವರ್ಣಪುಂಖಾಶ್ಶರಾ ಲಗ್ನಾ ದೇಹೇ ದೈತ್ಯಪತೇರ್ಭೃಶಂ ।
ರೇಜುಸ್ತೇ ಸ್ವರ್ಣಶಕಲಾ ಯಥಾ ಕೃಷ್ಣಶಿಲೋಚ್ಚಯೇ ॥ ೯ ॥

---

೪. ತಾರೇಯನು ಆಗ್ನೇಯಾಸ್ತ್ರವನ್ನು ಬಿಟ್ಟು ಆ ಸ್ಕಂದನನ್ನು ನೋಯಿಸಿದ ದಲ್ಲದೆ ವಜ್ರದಂತಿರುವ ವಿಶಿಖೆಗಳೆಂಬ ಬಾಣಗಳನ್ನು ಬಿಟ್ಟನು.

೫. ಕುಮಾರಸ್ವಾಮಿಯು ಆ ಬಾಣಗಳೆಲ್ಲವನ್ನೂ ವೈಶ್ವಾನರಾಸ್ತ್ರಗಳಿಂದ ನಾಶಪಡಿಸಲು ಆ ದೈತ್ಯನು ರೌದ್ರಾಸ್ತ್ರವನ್ನು ಮತ್ತೆ ಬಿಟ್ಟನು.

೬. ಅವೆಲ್ಲವನ್ನೂ ಕೂಡ ಆ ಸ್ಕಂದನು ನಿವಾರಿಸಲು ಮತ್ತೆ ಆ ಅಸುರನು ಅಘೋರವೆಂಬ ಬಾಣಗಳನ್ನು ಬಿಟ್ಟನು.

೭. ಇದರಿಂದ ಬೆಟ್ಟಗಳೂ, ಮರಗಳೂ, ಸಿಂಹಗಳೂ, ಸರ್ಪಗಳೂ ಇವು ಕೋಟಿಕೋಟಿಗಟ್ಟಲೆಯಿಂದ ಸ್ಕಂದನ ಮೇಲೆ ಬೀಳಲಾರಂಭಿಸಿದುವು.

೮. ಸ್ಕಂದನು ಆ ಬಾಣಗಳೆಲ್ಲವನ್ನೂ ಕತ್ತರಿಸಿ ಆ ತಾರೇಯನನ್ನು ಕಾಲಿನಿಂದ ತಲೆಯವರೆಗೂ ಬಾಣಗಳಿಂದ ಹೊಡೆದನು.

೯. ಚಿನ್ನದ ಹಿಡಿಗಳುಳ್ಳ ಈ ಬಾಣಗಳು ಅವನಲ್ಲ ಚುಚ್ಚಿಕೊಳ್ಳಲು ಅವನು ಕರಿಯಕಲ್ಲಿನ ಮೇಲೆ ಚಿನ್ನದ ಚೂರುಗಳು ಪ್ರಕಾಶಿಸುವಂತೆ ಪ್ರಕಾಶಿಸಿದನು.

ತಸ್ಯ ದೇಹಾತ್ತತಶ್ಚೈವ ಬಹುಸುಸ್ರಾವ ಶೋಣಿತಂ ।
ಯಥಾ ಚ ಮಾಧವೇ ಮಾಸಿ ಪುರುಪುಷ್ಪಶ್ಯಮೀತರುಃ ॥ ೧೦ ॥

ಸ್ಯಂದನಾಧಶ್ಚರಾಶ್ವಾಶ್ಚ ಶಯೋಯುಃ ಭೂಮಿಲಗ್ನಕಾಃ ।
ಅಥ ಕ್ರುದ್ಧೋ ಮಹಾದೈತ್ಯಃ ಶೂಲಂ ಭೀಮಂ ಚ ದಾರುಣಂ ॥ ೧೧ ॥

ಧೃತ್ವಾ ತಂ ಪ್ರತಿಚಿಕ್ಷೇಪ ಕಾಲಮೃತ್ಯು ಸಮಪ್ರಭಂ ।
ಪಾರ್ವತೀನಂದನಶ್ಶೂಲಂ ಪಾಶುಪತ್ಯಂ ಮುಮೋಚ ಹ ॥ ೧೨ ॥

ತೇನ ತಸ್ಯ ಕೃತಂ ದಗ್ಧಂ ಮುಹೂರ್ತೇನ ರಣಾಜಿರೇ ।
ಪುನಶ್ಶಕ್ತಿಂ ಮುಮೋಚಾಥ ಬ್ರಹ್ಮದತ್ತಾಂ ತು ದಾನವಃ ॥ ೧೩ ॥

ಶೂಲಂ ಪ್ರತಿ ಜಘಾನಾಥ ಶತಕೋಟಿ ಸಮಪ್ರಭಂ ।
ತತೋಽಸ್ತ್ರೇ ವಜ್ರಸಂಕಾಶೇ ಜಘಟಾತೇ ವಿಯತ್ಯಪಿ ॥ ೧೪ ॥

ತಯೋಸ್ಸವೀರ್ಯಯೋಸ್ತೇ ಚ ಧರಣ್ಯಾಂ ಪ್ರತಿಪೇತತುಃ ।
ರೋಷಾದ್ದೈತ್ಯಪತಿಸ್ಸ್ಕಂದಂ ಶರೈರಗ್ನಿಶಿಖೋಪಮೈಃ ॥ ೧೫ ॥

---

೧೦. ಅವನ ದೇಹದಿಂದ ಬಹುವಾಗಿ ರಕ್ತವು ಸೋರಿತು. ಇದನ್ನು ನೋಡಿದರೆ ವೈಶಾಖಮಾಸದಲ್ಲಿ ಹೂಬಿಟ್ಟ ಬನ್ನಿಯ ಮರದಂತೆ ಪ್ರಕಾಶಿಸಿದನು.

೧೧-೧೨. ಆ ರಾಕ್ಷಸನ ರಥದ ಕುದುರೆಗಳೆಲ್ಲ, ಕೆಳಗೆ ಬೀಳಲು ಆ ರಾಕ್ಷಸನು ಕೋಪಗೊಂಡು ಉಗ್ರವಾದ ಶೂಲವನ್ನು ಸ್ಕಂದನ ಮೇಲೆ ಬಿಟ್ಟನು. ಸ್ಕಂದನು ಪಾಶುಪತ್ಯವೆಂಬ ಶೂಲವನ್ನು ತಾನೂ ಬಿಟ್ಟನು.

೧೩. ಅವೆಲ್ಲವನ್ನೂ ಕ್ಷಣಕಾಲದಲ್ಲಿ ಸ್ಕಂದನು ಕಡಿದು ನಾಶಮಾಡಲು ಇದನ್ನು ನೋಡಿ ಆ ದೈತ್ಯನು ಕೊಟ್ಟಿರುವ ಶಕ್ತಿಯನ್ನೂ ಪ್ರಯೋಗಿಸಿದನು.

೧೪. ಆ ಶಕ್ತಿಯನ್ನು ಕತ್ತರಿಸಲು ಸ್ಕಂದನು ಶೂಲವನ್ನು ಬಿಟ್ಟನು. ಅವೆರಡೂ ಅಂತರಿಕ್ಷದಲ್ಲಿಯೇ ಹೊಡದಾಡಿದುವು.

೧೫-೧೭. ಅವೆರಡೂ ಕೂಡಾ ಕಾದಾಡಿ ಕೆಳಗೆ ಬಿದ್ದುವು. ಆಗ ಕೋಪಗ್ರಿದ ತಾರೇಯನು ಉತ್ತಮವಾದ ಶರಗಳಿಂದ ಸ್ಕಂದನನ್ನು ನೋಯಿಸಿದನು ಸ್ಕಂದನು

ಅರ್ದಯಾಮಾಸ ಸಹಸಾ ಘನಧಾರೇವ ಪರ್ವತಂ ।
ತಾಂಸ್ತು ಛಿತ್ವಾ ಮಹಾಬಾಹುಃ ಸೇನಾನೀಶ್ಚಾಪಮಸ್ಯ ವೈ ॥ ೧೬ ॥

ವಿಚಕರ್ತಾರ್ಧಚಂದ್ರೇಣ ತಥಾ ಯನ್ತುಶ್ಶಿರೋ ಮಹತ್ ।
ತಥಾಶ್ವಾನ್ಬಹುಭಿರ್ಬಾಣೈಃ ಪಾತಯಾನಾಸ ಭೂತಳೇ ॥ ೧೭ ॥

ಗೃಹೀತ್ವಾ ಮುಸಲಂ ವೇಗಾತ್ಸ ದುದ್ರಾವ ಸ್ಥಳೇ ಗುಹಂ ।
ಜಘಾನ ತೇನ ದೈತ್ಯೇಂದ್ರಃ ಶಿಖಿನಂ ಶಿಖಿವಾಹನಂ ॥ ೧೮ ॥

ತತೋ ಮೋಹಂ ಗತೋ ಬರ್ಹೀ ಪ್ರಚಕಂಪೇ ಮುಹುರ್ಮುಹುಃ ।
ತತಸ್ಸ್ಕಂದಃ ಪುನಸ್ತಂ ಚ ಜಘಾನಾಸುರಪುಂಗವಂ ॥ ೧೯ ॥

ಪ್ರಚಿಚ್ಛೇದಾಸಿನಾ ವೇಗಾನ್ಮುಸಲಂ ಚಾತಿದಾರುಣಂ ।
ತಾರೇಯಶ್ಶಕ್ತಿಮಾದಾಯ ಜಘಾನ ಕ್ರೌಂಚದಾರುಣಂ ॥ ೨೦ ॥

ಸೋಽಪಿ ಶಕ್ತಿಂ ಮುಮೋಚಾಥ ಅಮೋಘಾಂ ದುಷ್ಟಘಾತಿನೀಂ ।
ತತಸ್ಸಂದಹ್ಯ ಸಾ ಶಕ್ತಿ ವಿಶ್ವಪ್ರಳಯಕಾರಿಣೀ ॥ ೨೧ ॥

---

ಅವೆಲ್ಲವನ್ನೂ ಕತ್ತರಿಸಿ ಈ ದೈತ್ಯನ ಕೈಯಲ್ಲಿದ್ದ ಧನಸ್ಸನ್ನೂ ಕತ್ತರಿಸಿದನು. ಮತ್ತು ಸಾರಥಿಯ ತಲೆಯನ್ನೂ ಕತ್ತರಿಸಿ ಅನೇಕ ಬಾಣಗಳಿಂದ ಕುದುರೆಗಳನ್ನು ಕೆಡವಿದನು.

೧೮. ಆಗ ದೈತ್ಯನು ನೆಲದಮೇಲೆ ಇಳಿದು ಮುಸಲವನ್ನು ತೆಗೆದು ಕೊಂಡನು. ಅದರಿಂದ ಸೇನಾನಿಯ ವಾಹನವಾದ ನವಿಲನ್ನು ಹೊಡೆದನು.

೧೯. ಆಗ ಆ ನವಿಲು ಬುದ್ಧಿಭ್ರಮೇ ಹೊಂದಿ ಕತ್ತರಿಸಿತು. ಆಗ ಸ್ಕಂದನು ಮತ್ತೆ ಆ ರಾಕ್ಷಸನನ್ನು ಕತ್ತಿಯಿಂದ ಹೊಡೆದನು.

೨೦. ಅಲ್ಲದೇ ಆ ಮುಸಲವನ್ನೂ ಕತ್ತರಿಸಿದನು. ಆಗ ತಾರೇಯನು ಶಕ್ತ್ಯಾಯುಧವನ್ನು ತೆಗೆದುಕೊಂಡು ಕುಮಾರಸ್ವಾಮಿಯನ್ನು ಮತ್ತೆ ಹೊಡೆದನು.

೨೧-೨೨. ಆಗ ಗುಹನು ದೈತ್ಯನನ್ನು ಕೊಲ್ಲುವುದಕ್ಕೆ ತಾನೂ ಶಕ್ತ್ಯಾಯುಧ ವನ್ನು ಬಿಟ್ಟನು. ಪ್ರಳಯಾಗ್ನಿಯಂತಿದ್ದ ಆ ಶಕ್ತಿಯು ಆ ತಾರೇಯನನ್ನು ಕತ್ತರಿಸಿ

**ಯಮದಂಡಸಮಾ ಸಾ ಚ ಭಿತ್ವಾ ಪುನರ್ಗೃಹಂ ಗತಾ ।**
**ಸ ಗತಾಸುಃ ಪಪಾತೋರ್ವ್ಯಾಂ ಚಾಲಯಂಶ್ಚ ವಸುಂಧರಾಂ ॥**
**ಪುಷ್ಪಧೂಪಾದಿಭಿಸ್ಸ್ಕಂದಃ ಸರ್ವದೇವೈಃ ಪ್ರಪೂಜಿತಃ ॥ ೨೨ ॥**

**ಇತಿ ಶ್ರೀ ಪದ್ಮಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ತಾರೇಯವಧೋ ನಾಮ ಸಪ್ತಷಷ್ಟಿತಮೋಽಧ್ಯಾಯಃ**

---

ಮತ್ತೆ ಅವನ ಬಳಿಗೆ ಬಂದಿತು. ಆ ದೈತ್ಯನು ಪ್ರಾಣವನ್ನು ಬಿಟ್ಟು ಭೂಮಿಯಲ್ಲಿ ಬೀಳಲು ಭೂಮಿಯು ನಡುಗಿತು, ಆಗ ದೇವತೆಗಳು ಹೂವು, ಧೂಪ ಮುಂತಾದುವುಗಳಿಂದ ಸ್ಕಂದನನ್ನು ಪೂಜಿಸಿದರು.

ಇಂತು ಶ್ರೀಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ತಾರೇಯವಧವೆಂಬ ಅರವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಅಷ್ಟಷಷ್ಟಿತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

ತತೋ ದೇವಾಂತಕೋ ದೈತ್ಯೋ ವ್ಯವರ್ಧತ್ಸವುರಂ ಪ್ರತಿ ।
ರಥೇನಾದಿತ್ಯವರ್ಣೇನ ಸಂದಷ್ಟೋಷ್ಠಪುಟೋ ಬಲೀ ॥
ಸ ಗತ್ವಾ ಚಾಬ್ರವೀದ್ವಾಕ್ಯಂ ಸರ್ವಲೋಕವಿಗರ್ಹಿತಂ ॥ ೧ ॥

॥ ದೇವಾಂತಕ ಉವಾಚ ॥

ನ ಜಾನಾಸಿ ಮಹದ್ಧರ್ಮಂ ದುಷ್ಟ ಮೋಹಾದ್ಯಥಾಕ್ರಮಂ ।
ಪಾಪಪುಣ್ಯಪ್ರಯೋಗಾಚ್ಚ ನಿಗ್ರಹಾನುಗ್ರಹೇ ಪ್ರಭುಃ ॥ ೨ ॥

---

### ಅರವತ್ತೆಂಟನೆಯ ಅಧ್ಯಾಯವು

೧. ವ್ಯಾಸನು ಹೇಳಿದನು- ಅನಂತರ ದೇವಾಂತಕನೆಂಬ ದೈತ್ಯನು ಸೂರ್ಯನಂತಿರುವ ರಥದಲ್ಲಿ ಕುಳಿತು ತುಟಿಯನ್ನು ಕೋಪದಿಂದ ಕಡಿಯುತ್ತಾ ಯುದ್ಧ ಮಾಡಲು ಬಂದು ಅಯುಕ್ತವಾದ ಕೆಲವು ಮಾತುಗಳನ್ನಾಡಿದನು.

೨. ದೇವಾಂತಕನು ಹೇಳಿದನು- ಎಲೈ ದುಷ್ಟನೇ ! ನೀನು ಕೆಟ್ಟಿರುವುದರಿಂದ ಸರಿಯಾದ ಧರ್ಮವು ನಿನಗೆ ಗೊತ್ತಿಲ್ಲ. ಸ್ವಾಮಿಯಾದವನು ಪಾಪಪುಣ್ಯಗಳ ಪ್ರಯೋಗವನ್ನು ನೋಡಿ ಅದಕ್ಕೆ ತಕ್ಕಂತೆ ಶಿಕ್ಷೆಯನ್ನೂ ಬಹುಮತಿಯನ್ನೂ ಕೊಡಬೇಕು.

ಅಹಂ ಚ ನಿರ್ಮಿತೋ ಧಾತ್ರಾ ಕರೋಮಿ ತವ ಶಾಸನಂ ।
ನ ಜಾನಾಸಿ ಯತೋ ಧರ್ಮಂ ಕಾಲಮೃತ್ಯುಪುರಸ್ಸರಃ ॥ ೩ ॥

ನ ರೋಗೋ ನ ಜರಾ ಕಾಲೋ ನ ಮೃತ್ಯುರ್ನ ಚ ಕಿಂಕರಃ ।
ಧರ್ಮಾತ್ಪ್ರಚಲಿತಃ ಕರ್ಮೀ ಕಷ್ಟಂ ಯಾತಿ ದಿವಾನಿಶಂ ॥ ೪ ॥

॥ ವ್ಯಾಸ ಉವಾಚ ॥

ಉಕ್ತ್ವಾ ಚೈವಂ ಮಹಾವೀರ್ಯಂ ಯಮಂ ಧರ್ಮೈಕಸಾಕ್ಷಿಣಂ।
ಸ ಜಘಾನ ತ್ರಿಭಿರ್ಬಾಣೈಃ ಕಾಲಮೃತ್ಯುಸಮಪ್ರಭೈಃ ॥ ೫ ॥

ಪ್ರಚಿಚ್ಛೇದ ಸ ಧರ್ಮಾತ್ಮಾ ತಂ ತ್ವನ್ಯೈರ್ವಿಶಿಖೈಸ್ತ್ರಿಭಿಃ ।
ತತಸ್ತೂತ್ಸೃಜ್ಯ ಶರೈಃ ಪ್ರಾಜ್ಯೈಃ ಯುಗಾಂತಾನಲ ಸಪ್ರಭೈಃ ॥ ೬ ॥

ನಿಜಘಾನ ಯಮಂ ಸಂಖ್ಯೇ ಸ ಚಿಚ್ಛೇದ ಶರೈಶ್ಶರಾನ್ ।
ಏತಸ್ಮಿನ್ನಂತರೇ ಕ್ರುದ್ಧೌ ಪರಸ್ಪರಜಯೈಷಿಣೌ ॥ ೭ ॥

---

೩. ಕಾಲಮೃತ್ಯುವು ನಿನಗೆ ಹತ್ತಿರಬಂದಿರುವುದರಿಂದ ನಿನಗೆ ಧರ್ಮವೆಂಬುದು ತಿಳಿದಿಲ್ಲ ನಾನು ಅಧರ್ಮದವರನ್ನು ಶಿಕ್ಷಿಸುವುದಕ್ಕೋಸ್ಕರವೇ ಬ್ರಹ್ಮನಿಂದ ನಿರ್ಮಿತನಾಗಿದ್ದೇನೆ. ಆದ್ದರಿಂದ ನಿನ್ನನ್ನು ಶಿಕ್ಷಿಸುತ್ತೇನೆ.

೪. ಧರ್ಮದಿಂದ ಚ್ಯುತನಾಗಿ ಕೆಟ್ಟ ಕರ್ಮವನ್ನೇ ಮಾಡಲು ಹುಟ್ಟಿದವನಿಗೆ ರೋಗಬರುವುದಿಲ್ಲ. ಮುಪ್ಪಿಲ್ಲ. ಕಾಲಮೃತ್ಯುವೂ ಇಲ್ಲ. ಆಳುಗಳೂ, ಇಲ್ಲ. ಹೀಗೆ ಯಾರೂ ಇಲ್ಲದೆ ಹಗಲೂ, ರಾತ್ರಿಯೂ ಕಷ್ಟಪಡುತ್ತಾನೆ.

೫. ವ್ಯಾಸನು ಹೇಳಿದನು- ಧರ್ಮಸಾಕ್ಷಿಯಾದ ಯಮನಿಗೆ ಹೀಗೆಂದು ಹೇಳುತ್ತಾ ಕಾಲಮೃತ್ಯುವಿನಂತಿರುವ ಬಾಣಗಳಿಂದ ಆ ಯಮನನ್ನು ಹೊಡೆದನು.

೬. ಆ ಯಮನೂ ಕೂಡ ಆ ಬಾಣಗಳನ್ನು ಕತ್ತರಿಸಿದನು. ಅನಂತರ ದೈತ್ಯನು ಪ್ರಳಯಾಗ್ನಿಯಂತಿರುವ ಅನೇಕ ಬಾಣಗಳನ್ನು ಬಿಟ್ಟನು.

೭-೮. ಯಮನು ಈರೀತಿ ಹೊಡೆಯಲು ಅವನು ಆ ಬಾಣಗಳನ್ನು ಕತ್ತರಿಸಿದನು. ಈರೀತಿ ಇಬ್ಬರೂ ಕೋಪಗೊಂಡು ಜಯವನ್ನು ಅಪೇಕ್ಷಿಸುತ್ತ ಯುದ್ಧ

ಜಘ್ನತುಸ್ಸಮರೇನ್ಯೋನ್ಯಂ ಮಹಾಬಲಪರಾಕ್ರಮೌ ।
ಅಹೋರಾತ್ರಂ ತಯೋರ್ಯುದ್ಧಮವರ್ತತ ಸುದಾರುಣಂ ॥ ೮ ॥

ಏತಸ್ಮಿನ್ನಂತರೇ ಕ್ರುದ್ಧಃ ಶಕ್ತ್ಯಾ ಪ್ರಶಮನಂ ರುಷಾ ।
ಬಿಭೇದ ದೈತ್ಯಶಾರ್ದೂಲೋಹ್ಯಹಂಕಾರಯುತೋ ಬಲೀ ॥ ೯ ॥

ತಾಮೇವಾಥ ರುಷಾ ಧರ್ಮೋ ಗೃಹೀತ್ವಾ ಶಕ್ತಿಕಾಂ ದ್ರುತಂ ।
ನಿಜುಘಾನ ತಥೈವಾಮುಂ ಸ್ತನಯೋರಂತರೇ ಭೃಶಂ ॥ ೧೦ ॥

ಸ ವಿಹ್ವಲಿತಸರ್ವಾಂಗೋ ಮುಖಾದಾಗತಶೋಣಿತಃ ।
ತತಃ ಕ್ರುದ್ಧೋ ಮಹಾತೇಜಾ ಧೃತ್ವಾ ದಂಡಂ ಸುದಾರುಣಂ ॥ ೧೧ ॥

ಅಮೋಘಂ ಘಾತಯಾಮಾಸ ತಸ್ಯ ದೈತ್ಯಸ್ಯ ವಿಗ್ರಹೇ ।
ಸಾಶ್ವಂ ರಥಂ ತಥಾ ಸೂತಂ ಯೋದ್ಧಾರಂ ಶಸ್ತ್ರಸಂಚಯಂ ॥ ೧೨ ॥

ಚಕಾರ ಭಸ್ಮಸಾತ್ತಂ ಚ ಶಮನಂ ಕ್ರೋಧಮೂರ್ಛಿತಃ ।
ಪತಿತೇ ಚ ತಥಾ ದೈತ್ಯೇ ದುರ್ಧರ್ಷೋ ನಾಮ ದಾನವಃ ॥ ೧೩ ॥

---

ಮಾಡುತ್ತಿದ್ದರು. ಒಂದು ಹಗಲೂ, ರಾತ್ರಿಯೂ ಅವರಿಗೆ ದಾರುಣವಾದ ಯುದ್ಧವು ನಡೆಯಿತು.

೯. ಇಷ್ಟರಲ್ಲಿ ಕೋಪಗೊಂಡ ದೈತ್ಯನು ಹೆಮ್ಮೆಯಿಂದಲೂ ಕೋಪದಿಂದಲೂ ಯಮನನ್ನು ಶಕ್ತ್ಯಾಯುಧದಿಂದ ಹೊಡೆದನು.

೧೦. ಆಗ ಕೋಪದಿಂದ ಯಮನು ಅದೇ ಶಕ್ತಿಯನ್ನು ಹಿಡಿದುಕೊಂಡು ಆ ದೈತ್ಯನ ಎದೆಗೆ ಹೊಡೆದನು.

೧೧-೧೨. ಅವನ ಅಂಗವೆಲ್ಲವೂ ಅದರಿಂದ ನಡುಗಿತು. ಬಾಯಿಯಿಂದ ರಕ್ತವೂ ಬಂದಿತು. ಮತ್ತು ಉತ್ತಮವಾದ ದಂಡಾಯುಧವನ್ನು ತೆಗೆದುಕೊಂಡು ಆ ದೈತ್ಯನ, ಕುದುರೆ, ರಥ, ಸಾರಥಿಗಳನ್ನೂ ಹೊಡೆದು ದೈತ್ಯನನ್ನೂ ಹೊಡೆದನು.

೧೩-೧೫. ಈ ರೀತಿ ಯಮನು ಕೋಪಗೊಂಡು ಆ ದೈತ್ಯನನ್ನು ಕೊಂದನು ಅವನು ಬೀಳುತ್ತಲೂ ದುರ್ಧಷನೆಂಬ ದಾನವನು ಕೋಪದಿಂದ ಶೂಲವನ್ನು ಹಿಡಿದು

ಶಮನಂ ಶೂಲಹಸ್ತಂ ತು ಪ್ರದುದ್ರಾವ ಜಿಘಾಂಸಯಾ ।
ಶೂಲಹಸ್ತಂ ಸಮಾಯಾಂತಂ ಬಡಬಾನಲಸನ್ನಿಭಂ ॥ ೧೪ ॥

ಆಸಸಾದ ರಣೇಮೃತ್ಯುಃ ಶಕ್ತಿಹಸ್ತೋತಿನಿರ್ಭಯಃ ।
ಸ ಚ ದೃಷ್ಟ್ವಾ ಸುರೋಮೃತ್ಯುಂ ಶೂಲೇನೈವ ಜಘಾನ ಹ ॥ ೧೫ ॥

ಶಕ್ತಿಂ ಚೈವ ತತೋ ಮೃತ್ಯುಃ ಪ್ರಚಿಕ್ಷೇಪ ರಣಾಜಿರೇ ।
ಸ್ಕಂದಹ್ಯ ಸಹಸಾ ಶೂಲಂ ವಹ್ನಿಕೋಟಿಸಮಪ್ರಭಂ ॥ ೧೬ ॥

ದೈತ್ಯಸ್ಯ ಹೃದಯಂ ಭಿತ್ವಾ ಗತಾ ಸಾ ಚ ಧರಾತಲಂ ।
ಸ ರಥಸ್ಸಪಸಾತೋರ್ವ್ಯಾಂ ಶಕ್ತಿಜರ್ಜರವಿಗ್ರಹಃ ॥ ೧೭ ॥

ಅಥಾನ್ಯೋ ದುರ್ಮುಖೋ ಮೃತ್ಯುಂ ಕೃಷ್ಟಚಾಪೋ ಮಹಾಬಲಃ ।
ಖಡ್ಗಚರ್ಮಧರಃ ಕಾಲೋ ರಥ ಏವ ಗತೋಭವತ್ ॥ ೧೮ ॥

ದೃಷ್ಟ್ವಾ ತಂ ವಿಶಿಖೈಃ ಪ್ರಾಜ್ಯೈಃ ಜಘಾನ ಸ ಯಮಂ ರಣೇ ।
ಸ ಚಾಪ್ಲುತ್ಯ ರಥಾದ್ದೇವೋ ಹ್ಯಸಿನಾ ಚ ಸಕುಂಡಲಂ ॥ ೧೯ ॥

---

ಯಮನನ್ನು ಕೊಲ್ಲಲು ಮೇಲೆ ಬಿದ್ದನು. ಶೂರದಾದ ಶೂಲವನ್ನು ತೆಗೆದುಕೊಂಡು ಬರುವ ಆ ದೈತ್ಯನ ಮೇಲೆ ಯಮನು ಶಕ್ತ್ಯಾಯುಧವನ್ನು ತೆಗೆದುಕೊಂಡು ಭಯವಿಲ್ಲದೆ ನುಗ್ಗಿದನು. ಆ ಯಮನನ್ನು ಆ ದೈತ್ಯನು ಶೂಲದಿಂದ ಹೊಡೆದನು.

೧೬-೧೭ ಆಗ ಯಮನು ಕೋಪಗೊಂಡು ಶಕ್ತ್ಯಾಯುಧವನ್ನು ಅವನ ಮೇಲೆ ಬಿಡಲು ಆ ಶಕ್ತ್ಯಾಯುಧವು ಶೂಲವನ್ನು ಮುರಿದು ಆ ದೈತ್ಯನ ಹೃದಯವನ್ನು ಸೀಳಿ ಭೂಮಿಗೆ ಬಿದ್ದಿತು. ಶಕ್ತಿಯಿಂದ ನೊಂದ ದೈತ್ಯನೂ ರಥವೂ ನೆಲಕ್ಕೆ ಉರುಳಿದುವು.

೧೮. ಅನಂತರ ದುರ್ಮುಖನೆಂಬುವನು ಧನುಸ್ಸನ್ನು ಹೆದೆಯೇರಿಸಿಕೊಂಡು ಯಮನ ಮೇಲೆ ಬೀಳಲು ಬಂದನು. ಯಮನು ಖಡ್ಗವನ್ನೂ ಚರ್ಮವನ್ನೂ ಧರಿಸಿ ರಥದಲ್ಲಿಯೇ ಇದ್ದನು.

೧೯-೨೦. ಆತನು ಯಮನನ್ನು ನೋಡಿ ಆತನ ಮೇಲೆ ಅನೇಕ ಬಾಣಗಳನ್ನು ಬಿಟ್ಟನು. ಯಮನು ರಥದಿಂದ ಕೆಳಕ್ಕೆ ಧುಮುಕಿ ಕುಂಡಲಗಳಿಂದ

**ಶಿರಶ್ಚಿಚ್ಛೇದ ಸಹಸಾ ಪಾತಯಾಮಾಸ ಭೂತಳೇ ।**
**ಹತಶೇಷಂ ಬಲಂ ಸರ್ವಂ ಪ್ರದುದ್ರಾವ ದಿಶೋದಶ ॥ ೨೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ದೇವಾಂತಕ ದುರ್ಧರ್ಷ ದುರ್ಮುಖವಧೋ ನಾಮ ಅಷ್ಟಷಷ್ಟಿತಮೋಽಧ್ಯಾಯಃ**

---

ಕೂಡಿದ ಅವನ ತಲೆಯನ್ನು ಕತ್ತರಿಸಿದನು. ಅವನು ಭೂಮಿಯಲ್ಲಿ ಬಿದ್ದನು ಅನಂತರ ಕಳಿದುಳಿದ ಸೈನ್ಯವು ಸಿಕ್ಕಿದ ಕಡೆಗೆ ಓಡಿತು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ದೇವಾಂತಕ ದುರ್ಧರ್ಷ ದುರ್ಮುಖವಧೆಯೆಂಬ ಅರವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಊನಸಪ್ತತಿತಮೋऽಧ್ಯಾಯಃ ॥



॥ ವ್ಯಾಸ ಉವಾಚ ॥

ಅಥಾನ್ಯೋ ನಮುಚಿಃ ಕ್ರುದ್ಧೋ ಸ್ಯಂದನಸ್ಥೋ ದಿವೌಕಸಃ ।
ವಿಶಿಖೈರರ್ದಯಾಮಾಸ ಘೋರೈರಾಶೀವಿಷೋಪಮೈಃ ॥ ೧ ॥

ತತಸ್ತತ್ಸಂಯುಗೇ ದೇವಾಃ ಸಿದ್ಧಕಿನ್ನರಪನ್ನಗಾಃ ।
ನ ಶಕ್ನುವಂತಿ ಬಾಣಾನಾಂ ವೇಗಂ ಸೋಢುಂ ಸಮನ್ತತಃ ॥ ೨ ॥

ರಥಮುಚ್ಚೈಶ್ಶ್ರವೋಶ್ವೇನ ಯುಕ್ತಂ ಮಾತಲಿನೇರಿತಂ ।
ಪುರುಹೂತಸ್ಸಮಾಧಾಯ ಪ್ರಾಗಮತ್ತಂ ಮಹಾಬಲಂ ॥ ೩ ॥

---

## ಅರವತ್ತೊಂಭತ್ತನೆಯ ಅಧ್ಯಾಯವು

೧. ವ್ಯಾಸನು ಹೇಳಿದನು- ಅನಂತರ ನಮುಚಿಯೆಂಬುವನು ಕೋಪಗೊಂಡು ರಥದಲ್ಲಿ ಕುಳಿತು ಸರ್ಪದಂತೆ ಕ್ರೂರವಾದ ಬಾಣಗಳಿಂದ ದೇವತೆಗಳನ್ನು ಹೊಡೆದನು.

೨. ಆಗ ಆ ಯುದ್ಧದಲ್ಲಿ ದೇವತೆಗಳು, ಕಿನ್ನರರು, ಸಿದ್ಧರು, ಪನ್ನಗರೂ, ಕೂಡ ಅವನ ಬಾಣವೇಗವನ್ನು ತಡೆಯಲಾರದೇ ಹೋದರು.

೩. ಉಚ್ಚೈಶ್ರವಸ್ಸೆಂಬ ಕುದುರೆಯನ್ನು ಕಟ್ಟಿ ಮಾತಲಿಯೆಂಬ ಸಾರಥಿಯು ನಡೆಸುತ್ತಿರುವ ರಥದಲ್ಲಿ ಕುಳಿತು ಇಂದ್ರನು ಅತನನ್ನು ಎದುರಿಸಿದನು.

ದೃಷ್ಟ್ವಾ ಶಕ್ರಂ ಮಹಾವೀರ್ಯಂ ನಮುಚಿರ್ದೈತ್ಯಪುಂಗವಃ ।
ಅಬ್ರವೀದ್ವಾಸವಂ ಸಂಖ್ಯೇ ವಚನಂ ಸಾನುಗಂ ತದಾ ॥ ೪ ॥

॥ ನಮುಚಿರುವಾಚ ॥

ಪ್ರಾಕೃತಂ ನಿರ್ಜರಂ ಹತ್ವಾ ನ ಯಶೋಽಸ್ತಿ ನ ಚ ಪ್ರಿಯಂ ।
ನ ಲಾಭಕೃತಕಂ ವಾಪಿ ನ ಜಯಸ್ತು ಪುರಂದರೇ ॥ ೫ ॥

ತಸ್ಮಾತ್ತ್ವಯಿ ಹತೇಽತ್ರೈವ ಸರ್ವಂ ಭವತಿ ಶಾಶ್ವತಂ ।
ದೇವರಾಜ್ಯಂ ಪ್ರಲಪ್ಸ್ಯಾಮಿ ಸುಖಭೋಗ್ಯಂ ಸುರಾಲಯೇ ॥ ೬ ॥

॥ ವ್ಯಾಸ ಉವಾಚ ॥

ತಮಬ್ರವೀನ್ಮಹಾತೇಜಾಃ ಶಕ್ರಃ ಪರಪುರಂಜಯಃ ॥ ೭ ॥

॥ ಇಂದ್ರ ಉವಾಚ ॥

ಶೂರತಾವಾಕ್ಯಮಾತ್ರೇಣ ಸರ್ವತ್ರ ಸುಲಭಾ ಭವೇತ್ ।
ಮಹಾಪರಾಕ್ರಮೋ ಯದ್ವಾ ಅಸ್ತಿ ತೇ ದಾನವಾಧಮ
ದರ್ಶಯಸ್ವಾಹವೇ ವೀರ್ಯಂ ಪುರಂ ನೇಷ್ಯಾಮಿ ಭಾಸ್ಕರೇಃ ॥ ೮ ॥

---

೪. ಬಲಿಷ್ಠನಾದ ಇಂದ್ರನನ್ನು ನೋಡಿ ನಮುಚಿಯು ಅವನಿಗೂ ಅವನ ಅನುಯಾಯಿಗಳಿಗೂ ಆ ಯುದ್ಧರಂಗದಲ್ಲಿ ಇಂತೆಂದನು

೫. ನಮುಚಿಯು ಹೇಳಿದನು- ದಡ್ಡನಾದ ದೇವತೆಯನ್ನು ಕೊಂದರೆ ಯಶಸ್ಸೂ ಬರುವುದಿಲ್ಲ. ನನಗೆ ಇಷ್ಟವೂ ಇಲ್ಲ. ನನಗೆ ಲಾಭವೂ ಇಲ್ಲ. ಆ ಜಯವು ಜಯವೂ ಅಲ್ಲ

೬. ಆದ್ದರಿಂದ ನಿನ್ನನ್ನು ಕೊಂದರೆ ಎಲ್ಲವೂ ಶಾಶ್ವತವಾಗಿ ಸಿದ್ಧಿಸುತ್ತವೆ. ಸುಖದ ಭೋಗಗಳುಳ್ಳ ದೇವರಾಜ್ಯವನ್ನೂ ಶಾಶ್ವತವಾಗಿ ಹೊಂದುತ್ತೇನೆ.

೭. ವ್ಯಾಸನು ಹೇಳಿದನು- ಆಗ ಶಕ್ತನಾದ ಆ ಇಂದ್ರನು ಆ ನಮುಚಿಯನ್ನು ಕುರಿತು ಇಂತೆಂದು ಹೇಳಿದನು.

೮. ಇಂದ್ರನು ಹೇಳಿದನು- ಶೂರತ್ವವು ಬಾಯಿಮಾತಿನಿಂದ ಎಲ್ಲ ಕಡೆಯಲ್ಲಿಯೂ ಸುಲಭವಾಗಿ ಬರುತ್ತದೆ. ಎಲೈ ದಾನವನೇ ! ನಿನಗೆ ಶೌರ್ಯವಿದ್ದರೆ ತೋರಿಸು. ನಿನ್ನನ್ನು ಯಮನ ಪಟ್ಟಣಕ್ಕೆ ಕಳುಹಿಸುತ್ತೇನೆ.

॥ ವ್ಯಾಸ ಉವಾಚ ॥

ಏತಚ್ಛ್ರುತ್ವಾ ಮಹಾತೇಜಾಶ್ಚುಕೋಪ ದೈತ್ಯಪುಂಗವಃ ।
ಪಂಚಭಿರ್ನಿಶಿತೈರ್ಬಾಣೈರ್ಜಘಾನ ಸುರಸತ್ತಮಂ ॥ ೯ ॥

ತಾಂಸ್ತು ಚಿಚ್ಛೇದ ಮಘವಾ ಕ್ಷುರಪ್ರೈಃ ಪಂಚಭಿರ್ದ್ರುತಂ ।
ಜಗ್ಮತುಸ್ತೌ ಮಹಾವೀರೌ ಸಮರೇ ವಿಜಯೈಷಿಣೌ ॥ ೧೦ ॥

ಅನ್ಯೋನ್ಯಂ ಸಹಸಾ ವೇಗಾಚ್ಛರೈಶ್ಚಿಚ್ಛೇದತುಃ ಶರಾನ್ ।
ಬಿಭಿದಾತೇಥ ಗಾತ್ರಾಣಿ ವಿಶಿಖೈಃ ಭಿದುರೋಪಮೈಃ ॥ ೧೧ ॥

ಅತ್ಯಪೂರ್ವಂ ಕೃತಂ ಕರ್ಮ ತಾಭ್ಯಾಮೇವ ರಣೇ ಭೃಶಂ ।
ಲಾಘವಂ ಶರಸಂಘಾನಾಂ ಗ್ರಹಮೋಕ್ಷಂ ಸುದುರ್ಲಭಂ ॥ ೧೨ ॥

ದೃಷ್ಟ್ವಾ ತು ವಿಸ್ಮಯಂ ಜಗ್ಮುರ್ದೇವಾಸುರಗಣಾಸ್ತದಾ ।
ಏತಸ್ಮಿನ್ನಂತರೇ ದೈತ್ಯೋ ಮಾಯಾಸ್ತ್ರಂ ಪ್ರಮುಮೋಚ ಹ ॥ ೧೩ ॥

---

೯. ವ್ಯಾಸನು ಹೇಳಿದನು– ಇದನ್ನು ಕೇಳಿ ಶೂರನಾದ ದೈತ್ಯನು ಕೋಪಗೊಂಡು ಐದು ಬಾಣಗಳಿಂದ ಆ ಇಂದ್ರನನ್ನು ಹೊಡೆದನು.

೧೦. ಆ ಬಾಣಗಳನ್ನು ಇಂದ್ರನು ಕತ್ತರಿಸಿದನು. ಅವರಿಬ್ಬರೂ ಜಯಾಕಾಂಕ್ಷಿಗಳಾಗಿ ಯುದ್ಧದಲ್ಲಿ ಒಬ್ಬರಮೇಲೊಬ್ಬರು ಶಕ್ತಿಯನ್ನು ತೋರಿಸಿದರು.

೧೧. ಒಬ್ಬರಿಗೊಬ್ಬರು ಚಳಕದಿಂದ ಬಾಣಗಳನ್ನು ಕತ್ತರಿಸುತ್ತ ಬಂದರು. ಒಬ್ಬರಿಗೊಬ್ಬರು ಕ್ರೂರವಾದ ಬಾಣಗಳಿಂದ ಶರೀರವನ್ನು ಭೇದಿಸಿದರು.

೧೨. ಅವರಿಬ್ಬರೂ ಅಪೂರ್ವವಾದ ಕೈ ಚಳಕಗಳನ್ನು ಯುದ್ಧದಲ್ಲಿ ತೋರಿಸಿದರು. ಬಾಣದ ಹಿಡಿಯುವಿಕೆ ಬಿಡುವಿಕೆಗಳಲ್ಲಿ ಬಹು ಹಸ್ತಲಾಘವನ್ನು ತೋರಿಸಿದರು.

೧೩. ಇದನ್ನು ನೋಡಿ ದೇವತೆಗಳೂ, ಅಸುರರೂ, ಆಶ್ಚರ್ಯಪಟ್ಟರು. ಇದರ ಮಧ್ಯದಲ್ಲಿ ಆ ನಮುಚಿಯು ಮಾಯಾಸ್ತ್ರವನ್ನು ಪ್ರಯೋಗಿಸಿದನು.

ವಿಶಿಖಾಶ್ಶತಶಸ್ತತ್ರ ವಿನಿಶ್ಚೇರುಸ್ಸಮಂತತಃ ।
ಶಕ್ರಃ ಕೋಪಾತ್ಪುನಶ್ಶೀಘ್ರಂ ಧನುರುದ್ಯಮ್ಯ ವೀರ್ಯವಾನ್ ॥ ೧೪ ॥

ಜಘಾನ ವಿಶಿಖೈರುಗ್ರೈಃ ಸರ್ವಗಾತ್ರೇಷು ಸಂಚಲನ್ ।
ತತೋ ಮಾರ್ಗಣಸಾಹಸ್ರೈರಷ್ಟಭಿಸ್ತ್ವಧಿಕೈಸ್ತಥಾ ॥ ೧೫ ॥

ಬಿಭೇದಾತೇ ತತೋಽನ್ಯೋನ್ಯಂ ಚಿಚ್ಛೇದಾತೇ ಪರಸ್ಪರಂ ।
ಶರೈರ್ನಿರಂತರಾಕಾಶಂ ದದೃಶುಸ್ತತ್ರ ಸಂಯುಗೇ ॥ ೧೬ ॥

ನಿಪತಂತಿ ಧರಾಪೃಷ್ಠೇ ಖಡ್ಗಪಾತೈಸ್ಸಹಸ್ರಶಃ ॥
ಏವಂ ಸುದೀರ್ಘಕಾಲೇ ತು ಗತೇ ತಸ್ಮಿನ್ಮಹಾಹವೇ ॥ ೧೭ ॥

ಮಾಯಾಸ್ತ್ರಂ ದರ್ಶಯಾಮಾಸ ಕ್ರೂರಕೃನ್ನಮುಚಿಸ್ತದಾ ।
ತಮಸಾಂ ತ್ರಿಷು ಲೋಕೇಷು ಕೃತಂ ಸ್ಯಾತ್ತು ನಿರಂತರಂ ॥ ೧೮ ॥

ಪರಸ್ಪರಂ ನ ಪಶ್ಯಂತಿ ದೇವಾಸುರಗಣಾ ಭೃಶಂ ।
ಸೂರ್ಯಚಂದ್ರಗ್ರಹಾಣಾಂ ಚ ವಹ್ನೀನಾಂ ಚ ದಿವೌಕಸಾಂ ॥ ೧೯ ॥

---

೧೪-೧೫　ಅಲ್ಲಿ ಅನೇಕಬಾಣಗಳು ಓಡಾಡುತ್ತಿರುವಂತೆ ಮಾಡುತ್ತಿದ್ದರು. ಶಕ್ರನು ಆಗ ಕೋಪದಿಂದ ಧನುಸ್ಸನ್ನು ಎತ್ತಿ ಹಿಡಿದು ಸಾವಿರದ ಎಂಟು ಬಾಣಗಳನ್ನು ಬಿಟ್ಟು ಅವನ ಮೈಗೆಲ್ಲಾ ಹೊಡೆದನು.

೧೬. ಒಬ್ಬರಿಗೊಬ್ಬರು ಹೊಡೆದರು. ಒಬ್ಬರಬಾಣವನ್ನೊಬ್ಬರು ಕತ್ತರಿಸಿದರು. ಆಗ ಆಕಾಶವು ಬಾಣಗಳಿಂದ ಮುಚ್ಚಿದ್ದಿತು.

೧೭. ಆ ಬಾಣಗಳು ಭೂಮಿಯಲ್ಲಿ ಕತ್ತರಿಸಲ್ಪಟ್ಟು ಅನೇಕವಾಗಿ ಬಿದ್ದುವು. ಈರೀತಿ ಬಹುಕಾಲ ಯುದ್ಧವು ನಡೆಯಿತು.

೧೮. ಆಗ ನಮುಚಿಯು ಮಾಯಾಸ್ತ್ರವನ್ನು ಬಿಟ್ಟು ಪ್ರಪಂಚವೆಲ್ಲವನ್ನೂ ಕತ್ತಲೆಯನ್ನಾಗಿ ಮಾಡಿದನು.

೧೯-೨೧. ದೇವಾಸುರರೊಬ್ಬರೂ ಒಬ್ಬರನ್ನೊಬ್ಬರು ನೋಡುವಂತಿರಲಿಲ್ಲ. ಸೂರ್ಯ ಚಂದ್ರ ಗ್ರಹಗಳು ಬೆಂಕಿ ಇವರ ಕಾಂತಿಯು ಆ ಕತ್ತಲಲ್ಲಿ ಕಾಣುತ್ತಿರಲಿಲ್ಲ.

ತಸ್ಮಿಂಸ್ತಮಸಿ ದುಷ್ಪಾರೇ ಗಭಸ್ತಿರ್ನೈವ ದೃಶ್ಯತೇ ।
ದೈತ್ಯಸ್ಯ ಚ ತತಸ್ತೂರ್ಣಂ ಶರೈರಗ್ನಿಶಿಖೋಪಮೈಃ ॥ ೨೦ ॥

ವಿಭಗ್ನಾಸ್ಸರ್ವದೇವಾಶ್ಚ ಶಕ್ರಶ್ಚ ರಣಸಮ್ಮುಖೇ ।
ಶರೈರ್ವಿಭಿನ್ನದೇಹಾಸ್ತು ನಿಪೇತುರ್ಧರಣೀ ತಲೇ ॥ ೨೧ ॥

ಪ್ರಭಗ್ನಾಶ್ಚಾಪರೇ ಶೂರಾಃ ಸಂಯಾಂತಿ ಚ ದಿಶೋ ದಶ ।
ಕೂಟಂ ತಸ್ಯ ಪರಿಜ್ಞಾಯ ಸರ್ವದೇವಾರ್ಚಿತೋ ಹರಿಃ ॥ ೨೨ ॥

ಸೌಮ್ಯಮಸ್ತ್ರಂ ಮುಮೋಚಾಥ ದಿವಿ ಸೂರ್ಯಶತಪ್ರಭಂ ।
ವಿಲಂಬಿತಂ ಸಮಾಲೋಕ್ಯ ಶಕ್ತ್ಯಾ ಚ ಬಹುಘಂಟಯಾ ॥ ೨೩ ॥

ಜಘಾನೋರಸಿ ದೈತ್ಯಸ್ಯ ಸ ಪಪಾತ ವ್ಯಥಾನ್ವಿತಃ ।
ಚಿರಾತ್ಸಲಬ್ಧಸಂಜ್ಞಶ್ಚ ದೈತೇಯಃ ಕ್ರೋಧಮೂರ್ಛಿತಃ ॥ ೨೪ ॥

ಗತ್ವಾ ವೇಗಾತ್ಸುರಶ್ರೇಷ್ಠಮೈರಾವತಂ ದಧಾರ ಹ ।
ತ್ರಾಸಯಾಮಾಸ ಸುತರಾಮಿಂದ್ರಸ್ಯ ದ್ವಿರದಂ ರುಷಾ ॥ ೨೫ ॥

---

ಅನಂತರ ದೈತ್ಯನು ಬಾಣಗಳನ್ನು ಬಿಡಲು ಎಲ್ಲಾ ದೇವತೆಗಳಿಗೂ, ಏಟು ಬಿದ್ದಿತು. ಇಂದ್ರನಿಗೂ ಏಟು ತಾಕಿತು. ಬಾಣದ ಏಟುಗಳಿಂದ ನೊಂದು ಭೂಮಿಯಲ್ಲಿ ಅನೇಕ ದೇವತೆಗಳು ಬಿದ್ದರು.

೨೨-೨೪. ಮತ್ತೆ ಕೆಲವು ವೀರರು ನೊಂದು ಸುತ್ತಲೂ ಓಡುವುದಕ್ಕೆ ಮೊದಲಿಟ್ಟರು. ಆಗ ದೇವದೇವನಾದ ಇಂದ್ರನು ಮೋಸವನ್ನು ತಿಳಿದು ಅನೇಕ ಸೂರ್ಯರ ಕಾಂತಿಯುಳ್ಳ ಸೌಮ್ಯಾಸ್ತ್ರವನ್ನು ಬಿಟ್ಟನು. ಈ ಮಧ್ಯದಲ್ಲಿ ಸಮಯವನ್ನು ನೋಡಿ ಬಹು ಘಂಟೆಯುಳ್ಳ ಶಕ್ತ್ಯಾಯುಧವನ್ನು ಬಿಟ್ಟು ಆ ದೈತ್ಯನ ಎದೆಯಲ್ಲಿ ಹೊಡೆದನು. ಅವನು ನೋವನ್ನು ಹೊಂದಿ ಕೊಂಚಹೊತ್ತಿನಮೇಲೆ ಸುಧಾರಿಸಿಕೊಂಡು ಕೋಪಗೊಂಡು ಮತ್ತೆ ಎದ್ದನು.

೨೫. ಎದ್ದು ಹೋಗಿ ಕೋಪದಿಂದ ಐರಾವತವನ್ನು ಹಿಡಿದುಕೊಂಡು ತೊಂದರೆಪಡಿಸಿ ಕೋಪದಿಂದ ಹೆದರಿಸಿದನು.

ಧೃತ್ವಾ ಸ ಚ ಗಜಂ ಸೇಂದ್ರಂ ಮುಮೋಚ ಧರಣೀತಲೇ ।
ತತೋ ಭೂಮಿಗತಶ್ಶಕ್ರಃ ಕಶ್ಮಲಂ ಚ ಕ್ಷಣಂ ಗತಃ ॥ ೨೬ ॥

ಅವಪ್ಲುತ್ಯ ಸ ದೈತ್ಯೇಂದ್ರಃ ಗಜದಂತಾಂತರಸ್ಥಿತಃ ।
ಚಕ್ರಂ ಗೃಹೀತುಕಾಮಸ್ಯ ವಧಾರ್ಥಂ ಯೂಥಪಸ್ಯ ಹಿ ॥ ೨೭ ॥

ಅಸಿನಾ ಸುರಮುಖ್ಯಸ್ಯ ಶಿರಶ್ಛಿತ್ವಾ ನಿಪಾತಿತಃ ।
ಸರ್ವೇ ಪ್ರಜಹೃಷುರ್ದೇವಾ ಗಂಧರ್ವಾ ಲಲಿತಂ ಜಗುಃ ॥ ೨೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ದ್ವಿತೀಯನಮುಚಿವಧೋ ನಾಮ ಊನಸಪ್ತತಿತಮೋಽಧ್ಯಾಯಃ

---

೨೬. ಆಗ ಆ ಐರಾವತವನ್ನು ಹಿಡಿದು ಇಂದ್ರನೊಡನೆಯೇ ಭೂಮಿಗೆ ಕೆಡವಿದನು. ಆಗ ಕೆಳಗೆ ಬಿದ್ದು ಇಂದ್ರನು ಮೂರ್ಛಿತನಾದನು.

೨೭. ಅನಂತರ ಆ ದೈತ್ಯನು ನೆಗೆದು ಆನೆಯ ದಂತಗಳ ಮಧ್ಯದಲ್ಲಿ ನಿಂತು ಆ ಆನೆಯನ್ನು ಕೊಲ್ಲಲು ಚಕ್ರವನ್ನು ತೆಗೆಯುತ್ತಿದ್ದನು.

೨೮. ಆಗ ಕತ್ತಿಯನ್ನು ತೆಗೆದುಕೊಂಡು ಇಂದ್ರನು ಆ ದೈತ್ಯನ ತಲೆಯನ್ನು ಕತ್ತರಿಸಿ ಕೆಡವಿದನು. ಆಗ ದೇವತೆಗಳು ಸಂತೋಷಗೊಂಡರು. ಗಂಧರ್ವರು ಹಾಡಿದರು. ಋಷಿಗಳೂ ಸಂತೋಷಪಟ್ಟು ಇಂದ್ರನನ್ನು ಹೊಗಳಿದರು.

ಇಂತು ಶ್ರೀಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಎರಡನೆಯ ನಮುಚಿವಧವೆಂಬ ಅರವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಸಪ್ತತಿತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

ದಿವ್ಯಂ ರಥಂ ಸಮಾಸ್ಥಾಯ ಧನುರ್ಹಸ್ತೋ ಬಲೈರ್ಯುತಃ ।
ಗತ್ವಾ ಚ ಮಾಧವಂ ಸಂಖ್ಯೇ ದೇವಾಸುರಗಣಾಗ್ರತಃ ॥ ೧ ॥

ಕ್ರೋಧೇನ ಮಹತಾವಿಷ್ಟೋ ಮಧುರ್ನಿರ್ಜರಮರ್ದನಃ ।
ಅಬ್ರವೀತ್ಪುರುಷಂ ವಾಕ್ಯಮವ್ಯಯಂ ಹರಿಮೀಶ್ವರಂ ॥ ೨ ॥

ನಾರಾಯಣ ನ ಜಾನಾಸಿ ಯುದ್ಧಧರ್ಮಮಿತಃ ಕಥಂ ।
ಅನ್ಯಾಯೋದ್ದುರ್ವಧೋಪಾಯಂ ಕೃತ್ವಾ ನಷ್ಟೋ ನ ಶೋಚಸೇ ॥ ೩ ॥

---

### ಎಪ್ಪತ್ತನೆಯ ಅಧ್ಯಾಯವು

೧-೨. ವ್ಯಾಸನು ಹೇಳಿದನು- ಮಧುವೆಂಬ ದೈತ್ಯನು ಒಳ್ಳೆಯ ರಥವನ್ನು ಹತ್ತಿ ಧನುಸ್ಸನ್ನು ಹಿಡಿದು ಅನುಯಾಯಿಗಳೊಡನೆ ವಿಷ್ಣುವನ್ನು ಎದುರಿಸಿದನು. ಕೋಪದಿಂದ ಆ ಹರಿಯನ್ನು ಕುರಿತು ಇಂತೆಂದು ದುಷ್ಟವಾದ ಮಾತುಗಳನ್ನು ಹೇಳಿದನು.

೩. ಎಲೈ ನಾರಾಯಣನೇ! ಯುದ್ಧದ ಧರ್ಮವನ್ನು ಇನ್ನೂ ನೀನು ತಿಳಿದಿಲ್ಲವಲ್ಲ! ಏತಕ್ಕೆ ? ಅನ್ಯಾಯದಿಂದ ಕೊಂದು ಹಾಳಾಗುತ್ತೀಯಲ್ಲ! ಮನಸ್ಸಿಗೆ ದುಃಖವೂ ಇಲ್ಲವಲ್ಲ.

ಅನೇನ ಪಂಕೆಯೋಗೇನ ವ್ಯವಹಾರಾಕೃತಸ್ಯ ಚ ।
ಸುರತ್ವಂ ಚೋಪನಷ್ಟಂ ಸ್ಯಾದನ್ಯಾಂ ಸೃಷ್ಟಿಂ ಕರೋಮ್ಯಹಂ ॥ ೪ ॥

ತ್ವಾಮೇವ ನಿಹನಿಷ್ಯಾಮಿ ಸಹ ದೇವಗಣೈಶ್ಯರೈಃ ।
ಇತ್ಯುಕ್ತ್ವಾ ಧನುರಾದಾಯ ಜಘಾನ ವಿಶಿಖೈರ್ವಿಭುಂ ॥ ೫ ॥

ಮಾಧವಸ್ತಾನ್ವಿಭೇದಾಥ ಶರೈರ್ವಜ್ರಸಮಪ್ರಭೈಃ ।
ಬಾಹುಭಿಸ್ಸರ್ವಗಾತ್ರೇಷು ಜಘಾನ ಸ ಮಧುಂ ತತಃ ॥ ೬ ॥

ಮಾಯಯಾ ಘಟಿತಾಸ್ತೇನ ದೈತ್ಯಾಶ್ಚ ಸುರಸತ್ತಮಾಃ ।
ಯೇ ವೈ ಶೂರಾಶ್ಚ ರುದ್ರಾದ್ಯಾಸ್ತ್ರಿದಶಾಃ ಸತ್ವಧಾರಿಣಃ ॥ ೭ ॥

ದೇವ್ಯೋ ನಾನಾವಿಧಾಶ್ಚಾಪಿ ಸಾಯುಧಾ ವಾಹನಾನ್ವಿತಾಃ ।
ಸೇನಾನ್ಯೋ ಗಣಪಾ ದೇವಾ ಲೋಕೇಶಹರವಿಷ್ಣವಃ ॥ ೮ ॥

---

೪. ಹೇಳುವುದಕ್ಕೂ ಕೂಡ ಅಯೋಗ್ಯವಾದ ಇಂತಹ ಪಾಪಗಳಿಂದಲೇ ದೇವತೆಗಳೆಲ್ಲರೂ ನಾಶವಾಗುತ್ತಾರೆ. ಇರಲಿ. ನಾನು ಬೇರೆಯವರನ್ನೇ ಸೃಷ್ಟಿ ಮಾಡುತ್ತೇನೆ.

೫. ನಿನ್ನನ್ನೂ ನಿನ್ನ ಜೊತೆಯ ದೇವಗಣಗಳನ್ನೂ ಕೊಂದುಹಾಕುತ್ತೇನೆ. ಎಂದು ಹೇಳುತ್ತಾ ಧನುಸ್ಸನ್ನು ತೆಗೆದುಕೊಂಡು ಬಾಣಗಳಿಂದ ವಿಷ್ಣುವನ್ನು ಹೊಡೆದನು.

೬. ಮಾಧವನು ಹರಿತವಾದ ಬಾಣದಿಂದ ಆ ಬಾಣಗಳನ್ನು ಕತ್ತರಿಸಿದನು. ಅಲ್ಲದೆ ಆ ಮಧುವಿನ ಎಲ್ಲಾ ಅಂಗಗಳ ಮೇಲೂ, ಬಾಣವನ್ನು ಬಿಟ್ಟನು.

೭-೯. ಆಗ ಮಧುವು ಮಾಯೆಯನ್ನು ಪ್ರಯೋಗಿಸಿದನು. ಇದರಿಂದ ಶೂರರಾದ ರುದ್ರರೂ, ಬಲಿಷ್ಠರಾದ ದೇವತೆಗಳೂ, ಅನೇಕ ಬಗೆಯ ಆಯುಧಗಳನ್ನು ಧರಿಸಿರುವ ದೇವಿಯರೂ, ಸೇನಾಪತಿಗಳೂ, ಗಣಪರೂ, ಹರಿಹರರೂ, ಗ್ರಹಗಳೂ,

ಅನ್ಯೇ ಗ್ರಹಾದಯೋ ದೇವಾಃ ಸರ್ವೇ ಯುದ್ಧ್ಯಂತಿ ಸಂಗತಾಃ ।
ವಿನಷ್ಟಾಶ್ಚ ತದಾ ದೇವಾರ್ಮಘೋರ್ವೈ ಮಾಯಯಾ ಧ್ರುವಂ ॥ ೯ ॥

ಸಮ್ಮುಖೇ ವಿಮುಖೇ ಚೈವ ಶರಶಕ್ತ್ಯೃಷ್ಟಿವೃಷ್ಟಿಭಿಃ ।
ಪತಂತಿ ಸಹಸಾ ದೇವಾ ಭೂಮೌ ಶಸ್ತ್ರಾಭಿಪೀಡಿತಾಃ ॥ ೧೦ ॥

ಏತಸ್ಮಿನ್ನಂತರೇ ವಿಷ್ಣುಃ ಗೃಹೀತ್ವಾ ಚ ಸುದರ್ಶನಂ ।
ಅಸುರಾನ್ಮಾಯಯಾ ಯುಕ್ತಾನ್ನಘಾನ ರಣಮೂರ್ಧನಿ ॥ ೧೧ ॥

ಅಥ ತೇಷಾಂ ಶಿರಾಂಸ್ಯೇಷಃ ಛಿತ್ವಾ ಚೈವ ಸಹಸ್ರಶಃ ।
ಪಾತಯಾಮಾಸ ದೇವೇಶೋ ದೈತ್ಯಾನಾಂ ಚ ದುರಾತ್ಮನಾಂ ॥ ೧೨ ॥

ಏವಮನ್ಯಾನ್ವಿಭುರ್ದೈತ್ಯಾನ್ದ್ರಾವಯಾಮಾಸ ಸಂಗರಾತ್ ।
ತಂ ದೃಷ್ಟ್ವಾ ಮುನಯೋ ದೇವಾಸ್ಸರ್ವೇ ವಿಸ್ಮಯಮಾಯಯುಃ
ಕರ್ಣೇ ಕರ್ಣೇ ಪ್ರಜಲ್ಪಂತಿ ದೇವಾ ಮುನಿಗಣಾಸ್ತದಾ ॥ ೧೩ ॥

---

ಎಲ್ಲರೂ ಸೇರಿಕೊಂಡು ತಮ್ಮ ತಮ್ಮೊಳಗೆ ಯುದ್ಧಮಾಡಲಾರಂಭಿಸಿದರು. ಈ ಮಧುವಿನ ಮಾಯೆಯಿಂದ ಈರೀತಿ ದೇವತೆಗಳು ನಾಶವನ್ನು ಹೊಂದಿದರು.

೧೦. ಹಿಂದೆಯೂ ಮುಂದೆಯೂ ಎಲ್ಲಾ ಕಡೆಯಲ್ಲಿಯೂ ಬಾಣದ ಮಳೆಯಿಂದ ದೇವತೆಗಳು ನೊಂದು ಕೆಳಗೆ ಬಿದ್ದರು.

೧೧. ಇಷ್ಟರಲ್ಲಿ ವಿಷ್ಣುವು ಸುದರ್ಶನ ಚಕ್ರವನ್ನು ಹಿಡಿದು ಮಾಯಾವಿಗಳಾದ ರಾಕ್ಷಸರನ್ನು ಕೊಂದನು.

೧೨. ಈ ವಿಷ್ಣುವು ಆ ದುಷ್ಟರಾದ ದೈತ್ಯರ ತಲೆಗಳನ್ನು ಸಾವಿರಗಟ್ಟಲೆಯಲ್ಲಿ ಕಡಿದು ಕೆಡವಿದನು.

೧೩. ಇದೇ ರೀತಿ ಇನ್ನೂ ಕೆಲವು ದೈತ್ಯರನ್ನು ಈ ವಿಷ್ಣುವು ಯುದ್ಧದಿಂದ ಓಡಿಸಿದನು. ಇದನ್ನು ನೋಡಿ ಮುನಿಗಳೂ, ದೇವತೆಗಳೂ ಆಶ್ಚರ್ಯಪಟ್ಟರು. ಮತ್ತೂ ಕಿವಿ ಕಿವಿಯಲ್ಲಿ ಇಂತೆಂದೆನ್ನುತ್ತಿದ್ದರು.

॥ ಮುನಿದೇವಾ ಊಚುಃ ॥

ಸದಾ ದೇವೈಕಗೋಪ್ತಾ ಚ ಹರಿರವ್ಯಯ ಈಶ್ವರಃ ।
ಸರ್ವಸಾಕ್ಷೀತ್ವಯಂ ದೇವೋ ದೈತ್ಯಜಿಷ್ಣುರ್ಯುಗೇ ಯುಗೇ ॥೧೪॥

ಕಥಂ ಹಂತಿ ಸುರಾನ್ ಸರ್ವಾನ್ಕಲ್ಪಾಂತ ಇಹ ಕಥ್ಯತೇ ॥ ೧೫ ॥

। ವ್ಯಾಸ ಉವಾಚ ॥

ಏತಸ್ಮಿನ್ನಂತರೇ ದೂರೇ ಮಧುರ್ಮಾಯಾಂ ಪ್ರಯೋಜಿತಾ ।
ಹರರೂಪಧರೋ ಭೂತ್ವಾ ಅಬ್ರವೀದ್ಧರಿಮವ್ಯಯಂ ॥ ೧೬ ॥

॥ ಮಧುರುವಾಚ ॥

ದೈತ್ಯಾನಾಮಗ್ರತಃ ಪಾಪ ರಣೇ ಧೇವಾನ್ಸಮಂತತಃ ।
ಹತ್ವಾ ಕಿಂ ತೇ ಶಿವಂ ಚಾದ್ಯ ಧರ್ಮಃ ಕೀರ್ತಿರ್ಯಶೋ ಗುಣಃ ॥ ೧೭ ॥

ಮಹದುನ್ಮತ್ತಸದ್ಭಾವಾನ್ನ ಜಾನಾಸಿ ಪರಾನ್ಸ್ವಕಾನ್ ।
ಅತಸ್ತ್ವಾಂ ನಿಶಿತೈರ್ಬಾಣೈರ್ನಯಾಮಿ ಯಮಸಾದನಂ ॥ ೧೮ ॥

---

೧೪-೧೫. ಮುನಿಗಳೂ ದೇವತೆಗಳೂ ಹೇಳಿದರು- ಈ ಹರಿಯು ನಾಶ ರಹಿತನು, ಒಡೆಯನು, ಯಾವಾಗಲೂ ದೇವತೆಗಳನ್ನು ರಕ್ಷಿಸುತ್ತಾನೆ. ಇವನು ಸರ್ವಸಾಕ್ಷಿಯು. ಪ್ರತಿ ಯುಗದಲ್ಲಿಯೂ. ದೈತ್ಯರನ್ನು ಗೆಲ್ಲುತ್ತಾನೆ. ಹೀಗಿರ ವವನು ಕಲ್ಪಾಂತರದಲ್ಲಿ ದೇವತೆಗಳನ್ನು ಹೇಗೆ ಕೊಲ್ಲುವನು ? ಎಂದೆನ್ನುತ್ತಾರೆ.

೧೬. ವ್ಯಾಸನು ಹೇಳಿದನು- ಇಷ್ಟರೊಳಗೆ ಮಧುವು ಮಾಯೆಯಿಂದ ಹರನ ರೂಪವನ್ನು ಹೊಂದಿ ಹರಿಗೆ ಇಂತೆಂದನು

೧೭. ಮಧುವು ಹೇಳಿದನು- ಎಲೈ ಪಾಪಿಯೇ ! ದೈತ್ಯರ ಎದುರಿಗೆ ನೀನು ದೇವತೆಗಳನ್ನು ಕೊಲ್ಲುತ್ತಿದ್ದೀಯೆ. ಇದರಿಂದ ನೀನಗೇನು ಅನುಕೂಲ ? ಧರ್ಮ ವಾಗಲಿ ಕೀರ್ತಿಯಾಗಲಿ ಇದರಲ್ಲಿ ಯಾವುದಿದೆ ?

೧೮. ನೀನು ಬಹು ಉನ್ಮತ್ತನಾಗಿರುತ್ತೀಯೆ. ನನ್ನವರು ಪರರು ಎಂಬುದೇ ನಿನಗೆ ತಿಳಿಯದು. ಆದ್ದರಿಂದ ನಿನ್ನನ್ನು ಬಾಣಗಳಿಂದ ಕೊಂದುಹಾಕುತ್ತೇನೆ.

॥ ವ್ಯಾಸ ಉವಾಚ ॥

ಏವಮುಕ್ತ್ವಾ ಶರೈರುಗ್ರೈರ್ಜಘಾನ ಕೇಶವಂ ರಣೇ ।
ನಿಚಕರ್ತ ಶರಾಂಸ್ತಾಂಸ್ತು ಮಾಧವೋ ವಾಕ್ಯಮಬ್ರವೀತ್ ॥ ೧೯ ॥

॥ ಮಾಧವ ಉವಾಚ ॥

ಜಾನಾಮಿ ತ್ವಾಂ ರಣೇ ದೈತ್ಯ ಹರರೂಪಧರಂ ಪ್ರಿಯಂ ।
ಶೂರಂ ಶೂರವಿಕರ್ಮಾಣಂ ಮಧುಂ ಮಾಯಾನಿಯೋಜಿತಂ ॥
ಮಿಥ್ಯಾಲೋಕಂ ಪ್ರದಾಸ್ಯಾಮಿ ಪಾತಯಿತ್ವಾ ರಣಾಜಿರೇ ॥ ೨೦ ॥

॥ ವ್ಯಾಸ ಉವಾಚ ॥

ಏತಸ್ಮಿನ್ನಂತರೇ ತೀಕ್ಷ್ಣೈಃ ಶರೈರ್ವಿವ್ಯಾಧ ಸಂಯುಗೇ ।
ಜಟಿಲಂ ವೃಷಕೇತುಂ ಚ ವೃಷಭಸ್ಥಂ ಮಹೇಶ್ವರಂ ॥ ೨೧ ॥

ತಯೋರ್ಯುದ್ಧಮತೀವಾಸೀದ್ದೇವದಾನವಯೋಸ್ತದಾ ।
ಪರಸ್ಪರಂ ಭಿಂದತೋಶ್ಚ ಛಿಂದಂತೋಶ್ಚ ಶರಾನ್ಶರೈಃ ॥ ೨೨ ॥

---

೧೯. ವ್ಯಾಸನು ಹೇಳಿದನು- ಹೀಗೆಂದು ಕೇಶವನ ಮೇಲೆ ಬಾಣಗಳನ್ನು ಬಿಟ್ಟನು. ಆ ಕೇಶವನೂ ಈ ಬಾಣಗಳನ್ನು ಕತ್ತರಿಸಿ ಇಂತೆಂದನು.

೨೦. ಮಾಧವನು ಹೇಳಿದನು- ಎಲೈ ದೈತ್ಯನೇ ! ನಿನ್ನನ್ನು ಬಲ್ಲೆನು ಹರರೂಪವನ್ನು ಧರಿಸಿದ್ದೀಯೆ. ನೀನು ಶೂರನು. ಶೂರಕರ್ಮವನ್ನು ಮಾಡುತ್ತೀಯೆ. ಮಾಯೆಯಲ್ಲಿ ಗಟ್ಟಿಗನೆಂಬುದನ್ನು ಬಲ್ಲೆನು. ನಿನ್ನನ್ನು ರಣಾಂಗಣದಲ್ಲಿ ಕೊಂದು ನಿನಗೆ ಕೆಟ್ಟಲೋಕವನ್ನು ಕೊಡುತ್ತೇನೆ.

೨೧. ವ್ಯಾಸನು ಹೇಳಿದನು- ಹೀಗೆಂದು ಹೇಳುತ್ತಾ ಜಡೆಗೂ, ಧ್ವಜಕ್ಕೂ ಬಸವನ ಮೇಲೆ ಕೂತಿರುವ ಈಶ್ವರನಿಗೂ ಬಾಣಗಳನ್ನು ಬಿಟ್ಟು ಹೊಡೆದನು.

೨೨. ಆಗ ಅವರಿಬ್ಬರಿಗೂ ದೊಡ್ಡ ಯುದ್ಧವು ನಡೆಯಿತು. ಒಬ್ಬರ ಬಾಣವನ್ನು ಮತ್ತೊಬ್ಬರು ಕತ್ತರಿಸುತ್ತಿದ್ದರು. ಚೂರು ಚೂರಾಗಿ ಮಾಡುತ್ತಿದ್ದರು

ಕ್ಷುರಪ್ರೇಣ ಧನುಸ್ತಸ್ಯ ಚಿಚ್ಛೇದ ಹರಿರವ್ಯಯಃ ।
ತತಶ್ಚ ಪಾತಯಾಮಾಸ ಘೋಟಕಂ ವೃಷರೂಪಿಣಂ ॥ ೨೩ ॥

ಸ ದೈತ್ಯಶ್ಶೂಲಹಸ್ತೋಥ ಪ್ರದುದ್ರಾವ ಜಗತ್ಪತಿಂ ।
ಭ್ರಾಮಯಿತ್ವಾ ತತಶ್ಶೂಲಂ ಜಘಾನ ಪರಮೇಶ್ವರಂ ॥ ೨೪ ॥

ತ್ರಿಭಿಶ್ಚಿಚ್ಛೇದ ಬಾಣೈಶ್ಚ ಶೂಲಂ ಕಾಲಾನಲಪ್ರಭಂ ।
ತತಃ ಕ್ರೂರೋ ಮಹಾಬಾಹುಃ ಮಧುರ್ಮಾಯಾತಿಮಾಯಿಕಃ ॥ ೨೫ ॥

ದೇವೀರೂಪಂ ಸಮಾಸ್ಥಾಯ ಸಿಂಹಸ್ಥಃ ಪ್ರಯಯೌ ಹರಿಂ ।
ಶರೈರ್ಬಹುವಿಧೈರ್ವಿಷ್ಣುಂ ಜಘಾನೈನಾಬ್ರವೀದ್ವಚಃ ॥ ೨೬ ॥

॥ ಮಧುರ ಉವಾಚ ॥

ಸ್ವಾಮೀ ತು ಮೇ ಸುರಶ್ರೇಷ್ಠ ತ್ವಯೈವ ಪಾತಿತೋ ಯುಧಿ ।
ಅಹಂ ತ್ವಾಂ ಚ ಹನಿಷ್ಯಾಮಿ ಸುತೌ ಸ್ಕಂದವಿನಾಯಕೌ ॥ ೨೭ ॥

---

೨೩. ಹರಿಯು ಬಾಣದಿಂದ ಅವನ ಧನುಸ್ಸನ್ನು ಕತ್ತರಿಸಿ ಎತ್ತಿನ ರೂಪವನ್ನು ಹೊಂದಿದ್ದ ಅವನ ಕುದುರೆಯನ್ನೂ ಕೆಡವಿದನು.

೨೪. ಅನಂತರ ಆ ದೈತ್ಯನು ಶೂಲವನ್ನು ತೆಗೆದುಕೊಂಡು ಹರಿಯ ಮೇಲೆ ಬಿಡಲು ಕೂಗುತ್ತ ಅದರಿಂದ ಹರಿಯನ್ನು ಹೊಡೆದನು.

೨೫-೨೬. ವಿಷ್ಣುವು ಆ ಶೂಲವನ್ನು ಮೂರು ಬಾಣಗಳಿಂದ ಕತ್ತರಿಸಿದನು. ಆಗ ಆ ದುಷ್ಟನಾದ ಮಧುವು ಮಾಯೆಯಿಂದ ದೇವಿಯ ರೂಪವನ್ನು ಹೊಂದಿ ಸಿಂಹದಮೇಲೆ ಕುಳಿತು ಬಂದನು. ಬಾಣಗಳಿಂದ ವಿಷ್ಣುವನ್ನು ಹೊಡೆಯುತ್ತಾ ಇಂತೆಂದನು.

೨೭. ಮಧುವು ಹೇಳಿದನು- ಎಲೈ ವಿಷ್ಣುವೇ ! ನನ್ನ ಗಂಡನನ್ನು ನೀನು ಕೊಂದೆ. ನಾನು ನನ್ನ ಮಕ್ಕಳಾದ ಸ್ಕಂದ, ವಿನಾಯಕರೂ ನಿನ್ನನ್ನು ಕೊಲ್ಲುತ್ತೇವೆ.

॥ ವ್ಯಾಸ ಉವಾಚ ॥

ಉಕ್ತವಂತಂ ಚ ಚೈತೇಯಂ ಜಘಾನ ಬಹುಮಾರ್ಗಣೈಃ ।
ಸ ಪಪಾತ ಮಹೀಪೃಷ್ಠೇ ಗತಾಸುರ್ಲೋಹಿತೋದ್ಗಿರಃ ॥ ೨೮ ॥

ಪಿತರೌ ನಿಹತೌ ದೃಷ್ಟ್ವಾ ಮಾಯಾಬದ್ಧೋ ಮಹಾಬಲಃ ।
ಸ್ಕಂದಶ್ಶಕ್ತಿಂ ಸಮಾದಾಯ ಪ್ರಾಯಾದ್ಯೋದ್ಧಯಿತುಂ ಹರಿಂ ॥
ತತೋ ಧಾತಾಬ್ರವೀದ್ವಾಕ್ಯಂ ಸ್ಕಂದಂ ಮೋಹಪ್ರಪೀಡಿತಂ ॥ ೨೯ ॥

॥ ಬ್ರಹ್ಮೋವಾಚ ॥

ಪಶ್ಯ ತೇ ಪಿತರೌ ದೂರೇಪಶ್ಯಂತೌ ಯುದ್ಧಮೀದೃಶಂ ।
ಅಂತರಿಕ್ಷೇ ಭ್ರಮಂತೌ ಚ ಸಂಸ್ಥಿತೌ ಲೋಕಸಾಕ್ಷಿಣೌ ॥ ೩೦ ॥

॥ ವ್ಯಾಸ ಉವಾಚ ॥

ಏತಚ್ಛ್ರುತ್ವಾ ತು ತೌ ದೃಷ್ಟ್ವಾ ತತ್ರೈವಾಂತರಧೀಯತ ।
ತತೋ ಧುಂಧುಶ್ಚ ಸಿಂಧುಶ್ಚ ಭ್ರಾತರೌ ಬಲದರ್ಪಿತೌ ॥ ೩೧ ॥

---

೨೮. ವ್ಯಾಸನು ಹೇಳಿದನು- ಹೀಗೆ ಆ ದೈತ್ಯನು ಹೇಳುತ್ತಿರಲು ವಿಷ್ಣುವು ಬಾಣಗಳನ್ನು ಬಿಟ್ಟು ಕೊಲ್ಲಲು ಆ ದೈತ್ಯನು ರಕ್ತವನ್ನು ಕಾರುತ್ತ ಸತ್ತುಬಿದ್ದನು.

೨೯. ಮಹಾಬಲಿಷ್ಠನಾದ ಸ್ಕಂದನು, ಹರಿಯು ತಾಯಿ ತಂದೆಗಳನ್ನು ಕೊಂದುದನ್ನು ನೋಡಿ ಶಕ್ತ್ಯಾಯುಧವನ್ನು ತೆಗೆದುಕೊಂಡು ಆ ಹರಿಯೊಡನೆ ಯುದ್ಧಕ್ಕೆ ಬಂದನು. ಆಗ ಬ್ರಹ್ಮನು ಅಜ್ಞಾನದಿಂದ ಕೂಡಿದ ಆ ಸ್ಕಂದನಿಗೆ ಇಂತೆಂದನು.

೩೦. ಬ್ರಹ್ಮನು ಹೇಳಿದನು- ಎಲೈ ಸ್ಕಂದನೇ! ಈರೀತಿಯಾದ ಯುದ್ಧವನ್ನು ದೂರದಲ್ಲಿ ನೋಡುತ್ತಿರುವ ನಿನ್ನ ತಾಯಿತಂದೆಗಳನ್ನು ನೋಡು. ಅಂತರಿಕ್ಷದಲ್ಲಿ ಸುತ್ತುತ್ತ ಲೋಕಸಾಕ್ಷಿಯಾಗಿದ್ದಾರೆ.

೩೧-೩೪. ವ್ಯಾಸನು ಹೇಳಿದನು–ಸ್ಕಂದನು ಇದನ್ನು ಕೇಳಿ ಅವರನ್ನು ನೋಡಿ ಹೊರಟುಹೋದನು. ಅನಂತರ ಬಲಿಷ್ಠರಾದ ಧುಂಧು ಸಿಂಧು ಎಂಬ ಸಹೋದರರೂ

ವಧಂ ಪ್ರತಿ ಹರೇರ್ಯುದ್ಧೇ ಪೇತತುರ್ಗರುಡೋಪರಿ ।
ಖಡ್ಗಹಸ್ತಂ ಚ ಧುಂಧುಂ ಚ ಸಗದಂ ಸಿಂಧುಮೇವ ಚ ॥ ೩೨ ॥

ಚಿಚ್ಛೇದ ನಂದಕೇ ನೈಕಂ ಗದಯಾಸಾದಯತ್ಪರಂ ।
ಪೇತತುಸ್ತೌ ಧರಾಪೃಷ್ಠೇ ಪ್ರವೀರೌ ಕ್ಷತವಿಕ್ಷತೌ ॥ ೩೩ ॥

ಮಧುಸ್ತದಾಗಮತ್ತೂರ್ಣಮಂತರ್ಧಾನಂ ತತೋ ವೃತಃ ।
ಪಾತಯಾಮಾಸ ವಿಷ್ಣೌ ಚ ಮಾಯಯಾ ಶತಪರ್ವತಾನ್ ॥ ೩೪ ॥

ತತಸ್ತಾನ್ಪರ್ವತಾಂಶ್ಛಿತ್ವಾ ತಮಸೋಂತರ್ಗತೋ ಯುಧಿ ।
ಕ್ರೋಧಾತ್ಸುದರ್ಶನೇನೈವ ಶಿರಶ್ಛಿತ್ವಾ ನಿಪಾತಿತಃ ॥ ೩೫ ॥

ತತೋ ಬ್ರಹ್ಮಾದಿಭಿರ್ದೇವೈಃ ಶಂಭುನಾ ತ್ರಿದಶೈರಪಿ ।
ಮಧುಸೂದನ ಇತಿ ಖ್ಯಾತಿರ್ವಿಷ್ಣೋರ್ಲೋಕೇಷು ಕಾರಿತಾ ॥ ೩೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಮಧುವಧೋನಾಮ
ಸಪ್ತತಿತಮೋಽಧ್ಯಾಯಃ

---

ಹರಿಯನ್ನು ಕೊಲ್ಲಲು ಗರುಡನ ಮೇಲೆ ಬಿದ್ದರು. ಖಡ್ಗವನ್ನು ಹಿಡಿದಿದ್ದ ಧುಂಧು ನಂದಕದಿಂದಲೂ, ಗದೆಯನ್ನು ಹಿಡಿದಿದ್ದ ಸಿಂಧುವನ್ನು ಗದೆಯಿಂದಲೂ ವಿಷ್ಣುವು ಕೊಲ್ಲಲು ಅವರಿಬ್ಬರೂ ಭೂಮಿಯಲ್ಲಿ ಬಿದ್ದರು.

೩೪. ಮತ್ತೆ ಮಧುವು ಮಾಯೆಯಿಂದ ಕತ್ತಲೆಯನ್ನು ಮಾಡಿ ಆ ಕತ್ತಲೆಯಲ್ಲಿ ಮರೆಯಾಗಿ ನೂರು ಬೆಟ್ಟಗಳನ್ನು ಆ ವಿಷ್ಣುವಿನ ಮೇಲೆ ಕೆಡವಿದನು.

೩೫. ಕತ್ತಲೆಯಲ್ಲಿಯೇ ಆ ಬೆಟ್ಟಗಳನ್ನು ಕತ್ತರಿಸಿ ಸುದರ್ಶನದಿಂದ ಅವನ ತಲೆಯನ್ನು ಕತ್ತರಿಸಿದನು.

೩೬. ಆಗ ಬ್ರಹ್ಮನೂ ಶಂಭುವೂ ದೇವತೆಗಳೂ ಈ ವಿಷ್ಣುವನ್ನು ಲೋಕದಲ್ಲಿ ಮಧುಸೂದನನೆಂದು ಪ್ರಚುರಪಡಿಸಿ ಕೂಗಿದರು.

ಇಂತು ಶ್ರೀಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಮಧುವಧವೆಂಬ
ಎಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಏಕಸಪ್ತತಿತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

ತತೋ ವೃತ್ರೋ ಮಹಾತೇಜಾ ದೈತ್ಯಾನಾಂ ಪ್ರವರೋ ಯುಧಿ ।
ದಿಗ್ಗಜಾಢ್ಯಂ ಗಜಾರೂಢಃ ಪ್ರಾದ್ರವದ್ಬಲಸೂದನಂ ॥ ೧ ॥

ನಿಗಚ್ಛಂತಂ ತತೋ ವೃತ್ರಂ ಶರೈಃ ಕಾಲಾನಲಪ್ರಭೈಃ ।
ವಿವ್ಯಾಧ ಸರ್ವಗಾತ್ರೇಷು ದ್ವಿರದಸ್ಥೋ ಮಹಾಹವೇ ॥ ೨ ॥

ತತೋ ವೃತ್ರಸ್ತು ಶೀರ್ಷಂ ಚ ಜಿಷ್ಣೋರೇವ ಪತತ್ರಿಣಾ ।
ವಿವ್ಯಾಧ ಸಹಸಾ ತೇನ ಸ ಚ ಚಾಲ ಮಹಾಬಲಃ ॥ ೩ ॥

---

## ಎಪ್ಪತ್ತೊಂದನೆಯ ಅಧ್ಯಾಯವು

೧. ವ್ಯಾಸನು ಹೇಳಿದನು– ಅನಂತರ ಆ ದೈತ್ಯಶ್ರೇಷ್ಠನಾದ ವೃತ್ರನೆಂಬುವನು ದಿಗ್ಗಜದಂತಿರುವ ಆನೆಯ ಮೇಲೆ ಕುಳಿತುಕೊಂಡು ಇಂದ್ರನನ್ನು ಎದುರಿಸಿದನು.

೨. ಆನೆಯ ಮೇಲೆ ಬರುತ್ತಿರುವ ವೃತ್ರನನ್ನು ಅನೇಕ ಬಾಣಗಳಿಂದ ಇಂದ್ರನು ತಾನೂ ಆನೆಯ ಮೇಲೆ ಕುಳಿತಿರುವಂತೆಯೇ ಹೊಡೆದನು.

೩. ವೃತ್ರನು ಇಂದ್ರನ ತಲೆಗೆ ಬಾಣಗಳಿಂದ ಹೊಡೆಯಲು ಆ ಇಂದ್ರನು ಮಹಾಬಲಿಷ್ಠನಾದರೂ ತಡೆಯಲಾರದೆ ತತ್ತರಿಸಿದನು.

ಆತ್ಮಾನಂ ಚ ಸಮಾಶ್ವಾಸ್ಯ ಧನುರುದ್ಯಮ್ಯ ವೀರ್ಯವಾನ್ ।
ವವರ್ಷ ಶರವರ್ಷೇಣ ತಸ್ಯ ದೈತ್ಯಸ್ಯ ವಿಗ್ರಹೇ ॥ ೪ ॥

ಶರಾಂಶ್ಛಿತ್ವಾ ಬಿಭೇದಾಶು ಶರೈರಾಶೀವಿಷೋಪಮೈಃ ।
ಶತಕ್ರತುಂ ಮಹಾವೀರ್ಯಂ ಸರ್ವದೇವಾಧಿಪಂ ಯುಧಿ ॥ ೫ ॥

ತತಶ್ಶರಸಹಸ್ರೈಸ್ತು ದೈತ್ಯಂ ವಿವ್ಯಾಧ ದೇವರಾಟ್ ।
ಪರಸ್ಪರಂ ಶರಾ ಯಾನ್ತಿ ಹೇಮರತ್ನ ವಿಭೂಷಿತಾಃ ॥ ೬ ॥

ಸಂಚರಂತಿ ಯಥಾ ವಾತಾ ವ್ಯತ್ಯಾತ್ಯಶತಸಹಸ್ರಶಃ ।
ವಿಯತ್ಪಥಿ ಶರಾ ಯಾಂತಿ ಯಥಾ ಸಪ್ತಾಶ್ವರಶ್ಮಯಃ ॥ ೭ ॥

ಏವಂ ಶರಸಹಸ್ರೈಸ್ತು ಬಿಭಿದಾತೇ ಪರಸ್ಪರಂ ।
ಮನೋಜವಸಮಾಶ್ಲಿಷ್ಟಾ ಗಾಢಾಶ್ಶಿಖರಿಣೋ ಯಥಾ ॥ ೮ ॥

---

೪. ಆಗ ಇಂದ್ರನು ಸಮಾಧಾನಹೊಂದಿ ಧನುಸ್ಸನ್ನು ಹಿಡಿದುಕೊಂಡು ಆ ವೃತ್ರನ ಮೇಲೆ ಬಾಣದ ಮಳೆಯನ್ನು ಸುರಿಸಿದನು.

೫. ವೃತ್ರನು ಇಂದ್ರನ ಬಾಣಗಳನ್ನು ಕತ್ತರಿಸಿ ಮತ್ತೆ ಪರ್ವತದಂತಿರುವ ಬಾಣಗಳಿಂದ ಪರಾಕ್ರಮಿಯೂ ದೇವಾಧಿಪನೂ ಆದ ಆ ಇಂದ್ರನನ್ನು ಹೊಡೆದನು.

೬. ಅನಂತರ ಸಾವಿರ ಬಾಣಗಳನ್ನು ಬಿಟ್ಟು ವೃತ್ರನನ್ನು ನೋಯಿಸಿದನು. ಹೀಗೆ ಚಿನ್ನ, ರತ್ನ ಮುಂತಾದುವುಗಳಿಂದ ಭೂಷಿತವಾದ ಬಾಣಗಳು ಹೋಗುತ್ತಿದ್ದುವು. ಬರುತ್ತಿದ್ದುವು.

೭. ಆಕಾಶದಲ್ಲಿ ಆ ಬಾಣದ ರಭಸಕ್ಕೆ ಸುಳಿಗಾಳಿಗಳು ಏಳುತ್ತಿದ್ದುವು. ಅಲ್ಲದೆ ಆಕಾಶದಲ್ಲಿ ಸೂರ್ಯನ ಕಿರಣಗಳು ಹರಡುವಂತೆ ಈ ಬಾಣಗಳು ಹರಡಿಕೊಂಡುವು.

೮. ಈರೀತಿಯಾಗಿ ಅನೇಕ ಬಾಣಗಳಿಂದ ಅವರು ಒಬ್ಬರಿಗೊಬ್ಬರು ಹೊಡೆದಾಡುತ್ತಿದ್ದರು. ಆ ಬಾಣಗಳು ವಾಯುವೇಗವುಳ್ಳವುಗಳಾಗಿ ಪರ್ವತಗಳಂತೆ ಓಡಾಡುತ್ತಿದ್ದುವು.

ಬಡಬಾನಲಸಂಸ್ಪರ್ಶಾಃ ಖಗಾಃ ವಜ್ರೈರಭೇಧಕಾಃ ।
ತಯೋರ್ಧನುಷ್ಮತೋರ್ಯುದ್ಧೇ ಶರಾಸ್ತುಲ್ಯಗುಣಾನ್ವಿತಾಃ ॥ ೯ ॥

ಏವಂ ಕ್ರಮೇಣ ಯುದ್ಧೇ ಚ ಅಹೋರಾತ್ರಮವರ್ತತ ।
ಮಹೇಂದ್ರೋ ದ್ವಿರದಂ ತಸ್ಯ ಶೂಲೇನೈವ ಜಘಾನ ಹ ॥ ೧೦ ॥

ಸ ನಿಪತ್ಯ ಮಹೀಪೃಷ್ಠೇ ಲಾಘವಾತ್ಸ್ವರಥಂ ಯಯೌ ।
ರಥಸ್ಥಸ್ತಸ್ಯ ದೇವಸ್ಯ ಶಕ್ತ್ಯಾ ಚೈರಾವಣಂ ದೃಢಂ ॥ ೧೧ ॥

ಬಿಭೇದ ಲಾಘವೇನಾಶು ವಜ್ರೇಣೇವ ಮಹಾಗಿರಿಂ ।
ಶಶುಭೇ ಕಂಪಮಾನಸ್ತು ಸೇಂದ್ರಸ್ಸ ಚ ಮಹಾಗಜಃ ॥ ೧೨ ॥

ತತಶ್ಶಕ್ತಿಂ ಸಮಾದಾಯ ಆವಿಧ್ಯ ಮಘವಾಽಸುರಂ ।
ಬಿಭೇದೋರಸಿ ದೈತ್ಯಸ್ಯ ಸ ಪಪಾತ ರಥೋಪರಿ ॥ ೧೩ ॥

---

೯. ಆ ಬಾಣಗಳು ಬಡಬಾಗ್ನಿಯಂತಿದ್ದುವು. ವಜ್ರದಿಂದಲೂ ಭೇದಿಸಲಾಗದಂತಿದ್ದುವು. ಧನುರ್ಧಾರಿಗಳಾದ ಇಬ್ಬರ ಬಾಣಗಳೂ ಒಂದೇ ರೀತಿಯಾಗಿದ್ದುವು.

೧೦. ಈ ರೀತಿಯಾದ ಯುದ್ಧವು ಒಂದು ಹಗಲು ಒಂದು ರಾತ್ರಿಯೂ ನಡೆಯಿತು. ಅನಂತರ ಮಹೇಂದ್ರನು ಶೂಲವನ್ನು ತೆಗೆದುಕೊಂಡು ವೃತ್ರನ ಆನೆಗೆ ಹೊಡೆದನು.

೧೧-೧೨. ಆ ವೃತ್ರನು ನೆಲಕ್ಕೆ ಧುಮುಕಿ ಚಳಕದಿಂದ ತಾನೊಂದು ರಥವನ್ನು ಏರಿದನು. ರಥದಲ್ಲಿದ್ದುಕೊಂಡು ಶಕ್ತ್ಯಾಯುಧದಿಂದ ಇಂದ್ರನ ಐರಾವಣವನ್ನು ಹೊಡೆದನು. ಆ ರಾಕ್ಷಸನು ಆ ಶಕ್ತ್ಯಾಯುಧದಿಂದ ಇಂದ್ರನನ್ನು ವಜ್ರಾಯುಧದಿಂದ ಬೆಟ್ಟವನ್ನು ಹೊಡೆಯುವಂತೆ ಹೊಡೆದನು. ಆಗ ಐರಾವತವೂ ಇಂದ್ರನೂ ತತ್ತರಿಸಿದರು.

೧೩. ಇಂದ್ರನು ಶಕ್ತ್ಯಾಯುಧವನ್ನು ತೆಗೆದುಕೊಂಡು ಆ ದೈತ್ಯನ ಎದೆಗೆ ಹೊಡೆದನು. ಆ ದೈತ್ಯನು ರಥದ ಮಧ್ಯದಲ್ಲಿಯೇ ಬಿದ್ದನು.

ಕ್ಷಣಾತ್ಸಂಜ್ಞಾಂ ಸಮಾಲಂಬ್ಯ ಸ ವಿನದ್ಯ ಪತತ್ರಿಣಾ ।
ಬಿಭೇದ ಸಮರೇ ಶಕ್ರಂ ಸ ತತಃ ಕಶ್ಮಲಂ ಗತಃ ॥ ೧೪ ॥

ಇಂದ್ರಸ್ಸಂಜ್ಞಾಂ ಪುನಃ ಪ್ರಾಪ್ಯ ಜಘಾನ ವಿಶಿಖೈಶ್ಶಿತೈಃ ।
ಶತಕೋಟಿಸಮೈರ್ಬಾಣೈರರ್ದಿತೋ ವ್ಯಥಯಾನ್ವಿತಃ ॥ ೧೫ ॥

ತತೋ ವೃತ್ರೋ ಮಹಾಶೂಲಂ ಪ್ರಾಕ್ಷಿಪನ್ನಿರ್ಜರೇಶ್ವರೇ ।
ಶಾಂಭವಾಸ್ತ್ರಂ ಚ ದೇವೇಶೋ ವೈಷ್ಣವಾಸ್ತ್ರಂ ಮುಮೋಚ ಹ ॥ ೧೬ ॥

ಉಭಯೋರನ್ತರೇ ಚಾಸ್ತ್ರೇ ವಹ್ನಿಕೂಟಸಮಪ್ರಭೇ ।
ಅನ್ಯೋನ್ಯಂ ಜಘ್ನತುಸ್ತತ್ರ ಸ್ಫುಲಿಂಗಾನಿ ವಿಮುಂಚತೀ ॥ ೧೭ ॥

ಸ್ಪರ್ಶೇನ ಚ ಸ್ಫುಲಿಂಗಾನಾಮುಭಯೋಸ್ಸೇನಯೋರ್ಭಟಾಃ ।
ನ ಶಕ್ತಾಸ್ಸಮ್ಮುಖೇ ಸ್ಥಾತುಂ ಶಲಭಾ ಜ್ವಲನೇ ಯಥಾ ॥ ೧೮ ॥

ದಗ್ಧಾಃ ಪೇತುಃ ಪೃಥಿವ್ಯಾಂ ಚ ದಿಶಸ್ಸರ್ವಾಃ ಪ್ರದುದ್ರುವುಃ ॥
ದೇವದಾನವಯೋರ್ವೀರಾಃ ಶೂನ್ಯಸ್ತತ್ರಾಭವದ್ರಣಃ ॥ ೧೯ ॥

---

೧೪. ಕ್ಷಣಕಾಲದಲ್ಲಿಯೇ ಸುಧಾರಿಸಿಕೊಂಡು ಸಿಂಹನಾದ ಮಾಡಿಕೊಂಡು ಬಾಣದಿಂದ ಇಂದ್ರನನ್ನು ಹೊಡೆಯಲು ಇಂದ್ರನು ಮೂರ್ಛೆಯನ್ನು ಹೊಂದಿದನು.

೧೫. ಇಂದ್ರನು ಎಚ್ಚೆತ್ತು ವಜ್ರದಂತಿರುವ ಬಾಣಗಳಿಂದ ಹೊಡೆಯಲು ಆ ವೃತ್ರನು ನೊಂದನು.

೧೬. ವೃತ್ರನು ಇಂದ್ರನ ಮೇಲೆ ಮಹಾಶೂಲವನ್ನು ಬಿಟ್ಟು ಅದರ ಮೇಲೆ ಪಾಶುಪತಾಸ್ತ್ರವನ್ನೂ ಬಿಟ್ಟನು. ವೈಷ್ಣವಾಸ್ತ್ರವನ್ನು ಇಂದ್ರನು ಬಿಟ್ಟನು.

೧೭. ಅವೆರಡು ಅಸ್ತ್ರಗಳೂ ಕಿಡಿಗಳನ್ನು ಉದುರಿಸುತ್ತಾ ಮಧ್ಯದಲ್ಲಿಯೇ ಹೊಡೆದಾಡಿದುವು.

೧೮. ಅವುಗಳಿಂದ ಕಿಡಿಗಳು ಬೀಳುತ್ತಿರಲು ಎರಡು ಸೈನ್ಯದ ಭಟರುಗಳೂ ಪತಂಗದ ಹುಳುಗಳು ಬೆಂಕಿಯಮುಂದೆ ನಿಲ್ಲಲಾರದಂತೆ ನಿಲ್ಲಲಾರದೇ ಹೋದರು.

೧೯. ಕೆಲವರು ಸುಟ್ಟು ಕೆಳಗೆ ಬಿದ್ದರು. ಕಳಿದುಳಿದ ಎರಡು ಸೇನೆಯ ಭಟರು ನಾನಾದಿಕ್ಕುಗಳಿಗೆ ಓಡಿದರು. ಆಗ ಯುದ್ಧರಂಗವು ಬರಿದಾಯಿತು.

ಸ್ವಂ ಸ್ವಂ ಶಸ್ತ್ರಂ ಸಮಾಹೂಯ ಚಕ್ರತುಃ ಸುಭೃಶಂ ತಥಾ ।
ಅಸ್ತ್ರಂ ನಿರಸ್ತ್ರಕಂ ದೃಷ್ಟ್ವಾ ಸ ದೈತ್ಯಃ ಕ್ರೋಧಮೂರ್ಛಿತಃ ॥ ೨೦ ॥

ಮಾಯಯಾ ಶೈಲಸಂದೋಹಮಸ್ತ್ರಂ ಶಕ್ರೇ ಮುಮೋಚ ಹ ।
ಬಾಣೌಘೈಶ್ಶೈಲಸಂಘಾತಂ ಪ್ರಚಿಚ್ಛೇದ ರಣೇ ಹರಿಃ ॥ ೨೧ ॥

ಅಘೋರಂ ಪ್ರಾಸೃಜದ್ದೈತ್ಯಃ ಪುರುಹೂತೇ ಮಹಾಬಲೇ ।
ಕೋಟಿಕೋಟಿಸಹಸ್ರಾಣಿ ಜನ್ತೂನಾಂ ಪ್ರವರಾಣಿ ಚ ॥ ೨೨ ॥

ಸಿಂಹಶಾರ್ದೂಲಭಲ್ಲಾಖ್ಯಾಃ ವೃಕವ್ಯಾಘ್ರಮಹಾಗಜಾಃ ।
ದಂದಶೂಕಾದಯಸ್ತತ್ರಾಃ ಪ್ರಧಾವಂತಿ ಸುರೇಶ್ವರಂ ॥ ೨೩ ॥

ಕ್ಷುರಪ್ರೈರರ್ಧಚಂದ್ರೈಶ್ಚ ಭಲ್ಲೈಶ್ಶಿಲೀಮುಖೈಸ್ತಥಾ ।
ಅಸಂಪ್ರಾಪ್ತಾನ್ಪ್ರಚಿಚ್ಛೇದ ಮಘವಾ ಪರವೀರಹಾ ॥ ೨೪ ॥

ತತೋ ವೃತ್ರೋ ಮಹಾಬಾಹುರ್ಧನುರುದ್ಯಮ್ಯ ವೀರ್ಯವಾನ್ ।
ಬಿಭೇದ ಶರಸಾಹಸ್ರೈರ್ವಜ್ರಕಲ್ಪೈಶ್ಶತಕ್ರತುಂ ॥ ೨೫ ॥

---

೨೦. ಅನಂತರ ಅವರಿಬ್ಬರೂ ತಮ್ಮ ತಮ್ಮ ಅಸ್ತ್ರಗಳನ್ನು ಮತ್ತೆ ಹಿಂದಕ್ಕೆ ತೆಗೆದುಕೊಂಡರು. ತನ್ನ ಅಸ್ತ್ರವು ಕೆಲಸ ಮಾಡದೇ ಹೋಗಲು ವೃತ್ರನು ಕೋಪಗೊಂಡನು.

೨೧. ಆ ವೃತ್ರನು ಮಾಯೆಯನ್ನಾಶ್ರಯಿಸಿ ಶೈಲಾಸ್ತ್ರವನ್ನು ಬಿಟ್ಟನು. ಆ ಇಂದ್ರನು ಬಾಣಗಳಿಂದ ಆ ಬೆಟ್ಟಗಳನ್ನು ಕತ್ತರಿಸಿದನು.

೨೨-೨೩. ಆ ವೃತ್ರನು ಅಘೋರವೆಂಬ ಅಸ್ತ್ರವನ್ನು ಇಂದ್ರನ ಮೇಲೆ ಬಿಟ್ಟನು. ಅದರಿಂದ ಕೋಟಿಗಟ್ಟಲೆ ಜಂತುಗಳು ಹುಟ್ಟಿ ಆ ಇಂದ್ರನ ಮೇಲೆ ಬಿದ್ದುವಲ್ಲದೆ ಸಿಂಹ, ಹುಲಿ, ಕರಡಿ, ತೋಳ, ಚಿರತೆ, ಆನೆ, ಸರ್ಪ ಮುಂತಾದ ಕ್ರೂರಪ್ರಾಣಿಗಳೂ ಬಿದ್ದುವು.

೨೪. ಅರ್ಧಚಂದ್ರಾಕಾರದ ಬಾಣಗಳಿಂದಲೂ, ಭಲ್ಲಗಳಿಂದಲೂ ಅವು ಬರುವಷ್ಟರೊಳಗೇ ಆ ಇಂದ್ರನು ಅವನ್ನು ಕತ್ತರಿಸಿದನು.

೨೫. ಅನಂತರ ವೃತ್ರನು ಧನುಸ್ಸನ್ನು ತೆಗೆದುಕೊಂಡು ಹರಿತವಾದ ಕಠಿಣವಾದ ಅನೇಕ ಬಾಣಗಳಿಂದ ಇಂದ್ರನನ್ನು ಹೊಡೆದನು.

ಕ್ಷುರಪ್ರೈಶ್ಛಿದ್ಯ ಶಕ್ರಶ್ಚ ಧನುಸ್ತಸ್ಯ ಚಕರ್ತ ಚ ।
ಸೂತಂ ಚಾಶ್ವಾನ್ಪೃಥಿವ್ಯಾಂ ಚ ಪಾತಯಾಮಾಸ ತತ್ಕ್ಷಣಾತ್ ॥ ೨೬ ॥

ಸ ಕಂಟಕಾಂ ಗದಾಂ ಭೀಮಾಂ ಸಂಪ್ರೂಜ್ಯಾಸುರಸತ್ತಮಃ ।
ಜಘಾನ ಪದ್ಮಿನಶ್ಶೀರ್ಷೇ ಮೋಹಾದ್ದಂತೀ ಕ್ಷಿತಿಂ ಯಯೌ ॥ ೨೭ ॥

ಸ ಗದಸ್ಸರ್ವದೇವೇಶೋ ಧರಣೀಂ ಸಮುಪಸ್ಥಿತಃ ।
ತತಸ್ತಯೋರ್ಗದಾಯುದ್ಧಮವರ್ತತ ಮುಹುರ್ಮುಹುಃ ॥ ೨೮ ॥

ತಯೋಃ ಪ್ರಹರತೋಶ್ಶಬ್ದೋ ಗದಾಪಾತಾದ್ಭವೇದ್ಧ್ರುವಂ ।
ಆವರ್ತಪರಿವರ್ತಂ ಚ ಚಕ್ರಧನ್ವಂ ಪುನಃ ಪುನಃ ॥ ೨೯ ॥

ಊರ್ಧ್ವಮಧ್ಯಪ್ರಹಾರಂ ಚ ಪಾರ್ಶ್ವಯೋರತಿಭೀಷಣಂ ।
ಬಭೂವೈವಂ ತಯೋರ್ಯುದ್ಧಂ ಲೋಕಾಲೋಕಭಯಂಕರಂ ॥ ೩೦ ॥

ದೃಷ್ಟ್ವಾ ದೇವಗಣಾಸ್ಸಿದ್ಧಾ ದಾನವಾ ವಿಸ್ಮಯಂ ಗತಾಃ ।
ಯುಧ್ಯ ಮಾನೌ ತು ತೌ ವೀರೌ ಮೃತ್ಯುಸಂಶಯಮಾಗತೌ ॥ ೩೧ ॥

---

೨೬. ಶಕ್ರನು ಹರಿತವಾದ ಬಾಣದಿಂದ ಆ ವೃತ್ರನ ಧನುಸ್ಸನ್ನೂ ಕತ್ತರಿಸಿ ಸಾರಥಿಯನ್ನೂ ಕುದುರೆಗಳನ್ನೂ ಕೆಳಗೆ ಕೆಡವಿದನು.

೨೭. ಆಗ ಮುಳ್ಳುಗಳಿಂದ ಮಾಡಿರುವ ಗದೆಯನ್ನು ತೆಗೆದು ಆ ಐರಾವತ ಆನೆಯ ಮೇಲೆ ಹೊಡೆಯಲು ಆ ಆನೆಯು ನೋವು ಹೊಂದಿ ನೆಲಕ್ಕೆ ಬಿದ್ದಿತು.

೨೮. ಒಡನೆಯೇ ಇಂದ್ರನು ಗದೆಯನ್ನು ತೆಗೆದುಕೊಂಡು ಕೆಳಗಿಳಿದನು. ಆಗ ಅವರಿಬ್ಬರಿಗೂ ಗದಾಯುದ್ಧವು ಮೊದಲಾಯಿತು.

೨೯–೩೦. ಅವರು ಹೊಡೆದಾಡುವಾಗ ಗದೆಯ ಶಬ್ದವು ಉಂಟಾಗುತ್ತಿದ್ದಿತು. ಅವರು ಆವರ್ತ, ಪರಿವರ್ತ, ಚಕ್ರಧನ್ವ, ಊರ್ಧ್ವಪ್ರಹಾರ, ಮಧ್ಯಪ್ರಹಾರ, ಪಾರ್ಶ್ವಪ್ರಹಾರಗಳೆಂಬ ಮಂಡಲಗಳನ್ನು ಸುತ್ತುತ್ತಿದ್ದರು. ಈ ರೀತಿ ಅವರಿಬ್ಬರಿಗೂ ಲೋಕಭಯಂಕರವಾದ ಯುದ್ಧವು ನಡೆಯಿತು.

೩೧. ದೇವತೆಗಳೂ, ದಾನವರೂ, ಇದನ್ನು ನೋಡಿ ಆಶ್ಚರ್ಯಪಟ್ಟರು. ಹೀಗೆ ಯುದ್ಧಮಾಡುತ್ತಿರುವ ಆ ವೀರರು ಸಾಯುವರೆಂಬ ಸ್ಥಿತಿಗೆ ಬಂದರು.

ದೇವದಾನವವೀರಾಶ್ಚ ದ್ರಷ್ಟುಕಾಮಾ ಬಭಾಸಿರೇ ।
ಈಶಬ್ರಹ್ಮಾದಯಃ ಖೇ ತು ಸ್ಥಿತಾ ದ್ರಷ್ಟುಂ ತದದ್ಭುತಂ ॥ ೩೨ ॥

ತಯೋರ್ಹುಂಕಾರಶಬ್ದೇನ ಗದಾಪಾತಸ್ವನೇನ ಚ ।
ಊರ್ಧ್ವೋರ್ಧ್ವಗಮುಚ್ಛಬ್ದೋ ಹ್ಯಶನೇಶ್ಚೋಪಜಾಯತೇ ॥ ೩೩ ॥

ಭಗ್ನೇ ಗದೇ ದ್ವಯೋರೇವ ಕರಸ್ಸಂಪುಟಿತಸ್ತಯೋಃ ।
ಏವಂ ಚೈವಾರ್ಧಯಾಮೇನ ತಯೋರಸ್ತ್ರೇ ಬಿಭೇದತುಃ ॥ ೩೪ ॥

ಏತಸ್ಮಿನ್ನಂತರೇ ವೀರೌ ಖಡ್ಗಚರ್ಮಧರೌ ತದಾ ।
ಪತ್ತಿಯುದ್ಧಂ ಮಹಾಘೋರಮಾಹವೇ ಸಂಪ್ರಚೇರತುಃ ॥ ೩೫ ॥

ನಿಸ್ತ್ರಿಂಶೌ ವಿದ್ಯುದುಲ್ಕಾಭೌ ತಯೋರ್ಗಾತ್ರೇ ಚ ಚರ್ಮಣೀ ।
ದೃಶ್ಯೇತೇ ಸರ್ವಲೋಕೈಶ್ಚ ಲಾಘವಾದ್ವಿಸ್ಮಯಂ ಗತೈಃ ॥ ೩೬ ॥

---

೩೨. ದೇವದಾನವರೆಲ್ಲರೂ ಇದನ್ನು ನೋಡುತ್ತ ನಿಂತರು. ಈಶ, ಬ್ರಹ್ಮಾದಿಗಳೂ ಆ ಅದ್ಭುತವನ್ನು ನೋಡಲು ಅಂತರಿಕ್ಷದಲ್ಲಿ ನಿಂತರು.

೩೩. ಅವರ ಹುಂಕಾರ ಶಬ್ದಗಳೂ, ಗದೆಯ ಧ್ವನಿಗಳೂ, ಹೆಚ್ಚುತ್ತಿದ್ದುವು. ಬೆಂಕಿಗಳೂ ಹುಟ್ಟುತ್ತಿದ್ದುವು. ಹಾಗೆ ಹುಟ್ಟಿದ ಶಬ್ದಗಳೂ ಮೇಲೆ ಮೇಲೆ ಹೋಗಿ ಕೇಳಿಸುತ್ತಿದ್ದುವು.

೩೪. ಗದೆಯು ಮುರಿದು ಹೋಗಲು, ಇಬ್ಬರೂ ಮುಷ್ಟಿಯುದ್ಧವನ್ನು ಮಾಡಿದರು. ಇದೂ ಅರ್ಧಯಾಮ ನಡೆಯಲು ಅಸ್ತ್ರಗಳನ್ನು ಪ್ರಯೋಗಿಸಿ ಹೊಡೆದಾಡಿದರು.

೩೫. ಇದಾದ ಮೇಲೆ ಖಡ್ಗ ಚರ್ಮಗಳನ್ನು ಧರಿಸಿ, ನೆಲದಮೇಲೆ ನಿಂತು ಕಾಲಾಳಿನಂತೆ ಯುದ್ಧವನ್ನೂ ಕ್ಷಣಕಾಲಮಾಡಿದರು.

೩೬. ಅವರ ಮೈಯಲ್ಲೆಲ್ಲಾ ಕೈಚಳಕದಿಂದ ಚರ್ಮಗಳೂ, ಕತ್ತಿಯ ಬೆಳಕುಗಳೂ ಕಾಣುತ್ತಿದ್ದುವು. ಈ ರೀತಿಯಾಗಿ ಕೈಚಳಕದಿಂದ ಕೂಡಿದ್ದುದು ಎಲ್ಲರಿಗೂ ಕಾಣುತ್ತಿತ್ತು.

ಚಿಚ್ಛಿದಾತೇ ತಯೋರೇವ ಚರ್ಮಣಾ ಬಹುವರ್ಣಕೇ ।
ಭೀಷ್ಮಕಂ ಬಲಯುದ್ಧಂ ಚ ತಯೋರೇವಂ ಪ್ರವರ್ತತ ॥ ೩೭ ॥

ಮಂಡಲಂ ಚಕ್ರಧನ್ವಂ ಚ ಲಾಘವೇನ ಪರಿಪ್ಲುತಂ ।
ವೃತ್ರವಾಸವಯೋರ್ಯುದ್ಧಂ ವೃತ್ರವಾಸವಯೋರಿವ ॥ ೩೮ ॥

ಕೇಶಾನ್ವೃತ್ರಸ್ಯ ಉತ್ಪ್ಲುತ್ಯ ಸಂಪ್ರಧೃತ್ಯಾಸಿನಾ ದ್ರುತಂ ।
ಶಿರಶ್ಚಿಚ್ಛೇದ ಸಹಸಾ ಮಘವಾ ರಣಮೂರ್ಧನಿ ॥ ೩೯ ॥

ಜಯಶಬ್ದಸ್ತತಸ್ತ್ವಾಸೀದ್ದೇವಾನಾಂ ಚ ಸಮಂತತಃ ।
ಪ್ರೋತ್ಫುಲ್ಲ ಹೃದಯಾ ದೇವಾ ಮಘವಂತಮಪೂಜಯನ್ ॥ ೪೦ ॥

ದೇವದುಂದುಭಯೋ ನೇದುರ್ನನೃತುಶ್ಚಾಪ್ಸರೋಗಣಾಃ ।
ಗೀತಂ ಗಾಯಂತಿ ಗಂಧರ್ವಾ ಮುನಯಸ್ತುತಿಪಾಠಕಾಃ ॥ ೪೧ ॥

---

೩೭. ಆ ಚರ್ಮಗಳನ್ನೂ ಕೂಡ ಕತ್ತರಿಸಿದರು. ಅವರಿಬ್ಬರಿಗೂ ಈರೀತಿ ಭಯಂಕರ ಯುದ್ಧವು ನಡೆಯಿತು.

೩೮. ಅವರು ಲಾಘವದಿಂದ ಮಂಡಲ ಚಕ್ರಧನ್ವಗತಿಗಳಲ್ಲಿ ಸುತ್ತಿದರು. ವೃತ್ರವಾಸವರ ಈ ಯುದ್ಧವು ಉಪಮಾನರಹಿತವಾಗಿದ್ದಿತು.

೩೯. ಆಗ ಇಂದ್ರನು ನೆಗೆದು ವೃತ್ರನ ಜುಟ್ಟನ್ನು ಹಿಡಿದು ಕತ್ತಿಯಿಂದ ಆ ರಣರಂಗದಲ್ಲಿ ಅವನ ಕತ್ತನ್ನು ಕತ್ತರಿಸಿದನು.

೪೦. ಆಗ ದೇವತೆಗಳು ಜಯ ಜಯ ಶಬ್ದವನ್ನು ಮಾಡಿದರು. ಸಂತೋಷದಿಂದ ಅವರು ಇಂದ್ರನನ್ನು ಗೌರವಿಸಿದರು

೪೧. ದೇವದುಂದುಭಿಗಳು ಧ್ವನಿಮಾಡಿದುವು ಅಪ್ಸರ ಸ್ತ್ರೀಯರು ಕುಣಿದರು. ಗಂಧರ್ವರು ಮುನಿಗಳು ಸ್ತುತಿಸಿದರು.

ಭೀತಾಃ ಪಲಾಯಿತಾಸ್ಸರ್ವೇ ದೈತ್ಯಾಸ್ತ್ಯಕ್ತ್ವಾಯುಧಾ ದಿಶಃ ॥ ೪೨ ॥

ಇತಿ ಶ್ರೀ ಪದ್ಮಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ವೃತ್ರವಧೋ ನಾಮ ಏಕಸಪ್ತತಿತಮೋಽಧ್ಯಾಯಃ

---

೪೨. ದೈತ್ಯರೆಲ್ಲರೂ ಹೆದರಿ ಆಯುಧಗಳನ್ನು ಬಿಸುಟು ನಾನಾ ದಿಕ್ಕಿಗೆ ಓಡಿದರು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ವೃತ್ರವಧವೆಂಬ ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ದ್ವಿಸಪ್ತತಿತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

ಚತುರ್ಭಿಸ್ತುರಗೈರ್ಜುಷ್ಟಂ ರಥಂ ಸೂರ್ಯಸಮಪ್ರಭಂ ।
ತ್ರೈಪುರಿಸ್ಸಂರುರೋಹಾಥಾಬ್ರವೀದ್ವಾಕ್ಯಂ ಗಣಾಧಿಪಂ ॥ ೧ ॥

॥ ತ್ರೈಪುರಿರುವಾಚ ॥

ತವ ತಾತೇನ ಮೇ ತಾತೋ ಹತಃ ಪೂರ್ವಂ ತು ಧೀಮತಾ ।
ತಸ್ಮಾತ್ತ್ವಾಮದ್ಯ ವಿಶಿಖೈರ್ನೇಯಾಮಿ ಯಮಸಾದನಂ ॥ ೨ ॥

ತತಸ್ತಮಬ್ರವೀದ್ದೇವೋ ಗಣೇಶಸ್ತ್ರಿಪುರಾತ್ಮಜಂ ॥ ೩ ॥

---

## ಎಪ್ಪತ್ತೆರಡನೆಯ ಅಧ್ಯಾಯವು

೧. ವ್ಯಾಸನು ಹೇಳಿದನು- ತ್ರಿಪುರನ ಮಗನಾದ ತ್ರೈಪುರಿ ಎಂಬ ರಾಕ್ಷಸನು ನಾಲ್ಕು ಕುದುರೆಗಳಿಂದ ಎಳೆಯಲ್ಪಟ್ಟ ರಥವನ್ನು ಹತ್ತಿ ಗಣಾಧಿಪನನ್ನು ಎದುರಿಸಿ ಇಂತೆಂದನು.

೨-೩. ತ್ರೈಪುರಿಯು ಹೇಳಿದನು- ಅಯೋಗ್ಯನಾದ ನಿನ್ನ ತಂದೆಯು ನನ್ನ ತಂದೆಯುನ್ನು ಕೊಂದನು. ಆದ್ದರಿಂದ ನಿನ್ನನ್ನು ನಾನು ಬಾಣಗಳಿಂದ ಹೊಡೆದು ಯಮನ ಮನೆಗೆ ಕಳುಹಿಸುತ್ತೇನೆ. ಆಗ ಆ ಗಣೇಶನು ತ್ರಿಪುರನ ಮಗನಿಗೆ ಇಂತೆಂದನು.

॥ ಗಣೇಶ ಉವಾಚ ॥

ತವ ತಾತೇನ ದುಷ್ಟೇನ ಸುರಾಣಾಮಹಿತಂ ಪುರಾ ।
ಕೃತಂ ಕರ್ಮ ಮಹಾತ್ಪಾಪಂ ಶ್ರುತಂ ನೋ ಜನಕೇನ ಹಿ ॥ ೪ ॥

ಪಾಪಕರ್ಮರತಂ ದುಷ್ಟಂ ಜ್ಞಾತ್ವಾ ಜ್ಞಾನಬಲೇನ ಚ ।
ಅವಧೀತ್ತಂ ಶರೈಕೇಣ ಪಿತರಂ ತೇ ಬಲೇನ ಚ ॥ ೫ ॥

ಪಂಚಾತ್ಪ್ರತಾರಿತೋ ಮೋಹಾತ್ಪ್ರೇಷಿತೋ ಯಮಮಂದಿರಂ ।
ತ್ವಾಂ ಚಾಹಂ ತತ್ಪಥಂ ದೈತ್ಯ ಪ್ರೇಷಯಾಮಿ ಕ್ಷಣಾದಿಹ ॥ ೬ ॥

॥ ವ್ಯಾಸ ಉವಾಚ ॥

ಉಕ್ತವಂತಂ ಮಹಾಪ್ರಾಜ್ಞಂ ಸುರಾಣಾಂ ಚ ಗಣಾಧಿಪಂ ।
ವಿವ್ಯಾಧ ದಶಭಿಸ್ತೀಕ್ಷ್ಣೈಃ ಕಾಲಾನಲಸಮಪ್ರಭೈಃ ॥ ೭ ॥

ತತಶ್ಶರಸಹಸ್ರೈಸ್ತು ದೈತ್ಯಂ ವಿವ್ಯಾಧ ಸಾಹಸಾತ್ ।
ಯಮದಂಡಸಮೈರ್ಬಾಣೈಃ ಕ್ಷುರಪ್ರೈಶ್ಚ ಶಿಲೀಮುಖೈಃ ॥ ೮ ॥

ಕಂಕಪತ್ರೈರ್ಮಹಾತೀಕ್ಷ್ಣೈರ್ವಜ್ರಾನಲಸಮಪ್ರಭೈಃ ।
ಸ ದೈತ್ಯಸ್ತತ್ಕ್ಷಣಾದೇವ ಕ್ಷತಜೇನ ಪರಿಪ್ಲುತಃ ॥ ೯ ॥

---

೪. ಗಣೇಶನು ಹೇಳಿದನು- ಹಿಂದೆ ನಿನ್ನ ತಂದೆಯು ದೇವತೆಗಳಿಗೆ ಕೆಟ್ಟದ್ದನ್ನು ಮಾಡುತ್ತಿದ್ದನು. ಅದನ್ನು ನಮ್ಮ ತಂದೆಯು ನನಗೆ ಹೇಳಿದ್ದಾನೆ.

೫. ಈ ರೀತಿ ಪಾಪಕೆಲಸ ಮಾಡುತ್ತಿದ್ದುದನ್ನು ನನ್ನ ತಂದೆಯು ಜ್ಞಾನ ಬಲದಿಂದ ತಿಳಿದು ಒಂದೇ ಬಾಣದಿಂದ ಅವನನ್ನು ಹೊಡೆದನು.

೬. ಅವನನ್ನು ಕೊಂದು ಆ ಪಾಪವನ್ನು ನಾಶಮಾಡಿದನು. ಮತ್ತು ಅವನನ್ನು ಕೊಂದು ಲೋಕವನ್ನೂ ಉದ್ಧರಿಸಿದನು. ನಾನೂ ನಿನ್ನನ್ನು ಕ್ಷಣಕಾಲದಲ್ಲಿ ಕೊಂದು ಯಮನ ಮನೆಗೆ ಕಳುಹಿಸುತ್ತೇನೆ.

೭. ವ್ಯಾಸನು ಹೇಳಿದನು- ಹೀಗೆ ಹೇಳುತ್ತಿರುವ ದೇವಗಣಕ್ಕೆ ಅಧಿಪನಾದ ಗಣಪತಿಯನ್ನೂ ತೀಕ್ಷ್ಣವಾದ ಬಾಣಗಳಿಂದ ಹೊಡೆದನು.

೮-೯. ಅನಂತರ ಅನೇಕವಾದ ಯಮಪಾಶಕ್ಕೆ ಸಮವೂ, ಹರಿತವೂ ಆದ ಬಾಣಗಳಿಂದ ಆ ದೈತ್ಯನನ್ನು ಹೊಡೆದನು. ಒಡನೆಯೆ ಆ ದೈತ್ಯನ ಅಂಗವೆಲ್ಲವೂ ರಕ್ತದಿಂದ ನೆಂದಿತು.

ಶ್ರೋಧಾದ್ವಿಗುಣತಾಮ್ರಾಕ್ಷಃ ಕ್ಷುರಪ್ರೈಶ್ಚ ಶಿಲೀಮುಖೈಃ ।
ವಿಚಕರ್ತ ಶರಾಂಶ್ಚಾಸ್ಯ ಲಂಬೋದರಸ್ಸುರಾರ್ಚಿತಃ ॥ ೧೦ ॥

ಪುನರ್ವ್ಯಾಧ ವಿಶಿಖೈಃ ಸಹಸ್ರೈರ್ಭಿದುರೋಪಮೈಃ ।
ಶರೈರರ್ದಿತಸರ್ವಾಂಗೋ ಮೂರ್ಛಿತಸ್ತ್ವಪತದ್ಭುವಿ ॥ ೧೧ ॥

ತತೋ ಭದ್ರಶ್ಚ ಸೌಭದ್ರೋ ಭೀಷಣೋ ನಿರ್ಜರಾಂತಕಃ ।
ಸ್ವಾಂ ಸ್ವಾಂ ಗದಾಂ ಸಮಾದಾಯ ದುದ್ರುವುಸ್ತಂ ವಿನಾಯಕಂ ॥ ೧೨ ॥

ಯುಗಪತ್ತೇ ಗದಾಪಾತೈರ್ನಿಜಘ್ನುರ್ಗಣನಾಯಕಂ ।
ಲಾಘವಾತ್ತು ವೃಥಾ ಕೃತ್ವಾ ಗದಾಸ್ತೇಷಾಂ ಮಹಾಬಲಃ ॥ ೧೩ ॥

ಭದ್ರಕಸ್ಯ ತು ಶೀರ್ಷೇ ಚ ಪರ್ಶುನಾ ಚಾಹನತ್ತದಾ ।
ಸೌಭದ್ರಸ್ಯೋತ್ತಮಾಂಗಂ ಚ ಅಸಿನಾ ಸನ್ನಿಪಾತಿತಂ ॥ ೧೪ ॥

ಭೀಷಣಸ್ಯ ಕುಠಾರೇಣ ಖಡ್ಗೇನ ನಿರ್ಜರಾಂತಕಂ ।
ಪಾತಯಿತ್ವಾ ಚ ಹೇರಂಬೋ ಮಹಾಗಿರಿಸಮಾಂಸ್ತದಾ ॥ ೧೫ ॥

---

೧೦. ಆಗ ಗಣಪತಿಯು ಕೋಪದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡು ಹರಿತವಾದ ಬಾಣಗಳಿಂದ ಆ ದೈತ್ಯನ ಬಾಣಗಳನ್ನು ಕತ್ತರಿಸಿ ಹಾಕಿದನು.

೧೧. ಮತ್ತೆ ಉಗ್ರವಾದ ಬಾಣಗಳಿಂದ ಹೊಡೆಯಲು ಅದರ ಪೆಟ್ಟಿನಿಂದ ನೋವಾಗಿ ಮೂರ್ಛೆಹೊಂದಿ ಕೆಳಗೆ ಬಿದ್ದನು.

೧೨. ಅನಂತರ ಭದ್ರ, ಸುಭದ್ರ, ಭೀಷಣ, ನಿರ್ಜರಾಂತಕರೆಂಬುವರು ತಮ್ಮ ತಮ್ಮ ಗದೆಗಳನ್ನು ಹಿಡಿದು ಆ ವಿನಾಯಕನನ್ನು ಎದುರಿಸಿದರು.

೧೩-೧೫. ಅವರೆಲ್ಲರೂ ಒಂದೇಬಾರಿ ಗದೆಯಿಂದ ಗಣಪತಿಯನ್ನು ಹೊಡೆದರು. ಆ ಗಣಪತಿಯು ಅವೆಲ್ಲವನ್ನೂ ಚಮತ್ಕಾರದಿಂದ ತಪ್ಪಿಸಿಕೊಂಡು ಕೊಡಲಿಯಿಂದ ಭದ್ರಕನ ತಲೆಯನ್ನೂ, ಕತ್ತಿಯಿಂದ ಸೌಭದ್ರನ ತಲೆಯನ್ನೂ, ಕೊಡಲಿಯಿಂದ ಭೀಷಣನ ತಲೆಯನ್ನೂ, ಖಡ್ಗದಿಂದ ನಿರ್ಜರಾಂತಕನ ತಲೆಯನ್ನೂ ಕತ್ತರಿಸಿ ಕೆಡವಿದನು.

ಚತುರೋ ಗಣಮುಖ್ಯಾಂಶ್ಚ ಅನ್ಯಾಂಶ್ಚಾಪಾತಾಯದ್ದ್ವಿಷಃ ।
ತತಸ್ಸಂಜ್ಞಾಂ ಸಮಾಲಭ್ಯ ತ್ರೈಪುರಿಶ್ಚಾಸುರೋತ್ತಮಃ ॥ ೧೬ ॥

ಸಮಾರುಹ್ಯ ರಥಂ ಸ್ವಂ ಚ ಜಘಾನ ಸುರಸತ್ತಮಂ ।
ವಿಶಿಖೈರರ್ಧಚಂದ್ರೈಶ್ಚ ಕ್ಷುರಪ್ರೈರ್ಭಲ್ಲಕೈಸ್ತಥಾ ॥ ೧೭ ॥

ತಾಂಸ್ತು ಚಿಚ್ಛೇದ ಧರ್ಮಾತ್ಮಾ ಪುನರ್ವಿವ್ಯಾಧಿತಂ ಶರೈಃ ।
ಚತುರ್ಭಿಸ್ಸೈಂಧವಾಂಶ್ಚೈವ ಶರೈಕೇಣ ಚ ಸಾರಥಿಂ ॥ ೧೮ ॥

ಶರೈಸ್ಸಂಪಾತಯಾಮಾಸ ಧರಣ್ಯಾಂ ಗಣನಾಯಕಾನ್ ।
ಲಾಘವಾತ್ತು ರಥಂ ಚಾನ್ಯಂ ಗತ್ವಾ ತ್ರಿಪುರನಂದನಃ ॥ ೧೯ ॥

ವಿಶಿಖೈರ್ವಜ್ರಸಂಕಾಶೈಃ ಸಂಬಿಭೇದ ಗಣಾಧಿಪಂ ।
ರುಧಿರೇಣಾವಸಿಕ್ತಾಂಗೋ ರುಷಾ ಘೋರಯಮುಪ್ರಭಃ ॥ ೨೦ ॥

ಲಲಾಟೇ ಚ ತ್ರಿಭಿರ್ಬಾಣೈಸ್ಸಪ್ತಭಿಶ್ಚ ಸ್ತನಾಂತರೇ ।
ಚತುರ್ಭಿರ್ನಾಭಿದೇಶೇ ಚ ಪಂಚಭಿರ್ಮುಷ್ಟಿಮಸ್ತಕೇ ॥ ೨೧ ॥

---

೧೬-೧೭. ಈ ರೀತಿಯಾಗಿ ನಾಲ್ವರನ್ನೂ ಕೊಂದನು. ಅಷ್ಟರೊಳಗೆ ತ್ರೈಪುರಿಯು ಜ್ಞಾನವನ್ನು ಹೊಂದಿ ರಥದಲ್ಲಿ ಕುಳಿತು ಉಗ್ರವಾದ ಬಾಣಗಳಿಂದ ಗಣಪತಿಯನ್ನು ಹೊಡೆದನು.

೧೮-೨೦. ಅವೆಲ್ಲವನ್ನೂ ಆ ಗಣಪತಿಯು ಕತ್ತರಿಸಿದನು. ಮತ್ತು ಆತನ ಮೇಲೆ ಬಾಣಗಳನ್ನು ಬಿಟ್ಟು ನಾಲ್ಕು ಬಾಣಗಳಿಂದ ಕುದುರೆಗಳನ್ನೂ ಒಂದು ಬಾಣ ದಿಂದ ಸಾರಥಿಯನ್ನೂ ಕೆಡಗಿ ಉಳಿದ ಸೇನಾಪತಿಗಳನ್ನೂ ಹೊಡೆದನು. ಒಡನೆಯೇ ಆ ತ್ರೈಪುರಿಯು ಬೇರೆಯ ರಥವನ್ನು ಹತ್ತಿ ಹರಿತವಾದ ಬಾಣಗಳನ್ನು ಬಿಟ್ಟು ಗಣ ಪತಿಯನ್ನು ಕತ್ತರಿಸುವಂತೆ ಮಾಡಿದನು. ಅನಂತರ ರಕ್ತವನ್ನು ಹೊಂದಿದ ಆ ಗಣ ಪತಿಗೆ ಬಹುವಾಗಿ ಕೋಪಬಂದಿತು.

೨೧-೨೩. ಆಗ ಗಣಪತಿಯು ಮೂರು ಬಾಣಗಳನ್ನು ಹಣೆಗೂ, ಏಳು ಬಾಣ ಗಳನ್ನು ಎದೆಗೂ, ನಾಲ್ಕು ಬಾಣಗಳನ್ನು ಹೊಕ್ಕಳಿಗೂ, ಐದು ಬಾಣಗಳನ್ನು

ಸಂಬಿಭೇದ ಮಹಾಕ್ರೋಧೋ ಬಲಿನಂ ಶಂಭುನಂದನಃ ।
ಶರೈರರ್ದಿತಸರ್ವಾಂಗೋ ಸ ದೈತ್ಯೋ ರಣಮೂರ್ಧನಿ　॥ ೨೨ ॥

ಕಶ್ಮಲಂ ಪರಮಂ ಗತ್ವಾ ಸಂಪಪಾತ ರಥೋಪರಿ ।
ತತಸ್ಸೂತೇನ ಧಾರೇಣ ಅವನೀತೋ ರಣಾಜಿರೇ　॥ ೨೩ ॥

ವಿಮುಖಂ ನಾಹನಚ್ಛೂರೋ ವಿನಾಯಕಸ್ಸುರಾರ್ಚಿತಃ ।
ಚಿರಾತ್ಸಂಜ್ಞಾಂ ಸ ಸಂಲಭ್ಯ ಯಂತಾರಂ ಚಾಬ್ರವೀದ್ವಚಃ　॥ ೨೪ ॥

॥ ತ್ರೈಪುರಿರುವಾಚ ॥

ಗಚ್ಛ ಸೂತ ರಣೇ ಭೀರು ವಿನಾಯಕಂ ಹರಾತ್ಮಜಂ　॥ ೨೫ ॥

॥ ವ್ಯಾಸ ಉವಾಚ ॥

ತತೋ ಯಂತಾಬ್ರವೀದ್ವಾಕ್ಯಂ ಸತ್ಯಂ ಪಥ್ಯಂ ಚ ಕೋಮಲಂ　॥ ೨೬ ॥

---

ಮುಷ್ಟಿ ತಲೆಗಳಿಗೂ ಬಿಟ್ಟು ಹೊಡೆದನು. ಈರೀತಿ ಏಟನ್ನು ತಿಂದ ಆ ದೈತ್ಯನು ಮೂರ್ಛೆಗೊಂಡು ರಥದ ಮಧ್ಯದಲ್ಲಿಯೇ ಬಿದ್ದನು ಆಗ ಧಾರನೆಂಬ ಸೂತನು ಅವನನ್ನು ಯುದ್ಧದಿಂದ ತೆಗೆದುಕೊಂಡು ಹೋದನು.

೨೪. ಯುದ್ಧದಲ್ಲಿ ಮೂರ್ಛೆಹೊಂದಿ ವಿಮುಖನಾಗಿರುವ ಆ ದೈತ್ಯನನ್ನು ಗಣಪತಿಯು ಹೊಡೆಯಲಿಲ್ಲ. ಬಹು ಕಾಲದ ಮೇಲೆ ಜ್ಞಾನವನ್ನು ಹೊಂದಿ ಆ ದೈತ್ಯನು ಸಾರಥಿಗೆ ಇಂತೆಂದನು.

೨೫. ತ್ರೈಪುರಿಯು ಹೇಳಿದನು- ಎಲೈ ಸೂತನೇ ! ನೀನು ಬಹು ಹೆದರಿಕೆಯುಳ್ಳವನು. ಈಗ ಆ ವಿನಾಯಕನ ಮೇಲೆ ಹೊರಡು.

೨೬. ವ್ಯಾಸನು ಹೇಳಿದನು- ಆಗ ಸಾರಥಿಯು ಸತ್ಯವೂ ಪಥ್ಯವೂ ಆದ ಮಾತನ್ನು ಹೇಳಿದನು.

॥ ಸಾರಥಿರುವಾಚ ॥

ಹರಾತ್ಮಜಶರಾನ್ ಸೋಢುಂ ಕಸ್ಸಮರ್ಥೋ ರಣಾಜಿರೇ ।
ತಸ್ಮಾನ್ಮೋಹಗತಸ್ತ್ವಂ ಚ ಮಯಾ ನೀತಃ ಪ್ರಭಾಸುತ ॥
ಏತಜ್ಜ್ಞಾತ್ವಾ ತ್ವಿದಾನೀಂ ಭೋ ಯದ್ಯುಕ್ತಂ ತದ್ವಿಧೀಯತಾಂ ॥ ೨೭ ॥

॥ ವ್ಯಾಸ ಉವಾಚ ॥

ಏತಸ್ಮಿನ್ನಂತರೇ ರಾಜ್ಞಾ ಪ್ರೇರಿತಃ ಕರಿಸತ್ತಮಃ ।
ಓಷಧ್ಯಾದಿಪ್ರಯೋಗೇಣ ಗಜಸ್ಸಂಜ್ಞಾಮಬೋಧಯತ್ ॥ ೨೮ ॥

ಕಾರಯೇಚ್ಛತಗುಣಂ ಪ್ರಾಣಂ ಪ್ರಾಣಂ ಚ ಜಯಮಾದಿಶತ್ ।
ಪ್ರಾಗ್ಜಲಂ ಮಂತ್ರಿತಂ ದತ್ವಾ ರುರೋಧಾಸ್ಯಾಂಗಕವ್ರಣಾನ್ ॥ ೨೯ ॥

ಸ ಗಜೋ ದಶನೈರೇವ ಸ್ಫೋಟಯಾಮಾಸ ವೈ ಗಿರಿಂ ।
ಏವಂ ಶತಸಹಸ್ರಾಣಿ ಸೈನ್ಯಾನಿ ಸೈನ್ಯಪಾಲಕಾನ್ ॥ ೩೦ ॥

ಪಾತಯಾಮಾಸ ಸಮಿತೌ ಗಜಃ ಪರಮದುರ್ಜಯಃ ।
ಸ ದೈತ್ಯಃ 'ತಸ್ಯ ಪೃಷ್ಠಸ್ಥಃ ಶರೈಃ ಕಾಲಾನಲಪ್ರಭೈಃ ॥ ೩೧ ॥

---

೨೭. ಸಾರಥಿಯು ಹೇಳಿದನು- ಸ್ವಾಮಿ ! ಗಣಪತಿಯ ಬಾಣವನ್ನು ಸಹಿಸಲು ಯಾವನು ತಾನೇ ಶಕ್ತನಾದಾನು ? ಆದ್ದರಿಂದಲೇ ಮೂರ್ಛೆಹೊಂದಿದ ನಿನ್ನನ್ನು ನಾನು ತೆಗೆದುಕೊಂಡು ಬಂದೆ. ಈಗ ನಿನ್ನ ಇಷ್ಟಬಂದಂತೆ ಮಾಡು

೨೮. ವ್ಯಾಸನು ಹೇಳಿದನು– ಇಷ್ಟರಲ್ಲಿ ಹಿರಣ್ಯಕಶಿಪುವು ಒಂದು ಆನೆಯನ್ನು ಔಷಧಿ ಮೊದಲಾದವುಗಳಿಂದ ಜ್ಞಾನಬದಲಾಯಿಸುವಂತೆ ಮಾಡಿ ಕೊಬ್ಬಿಸಿದನು

೨೯. ಬಲವನ್ನೂ, ಉತ್ಸಾಹವನ್ನೂ ನೂರರಷ್ಟು ಹೆಚ್ಚಿಸಿ ಮಂತ್ರಿಸಿದ ನೀರನ್ನು ಕೊಟ್ಟು ಗಾಯಗಳನ್ನು ಕಟ್ಟಿಸಿ ಜಯವನ್ನು ಕೋರಿದನು. ಅದನ್ನು ಈ ತ್ರೈಪುರಿಗೆ ಕಳುಹಿಸಿದನು.

೩೦-೩೯. ಆ ಆನೆಯು ದಂತಗಳಿಂದಲೇ ಬೆಟ್ಟವನ್ನೂ ಕೂಡ ಒಡೆಯುತ್ತಿದ್ದಿತು. ಅಂತಹ ಈ ಆನೆಯು ಯುದ್ಧರಂಗದಲ್ಲಿ ಅನೇಕ ಸೈನ್ಯಗಳನ್ನೂ ಸೇನಾಧಿಪತಿಗಳನ್ನೂ ಕೊಲ್ಲುತ್ತಾ ಜಯಿಸಲಸಾಧ್ಯವಾಗಿದ್ದಿತು. ಆ ತ್ರೈಪುರಿಯು ಆ ಆನೆಯ ಮೇಲೆ ಕುಳಿತು ಹರಿತವಾದ ಬಾಣಗಳಿಂದ ಮುಖ್ಯ ಮುಖ್ಯರಾದ ದೇವತೆಗಳನ್ನು

ಹತ್ವಾ ಚಾಪಾತಯಚ್ಚೋರ್ವ್ಯಾಂ ಮುಖ್ಯಮುಖ್ಯಾನ್ಸುರಾಧಿಪಾನ್ ।
ಶರೈಸ್ತಸ್ಯ ತಥಾ ದೇವಾ ಯಮದಂಡಸಮಪ್ರಭೈಃ ॥ ೩೨ ॥

ನಿಪತಂತಿ ಮಹಾವೀರ್ಯಾ ರುಧಿರೌಘಪರಿಪ್ಲುತಾಃ ।
ಯಸ್ಮಿನ್ಯಸ್ಮಿಂಶ್ಚ ಮಾರ್ಗೇ ತು ಸ ದೈತ್ಯಸ್ಸಗಜೋ ಗತಃ ॥ ೩೩ ॥

ತತ್ರ ತತ್ರ ಚಕಾರಾಶು ಭೀಷಣಂ ಸಂಚಿತಂ ಶರೈಃ ।
ಗಜೇನ ಪಾತಿತಾಃ ಕೇಚಿದ್ಗಜಾರೋಹೇಣ ಚಾಪರೇ । ॥ ೩೪ ॥

ವೇಗೇನ ಭ್ರಮಣೇನೈವ ಸುರಾಃ ಕೇಚಿತ್ಪ್ರತಾಪಿತಾಃ ।
ಏವಂ ಸುರಗಣಾಧ್ಯಕ್ಷಾಃ ಶಸ್ತ್ರಾಸ್ತ್ರೈರ್ವಿವಿಧೈಶ್ಚ ತಂ ॥ ೩೫ ॥

ಸ ಗಜಂ ಯುದ್ಧನಿರ್ಭೀತಾ ನಿಜಘ್ನುಃ ಬಹುಭಿಶ್ಯರೈಃ ।
ತಥಾಪಿ ತದ್ಗಜಂ ಯೋದ್ಧುಂ ನ ಶಕ್ತಾಸ್ತೇ ಮಹಾಬಲಾಃ ॥ ೩೬ ॥

ಕ್ಷಿಪ್ರಂ ತಾಂಸ್ತು ಗಜೋ ದನ್ತೈಸ್ತ್ರಿಪುರೋಽಪಾತಯಚ್ಛರೈಃ ।
ನ ಗತಾ ಯೇ ಧರಣ್ಯಾಂ ಚ ದೇವಾ ಜರ್ಜರವಿಗ್ರಹಾಃ ॥ ೩೭ ॥

ಶರಣ್ಯಂ ಗಣಪಂ ಜಗ್ಮುರ್ಭೀತಾಸ್ತೇ ವೇದನಾತುರಾಃ ।
ದೇವಾನಾಂ ಕದನಂ ದೃಷ್ಟ್ವಾ ಗಣಾಧೀಶಃ ಪ್ರತಾಪವಾನ್ ॥ ೩೮ ॥

---

ಹೊಡೆದು ಕೆಡವುತ್ತಿದ್ದನು ಅವನ ಕ್ರೂರವಾದ ಬಾಣಗಳಿಂದ ಶೂರರಾದರೂ ದೇವತೆಗಳು ರಕ್ತದಿಂದ ತೋಯ್ದವರಾಗಿ ನೆಲದ ಮೇಲೆ ಬಿದ್ದರು. ಆ ದೈತ್ಯನೂ ಆನೆಯೂ ಹೋದೆಡೆಯಲ್ಲೆಲ್ಲಾ ಬಾಣಗಳಿಂದ ಬಹು ಭಯಂಕರವಾದ ಕೆಲಸವನ್ನು ಮಾಡಿದನು. ಆನೆಯು ಕೆಲವರನ್ನು ಕೆಡವಿತು ಆನೆಯ ಮೇಲಿನ ಭಟನೂ ಕೆಲವರನ್ನು ಕೆಡವಿದನು. ಆ ಆನೆಯ ವೇಗದಿಂದಲೂ, ಅವರ ತಿರುಗುವಿಕೆಯಿಂದಲೂ, ಎಷ್ಟೋ ದೇವತೆಗಳು ಬಾಧೆ ಹೊಂದಿದರು. ದೇವತೆಗಳ ಮುಂದಾಳುಗಳೂ ಕೂಡ ಶಸ್ತ್ರಾಸ್ತ್ರಗಳಿಂದ ಅವನನ್ನೂ ಅವನ ಆನೆಯನ್ನೂ ಹೊಡೆದರು. ಆದರೂ ಕೂಡ ದೇವತೆಗಳು ಆ ಆನೆಯನ್ನು ಸೋಲಿಸಲಾರದೇ ಹೋದರು. ಅವರೆಲ್ಲರನ್ನೂ ಆನೆಯು ದಂತಗಳಿಂದಲೂ, ತ್ರಿಪುರಿಯು ಬಾಣದಿಂದಲೂ ಜಾಗ್ರತೆಯಾಗಿ ಕೆಡವಿದರು. ಏಟನ್ನು ತಿಂದು ಕೆಳಗೆ ಬೀಳದೆ ಉಳಿದುಳಿದ ದೇವತೆಗಳು ಗಣಪತಿಯನ್ನು ಶರಣು ಹೊಂದಿದರು. ದೇವತೆಗಳ ಮೇಲೆ ಈ ರೀತಿಯಾದ ಯುದ್ಧವನ್ನು

ಸ ಗಜಂ ತಾಡಯಾಮಾಸ ವಜ್ರಾನಲಸಮೈಶ್ಶರೈಃ ।
ಸ ಗಜೋ ವೇಗಸಂರುದ್ಧಃ ಶರೇಣ ಚ ಸಮುತ್ಥಿತಃ ॥ ೩೯ ॥

ಅಥೋ ತೌ ದ್ವೌ ಶರೈರೇವ ಬಿಭಿದಾತೇ ಪರಸ್ಪರಂ ।
ಉಭೌ ತೌ ನರ್ದಮಾನೌ ಚ ಅನ್ಯೋನ್ಯಂ ಜಯಮೈಚ್ಛತಾಂ ॥ ೪೦ ॥

ಶೋಣಿತೈರ್ಲಿಪ್ತಸರ್ವಾಂಗೋ ವೀರಮುಖ್ಯೌ ಸುರಾಸುರೌ ।
ಅಥಾಮುಂ ಸ ಗಜೋ ಮತ್ತೋ ಬಿಭೇದ ದಶನೈಸ್ಸ್ವಕೈಃ ॥ ೪೧ ॥

ಆಖುನಾಭಿದ್ರುತೋ ನಾಗೋ ಘೋರಯುದ್ಧಂ ತಯೋಃ ಪರಂ ।
ಅಧೋರ್ಧ್ವಂ ಸಂವಿಭಾಗೇ ಚ ಚತುರ್ಭಿರ್ಯುದ್ಧಮದ್ಭುತಂ ॥ ೪೨ ॥

ಸ ಶಬ್ದಂ ತುಮುಲಂ ಯುದ್ಧಂ ಸರ್ವಲೋಕಭಯಂಕರಂ ।
ದಶನೈರ್ದರ್ಶನೈರೇವ ಶಸ್ತ್ರೈರೇವ ಶರೋತ್ತಮೈಃ ॥ ೪೩ ॥

ತದ್ಘೋರಮಭವದ್ಯುದ್ಧಂ ದೇವದಾನವಸಂಗರೇ ।
ಆಖುಕೋ ಭೇದಯಾಂಚಕ್ರೇ ಮಹಾನಾಗಂ ಮಹಾಬಲಂ ॥ ೪೪ ॥

---

ನೋಡಿ ಗಣಪತಿಯು ಆ ಆನೆಗೆ ಬಾಣಗಳನ್ನು ಬಿಟ್ಟು ಹೊಡೆಯಲು ನೋವನ್ನು ಹೊಂದಿ ಓಡಾಡಲು ಮೊದಲಿಟ್ಟಿತು.

೪೦–೪೪. ಆಗ ಆ ಆನೆಯ ಮೇಲಿದ್ದ ತ್ರೈಪುರಿಯು ಎರಡು ಬಾಣಗಳನ್ನು ಗಣಪತಿಯ ಮೇಲೆ ಬಿಟ್ಟನು. ಆನಂತರ ಗಣಪನೂ ಬಿಟ್ಟನು. ಹೀಗೆ ಇಬ್ಬರೂ ಸಿಂಹ ನಾದಮಾಡುತ್ತಾ ಹೊಡೆದಾಡಿದರು. ಇಬ್ಬರೂ ಗರ್ಜಿಸುತ್ತ ಜಯಿಸಲು ಆಶಿಪಡುತ್ತಿದ್ದರು. ಈ ರೀತಿಯಾದ ಯುದ್ಧದಲ್ಲಿ ಆ ವೀರರಿಬ್ಬರೂ ರಕ್ತದಿಂದ ನೆನೆದರು. ಅನಂತರ ಆ ಮದ್ದಾನೆಯು ತನ್ನ ದಂತಗಳಿಂದ ಈ ಗಣಪನನ್ನು ತಿವಿದು ಹೊಡೆಯಿತು. ಇದನ್ನು ನೋಡಿ ಗಣಪತಿಯವಾಹನವಾದ ಇಲಿಯು ಆ ಆನೆಯಮೇಲೆ ಯುದ್ಧಕ್ಕೆ ನಿಂತಿತು. ಈ ರೀತಿ ವಾಹನಗಳಿಗೂ, ಭಟರಿಗೂ ಯುದ್ಧವು ಏರ್ಪಟ್ಟಿತು. ವಾಹನಗಳು ಹಲ್ಲಿನಿಂದಲೂ, ಭಟರು ಬಾಣಗಳಿಂದಲೂ. ಮಾಡುತ್ತಿದ್ದ ಯುದ್ಧವು ಸರ್ವಲೋಕ ಭಯಂಕರವಾಗಿ ಶಬ್ದವನ್ನು ಮಾಡುತ್ತಿದ್ದುವು. ಈ ರೀತಿ ಯುದ್ಧ ನಡೆಯುತ್ತಿರಲು ಇಲಿಯು ಆ ಮದ್ದಾನೆಯನ್ನು ನೋಯಿಸಿತು. ಮತ್ತು ಆನೆಯ ಮೇಲಕ್ಕೂ ಸಹ ಏರಿತು.

ಪರ್ಶುನಾ ಪೃಷ್ಠವಂಶಾಗ್ರೇ ಸ್ಥಿತ್ವಾ ತೇನಾಹನತ್ಪುನಃ ।
ದೈತ್ಯಸ್ಯ ದಶನದ್ವಾರೇ ಹೃದಿ ಸ್ಕಂದೇಥ ಲಾಘವಾತ್ ॥ ೪೫ ॥

ಸಗಜಸ್ಸಪಪಾತೋರ್ವ್ಯಾಂ ಗತಾಸುರ್ಲೋಹಿತಂ ವಮನ್ ।
ಶಶಂಸುರ್ಮುನಯೋ ದೇವಾಃ ಸಾಧು ಸಾಧ್ವಿತಿ ಚಾಬ್ರುವನ್ ॥ ೪೬ ॥

ಗಣಪಂ ಪುಷ್ಪಗಂಧೈಶ್ಚ ಗಂಧಧೂಪೈರಪೂಜಯನ್ ।
ಪ್ರದ್ರುವುರ್ದೈತ್ಯಸಂಘಾಶ್ಚ ಭೀತಾಶ್ಚ ಪ್ರಾಣಕಾತರಾಃ ॥
ತಥೈವ ಸಹ ಪಾರ್ವತ್ಯಾ ಸುರಾನಾಹ ಮಹೇಶ್ವರಃ ॥ ೪೭ ॥

॥ ಮಹೇಶ್ವರ ಉವಾಚ ॥

ಅತ್ರಾನ್ಯೇಽಸ್ತ್ರೈರಮೋಘೈಶ್ಚ ದೈತ್ಯಾನಾಜಘ್ನು ರಾಹವೇ ।
ಯಾವತ್ತು ಸೇನ ಯೋರ್ನೈವ ಜಯುಯುದ್ಧಂ ಸಮಾಪಯೇತ್ ॥ ೪೮ ॥

ಇತಿ ಶ್ರೀ ಪದ್ಮಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ತ್ರೈಪುರಿವಧೋ
ನಾಮ ದ್ವಿಸಪ್ತತಿತಮೋಽಧ್ಯಾಯಃ

---

೪೫-೪೮. ಆಗ ಗಣಪತಿಯು ಪರಶು (ಕೊಡಲಿ) ವನ್ನು ತೆಗೆದುಕೊಂಡು ಆನೆಯ ಬೆನ್ನ ಮೇಲೆ ನಿಂತು ಆ ಆನೆಗೆ ಕೊಂಬುಗಳ ಬಳಿಯಲ್ಲಿ ಹೊಡೆದನು. ಮತು ತ್ರೈಪುರಿಗೆ ಹೃದಯಕ್ಕೂ ಹೊಡೆದನು. ಮತ್ತು ಆ ಆನೆಯ ಕತ್ತಿನ ಮೇಲೂ ಹೊಡೆದನು. ಆಗ ತ್ರೈಪುರಿಯು ರಕ್ತವನ್ನು ಕಾರುತ್ತ ಆನೆಯ ಜೊತೆಯಲ್ಲಿಯೇ ಬಿದ್ದನು. ದೇವತೆಗಳು ಸಾಧು ಸಾಧು ಎಂದು ಹೊಗಳಿದರು ಅಲ್ಲದೇ ದೇವತೆಗಳು ಗಣಗತಿಯನ್ನು ಹೂವು ಗಂಧ ದೂಪಗಳಿಂದ ಪೂಜಿಸಿದರು ದೈತ್ಯರು ಪ್ರಾಣಗಳನ್ನು ಉಳಿಸಿಕೊಳ್ಳಲು ಹೆದರಿ ಓಡಿದರು. ಆಗ ಶಂಕರ ಪಾರ್ವತಿಯರು ದೇವತೆಗಳನ್ನು ಕುರಿತು ಇಂತೆಂದರು. ಮಹೇಶ್ವರನು ಹೇಳಿದನು- ಮಿಕ್ಕ ದೇವತೆಗಳೂ ಕೂಡ ಅಮೋಘವಾದ ಅಸ್ತ್ರಗಳಿಂದ ದೈತ್ಯರನ್ನು ಹೊಡೆಯಿರಿ ಸೇನೆಗಳು ಯುದ್ಧವನ್ನು ಮಾಡುವವರೆಗೂ, ಜಯ ಲಭಿಸುವವರೆಗೂ ಯುದ್ಧವನ್ನು ಬಿಡಕೂಡದು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ತ್ರೈಪುರಿವಧವೆಂಬ
ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ತ್ರಿಸಪ್ತತಿತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

ಶ್ರುತ್ವಾ ಮಹೇಶ್ವರಾದ್ವಾಕ್ಯಂ ದೇವಾಶ್ಶಕ್ರಪುರೋಗಮಾಃ ।
ದುದ್ರುವುರ್ದೈತ್ಯಸಂಘಾಂಸ್ತಾನ್ಸರ್ವೇ ಸರ್ವಾನ್ಸಮಂತತಃ ॥ ೧ ॥

ಅಜಗಾಮ ಮಹಾಬಾಹುಃ ಕುಂಭೋ ನಾಮ ಮಹಾಸುರಃ ।
ನೈಋತೋ ಯಕ್ಷರಾಜಾನಂ ಗದಯಾ ಚಾಹನದ್ಭೃಶಂ ॥ ೨ ॥

ಗುಹ್ಯಕೇಶೋ ಗದಾಪಾತೈಃ ಜಘಾನ ಭೃಶಮುತ್ತಮಂ ।
ತತೋನ್ಯೋನ್ಯಂ ಗದಾಯುದ್ಧಮಭವದ್ಭೀಷಣಂ ತಯೋಃ ॥ ೩ ॥

---

## ಎಪ್ಪತ್ತಮೂರನೆಯ ಅಧ್ಯಾಯವು

೧. ವ್ಯಾಸನು ಹೇಳಿದನು– ಮಹೇಶ್ವರನ ಈ ಮಾತನ್ನು ಕೇಳಿ ಇಂದ್ರನೇ ಮುಂತಾದ ದೇವತೆಗಳು ದೈತ್ಯರ ಮೇಲೆ ಬಿದ್ದು ಹೊಡೆಯಲುಪಕ್ರಮಿಸಿದರು.

೨. ಆಗ ಕುಂಭನೆಂಬ ರಾಕ್ಷಸನು ಯುದ್ಧಕ್ಕೆ ಬಂದು ಯಕ್ಷರಾಜನಾದ ಕುಬೇರನನ್ನು ಗದೆಯಿಂದ ಹೊಡೆದನು.

೩. ಅನಂತರ ಕುಬೇರನೂ ಕೂಡ ಗದೆಯನ್ನು ತೆಗೆದುಕೊಂಡು ಆ ಕುಂಭನಿಗೆ ಹೊಡೆದನು. ಇಂತು ಇಬ್ಬರಿಗೂ ಭಯಂಕರವಾದ ಗದಾ ಯುದ್ಧವು ಮೊದಲಾಯಿತು.

**ಚಕ್ರಬಂದಮಹಾಬಂಧಂ ಪುರೋಽವಧ್ಯನಬಂಧನಂ ।**
**ಪ್ರಾಚುರಂ ಭೀಷಣಂ ಯಾನಂ ಸ್ಫೋಟಕೈಲಾಭಿವಾಸ್ತಿಕಂ ॥ ೪ ॥**

**ತೇನ ಕೃತ್ವಾ ಮಹಾಯುದ್ಧಮವಸಾನೇ ಧನೇಶ್ವರಃ ।**
**ಪಾತಯಾಮಾಸ ತಂ ಸ್ಫೋಟಂ ತಸ್ಯ ಕುಂಭಸ್ಯ ಚೋರಸಿ ॥ ೫ ॥**

**ಭಗ್ನದಂಷ್ಟ್ರಸ್ತತಃ ಕುಂಭೋ ನಿಪಪಾತ ಮಹೀತಲೇ ।**
**ಸ್ಯಂದನಸ್ಥೋ ಮಹಾವೀರ್ಯೋ ಜಂಭೋ ಹರಿಹಯಸ್ತದಾ ॥ ೬ ॥**

**ಜಘಾನ ಶರಸಂಘೈಶ್ಚ ತಥೈವೈರಾವಣಂ ಭೃಶಂ ।**
**ವಾಸವೋ ಭಿದುರೇಣೈವ ಸಂಬಿಭೇದಾಸುರೋತ್ತಮಂ ॥ ೭ ॥**

**ಸ ಪಪಾತ ಧರಾಪೃಷ್ಠೇ ಗತಾಸುರ್ಲೋಹಿತೋಕ್ಷಿತಃ ।**
**ತಥಾರಣ್ಯಂ ಸುಘೋರಂ ಚ ಅಘೋರಂ ಘೋರಮೇವ ಚ ॥ ೮ ॥**

**ಚತುರೋ ಗಣಮುಖ್ಯಾಂಶ್ಚ ಶಕ್ತ್ಯಾ ಬಿಭೇದ ಸಂಯುಗೇ ।**
**ಸೇನಾನೀಶ್ಚೈವ ಪ್ರತ್ಯೇಕಂ ಪಾತಯಾಮಾಸ ಲಾಘವಾತ್ ॥ ೯ ॥**

---

೪–೫. ಚಕ್ರಬಂಧ, ಮಹಾಬಂಧ, ಪುರೋವಧ್ಯ, ಪ್ರಾಚುರ, ಭೀಷಣ, ಯಾನಸ್ಫೋಟ, ಕೈಲ, ಅಭಿವಾಸ್ತಿಕವೆಂಬ ಹೆಸರುಳ್ಳ ಬಂಧಗಳಿಂದ ಯುದ್ಧ ಮಾಡಿದರು. ಕೊನೆಗೆ ಕುಬೇರನು ಸ್ಫೋಟವೆಂಬ ಬಂಧನದಲ್ಲಿ ಆ ಕುಂಭನ ಎದೆಗೆ ಹೊಡೆದನು.

೬–೭. ಆಗ ಕುಂಭನ ಹಲ್ಲುಗಳೆಲ್ಲವೂ ಮುರಿದು ಅವನು ಕೆಳಗೆ ಬಿದ್ದನು ಜಂಭನೆಂಬ ರಾಕ್ಷಸನು ರಥದ ಮೇಲೆ ಕುಳಿತು ಇಂದ್ರನನ್ನು ಎದುರಿಸಿ ಬಾಣಗಳಿಂದ ಅವನನ್ನು ಹೊಡೆದನು. ಇಂದ್ರನು ವಜ್ರಾಯುಧದಿಂದಲೇ ಆ ರಾಕ್ಷಸನನ್ನೂ ಹೊಡೆದನು.

೮–೯. ಆಗ ಆ ಜಂಭನು ರಕ್ತದಿಂದ ತೋಯ್ದು ನೆಲದಲ್ಲಿ ಬಿದ್ದು ಸತ್ತನು. ಇತ್ತ ಕುಮಾರಸ್ವಾಮಿಯು ಅರಣ್ಯ, ಸುಘೋರ, ಅಘೋರ, ಘೋರರೆಂಬ ನಾಲ್ವರು ಮುಖ್ಯರಾದವರನ್ನು ಯುಕ್ತಿಯಿಂದ ಕೊಂದನು.

ಸೌರಭಂ ಶರಸಂಘೈಶ್ಚ ಜಯಂತೋ ವಶಮಾನಯತ್ ।
ಶಕ್ತಿಹಸ್ತಂ ಚ ಸಂಹ್ಲಾದಂ ಯಮದಂಡಂ ನರಾಂತಕಂ ॥ ೧೦ ॥

ದತ್ವಾ ಚ ಪಾತಯಾಮಾಸ ಸಂ ಭಸ್ಮೀಕೃತವಿಗ್ರಹಃ ।
ಕಾಲಶ್ಚ ಖಡ್ಗಪಾತೇನ ಪಾತಯಾಮಾಸ ವಾಭ್ರಮಂ ॥ ೧೧ ॥

ಶಕ್ತ್ಯಾ ಮೃತ್ಯುರ್ಬಿಭೇದಾಶ್ವಂ ತಥಾ ನಿರ್ಘೃಣಕಂ ರಣೇ ।
ಅಗ್ನಿನಾ ದಹ್ಯಮಾನಾಶ್ಚ ಸಪ್ತೈತೇ ಚ ಮಹಾಬಲಾಃ ॥ ೧೨ ॥

ಭದ್ರಬಾಹುರ್ಮಹಾಬಾಹುಃ ಸುಗಂಧೋ ಗಂಧ ಏವ ಚ ।
ಭೌರಿಕೋ ವಲ್ಲಿಕೋ ಭೀಮ ಏತೇ ಸೇನಾಗ್ರಗಾಮಿನಃ ॥ ೧೩ ॥

ರಣೇ ಸಂದಗ್ಧದೇಹಾಶ್ಚ ಪೇತುರುರ್ವ್ಯಾಂ ಗತಾಸವಃ ।
ಪಾಶಬದ್ಧಾ ಮಹಾವೀರ್ಯಾ ವರುಣಸ್ಯ ಮಹಾತ್ಮನಃ ॥ ೧೪ ॥

ಪೇತುರುರ್ವ್ಯಾಂ ಮಹಾಸತ್ವಾಃ ಶೂರಾಶ್ಚಾರಭಯಾನಕಾಃ ।
ಸೂರಸ್ಯ ರಶ್ಮಿಜಾಲೇನ ನಿಹತಾಃ ಪಂಚದಾನವಾಃ ॥ ೧೫ ॥

ತುರುತುಂಬರುಮೇಘಾಭಃ ಸಾಧಕಾಸಾಧಕಾಭಿದಾಃ ।
ಕ್ರೂರಕೌಂಚ ರಣೇಶಾನಮೋದಸಮ್ಮೋದಷಣ್ಮುಖಾಃ ॥ ೧೬ ॥

---

೧೦-೧೧. ಜಯಂತನು ಸೌರಭನನ್ನು ಸೋಲಿಸಿದನು ಶಕ್ತಿ, ಹಸ್ತ, ಸಂಹ್ಲಾದ, ನರಾಂತಕ ಇವರನ್ನು ಯಮನು ಖಡ್ಗದಿಂದ ಕೆಡವಿ ಕೊಂದನು.

೧೨. ಯಮನು ಮಹಾಬಲಿಷ್ಠನಾದ ನಿರ್ಘೃಣಕನನ್ನು ಯುದ್ಧದಲ್ಲಿ ಕೊಂದನು. ಮುಂದೆ ಹೇಳುವ ಏಳು ಜನರನ್ನೂ ಅಗ್ನಿಯು ಸುಟ್ಟನು.

೧೩-೧೬. ಭದ್ರಬಾಹು, ಮಹಾಬಾಹು, ಸುಗಂಧ, ಗಂಧ, ಭೌರಿಕ, ವಲ್ಲಕ, ಭೀಮ ಈ ಏಳು ಜನರೂ ಯುದ್ಧದಲ್ಲಿ ಸುಡಲ್ಪಟ್ಟು ಕೆಳಗೆ ಬಿದ್ದು ಪ್ರಾಣ ಬಿಟ್ಟರು. ವರುಣನು ತನ್ನ ಪಾಶಾಯುಧದಿಂದ ಅನೇಕ ಜನ ಶೂರರಾದ ದೈತ್ಯರನ್ನು ಕೆಡವಿದನು. ಸೂರ್ಯನ ತಾಪದಿಂದ ತುರು, ತುಂಬರು, ಮೇಘಾಭ, ಸಾಧಕ, ಅಸಾಧಕರು ನಾಶಹೊಂದಿದರು. ಕ್ರೂರ, ಕೌಂಚ, ರಣೇಶಾನ, ಮೋದ, ಸಮ್ಮೋದ,

ಶರೈರ್ನಿ ಪಾತಿತಾ ದೈತ್ಯಾಸ್ಸಂಯುಗೇ ಮಾತರಿಶ್ವನಾ ।
ನೈಋತೋ ಗದಯಾ ಭೀಮಂ ಪಾತಯಾಮಾಸ ಭೂತಲೇ ॥ ೧೭ ॥

ಶೂಲಪಾತೈಶ್ಚ ರುದ್ರಾಣಾಂ ಶತಶೋ ದೈತ್ಯದಾನವಾಃ ।
ನಿಪೇತುಸ್ಸಂಯುಗೇ ಭೀತಾಃ ಸಮ್ಮುಖಾ ರಣಪಂಡಿತಾಃ ॥ ೧೮ ॥

ವಸೂನಾಂ ಶರಪಾತೈಶ್ಚ ಶೂರಾಣಾಂ ರಶ್ಮಿಮಾಲಿನಾಂ ।
ಮೇಘಾನಾಂ ಕರಕಾಭಿಶ್ಚ ವಜ್ರಪಾತೈಸ್ಸುದಾರುಣೈಃ ॥ ೧೯ ॥

ನಿಪಾತಿತಾ ರಣೇ ದೈತ್ಯಾಃ ಶತಶೋ ಬಲಶಾಲಿನಃ ।
ಕುಬೇರಸ್ಯ ಗದಾಪಾತೈರ್ನಿಪತಂತಿ ಸಹಸ್ರಶಃ ॥ ೨೦ ॥

ಶಕ್ರಸ್ಯ ಭಿದುರೇಣೈವ ಭೇದಿತಾ ದೈತ್ಯಪುಂಗವಾಃ ।
ಅಸಂಖ್ಯಾತಾಃ ಪತನ್ತುರ್ವ್ಯಾಂ ಸ್ಕಂದಶಕ್ತ್ಯಾ ತಥಾ ಹತಾಃ ॥ ೨೧ ॥

ಗಣೇಶಪರ್ಶುಪಾತೇನ ಪತಂತಿ ಮುಖ್ಯದೈತ್ಯಕಾಃ ।
ವೈಕುಂಠಕರಮುಕ್ತೇನ ಚಕ್ರೇಣ ತೀವ್ರಕರ್ಮಣಾ ॥ ೨೨ ॥

ದೈತ್ಯಾನಾಂ ಪ್ರವರಾಣಾಂ ಚ ಶಿರಾಸಿಂ ನಿಪತಂತಿ ಕೌ ।
ಶಮನೋ ಯಮದಂಡೇನ ಕೋಟಿಕೋಟಿಸಹಸ್ರಶಃ ॥ ೨೩ ॥

---

ಷಣ್ಮುಖರೆಂಬ ದೈತ್ಯರನ್ನು ವಾಯುವು ಕೊಂದನು. ನೈಋತನು ಗದೆಯಿಂದ ಭೀಮನೆಂಬುವನನ್ನು ಕೊಂದನು.

೧೮–೨೦. ರುದ್ರರು ಶೂಲದಿಂದ ಅನೇಕ ದೈತ್ಯದಾನವರನ್ನು ಕೊಂದರು. ವಸುಗಳ ಬಾಣದಿಂದಲೂ, ಮೇಘಗಳ ಆನೆಕಲ್ಲುಗಳಿಂದಲೂ, ಸಿಡಿಲಿನಿಂದಲೂ, ಅನೇಕ ಜನ ದೈತ್ಯರು ಸತ್ತರು. ಕುಬೇರನ ಗದೆಯಿಂದಲೂ ಅನೇಕರು ಸತ್ತರು

೨೧–೨೪. ಇಂದ್ರನು ವಜ್ರಾಯುಧದಿಂದಲೂ, ಸ್ಕಂದನು ಶಕ್ತ್ಯಾಯುಧ ದಿಂದಲೂ, ಗಣೇಶನು ಪರಶುವಿನಿಂದಲೂ, ಅನೇಕ ಜನ ದೈತ್ಯರನ್ನು ಕೊಂದರು. ವಿಷ್ಣುವು ತನ್ನ ಚಕ್ರದಿಂದ ಅನೇಕ ಜನ ದೈತ್ಯರ ತಲೆಗಳನ್ನು ಕೆಡಗಿದನು.

ಅಪಾತಯತ್ತದಾ ಭೂಮ್ಯಾಂ ಕಾಲಖಡ್ಗೇನ ದಾನವಾನ್ ।
ಮೃತ್ಯುಃ ಶಕ್ತ್ಯಾ ತಯಾ ದೈತ್ಯಾನ್ಪಾಶೀ ಪಾಶೇನ ಚಾಪರಾನ್ ॥ ೨೪ ॥

ಪಾತೇನ ತಕ್ಷಕಾದೀನಾಂ ಸುಧಾಂಶೋಶ್ಶಿಶಿರೇಣ ಚ ।
ಅಶ್ವಾರೋಹೀ ಖರೋ ಮನ್ಯುಃ ಹನಿಪಾತಸ್ತಥಾ ಗಜಾನ್ ॥ ೨೫ ॥

ಪರಿಘೇಣ ಗಜಂ ಕುಂಭೇ ದೈತ್ಯಾನಾಂ ನಾಶಯತ್ತತಃ ।
ಏವಮಶ್ವಾ ಗಜಾಶ್ಚೈವ ಲಾಘವಾತ್ತನ್ನಿಪಾತಿತಾಃ ॥ ೨೬ ॥

ಏವಂ ಸಿದ್ಧೈಶ್ಚ ಗಂಧರ್ವೈರಪ್ಸರೋಭಿರ್ಮಹಾಬಲೈಃ
ಅನ್ಯಾಭಿರ್ದೇವತಾಭಿಶ್ಚ ಸಮಾತೃಗಣನಾಯಕೈಃ ॥ ೨೭ ॥

ನಿಪಾತಿತಾ ಮಹಾಘೋರಾ ಏತೇ ಪ್ರಳಯದಾನವಾಃ ।
ಶೂಲೈಶ್ಚ ಖಡ್ಗಪಾತ್ರೈಶ್ಚ ಶೂಲಶಕ್ತಿಪರಶ್ವಥೈಃ ॥ ೨೮ ॥

ಯಷ್ಟಿಪರಿಘಾಕುಂತೈಶ್ಚ ಪಾತಯಂತ್ಯಸುರಾನ್ಸುರಾಃ ।
ಏವಂ ಸಂಕ್ಷೀಯಮಾಣೇಷು ದೈತ್ಯರಾಟ್ಸಮುಪದ್ಯತ ॥ ೨೯ ॥

---

ಯಮನು ಯಮದಂಡದಿಂದಲೂ, ಮೃತ್ಯುವು ಶಕ್ತ್ಯಾಯುಧದಿಂದಲೂ, ವರುಣನು ಪಾಶದಿಂದಲೂ, ಅನೇಕರನ್ನು ಕೊಂದರು.

೨೫-೨೬. ತಕ್ಷಕನೇ ಮುಂತಾದವರ ಏಟಿನಿಂದಲೂ, ಚಂದ್ರನ ಶೀತದಿಂದಲೂ ಅನೇಕರಾದ ಕುದುರೆಯ ರಾವುತರು ಸತ್ತರು. ಅಶ್ವಾರೋಹಿಯಾದ ಕ್ರೂರನಾದ ಮನ್ಯುವೂ, ಹನಿಪಾತನೂ, ಆನೆಗಳನ್ನು ಕೊಲ್ಲುತ್ತ ಬಂದರು. ಈರೀತಿ ಪರಿಘವೇ ಮುಂತಾದ ಆಯುಧಗಳಿಂದ ಕುದುರೆಗಳನ್ನೂ, ಆನೆಗಳನ್ನೂ ಕೊಲ್ಲುತ್ತ ಕೆಡವಿದರು.

೨೭-೨೯. ಈ ರೀತಿ ಗಂಧರ್ವರೂ, ಸಿದ್ಧರೂ, ಅಪ್ಸರರೂ ಇನ್ನೂ ಅನೇಕ ದೇವತೆಗಳೂ, ಗಣಾಧಿಪತಿಗಳೂ, ಈ ದಾನವರನ್ನು ಹೊಡೆದು ಕೊಂದರು. ಶರ, ಖಡ್ಗ, ಶೂಲ, ಶಕ್ತಿ, ಪರಶ್ವಥ, ಯಷ್ಟಿ, ಪರಿಘ, ಕುಂತಗಳಿಂದ ಸುರರು, ಅಸುರರನ್ನು ನಾಶಮಾಡಿದರು. ಈ ರೀತಿ ಈ ಅಸುರರು ನಾಶವಾಗುತ್ತಿರಲು ದೈತ್ಯರಾಜನೇ ಬಂದನು.

ಆದಿತ್ಯರಥಸಂಕಾಶಂ ರಥಂ ರತ್ನವಿಭೂಷಿತಂ ।
ಶಾತಕುಂಭಮಯಂ ದಿವ್ಯಂ ಘಂಟಾಚಾಮರಭೂಷಿತಂ ॥ ೩೦ ॥

ಪತಾಕಾಧ್ವಜಸಂಪೂರ್ಣಂ ರಮ್ಯಂ ಶಕ್ರರಥೋಪಮಂ ।
ಸಮಾರುಹ್ಯ ಮಹಾವೀರೋ ಹಿರಣ್ಯಾಕ್ಷೋ ಸುರಾಧಿಪಃ ॥ ೩೧ ॥

ಜಘಾನ ಶರಜಾಲೈಶ್ಚ ದುರ್ನಿವಾರ್ಯೈಸ್ಸುರಾಸುರೈಃ ।
ಸಸೈನ್ಯಾನಿ ಗಜಾನ್ವೀರೋ ರಥಾಂಶ್ಚ ಸಹ ಸೈಂಧವಾನ್ ॥ ೩೨ ॥

ಪಾತಯಾಮಾಸ ಭೂಮೌ ಚ ಶತಶೋಥ ಸಹಸ್ರಶಃ ।
ಏವಂ ಚರನ್ಸ ವೃಂದೇಷು ನಿಖಿಲೇಷು ದಿವೌಕಸಾಂ ॥ ೩೩ ॥

ಪಾತಯಾಮಾಸ ದೈತ್ಯೇಂದ್ರಃ ಶರೌಘಾನ್ಮೃತ್ಯುಸನ್ನಿಭಾನ್ ।
ಕ್ರಮೇಣ ಸಮರೇ ಚಾಥ ದೇವಸೈನ್ಯಾನ್ಯನುಕ್ಷತ ॥ ೩೪ ॥

ಯಥಾ ಪುಷ್ಕರಿಣೀವೃಂದೇ ಗಜಃ ಕಂಜವನಂ ಶನೈಃ ।
ಶರಪಾತೈರಥೋ ವೇಗಾತ್ಸಿಂಹನಾದೈಃ ಪುನಃ ಪುನಃ ॥ ೩೫ ॥

ಧರಣ್ಯಾಂ ಪಾತಿತಾ ವೇಗಾತ್ತದಾ ದೈತ್ಯೇಶ್ವರಸ್ಯ ಚ ।
ದಶಭಿಶ್ಚ ಶರೈಶ್ಚೈವ ಜಯಂತಂ ಸ ಜಘಾನ ಹ ॥ ೩೬ ॥

---

೩೦–೩೧. ಆ ಹಿರಣ್ಯಾಕ್ಷನು ಸೂರ್ಯನಂತೆ ಪ್ರಕಾಶಮಾನವಾದ, ರತ್ನಗಳಿಂದ ಅಲಂಕೃತವಾದ, ಪತಾಕೆ, ಧ್ವಜಗಳಿಂದ ಕೂಡಿದ, ಇಂದ್ರನ ರಥದಂತಿರುವ ರಥವನ್ನು ಹತ್ತಿ ಹೊರಟನು.

೩೨–೩೮. ಆತನು ರಥದಲ್ಲಿ ಕುಳಿತು ಯುದ್ಧಭೂಮಿಗೆ ಬಂದು ಸೈನ್ಯಗಳನ್ನೂ ಆನೆಗಳನ್ನೂ, ರಥಗಳನ್ನೂ ಕುದುರೆಗಳನ್ನೂ ಸಾವಿರಗಟ್ಟಲೆಯಲ್ಲಿ ಕೆಡವಿದನು. ಈ ರೀತಿ ದೇವತೆಗಳ ಗುಂಪಿನಲ್ಲಿ ಸಂಚರಿಸುತ್ತಾ ಆ ದೈತ್ಯನು ಮೃತ್ಯುವಿನಂತೆಯೇ ಬಾಣವನ್ನು ಬಿಡುತ್ತಾ ದೇವತೆಗಳನ್ನು ಕೆಡವಿದನು ಆನೆಯು ಕೊಳದಲ್ಲಿ ಹೇಗೆ ಕಮಲದ ವನವನ್ನು ನಾಶಮಾಡುವುದೋ ಹಾಗೆ ಯುದ್ಧದಲ್ಲಿ ಈತನು ದೇವಸೈನ್ಯಗಳನ್ನು ನಾಶಮಾಡಿದನು. ಆಗ ಆ ಹಿರಣ್ಯಾಕ್ಷನು ಸಿಂಹನಾದ ಮಾಡುತ್ತಾ ವೇಗದಿಂದ ಬಾಣಗಳನ್ನು ಬಿಡುತ್ತಾ ಅನೇಕರನ್ನು ಭೂಮಿಯಲ್ಲಿ ಕೆಡಗಿದನು. ಹತ್ತು ಬಾಣಗಳಿಂದ ಜಯಂತನನ್ನೂ ಐದು ಬಾಣಗಳಿಂದ ರೇಮಂತನನ್ನೂ, ಹದಿನೈದು

ರೇಮಂತಂ ಪಂಚಭಿರ್ಬಾಣೈಃ ಶಕ್ರಂ ಪಂಚದಶೇನ ತು ।
ಚಿತ್ರರಥಂ ವಿಂಶತಿಭಿಃ ಪಂಚವಿಂಶತಿಭಿರ್ಗುಹಂ ॥ ೩೭ ॥

ಹೇರಂಬಂ ತ್ರಿಶರೇಣೈವ ಚತ್ವಾರಿಂಶತಿಭಿರ್ಯಮಂ ।
ತಥೈವ ಕಾಲಂ ಮೃತ್ಯುಂ ಚ ಪಾಣಿನಾ ದ್ವಿಗುಣೇನ ಚ ॥ ೩೮ ॥

ಗುಹ್ಯಕೇಶಂ ಜಗತ್ಪ್ರಾಣಂ ದಶಭಿರ್ದಶಭಿಶ್ಶರೈಃ ।
ಷಷ್ಟಿಭಿಃ ಸಪ್ತಭಿಶ್ಚೈವ ರುದ್ರಾನ್ಸರ್ವಾನ್ಪೃಥಕ್ಪೃಥಕ್ ॥ ೩೯ ॥

ವಸೂನ್ಸರ್ವಾಂಶ್ಚ ಸಶರೈಸಿದ್ಧಗಂಧರ್ವಪನ್ನಗಾನ್ ।
ಪಶಾಷ್ಟದಶಭಿಃ ಷಡ್ಭಿರ್ಯುದ್ಧೇ ದೇವಾನ್ಬಿನತ್ತ್ಯಸೌ ॥ ೪೦ ॥

ಓಜೋಘಾದತಿವೀರ್ಯಾತ್ತು ಶೀಘ್ರಲಾಘವದರ್ಶನಾತ್ ।
ನಿಪತ್ಪ್ರಾಸ್ತಾಸ್ಸುರಾ ಭೀತ್ಯಾ ಪ್ರತಿಕರ್ತುಂ ನ ಚೇಶ್ವರಾಃ ॥ ೪೧ ॥

---

ಬಾಣಗಳಿಂದ ಇಂದ್ರನನ್ನೂ, ಇಪ್ಪತ್ತು ಬಾಣಗಳಿಂದ ಚಿತ್ರರಥನನ್ನೂ, ಇಪ್ಪತ್ತೈದು ಬಾಣಗಳಿಂದ ಗುಹನನ್ನೂ, ಮೂರುಬಾಣಗಳಿಂದ ಗಣಪತಿಯನ್ನೂ, ಇಪ್ಪತ್ತನಾಲ್ಕು ಬಾಣಗಳಿಂದ ಯಮನನ್ನೂ, ಅಂತೆಯೇ ಇಪ್ಪತ್ತು ಬಾಣಗಳನ್ನು ಬಿಟ್ಟು ಕಾಲ, ಮತ್ತು ಮೃತ್ಯುಗಳನ್ನೂ ಹೊಡೆದನು.

೩೯. ಕುಬೇರ ವಾಯುಗಳನ್ನು ಹತ್ತು ಹತ್ತು ಬಾಣಗಳಿಂದಲೂ, ಅರವತ್ತೇಳು ಅರವತ್ತೇಳು ಬಾಣಗಳನ್ನು ಬಿಟ್ಟು ರುದ್ರರುಗಳೆಲ್ಲರನ್ನೂ ಹೊಡೆದನು.

೪೦ ವಸುಗಳನ್ನು ಹತ್ತು ಹತ್ತು ಬಾಣಗಳಿಂದಲೂ, ಸಿದ್ಧರನ್ನು ಎಂಟೆಂಟು ಬಾಣಗಳಿಂದಲೂ, ಗಂಧರ್ವರನ್ನು ಹತ್ತು ಹತ್ತು ಬಾಣಗಳಿಂದಲೂ, ಪನ್ನಗರನ್ನು ಆರಾರು ಬಾಣಗಳಿಂದಲೂ, ಈ ರೀತಿಯಾಗಿ ಹೊಡೆದು ದೇವತೆಗಳನ್ನು ಕೆಡವಿದನು.

೪೧. ಆ ಹಿರಣ್ಯಾಕ್ಷನ ಉತ್ಸಾಹ, ಕೈಚಳಕಗಳಿಂದ ಏಟನ್ನು ತಿಂದ ದೇವತೆಗಳಿಗೆ ಪ್ರತೀಕಾರ ಮಾಡಲು ಆಗಲೇ ಇಲ್ಲ.

ಮಹೇಶಶೂಲಸಂಕಾಶೈಃ ಶರೈರ್ಮರ್ಮವಿಭೇದಿಭಿಃ ।
ತಾಡಿತಾ ನಿರ್ಜರಾ ಯುದ್ಧೇ ಮೂರ್ಛಿತಾ ಧರಣೀಂ ಯಯುಃ ॥ ೪೨ ॥

ತಸ್ಯೈವ ಸಮ್ಮುಖೇ ಸ್ಥಾತುಂ ನ ಶೇಕುಃ ಪ್ರವರಾಸ್ಸುರಾಃ ।
ತತೋ ದೇವಾ ವಿನಿರ್ಧೂತಾಸ್ತ್ರಿದಿವೇಶೇನ ಸಂಯುತಾಃ ॥ ೪೩ ॥

ಶರಣ್ಯಸ್ಯ ಹರೇಸ್ತತ್ರ ಶರಣಂ ತಾಡಿತಾ ಯಯುಃ ।
ಏತಸ್ಮಿನ್ನಂತರೇ ವಿಷ್ಣುಃ ಪ್ರಾಹ ಜಿಷ್ಣುಂ ಖಗೇಶ್ವರಂ ॥ ೪೪ ॥

॥ ವಿಷ್ಣುರುವಾಚ ॥

ಅಧುನಾ ಗಚ್ಛ ದೈತ್ಯಸ್ಯ ಸಮ್ಮುಖಂ ರಣಮೂರ್ಧನಿ ॥ ೪೫ ॥

॥ ವ್ಯಾಸ ಉವಾಚ ॥

ನಾರಾಯಣಸ್ತತಸ್ತೂರ್ಣಂ ಗತಸ್ತಸ್ಯಾಂತಿಕಂ ಜಾವಾತ್ ।
ಸ ರಥಂ ಮಾರ್ಗಣೈರ್ಭಿತ್ವಾ ವಿಷ್ಣುಮಾರೋಧಯಜ್ಜವಂ ॥ ೪೬ ॥

---

೪೨. ಮಹೇಶ್ವರನ ಶೂಲದಂತಿದ್ದ ಬಾಣಗಳಿಂದ ಹೊಡೆಯಲ್ಪಟ್ಟ ಆ ದೇವತೆಗಳು ನೊಂದು ಮೂರ್ಛಿತರಾಗಿ ನೆಲದ ಮೇಲೆ ಬಿದ್ದರು.

೪೩-೪೪. ಆಗ ಆ ಶಕ್ತರಾದ ದೇವತೆಗಳೂ ಕೂಡ ಆ ದೈತ್ಯನ ಎದುರಿಗೆ ನಿಲ್ಲಲಾರದೇ ಹೋದರು. ಹೀಗೆ ನೊಂದ ದೇವತೆಗಳು ಇಂದ್ರನನ್ನು ಮುಂದು ಮಾಡಿಕೊಂಡು ತಮ್ಮೆಲ್ಲರಿಗೂ ರಕ್ಷನಾದ ವಿಷ್ಣುವಿನ ಬಳಿಗೆ ಹೋದರು. ಇಷ್ಟರಲ್ಲಿಯೇ ವಿಷ್ಣುವು ಜಯಶೀಲನಾದ ಗರುಡನಿಗೆ ಹೇಳಿದನು.

೪೫. ವಿಷ್ಣುವು ಹೇಳಿದನು– ಎಲೈ ಗರುಡನೇ ! ಈಗ ಯುದ್ಧಮಾಡಲು ಆ ದೈತ್ಯನ ಎದುರಿಗೆ ನಡೆ ಎಂದನು.

೪೬. ವ್ಯಾಸನು ಹೇಳಿದನು- ಒಡನೆಯೇ ನಾರಾಯಣನು ಆ ದೈತ್ಯನ ಎದುರಿಗೆ ಹೋದನು. ಆಗ ಆ ದೈತ್ಯನು ರಥದಲ್ಲಿರುವ ವಿಷ್ಣುವನ್ನು ಹೊಡೆದು ಆತನನ್ನು ಕುರಿತು ಇಂತೆಂದನು

॥ ದೈತ್ಯರಾಜ ಉವಾಚ ॥

ಅನ್ಯಸೃಷ್ಟಿಂ ಕರೋಮ್ಯದ್ಯ ಹತ್ವಾ ತ್ವಾಂ ಚ ಸನಿರ್ಜರಂ ॥ ೪೭ ॥

॥ ವ್ಯಾಸ ಉವಾಚ ॥

ತತೋ ವಿಷ್ಣುರುವಾಚೇದಂ ಗರ್ಜಂತಂ ದೈತ್ಯಪುಂಗವಂ ॥ ೪೮ ॥

॥ ವಿಷ್ಣುರುವಾಚ ॥

ಶಕ್ತಸ್ತ್ವಂ ಶರ್ಧನೋ ಪಾಪ ಯದಿ ಯುದ್ಧೇ ಸ್ಥಿರೋ ಭವ ॥ ೪೯ ।

॥ ವ್ಯಾಸ ಉವಾಚ ॥

ತತಶ್ಶರಶತೈರೇವ ಜಘಾನ ವಿಷ್ಣುಮವ್ಯಯಂ ।
ಅಸಂಭ್ರಾಂತಃ ಸ ಚಿಚ್ಛೇದ ಯಮದಂಡನಿಭಾನ್ಶರಾನ್ ॥ ೫೦ ॥

ಪುನಶ್ಶರಸಹಸ್ರಾಣಿ ಪ್ರೇರಯಾಮಾಸ ತಂ ರಣೇ ।
ತಾಂಶ್ಚ ಛಿತ್ವಾ ಶರೈಶ್ಶೌರಿಸ್ತಂ ಚ ವಿವ್ಯಾಧ ಮಾರ್ಗಣೈಃ ॥ ೫೧ ॥

---

೪೭. ದೈತ್ಯರಾಜನು ಹೇಳಿದನು- ಎಲೈ ವಿಷ್ಣುವೇ ನಿನ್ನನ್ನೂ ನಿನ್ನ ಅನುಯಾಯಿಗಳಾದ ದೇವತೆಗಳನ್ನೂ ಕೊಂದು ಬೇರೆಯಾದ ಸೃಷ್ಟಿಯನ್ನು ಮಾಡುತ್ತೇನೆ

೪೮. ವ್ಯಾಸನು ಹೇಳಿದನು- ಆಗ ಗರ್ಜಿಸುತ್ತಿರುವ ಆ ಹಿರಣ್ಯಾಕ್ಷನನ್ನು ಕುರಿತು ವಿಷ್ಣುವು ಇಂತೆಂದನು.

೪೯. ವಿಷ್ಣುವು ಹೇಳಿದನು– ಎಲೈ ದೈತ್ಯನೇ ! ನೀನು ಸೃಷ್ಟಿಮಾಡುವುದರಲ್ಲಿ ಗಟ್ಟಿಗನು. ಆದರೆ ಮೊದಲು ಯುದ್ಧದಲ್ಲಿ ಸ್ಥಿರವಾಗಿ ನಿಲ್ಲು.

೫೦. ವ್ಯಾಸನು ಹೇಳಿದನು- ಆಗ ಅನೇಕ ಬಾಣಗಳನ್ನು ಬಿಟ್ಟು ವಿಷ್ಣುವನ್ನು ಹೊಡೆದನು. ಆ ವಿಷ್ಣುವು ಸ್ವಲ್ಪವೂ ಬುದ್ಧಿಭ್ರಮಣೆ ಹೊಂದದೆ ಅವನ ಬಾಣಗಳೆಲ್ಲವನ್ನೂ ಕತ್ತರಿಸಿದನು.

೫೧. ಮತ್ತೆ ಆ ದೈತ್ಯನು ಅನೇಕಸಾವಿರ ಬಾಣಗಳನ್ನು ಬಿಟ್ಟನು. ಅದನ್ನು ವಿಷ್ಣುವೂ ಬಾಣಗಳಿಂದ ಕತ್ತರಿಸಿದನು. ಮತ್ತು ಆ ದೈತ್ಯನನ್ನೂ ಹೊಡೆದನು.

ಪ್ರಗೌರವಾದಹಾರ್ಯಾಭ್ಯೈಃ ಸಂಸ್ಪರ್ಶಾದ್ವಾಡಬಾನಲೈಃ ।
ಶರೈಶ್ಚ ಭೇದಕೈಸ್ತೀಕ್ಷ್ಣೈಃ ಖಗಮ್ಯೈಶ್ಚ ಮನೋಜವೈಃ ॥ ೫೨ ॥

ಲಾಘವಾತ್ಕೇಶವಾಸ್ತ್ರಸ್ಯ ತೂಲಶುಷ್ಕತೃಣೋಪಮೈಃ ।
ಹೇಮೈಶ್ಯತಸಹಸ್ರೈಸ್ತು ತಾಡಿತೋ ದೈತ್ಯಪುಂಗವಃ ॥ ೫೩ ॥

ಬಾಧಯಾಭ್ಯರ್ದಿತಃ ಕ್ರುದ್ಧೋ ಧೃತ್ವಾ ಶಿಖರಿಣಂ ರಣೇ ।
ಜಘಾನ ಮಾಧವಂ ವೇಗಾದ್ಧಿರಣ್ಯಾಕ್ಷೋ ಮಹಾಬಲಃ ॥ ೫೪ ॥

ತಂ ಚ ಸಂಚೂರ್ಣಯಾಮಾಸ ಗದಯಾ ಲೀಲಯಾ ಹರಿಃ ।
ಏವಂ ಪರ್ವತಸಾಹಸ್ರಂ ಪತಿತಂ ತು ಕ್ರಮೇಣ ಹಿ ॥ ೫೫ ॥

ತಥೈವ ಲಾಘವಾಚ್ಚೂರ್ಣಂ ಹರಿಣಾ ದಾನವಾರಿಣಾ ।
ಪುನರ್ಬಾಹುಸಹಸ್ರಾಣಿ ಕೃತ್ವಾಸೌ ದಾನವೋತ್ತಮಃ ॥ ೫೬ ॥

ಶರೈಶ್ಶಕ್ತಿಭಿರತ್ಯುಗ್ರೈಶ್ಶೂಲೈಃ ಪಟ್ಟಿಶಕಾದಿಭಿಃ ।
ವವರ್ಷ ಬಹುಭಿರ್ವಿಷ್ಣುಂ ಕ್ರೋಧಾವಿಷ್ಟೇನ ಚೇತಸಾ ॥ ೫೭ ॥

---

೫೨-೫೩. ಕೈ ಚಳಕದಿಂದ ತಡೆಯಲಾಗದ, ಬಡಬಾನಲನಂತೆ ಕ್ರೂರವಾದ ಮತ್ತು ವೇಗವಾದ ಬಾಣಗಳಿಂದ ಆ ವಿಷ್ಣುವು ಹೊಡೆದನು ಕೇಶವನ ಆ ಚಳಕದ ಸಾವಿರ ಬಾಣಗಳಿಂದ ಆ ಹಿರಣ್ಯಾಕ್ಷನು ನೊಂದನು.

೫೪-೫೭ ಆ ನೋವಿನಿಂದ ಕೋಪಗೊಂಡು ಆ ಹಿರಣ್ಯಾಕ್ಷನು ಬೆಟ್ಟಗಳನ್ನು ತಂದು ಎಸೆದು ವಿಷ್ಣುವನ್ನು ಹೊಡೆದನು. ಗದೆಯಿಂದ ಆ ದೈತ್ಯನು ಎಸೆದ ಬೆಟ್ಟಗಳನ್ನೆಲ್ಲಾ ಹರಿಯು ನಾಶಮಾಡಿದನು. ಈ ರೀತಿಯಲ್ಲಿಯೇ ಅನೇಕ ಸಾವಿರ ಪರ್ವತಗಳನ್ನು ಆ ವಿಷ್ಣುವಿನ ಮೇಲೆ ಹಾಕಿದನು. ಹರಿಯೂ ಕೂಡ ಲಾಘವದಿಂದ ಅವೆಲ್ಲವನ್ನೂ ನಾಶಮಾಡಿದನು. ಮತ್ತೆ ಆ ರಾಕ್ಷಸನು ಸಾವಿರತೋಳುಗಳನ್ನು ಹೊಂದಿ ಬಾಣಗಳಿಂದಲೂ, ಶೂಲ, ಪಟ್ಟಿಶಗಳಿಂದಲೂ ಕೋಪದಿಂದ ವಿಷ್ಣುವನ್ನು ಹೊಡೆದನು.

ತಾಂಸ್ತು ತೇನೈವ ಪ್ರಹಿತಾನ್ಚಿಚ್ಛೇದ ಸುರಸತ್ತಮಃ ।
ಶರೈರ್ದೀಪ್ತೈರ್ಮಹಾಘೋರೈಸ್ಸುರಾಣಾಮಭಯಂಕರೈಃ ॥ ೫೮ ॥

ವಿವ್ಯಾಧ ಸರ್ವಗಾತ್ರೇಷು ಶಂಭುಶೂಲೋಗಮ್ಯೈಶ್ಶರೈಃ ।
ದಾನವಾಧಿಪತಿಂ ಸಂಖ್ಯೇ ಅವ್ಯಯೋ ಹರೀಶ್ವರಃ ॥ ೫೯ ॥

ಸ ಚ ಕಶ್ಮಲತಾಂ ಗತ್ವಾ ಸರ್ವಶಕ್ತಿಮನುತ್ತಮಂ ।
ಕಾಲಜಿಹ್ವೋಪಮಾಂ ಘೋರಾಮಷ್ಟಘಂಟಾಸಮನ್ವಿತಾಂ ॥ ೬೦ ॥

ಹರೇರುರಸಿ ಪೀನೇ ಚ ವಿದ್ರುತ್ಯಾಪಾತಯದ್ದ್ರುತಂ ।
ಶುಶುಭೇ ಚ ಸುರಶ್ರೇಷ್ಠಃ ತಟಿತ್ವತ್ಸಾಂದ್ರಮೇಘವತ್ ॥ ೬೧ ॥

ತತಶ್ಚ ಚುಕ್ರುಶುರ್ದೈತ್ಯಾ ಜಯೇತಿ ಸಾಧುವಾದಿನಃ ।
ತತಶ್ಚಕ್ರಧರಶ್ಚಕ್ರಂ ದೈತ್ಯಸೈನ್ಯೇ ವ್ಯಸರ್ಜಯತ್ ॥ ೬೨ ॥

ತೇಷಾಂ ಶಿರಾಂಸಿ ಸಂಛಿದ್ಯ ಮಾಧವಂ ಪುನರಾಗಮತ್ ।
ಸ ದೈತ್ಯಂ ಶಕ್ತಿಪಾತೇನ ಪಾತಯಾಮಾಸ ವೈ ರಥೇ ॥ ೬೩ ॥

---

೫೮-೫೯. ವಿಷ್ಣುವು ಅವೆಲ್ಲವನ್ನೂ ಕತ್ತರಿಸಿದನು. ಅನಂತರ ಘೋರವಾದ ಭಯಂಕರವಾದ ಬಾಣಗಳಿಂದ ಹರಿಯು ಹಿರಣ್ಯಾಕ್ಷನನ್ನು ಹೊಡೆದನು.

೬೦-೬೧. ಆಗ ಹಿರಣ್ಯಾಕ್ಷನು ಮೂರ್ಛೆಗೊಂಡನು. ಮತ್ತೆ ಜ್ಞಾನಬಂದು ಸುಧಾರಿಸಿಕೊಂಡವನಾಗಿ ಎಂಟು ಗಂಟೆಗಳಿಂದ ಕೂಡಿದ, ಕಾಲನ ನಾಲಿಗೆಗೆ ಸಮನಾದ ಶಕ್ತಿಯನ್ನು ಹರಿಯ ಎದೆಗೆ ಹೊಡೆದನು. ಅದರಿಂದ ಹೊಡೆಯಲ್ಪಟ್ಟ ಆ ಹರಿಯು ಮಿಂಚಿನಿಂದ ಕೂಡಿದ ಕಪ್ಪಾದ ಮೇಘದಂತೆ ಪ್ರಕಾಶಿಸುತ್ತಿದ್ದನು.

೬೨. ಆಗ ಆ ದೈತ್ಯರು ಸಾಧು ಸಾಧು ಎಂದು ಕೂಗಿದರು. ಆಗ ವಿಷ್ಣುವು ಚಕ್ರವನ್ನು ಆ ದೈತ್ಯಸೈನ್ಯದ ಮೇಲೆ ಬಿಟ್ಟನು.

೬೩. ಆ ದೈತ್ಯಸೈನ್ಯಗಳ ತಲೆಯನ್ನೆಲ್ಲಾ ಕತ್ತರಿಸಿ ಆ ಚಕ್ರವು ಮತ್ತೆ ಮಾಧವನ ಬಳಿಗೇ ಬಂದಿತು. ಅನಂತರ ಒಂದು ಶಕ್ತ್ಯಾಯುಧವನ್ನು ಬಿಟ್ಟು ಆ ಹಿರಣ್ಯಾಕ್ಷನನ್ನು ರಥದಲ್ಲಿ ಕೆಡವಿದನು.

ಚಿರಾತ್ಸಂಜ್ಞಾಂ ಸಮಾಲಂಬ್ಯ ವಹ್ನಿ ಬಾಣೇನ ಕೇಶವಂ ।
ನಿಜಘಾನ ರಣೇ ಕ್ರುದ್ಧೋ ಹರಿಃ ಕೌಬೇರಮಾಕ್ಷಿಪತ್ ॥ ೬೪ ॥

ತತೋ ಮುಮೋಚ ಮಾಯಾಸ್ತ್ರಂ ಚಾಸುರಂ ಚಾತಿದಾರುಣಂ ।
ಸಿಂಹವ್ಯಾಘ್ರುಲುಲಾಯಾಂಶ್ಚ ತದ್ವದ್ದ್ವಿಸರೀಸೃಪಾನ್ ॥ ೬೫ ॥

ಜಘಾನ ಸಮರೇ ವಿಷ್ಣುಂ ಹಿರಣ್ಯಾಕ್ಷಃ ಪ್ರತಾಪವಾನ್ ।
ತತೋ ಮಾಯಾಸ್ತ್ಯಸಂಭೂತಾನ್ಪಸ್ತ್ರಾಸ್ತ್ರೈಘಾನ್ರಣೇ ಹರಿಃ ॥ ೬೬ ॥

ಪ್ರಚಿಚ್ಛೇದ ಶರೈರೇವ ಶೂಲೇನೈವಮತಾಡಯತ್ ।
ಸ ವಿಹ್ವಲಿತಸರ್ವಾಂಗೋ ತತ್ಕ್ಷಣಂ ಲೋಹಿತೋಕ್ಷಿತಃ ॥ ೬೭ ॥

ವಿಚಕರ್ಷ ಹಸನ್ವಿಷ್ಣುಃ ಅಸೃಗ್ವಿಪ್ಲುತವಿಗ್ರಹಃ ।
ತಚ್ಛೂಲಂ ಚ ತ್ರಿಭಿರ್ಬಾಣೈಃ ಪ್ರವಿವ್ಯಾಧ ಸುರಾಧಿಪಃ ॥ ೬೮ ॥

ವರೂಥಂ ಸ ಧ್ವಜಂ ಕೇತುಂ ರಥಂ ಚೈವಾತಪತ್ರಕಂ ।
ಯನ್ತಾರಂ ಚ ಪ್ರಚಿಚ್ಛೇದ ದಶಭಿಶ್ಚ ಹರಿಶ್ಶರೈಃ ॥ ೬೯ ॥

---

೬೪. ಸ್ವಲ್ಪಕಾಲದ ಮೇಲೆ ಆ ರಾಕ್ಷಸನು ಜ್ಞಾನವನ್ನು ಹೊಂದಿ ಆಗ್ನೇಯಾಸ್ತ್ರದಿಂದ ಕೇಶವನನ್ನು ಹೊಡೆದನು. ಆಮೇಲೆ ಹರಿಯು ಕೌಬೇರಾಸ್ತ್ರದಿಂದ ದೈತ್ಯನನ್ನು ಹೊಡೆದನು.

೬೫-೬೮. ಆಗ ಆ ದೈತ್ಯನು ಮಾಯಾಸ್ತ್ರವನ್ನು ಬಿಟ್ಟನು ಅದರಿಂದ ಹೊರಟ ಸಿಂಹ, ಹುಲಿ, ಕಾಡುಕೋಣ, ಆನೆ, ಹಾವು ಮುಂತಾದುವುಗಳು ವಿಷ್ಣುವಿನ ಮೇಲೆ ಬೀಳುವಂತೆ ಮಾಡಿ ಹೊಡೆದನು. ಆಗ ಹರಿಯು ಆ ಮಾಯಾಸ್ತ್ರಗಳನ್ನು ನಾಶಮಾಡಲು ಶೂಲದಿಂದ ಆ ರಾಕ್ಷಸನು ವಿಷ್ಣುವನ್ನು ಹೊಡೆದನು. ಆ ವಿಷ್ಣುವು ಏಟು ತಿಂದು ರಕ್ತದಿಂದ ನೆನೆದನು. ಮತ್ತೆ ವಿಷ್ಣುವು ಮೂರು ಬಾಣಗಳಿಂದ ಆ ಶೂಲವನ್ನು ಕತ್ತರಿಸಿ ಮೂರ। ಬಾಣಗಳಿಂದ ಆ ದೈತ್ಯನನ್ನು ಹೊಡೆದನು.

೬೯. ಹರಿಯು ಹತ್ತು ಬಾಣಗಳಿಂದ ರಥ, ಧ್ವಜ, ಪತಾಕೆ, ಕೇತು, ಕುದುರೆ, ಛತ್ರಿ, ಸಾರಥಿಯರನ್ನು ಕೆಡವಿದನು.

ಪಾತಿತೇ ಚ ರಥೇ ದೈತ್ಯಃ ಸಂಪ್ಲುತ್ಯಾಥೆ ರಥಂ ಪರಂ ।
ಆರುರೋಹ ಸ ದೈತ್ಯೇಂದ್ರಃ ಸಮ್ಮುಖಂ ಚಾಕರೋದ್ಬಲೀ ॥ ೭೦ ॥

ತತೋ ಯುದ್ಧಂ ಮಹಾಘೋರಮಭವದ್ರೋಮಹರ್ಷಣಂ ।
ಹಿರಣ್ಯಾಕ್ಷಸ್ಯ ಚ ಹರೇಃ ಲೋಕವಿಸ್ಮಾಪನಂ ಮಹತ್ ॥ ೭೧ ॥

ಅಸ್ತ್ರಯುದ್ಧಂ ತಥಾನ್ಯೋನ್ಯಂ ಕೃತಪ್ರತಿಕೃತಂ ಚ ತತ್ ।
ತತೋ ನಿಯುದ್ಧೇ ಸತತಂ ದಿವ್ಯವರ್ಷಶತಂ ಗತಂ ॥ ೭೨ ॥

ತತೋ ದೈತ್ಯೋ ಮಹಾಸತ್ವೋ ವವೃಧೇ ವಾಮನೋ ಯಥಾ ।
ಮುಖೇನ ಜಗ್ರಾಹ ರುಷಾ ತ್ರೈಲೋಕ್ಯಂ ಸಚರಾಚರಂ ॥ ೭೩ ॥

ಭೂಮಂಡಲಂ ಸಮುದ್ಧೃತ್ಯ ವಿವೇಶ ಚ ರಸಾತಲೇ ।
ಶೇಷಾಶ್ಚ ವಿವಿಶುರ್ದೈತ್ಯಾಸ್ತಮನುಪ್ರೀತಿಸಂಯುತಾಃ ॥ ೭೪ ॥

---

೭೦. ರಥವು ಬೀಳುತ್ತಲೂ, ಆ ದೈತ್ಯನು ನೆಗೆದು ಮತ್ತೊಂದು ರಥವನ್ನು ಹತ್ತಿ ಆ ವಿಷ್ಣುವಿನ ಎದುರಿಗೆ ಬಂದನು.

೭೧. ಆಗ ಹರಿ ಹಿರಣ್ಯಾಕ್ಷರಿಗೆ ಲೋಕವಿಸ್ಮಯವಾದ ಘೋರವಾದ ಯುದ್ಧವು ನಡೆಯಿತು.

೭೨. ಒಬ್ಬರಿಗೊಬ್ಬರು ಪ್ರತೀಕಾರ ಮಾಡುತ್ತ ಅಸ್ತ್ರಶಸ್ತ್ರಗಳ ಯುದ್ಧವನ್ನು ಮಾಡಿದರು. ಅನಂತರ ಬಾಹು ಯುದ್ಧಕ್ಕೆ ಮೊದಲುಮಾಡಿದರು. ಇಷ್ಟು ವೇಳೆಗೆ ದೇವತೆಗಳ ನೂರುವರ್ಷಗಳು ಕಳೆದುವು.

೭೩. ಅನಂತರ ಮಹಾಶಕ್ತಿಯುಳ್ಳ ದೈತ್ಯನು ವಾಮನಾವತಾರದಲ್ಲಿ ವಿಷ್ಣುವು ಬೆಳೆದಂತೆ ಬೆಳೆದನು. ಮತ್ತು ಮೂರುಲೋಕಗಳನ್ನೂ ಬಾಯಲ್ಲಿ ಹಿಡಿದು ಕೊಂಡನು.

೭೪. ಹಾಗೆ ಆ ಭೂಮಿಯನ್ನು ಕಚ್ಚಿಕೊಂಡು ಹಿರಣ್ಯಾಕ್ಷನು ರಸಾತಳವನ್ನು ಹೊಕ್ಕನು. ಉಳಿದ ಹೊಕ್ಕನು. ಅನುಯಾಯಿಗಳಾದ ದೈತ್ಯರೂ ಅವನ ಜೊತೆಯಲ್ಲಿಯೇ ಹೋದರು.

ತತೋ ವಿಷ್ಣುರ್ಮಹಾತೇಜಾ ಜ್ಞಾತ್ವಾ ದೈತ್ಯಬಲಂ ಮಹತ್ ।
ದಧಾರ ರೂಪಂ ವಾರಾಹಂ ದೈತ್ಯರಾಜಜಿಘಾಂಸಯಾ ॥ ೭೫ ॥

ಧೃತ್ವಾ ಕ್ರೋಡತನುಂ ವಿಷ್ಣುರ್ವಿವೇಶ ತಮನುದ್ರುತಂ ।
ತತ್ರ ಗತ್ವಾ ರಸಾಮೂಲೇ ರಸಾತಲತಾಂ ಮಹೀಂ ॥ ೭೬ ॥

ದೃಷ್ಟ್ವಾ ಸ್ವಂದಷ್ಟ್ರಯೋರ್ದಧ್ರೇ ಲೋಕಾಧಾರಾಂ ವಸುಂಧರಾಂ ।
ತಾಂ ಧೃತ್ವಾ ಗಚ್ಛತಸ್ತಸ್ಯ ವಿಷ್ಣೋರಮಿತತೇಜಸಃ ॥ ೭೭ ॥

ಸಮಾಜಗಾಮ ದೈತ್ಯೇಂದ್ರೋ ಧೃಷ್ಟಿಂ ವಾಗ್ಭಿಸ್ತುದನ್ನನು ।
ಮಾಯಾಕ್ರೋಢತನುರ್ವಿಷ್ಣುಃ ದುರ್ವಚಾಂಸಿ ಸಹನ್ರುಷಾ ॥ ೭೮ ॥

ಜಲೋಪರಿ ದಧಾರೇಮಾಂ ಧರಾಂ ಭೂಧರ ಏವ ಚ ।
ತಸ್ಯಾಂ ನ್ಯಸ್ಯ ಸ್ವಸತ್ವಂ ಚ ಸ ಚಕಾರ ತದಾಚಲಾಂ ॥ ೭೯ ॥

ತ್ತತಃ ಪಶ್ಚಾತ್ಸ ಸಂಲಗ್ನೋ ದೈತ್ಯರಾಟ್ಸಮುಪಸ್ಥಿತಃ ।
ಕ್ರೋಧೇನ ಮಹತಾವಿಷ್ಣೋ ಜಘಾನ ಗದಯಾ ಹರಿಂ ॥ ೮೦ ॥

---

೭೫. ಆಗ ಆ ಬಲಿಷ್ಠನಾದ ವಿಷ್ಣುವು ಆ ದೈತ್ಯನು ಮಹಾಬಲಿಷ್ಠನೆಂದು ತಿಳಿದು ಆತನನ್ನು ಕೊಲ್ಲಲು ವರಾಹ ( ಹಂದಿಯ ) ಅವತಾರವನ್ನು ಹೊಂದಿದನು.

೭೬-೭೯. ಹೀಗೆ ಹಂದಿಯ ರೂಪವನ್ನು ಹೊಂದಿ ಆ ದೈತ್ಯನ ಹಿಂದೆಯೇ ಹೋಗಿ ರಸಾತಳದಲ್ಲಿರುವ ಆ ಭೂಮಿಯನ್ನು ತನ್ನ ಕೋರೆದಾಡೆಯಲ್ಲಿ ಹಿಡಿದು ಕೊಂಡನು. ವಿಷ್ಣುವು ಆ ಭೂಮಿಯನ್ನು ಹಿಡಿದುಕೊಂಡು ಬರುತ್ತಿರಲು ಆ ದೈತ್ಯನು ಆ ಹಂದಿಯನ್ನು ಬಯ್ಯುತ್ತಾ ಬಂದನು. ಮಾಯಾ ಶರೀರವುಳ್ಳ ಆ ವಿಷ್ಣುವು ಆ ದೈತ್ಯನ ಕೆಟ್ಟಮಾತುಗಳನ್ನು ತಡೆದುಕೊಂಡು ಭೂಮಿಯನ್ನು ನೀರಿನ ಮೇಲಕ್ಕೆ ತಂದು ಅಲ್ಲೊಂದು ಬೆಟ್ಟವನ್ನು ಕಲ್ಪಿಸಿ ಅದರ ಮೇಲೆ ಭೂಮಿಯನ್ನಿಟ್ಟು ಅದನ್ನು ಅಲ್ಲಾಡದಂತೆ ಮಾಡಿದನು.

೮೦. ಆ ಹಿರಣ್ಯಾಕ್ಷನೂ ಹಿಂದೆಯೇ ಬಂದು ಬಹುವಾದ ಕೋಪದಿಂದ ಗದೆಯಿಂದ ಆ ವಿಷ್ಣುವನ್ನು ಹೊಡೆದನು.

ಮಾಯಯಾ ಸೂಕರೋ ವಿಷ್ಣುಃ ತಾಂ ಗದಾಂ ಸಮವಂಚಯತ್ ।
ಯೋಗಯುಕ್ತೋ ಯಥಾ ಮೃತ್ಯುಂ ಕೌಮೋದಕ್ಯಾಹನಚ್ಚ ತಂ ॥ ೮೧ ॥

ತತಃ ಪುನಾ ರುಷಾವಿಷ್ಟೋ ಹಿರಣ್ಯಾಕ್ಷೋ ಮಹಾಬಲಃ ।
ಮುಷ್ಟಿನಾ ಪ್ರಾಹರದ್ದೇವಂ ದಕ್ಷಿಣಸ್ಯಾಂ ಭುಜಿ ಪ್ರಭೋಃ ॥ ೮೨ ॥

ಏವಂ ಯುದ್ಧಂ ಮಹಾಘೋರಂ ಸವ್ಯಾಸವ್ಯಂ ಗತಾಗತಂ ।
ಪರಿಭ್ರಮಣವಿಕ್ಷೇಪಂ ಕೃತಾನುಕರಣಂ ತಥಾ ॥ ೮೩ ॥

ತದಾ ಬ್ರಹ್ಮಾದಯೋದೇವಾ ಯುದ್ಧಂ ಪಶ್ಯಂತಿ ಖೇ ಸ್ಥಿತಾಃ ।
ಸ್ವಸ್ತಿ ಪ್ರಜಾಭ್ಯೋ ದೇವೇಭ್ಯೋ ಋಷಿಭ್ಯಶ್ಚೇತಿ ಚಾಬ್ರುವನ್ ॥
ಊಚುಶ್ಚ ದೇವದೇವೇಶಂ ವಿಷ್ಣುಂ ವಾರಾಹರೂಪಿಣಂ ॥ ೮೪ ॥

॥ ಬ್ರಹ್ಮಾದಯ ಊಚುಃ ॥

ಮಾ ಕ್ರೀಡ ಬಾಲವದ್ದೇವ ಜಹ್ಯಮುಂ ದೇವಕಂಟಕಂ ॥ ೮೫ ॥

---

೮೧. ಯೋಗದಿಂದ ಕೂಡಿದವನು ಮೃತ್ಯುವನ್ನು ವಂಚಿಸುವಂತೆ ಆ ಗದೆಯನ್ನು ವಿಷ್ಣುವು ವಂಚಿಸಿದನು. ಅಲ್ಲದೆ ಕೌಮೋದಕಿಯಿಂದ ಆತನನ್ನು ಹೊಡೆದನು

೮೨. ಮತ್ತೆ ಕೋಪಗೊಂಡು ಹಿರಣ್ಯಾಕ್ಷನು ಮುಷ್ಟಿಯಿಂದ ವಿಷ್ಣುವಿನ ಬಲಭುಜದ ಮೇಲೆ ಹೊಡೆದನು.

೮೩. ಅವರಿಬ್ಬರೂ ಎಡಗಡೆ ಬಲಗಡೆ ತಿರುಗುತ್ತಾ, ಹಿಂದುಮುಂದಕ್ಕೆ ಸುತ್ತುತ್ತ ಭ್ರಮಣಗಳನ್ನೂ ವಿಕ್ಷೇಪಣಗಳನ್ನೂ ಮಾಡುತ್ತ ಒಬ್ಬರು ಮಾಡಿದಂತೆ ಮತ್ತೊಬ್ಬರೂ ಮಾಡುತ್ತ ಯುದ್ಧಮಾಡಿದರು.

೮೪. ಆಗ ಬ್ರಹ್ಮಾದಿಗಳಾದ ದೇವತೆಗಳು ಅಂತರಿಕ್ಷದಲ್ಲಿ ನಿಂತು ಯುದ್ಧವನ್ನು ನೋಡುತ್ತಾ ಪ್ರಜೆಗಳಿಗೂ, ಋಷಿಗಳಿಗೂ, ದೇವತೆಗಳಿಗೂ, ಒಳ್ಳೆಯದಾಗಲೆಂದೆನ್ನುತ್ತಿದ್ದರು. ಮತ್ತು ವರಾಹ ರೂಪಿಯಾದ ವಿಷ್ಣುವನ್ನು ಕುರಿತು ಇಂತೆಂದರು.

೮೫. ಬ್ರಹ್ಮಾದಿಗಳು ಹೇಳಿದರು- ಎಲೈ ಸ್ವಾಮಿಯೇ! ಹುಡುಗರಂತೆ ಅವನೊಡನೆ ಆಡಬೇಡ. ದೇವಕಂಟಕನಾದ ಈ ದೈತ್ಯನನ್ನು ವಧಿಸು.

॥ ವ್ಯಾಸ ಉವಾಚ ॥

ತತೋ ವಿಷ್ಣುರ್ಮಹಾತೇಜಾ ವಾರಾಹವರೂಪಧೃತ್ ।
ಬ್ರಹ್ಮಾದ್ಯನುಮತಿಂ ಪ್ರಾಪ್ಯ ಚಕ್ರಂ ಪ್ರಾಕ್ಷಿಪದುಲ್ಬಣಂ ॥ ೮೬ ॥

ಸಹಸ್ರಸೂರ್ಯಸಂಕಾಶಂ ಸಹಸ್ರಾರಂ ಮಹಾಪ್ರಭಂ ।
ದೈತ್ಯಾಂತಕರಣಂ ರೌದ್ರಂ ಪ್ರಳಯಾಗ್ನಿಸಮಪ್ರಭಂ ॥ ೮೭ ॥

ತಚ್ಚಕ್ರಂ ವಿಷ್ಣುನಾ ಮುಕ್ತಂ ಹಿರಣ್ಯಾಕ್ಷಂ ಮಹಾಬಲಂ ।
ಚಕಾರ ಭಸ್ಮಸಾತ್ಸದ್ಯೋ ಬ್ರಹ್ಮಾದೀನಾಂ ಚ ಪಶ್ಯತಾಂ ॥ ೮೮ ॥

ದೈತ್ಯೇ ಹತೇ ಕ್ಷಯಂ ನೀತೇ ಚಕ್ರಂ ಚಾಗಮದಚ್ಯುತಂ ।
ತತೋ ಬ್ರಹ್ಮಾದಯೋ ದೇವಾಶ್ಶಕ್ರಮುಖ್ಯಾಶ್ಚ ಲೋಕಪಾಃ ।
ದೃಷ್ಟ್ವಾ ಚ ವಿಸ್ಮಯಂ ವಿಷ್ಣೋಸ್ಸ್ತುವಂತಿ ಸ್ಮ ಸಮಾಗತಾಃ ॥ ೮೯ ॥

ನ ತಾಸ್ಸ್ಮ ವಿಷ್ಣುಂ ಜಗದಾದಿಭೂತಂ
ಸುರಾಸುರೇಡ್ಯಂ ಜಗತಾಂ ಪ್ರಪಾಲಕಂ ।
ಯನ್ನಾಭಿಪದ್ಮಾತ್ಕಿಲ ಪದ್ಮಯೋನಿಃ
ಬಭೂವ ತಂ ವೈ ಶರಣಂ ಗತಾಸ್ಸ್ಮಃ ॥ ೯೦ ॥

---

೮೬. ವ್ಯಾಸನು ಹೇಳಿದನು- ಆಗ ವರಾಹರೂಪವನ್ನು ಧರಿಸಿರುವ ಶಕ್ತನಾದ ವಿಷ್ಣುವು ಬ್ರಹ್ಮ ಮುಂತಾದವರ ಮಾತಿನಂತೆ ಉಗ್ರವಾದ ಚಕ್ರವನ್ನು ಬಿಟ್ಟನು.

೮೭. ಆ ಚಕ್ರವು ಸಾವಿರ ಜನ ಸೂರ್ಯರಂತೆ ಪ್ರಕಾಶವಾಗಿದ್ದಿತು ಸಾವಿರ ಹಲ್ಲುಗಳಿದ್ದುವು. ಪ್ರಳಯ ಕಾಲದ ಅಗ್ನಿಗೆ ಸಮವಾಗಿ ದೈತ್ಯರಿಗೆ ನಾಶಕವಾಗಿದ್ದಿತು.

೮೮–೮೯. ವಿಷ್ಣುವು ಬಿಟ್ಟ ಆ ಚಕ್ರವು ಬಲಿಷ್ಠನಾದ ಆ ಹಿರಣ್ಯಾಕ್ಷನನ್ನು ಬ್ರಹ್ಮಾದಿಗಳ ಎದುರಿಗೆ ಕೊಂದಿತು. ಆ ದೈತ್ಯನನ್ನು ಕೊಂದು ಚಕ್ರವು ಮತ್ತೆ ವಿಷ್ಣುವಿನ ಬಳಿಗೆ ಬಂದಿತು. ಇದನ್ನು ನೋಡಿ ಬ್ರಹ್ಮಾದಿಗಳು ಜಯದಿಂದ ಸಂತೋಷಪಟ್ಟು ಎಲ್ಲರೂ ಆ ಸ್ವಾಮಿಯ ಬಳಿಗೆ ಬಂದು ಸ್ತುತಿಸಿದರು.

೯೦. ಜಗತ್ತಿಗೆ ಮೊದಲನೆಯವನಾದ, ದೇವದಾನವರಿಂದ ಹೊಗಳಲ್ಪಟ್ಟ ಜಗತ್ತನ್ನು ಕಾಪಾಡುವ ಬ್ರಹ್ಮನಿಗೆ ಉತ್ಪತ್ತಿಸ್ಥಾನನಾದ, ಸ್ವಾಮಿಯಾದ, ವಿಷ್ಣುವನ್ನು ಶರಣುಹೊಂದುತ್ತೇವೆ.

ನಮೋ ನಮೋ ಮತ್ಸ್ಯವಪುರ್ಧರಾಯ
ನಮೋಽಸ್ತು ತೇ ಕಚ್ಛಪರೂಪಧಾರಿಣೇಂ ।
ನಮಃ ಪ್ರಕುರ್ಮಶ್ಚ ನೃಸಿಂಹರೂಪಿಣೇ
ತಥಾಪುನರ್ವಾಮನರೂಪಧಾರಿಣೇ ॥ ೯೧ ॥

ನಮೋಽಸ್ತುತೇ ಕ್ಷತ್ರ ವಿನಾಶನಾಯ
ರಾಮಾಯ ರಾಮಾಯ ದಶಾಸ್ಯನಾಶಿನೇ ।
ಪ್ರಲಂಬಿದಕ್ರೇ ಶಿತಿವಾಸಸೇ ನಮೋ
ನಮೋಽಸ್ತು ಬುಧ್ಧಾಯ ಚ ದೈತ್ಯಮೋಹಿನೇ ॥ ೯೨ ॥

ಮ್ಲೇಚ್ಛಾಂತಕಾಯಾಪಿ ಚ ಕಲ್ಕಿನಾಮ್ನೇ
ನಮಃ ಪುನಃ ಕ್ರೋಡವಪುರ್ಧರಾಯ ।
ಜಗದ್ಧಿತಾರ್ಥಂ ಚ ಯುಗೇ ಯುಗೇ ಭವಾ೯
ಬಿಭರ್ತಿ ರೂಪಂ ತ್ವಸುರಾಭವಾಯ ॥ ೯೩ ॥

---

೯೧ ಮತ್ಸ್ಯಾವತಾರವನ್ನು ಮಾಡಿದ ಸ್ವಾಮಿಗೆ ನಮಸ್ಕಾರವು. ಕೂರ್ಮಾವತಾರವನ್ನು ಮಾಡಿದ (ಆಮೆ) ಸ್ವಾಮಿಗೆ ನಮಸ್ಕಾರವು. ನೃಸಿಂಹಾವತಾರವನ್ನೂ ಮತ್ತು ವಾಮನಾವತಾರವನ್ನೂ ಮಾಡಿದ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

೯೨. ಕ್ಷತ್ರಿಯರನ್ನು ನಾಶಮಾಡಿದ ಪರಶುರಾಮನಾದ ನಿನಗೆ ನಮಸ್ಕಾರವು. ರಾವಣನಾಶಕನಾದ ರಾಮಾವತಾರಮಾಡಿದ ನಿನಗೆ ನಮಸ್ಕಾರವು. ಪ್ರಲಂಬಾಸುರನನ್ನು ಕೊಂದ ಕೃಷ್ಣರೂಪಿಯಾದ ನಿನಗೆ ನಮಸ್ಕಾರವು. ದೈತ್ಯರನ್ನು ಮೋಹಿಸಲು ಬುದ್ಧಾವತಾರಮಾಡಿದ ನಿನಗೆ ನಮಸ್ಕಾರವು.

೯೩. ಮ್ಲೇಚ್ಛರನ್ನು ನಾಶಮಾಡಲು ಕಲ್ಕಿಯ ಅವತಾರವನ್ನು ಮಾಡಿದ ನಿನಗೆ ನಮಸ್ಕಾರವು. ವರಾಹಾವತಾರವನ್ನು ಮಾಡಿದ ನಿನಗೆ ನಮಸ್ಕಾರವು. ಅಸುರರನ್ನು ನಾಶಮಾಡಲು ಯುಗ ಯುಗದಲ್ಲಿಯೂ ಅವತರಿಸುವ ನಿನಗೆ ನಮಸ್ಕಾರವು.

ನಿಷೂದಿತೋಽಯಂ ಹ್ಯಧುನಾ ಕಿಲ ತ್ವಯಾ
ದೈತ್ಯೋ ಹಿರಣ್ಯಾಕ್ಷ ಇತಿ ಪ್ರಗಲ್ಭಃ ।
ಯಶ್ಚೇಂದ್ರಮುಖ್ಯಾನ್ಕಿಲ ಲೋಕಪಾಲಾ‌ನ್
ಸಂಹೇಲಯಾ ಚೈವ ತಿರಶ್ಚಕಾರ ॥ ೯೪ ॥

ಸ ವೈ ತ್ವಯಾ ದೇವಹಿತಾರ್ಥಮೇವ
ನಿಪಾತಿತೋ ದೇವವರ ಪ್ರಸೀದ ।
ತ್ವಮಸ್ಯ ವಿಶ್ವಸ್ಯ ವಿಸರ್ಗಕರ್ತಾ
ಬ್ರಾಹ್ಮೇಣ ರೂಪೇಣ ಚ ದೇವದೇವ ॥ ೯೫ ॥

ಪಾತಾ ತ್ವಮೇವಾಸ್ಯ ಯುಗೇ ಯುಗೇ ಚ
ರೂಪಾಣಿ ಧತ್ಸೇ ಸುಮನೋಹರಾಣಿ ।
ತ್ವಮೇವ ಕಾಲಾಗ್ನಿಹರಶ್ಚ ಭೂತ್ವಾ
ವಿಶ್ವಂ ಕ್ಷಯಂ ನೇಷ್ಯಸಿ ಚಾಂತಕಾಲೇ ॥ ೯೬ ॥

---

೯೪. ಇಂದ್ರಾದಿ ಲೋಕಪಾಲಕರನ್ನೂ ಲೀಲೆಯಿಂದಲೇ ತಿರಸ್ಕಾರಮಾಡಿದ್ದ ಬಲಶಾಲಿಯಾದ ಹಿರಣ್ಯಾಕ್ಷನನ್ನು ಈಗ ನೀನು ಕೊಂದಿರುವೆ.

೯೫. ಆ ದೈತ್ಯನನ್ನು ಕೂಡಲೇ ಲೋಕಹಿತಕ್ಕೋಸ್ಕರ ನೀನು ಕೊಂದೇ ಇದ್ದೀಯೆ. ಎಲೈ ಸ್ವಾಮಿಯೇ ! ಪ್ರಸನ್ನನಾಗು. ನೀನೇ ಲೋಕವನ್ನು ಬ್ರಹ್ಮ ರೂಪದಿಂದ ಸೃಷ್ಟಿಸುತ್ತೀಯೆ. ನಿನಗೆ ನಮಸ್ಕಾರವು.

೯೬. ಯುಗ ಯುಗದಲ್ಲಿಯೂ ಮನೋಹರವಾದ ರೂಪಗಳನ್ನು ಹೊಂದಿ ಈ ಪ್ರಪಂಚವನ್ನು ಕಾಪಾಡುತ್ತೀಯೆ. ಪ್ರಳಯಕಾಲದಲ್ಲಿ ನೀನೇನೆ ಕಾಲಾಗ್ನಿ ರೂಪನಾಗಿ ನಾಶಮಾಡುತ್ತೀಯೆ.

ಅತೋ ಭವಾನೇವ ಚ ವಿಶ್ವಕಾರಣಂ
ನ ತೇ ಪರಂ ಜೀವಮುಜೀವಮೀಶ ।
ಯತ್ಕಿಂಚ ಭೂತಂ ಚ ಭವಿಷ್ಯರೂಪಂ
ಪ್ರವರ್ತಮಾನಂ ಚ ತವೈವ ರೂಪಂ ॥ ೯೭ ॥

ಸರ್ವಂ ತ್ವಮೇವಾಸಿ ಚರಾಚರಾಖ್ಯಂ
ನ ಭಾತಿ ವಿಶ್ವಂ ತ್ವದೃತೇ ಚ ಕಿಂಚಿತ್ ।
ಅಸ್ತೀತಿ ನಾಸ್ತೀತಿ ಚ ಭೇದನಿಷ್ಠಂ
ತ್ವಯ್ಯೇವ ಬಾಢಂ ಸದಸತ್ಸ್ವರೂಪಂ ॥ ೯೮ ॥

ತತೋ ಭವಂತಂ ಕತಮೋಽಪಿ ದೇವ
ನ ಜ್ಞಾತುರ್ಮರ್ಹತ್ಯವಿಪಕ್ವಬುದ್ಧಿಃ ।
ಋತೇ ಭವತ್ಪಾದಪರಾಯಣಂ ಜನಂ
ತೇನಾಽಽಗತಾಃ ಸ್ಮಶ್ಶರಣಂ ಶರಣ್ಯಂ ॥ ೯೯ ॥

॥ ವ್ಯಾಸ ಉವಾಚ ॥

ತತೋ ವಿಷ್ಣುಃ ಪ್ರಸನ್ನಾತ್ಮಾ ಉವಾಚ ಚ ದಿವೌಕಸಃ ॥ ೧೦೦ ॥

---

೯೭. ಆದ್ದರಿಂದ ನೀನೇ ಪ್ರಪಂಚರೂಪವಾದ ಈ ಜಗತ್ತಿಗೆ ಕಾರಣನು. ನಿನ್ನಿಂದ ಯಾವ ಪ್ರಾಣಿಯೂ ಹೊರಗಾದುದಲ್ಲ ಭೂತ, ಭವಿಷ್ಯತ್ತು, ವರ್ತಮಾನಗಳೆಲ್ಲವೂ ನಿನ್ನದೇ ಆಗಿವೆ.

೯೮ ಚರಾಚರ ರೂಪವೆಲ್ಲವೂ ನೀನೇ ಆಗಿದ್ದೀಯೆ ನೀನಿಲ್ಲದಿದ್ದರೆ ಯಾವುದೂ ಪ್ರಕಾಶಿಸುವುದೇ ಇಲ್ಲ. ಇದೆ, ಇಲ್ಲ, ಒಳ್ಳೆಯದು ಕೆಟ್ಟದ್ದು. ಈ ರೀತಿಯಾಗಿ ಭೇದವನ್ನು ತೋರಿಸುವುದೂ ನಿನ್ನ ರೂಪವೇ.

೯೯. ಎಲೈ ಸ್ವಾಮಿಯೇ ! ನೀನು ಈರೀತಿಯಿರುವುದರಿಂದಲೇ ದಡ್ಡನಾದವನು ನಿನ್ನನ್ನು ತಿಳಿಯಲಾರನು. ನಿನ್ನ ಭಕ್ತನು ಮಾತ್ರ ನಿನ್ನನ್ನು ತಿಳಿದುಕೊಳ್ಳುವನು. ಆದ್ದರಿಂದ ರಕ್ಷಕನಾದ ನಿನ್ನ ಬಳಿಗೆ ಬಂದಿದ್ದೇವೆ.

೧೦೦. ವ್ಯಾಸನು ಹೇಳಿದನು– ಆಗ ಪ್ರಸನ್ನನಾದ ವಿಷ್ಣುವು ದೇವತೆಗಳನ್ನು ಕುರಿತು ಇಂತೆಂದನು.

॥ ವಿಷ್ಣುರುವಾಚ ॥

ತುಷ್ಟೋಽಸ್ಮಿ ದೇವಾ ಭದ್ರಂ ವೋ ಯುಷ್ಮತ್ಸ್ತೋತ್ರೇಣ ಸಾಂಪ್ರತಂ ।
ಯ ಇದಂ ಪ್ರಪಠೇದ್ಭಕ್ತ್ಯಾ ವಿಜಯಸ್ತೋತ್ರಮಾದರಾತ್ ॥ ೧೦೧ ॥

ನ ತಸ್ಯ ದುರ್ಲಭಂ ದೇವಾಸ್ತ್ರಿಷು ಲೋಕೇಷು ಕಿಂಚನ ।
ಯ ಇದಂ ಶೃಣುಯಾನ್ನಿತ್ಯಂ ಪಠೇದ್ವಾಪಿ ಸಮಾಹಿತಃ ॥ ೧೦೨ ॥

ನ ಭಯಂ ವಿದ್ಯತೇ ತಸ್ಯ ಇಹಲೋಕೇ ಪರತ್ರ ಚ ।
ಗವಾಂ ಶತಸಹಸ್ರಸ್ಯ ಸಮ್ಯಗ್ದತ್ತಸ್ಯ ಯತ್ಫಲಂ ॥ ೧೦೩ ॥

ತತ್ಫಲಂ ಸಮವಾಪ್ನೋತಿ ಕೀರ್ತನಾಚ್ಛ್ರವಣಾನ್ನರಃ ।
ಸರ್ವಕಾಮಪ್ರದಂ ನಿತ್ಯಂ ದೇವದೇವಸ್ಯ ಕೀರ್ತನಂ ॥
ಅತಃ ಪರಂ ಮಹಾಜ್ಞಾನಂ ನ ಭೂತಂ ತ್ವಾಗಮೇಷು ಚ ॥ ೧೦೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ದೇವಾಸುರಸಂಗ್ರಾಮ ಸಮಾಪ್ತೌ ವಿಜಯಸ್ತೋತ್ರಂನಾಮ ತ್ರಿಸಪ್ತತಿತಮೋಽಧ್ಯಾಯಃ

---

೧೦೧–೧೦೪　ಎಲೈ ದೇವತೆಗಳಿರಾ ! ನಿಮ್ಮ ಈ ಸ್ತೋತ್ರದಿಂದ ಸಂತೋಷ ಗೊಂಡಿದ್ದೇನೆ. ಈ ವಿಜಯ ಸ್ತೋತ್ರವನ್ನು ಭಕ್ತಿಯಿಂದ ಓದಿದವನಿಗೆ ಮೂರು ಲೋಕದಲ್ಲಿಯೂ ದುರ್ಲಭವಾದುದು ಇಲ್ಲವೇ ಇಲ್ಲ ಈ ಸ್ತೋತ್ರವನ್ನು ಭಕ್ತಿಯಿಂದ ಕೇಳಿದವನಿಗೂ, ಓದಿದವನಿಗೂ ಈ ಲೋಕ ಪರಲೋಕಗಳಲ್ಲಿ ಭಯವೆಂಬುದು ಇರುವುದೇ ಇಲ್ಲ. ಒಂದು ಲಕ್ಷ ಗೋವುಗಳನ್ನು ಶಾಸ್ತ್ರೋಕ್ತವಾಗಿ ದಾನಮಾಡಿದರೆ ಯಾವ ಫಲವು ಬರುವುದೋ ಆ ಫಲವನ್ನು ಈ ಸ್ತೋತ್ರವನ್ನು ಹೇಳುವುದರಿಂದಲೂ ಕೇಳುವುದರಿಂದಲೂ ಹೊಂದುತ್ತಾನೆ ಈ ದೇವದೇವನ ಕೀರ್ತನೆಯು ಸಮಸ್ತವಾದ ಇಷ್ಟಗಳನ್ನು ಕೊಡುತ್ತದೆ. ಇದಕ್ಕಿಂತಲೂ ಉತ್ತಮ ಜ್ಞಾನವನ್ನು ವೇದಾದಿಗಳಲ್ಲಿ ಹೇಳಿಯೇ ಇಲ್ಲ. ಇಲ್ಲವೂ ಇಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದ ದೇವಾಸುರಸಂಗ್ರಾಮಸಮಾಪ್ತಿಯಲ್ಲಿ ವಿಜಯಸ್ತೋತ್ರವೆಂಬ ಎಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಚತುಸ್ಸಪ್ತತಿತಮೋಽಧ್ಯಾಯಃ ॥



॥ ಸಂಜಯ ಉವಾಚ ॥

ಯೇಽಸುರಾಶ್ಚ ಮೃತಾ ಯುದ್ಧೇ ಸಮ್ಮುಖೇ ವಿಮುಖೇಽಪಿವಾ ।
ಗತಿಂ ತೇಷಾಮಹಂ ಬ್ರಹ್ಮನ್ಶ್ರೋತು ಮಿಚ್ಛಾಮಿ ತತ್ತ್ವತಃ ॥ ೧ ॥

ಅಸಂಖ್ಯಾತಾ ಇಮೇ ದೈತ್ಯಾಃ ತ್ರೈಲೋಕ್ಯೇ ಸಚರಾಚರೇ ।
ಅದ್ಯಾಪ್ಯಾಸನ್ಗತಾಃ ಕುತ್ರ ಏತನ್ಮೇ ಶಂಸ ಭೋ ಗುರೋ ॥ ೨ ॥

॥ ವ್ಯಾಸ ಉವಾಚ ॥

ಯೇ ಮೃತಾಸ್ಸಮ್ಮುಖೇ ಶೂರಾ ದೈತ್ಯಾನಾಂ ಪ್ರವರಾ ರಣೇ ।
ಸ್ವಯಂ ಪ್ರಾಪ್ಯ ಚ ದೇವತ್ವಂ ಭೋಗ್ಯಮಶ್ನಂತಿ ಶಾಶ್ವತಂ ॥ ೩ ॥

---

## ಎಪ್ಪತ್ತನಾಲ್ಕನೆಯ ಅಧ್ಯಾಯವು

೧. ಸಂಜಯನು ಹೇಳಿದನು- ಎಲೈ ಬ್ರಾಹ್ಮಣನೇ ! ಧೈರ್ಯದಿಂದಾಗಲಿ ಹೆದರಿಕೆಯಿಂದಾಗಲೀ ಯುದ್ಧಮಾಡಿ ಸತ್ತ ರಾಕ್ಷಸರಿಗೆ ಯಾವಗತಿ ಬಂದಿತೆಂಬುದನ್ನು ಕೇಳಬೇಕೆಂದಿದ್ದೇನೆ.

೨. ಚರಾಚರವಾದ ಈ ಮೂರುಲೋಕದಲ್ಲಿಯೂ ಬಹುಜನರು ದೈತ್ಯರು ಇದ್ದಾರೆ. ಈಗ ಅವರೆಲ್ಲರೂ ಎಲ್ಲಿಗೆ ಹೋಗಿರುವರು ಹೇಳು ?

೩. ವ್ಯಾಸನು ಹೇಳಿದನು- ಯಾವ ದೈತ್ಯರು ಯುದ್ಧದಲ್ಲಿ ಧೈರ್ಯದಿಂದ ಹಿಂತಿರುಗದೆ ಯುದ್ಧಮಾಡಿ ಸತ್ತರೋ ಅವರು ದೇವತಗಳಾಗಿ ಶಾಶ್ವತವಾದ ಸುಖವನ್ನು ಹೊಂದುತ್ತಾರೆ.

ಪ್ರಾಸಾದಾ ಯತ್ರ ಸೌವರ್ಣಾ ನಾನಾರತ್ನವಿಭೂಷಿತಾಃ ।
ಸರ್ವಕಾಮಪ್ರದಾ ವೃಕ್ಷಾಃ ಸ್ವರ್ಣದೀತೋಯಸಂಯುತಾಃ ॥ ೪ ॥

ಪದ್ಮೋತ್ಪಲಸುಕಲ್ಹಾರೈರ್ಗಂಧಾಢ್ಯೈರನ್ಯಪುಷ್ಪಕೈಃ ।
ದಧಿದುಗ್ಧಾಜ್ಯಖಂಡೈಶ್ಚ ಯುತಾ ಪುಷ್ಕರಿಣೀ ಶುಭಾ ॥ ೫ ॥

ಅತೀವ ರೂಪಸಂಪನ್ನಾಃ ಸದೈವ ನವಯೌವನಾಃ ।
ಯತ್ರ ಸಂತಿ ಸ್ತ್ರಿಯೋ ದಿವ್ಯಾಃ ಸರ್ವಾಭರಣಭೂಷಿತಾಃ ॥ ೬ ॥

ತತ್ರ ರಾಜ್ಯಂ ಪ್ರಕುರ್ವಂ. ತಥೈವ ವಸುಧಾತಳೇ ।
ಏವಂ ಜನ್ಮಾಷ್ಟಕಂ ಪ್ರಾಪ್ಯ ಧನಿನೋಧ್ಯಕ್ಷಮಂತ್ರಿಣಃ ॥ ೭ ॥

ಅರ್ಧಸಮ್ಮುಖಗಾತ್ರೇಣ ದಿವಮಶ್ನಂತಿ ಶಾಶ್ವತಂ ।
ವಿಮುಖಾಃ ಕಾತರಾ ಭೀತಾ ಯೇ ಚ ಮಾಯಾವಿನೋ ರಣೇ ॥ ೮ ॥

---

೪. ಅವರಿರುವ ಸ್ಥಳದಲ್ಲಿ ರತ್ನದಿಂದ ಅಲಂಕರಿಸಿದ ಚಿನ್ನದ ಮಹಡಿಯ ಮನೆಗಳಿರುತ್ತವೆ. ಅಲ್ಲಿರುವ ಮರಗಳೆಲ್ಲವೂ ಸಕಲ ಇಷ್ಟಗಳನ್ನೂ ಕೊಡುತ್ತವೆ. ಅಲ್ಲಿರುವ ನದಿಗಳೆಲ್ಲವೂ ಚಿನ್ನದ ಮರಗಳಿಂದಲೂ ಕೂಡಿವೆ.

೫. ಅಲ್ಲಿರತಕ್ಕ ಕೊಳಗಳು ಪದ್ಮ, ಉತ್ಪಲ, ಕಲ್ಹಾರ ಮುಂತಾದ ಪುಷ್ಪಗಳಿಂದ ಕೂಡಿವೆ. ಹಾಲು, ಮೊಸರು, ತುಪ್ಪ ಮುಂತಾದುವುಗಳಿಂದ ಪೂರ್ತಿಯಾಗಿ ತುಂಬಿವೆ.

೬. ಅಲ್ಲಿರುವ ಸ್ತ್ರೀಯರು ಬಹುರೂಪವತಿಯರು. ಹೆಚ್ಚು ಯೌವನವಂತೆಯರು. ಎಲ್ಲಾ ಆಭರಣಗಳಿಂದಲೂ ಕೂಡಿದವರು.

೭-೧೨. ಅಲ್ಲಿಯೂ ರಾಜ್ಯಭಾರಮಾಡುತ್ತಾರೆ. ಮತ್ತು ಭೂಮಿಯಲ್ಲಿ ಹುಟ್ಟಿ ಅಲ್ಲಿಯು ರಾಜ್ಯಭಾರಮಾಡುತ್ತಾರೆ. ಹೀಗೆ ಎಂಟು ಜನಗಳಿರುತ್ತಾರೆ. ಅನಂತರ ಧನಿಕರಾಗಿಯೂ, ಮಂತ್ರಿಗಳಾಗಿಯೂ ಆಗುತ್ತಾರೆ. ಅರ್ಧಪಾಲು ತಿರುಗಿದ ಶರೀರ ಉಳ್ಳವರಾಗಿ ಪ್ರಭುಗಳೊಡನೆ ಮಾತಾಡುತ್ತ ಶಾಶ್ವತವಾದ ಸ್ವರ್ಗವನ್ನು ಅನುಭಸುತ್ತಾ ಇರುತ್ತಾರೆ. ಯುದ್ಧದಲ್ಲಿ ಹಿಂತಿರುಗಿದವರೂ ಹೆದರಿದವರೂ, ಧೈರ್ಯವಿಲ್ಲದವರೂ,

ತೇ ಯಾಂತಿ ನಿರಯಂ ಘೋರಂ ಯೇ ಚ ದೇವದ್ವಿಜದ್ವಿಷಃ ।
ಪತಿತಂ ಮೂರ್ಛಿತಂ ಭಗ್ನಮನ್ಯಯೋದ್ಧಾರಮಾಹವೇ ॥ ೯ ॥

ಹಂತಾರೋ ನಿರಯಂ ಯಾಂತಿ ತೇಚ ಮ್ಲೇಚ್ಛಾಃ ಕುವಾಚಕಾಃ ।
ಪರನ್ಯಾಸಾಪಹರ್ತಾರೋ ವಿಮುಖಾಸ್ಸಂತಿ ತತ್ತ್ವತಃ ॥ ೧೦ ॥

ರಾತ್ರೌ ವಾ ವಿಪಿನೇ ನಷ್ಟೇ ಚೋರಾಸ್ಸಾಹಸಕಾರಿಣಃ ।
ಸರ್ವಾಭಕ್ಷ್ಯರತಾ ಮೂಢಾ ಮ್ಲೇಚ್ಛಾಃ ಗೋಬ್ರಹ್ಮಘಾತಕಾಃ ॥ ೧೧ ॥

ಕುವಾಚಕಾಃ ಪರೇಮ್ಲೇಚ್ಛಾ ಏತೇ ಯೇ ಕ್ರೂರಯೋನಯಃ ।
ತೇಷಾಂ ಪೈಶಾಚಿತೀ ಭಾಷಾ ಲೋಕಾಚಾರೋ ನ ವಿದ್ಯತೇ ॥ ೧೨ ॥

ನಾಸ್ತಿ ಶೌಚಂ ತಪೋಜ್ಞಾನಂ ನ ದೈವಂ ಪಿತೃತರ್ಪಣಂ ।
ದಾನಶ್ರಾದ್ಧಾದಿಕಂ ಯಜ್ಞೇ ಸುರಾಣಾಂ ಚ ಪ್ರಪೂಜನಂ ॥ ೧೩ ॥

ಪಿತೄಣಾಂ ಚ ನ ಶುಶ್ರೂಷಾ ದ್ವಿಜದೇವತಪಸ್ವಿನಾಂ ।
ಜ್ಞಾನಲೋಪಾದತಸ್ತೇಷಾಂ ಮಲಶೌಚಂ ನ ವಿದ್ಯತೇ ॥ ೧೪ ॥

---

ಕಪಟವನ್ನಾಚರಿಸುವವರೂ, ಮತ್ತು ದೇವತೆಗಳನ್ನೂ ಬ್ರಾಹ್ಮಣರನ್ನೂ ದ್ವೇಷಿಸುವವರೂ ಘೋರವಾದ ನರಕವನ್ನು ಹೊಂದುತ್ತಾರೆ ಕೆಳಗೆ ಬಿದ್ದವನನ್ನೂ, ಮೂರ್ಛೆಗೊಂಡವನನ್ನೂ ಬೇರೆಯವನ ಕೂಡ ಯುದ್ಧಮಾಡುತ್ತಿರುವವನ್ನೂ ಕೊಂದರೆ ಅವನು ನರಕವನ್ನು ಹೊಂದುವನು. ಅನಂತರ ಕೆಟ್ಟಮಾತುಗಳನ್ನಾಡುವ ಮ್ಲೇಚ್ಛನಾಗಿ ಹುಟ್ಟುತ್ತಾನೆ ಪರರ ನ್ಯಾಸವನ್ನು ಕದಿಯುವವರು, ಧರ್ಮದಿಂದ ದೂರವಾದವರು ರಾತ್ರಿಯಲ್ಲಿ ಕಾಡಿನಲ್ಲಿ ತೊಂದರೆಕೊಡುವವರು, ನಷ್ಟ ಸ್ವತ್ತನ್ನು ಅಪಹರಿಸುವವರು, ಕಳ್ಳರು, ಸಾಹಸಕೆಲಸವನ್ನು ಮಾಡುವವರು, ತಿನ್ನಬಾರದ್ದನ್ನು ತಿನ್ನುವವರು, ಗೋವು ಬ್ರಾಹ್ಮಣರನ್ನು ಕೊಲ್ಲುವವರು, ಕೆಟ್ಟಮಾತನ್ನಾಡುವವರು, ದುಷ್ಟರು ಇವರು ನರಕವನ್ನು ಅನುಭವಿಸುತ್ತಾರೆ ಈ ಲೋಕದಲ್ಲಿ ಪಿಶಾಚಿ ಭಾಷೆಯನ್ನಾಡುತ್ತಾರೆ. ಇವರುಗಳಿಗೆ ಲೋಕ ನಡತೆಯಿಲ್ಲ.

೧೩-೧೪. ಅವರಿಗೆ ಜ್ಞಾನವಿಲ್ಲದಿರುವುದರಿಂದ ಶೌಚವಿಲ್ಲ. ತಪಸ್ಸಿಲ್ಲ, ಜ್ಞಾನವಿಲ್ಲ, ದೇವತರ್ಪಣ ಪಿತೃತರ್ಪಣಗಳಿಲ್ಲ, ದಾನಶ್ರಾದ್ಧಗಳನ್ನು ಮಾಡುವುದಿಲ್ಲ, ಯಾಗ ಮಾಡುವುದಿಲ್ಲ, ಪಿತೃಗಳನ್ನು ಶುಶ್ರೂಷೆ ಮಾಡುವುದಿಲ್ಲ. ಈ ಜ್ಞಾನವಿಲ್ಲದಿರುವುದರಿಂದಲೇ ಮಲಶೌಚವನ್ನೂ ಮಾಡಿಕೊಳ್ಳುವುದಿಲ್ಲ.

ಮಾತರಂ ಭಗಿನೀಂ ಚಾನ್ಯಾಂ ಗೃಹಿಣೀಂ ಕಾಮಯನ್ತಿ ಚ ।
ಶರ್ಖ್ಯೇ ವಿಪರ್ಯಯೋ ಲೋಕಾತ್ತದಾಚಾರೋ ಮಲೀಮಸಃ ॥ ೧೫ ॥

ತಾರ್ಕ್ಷ್ಯರ್ಸ್ಯೋದ್ವಮನಾನಾಂ ಚ ಅನ್ಯೇಷಾಂ ಗೋತ್ರವಾಸಿನಾಂ ।
ಕುಲೇ ಜಾತಾಃ ಸದಾ ದೈತ್ಯಾಃ ಯೇಷಾಂ ಪುಣ್ಯಮಕಾರಣಂ ॥ ೧೬ ॥

ದುರ್ಗತಿಂ ಚ ಮೃತಾ ಯಾಂತಿ ದ್ವಿಜಸ್ತ್ರೀಶಿಶುಘಾತಿನಃ ।
ಗವಾಶಿನೋ ದುರಾತ್ಮಾನೋ ಹ್ಯಭಕ್ಷ್ಯಭಕ್ಷಣೇ ರತಾಃ ॥ ೧೭ ॥

ಕೀಟಯೋನಿಂ ವ್ರಜಂತ್ಯೇತೇ ತರವಶ್ಚ ಪಿಪೀಲಿಕಾಃ ।
ನ ಮಂತ್ರೇಷು ನ ದೇವೇಷು ಕಲ್ಪಂತೇ ತೇ ಸುರದ್ವಿಷಃ ॥ ೧೮ ॥

ಅಗ್ರಜಸ್ಸಹಜಸ್ತೇಷಾಂ ಸದೃಗೋಗ್ರಾನ್ಯವೃತ್ತಯಃ ।
ಲೋಮಕೇಶಭುಜಃ ಕಾಕಾಃ ಕವ್ಯಭಕ್ಷರತಾ ಭುವಿ ॥ ೧೯ ॥

---

೧೫. ತಾಯಿ, ತಂಗಿ, ಬೇರೆಯವನ ಹೆಂಡರು, ಇವರನ್ನು ರಮಿಸಲು ಅಪೇಕ್ಷಿಸುತ್ತಾರೆ. ಲೋಕದ ನಡತೆಗಿಂತಲೂ, ಅವರ ನಡತೆಯು ವ್ಯತ್ಯಾಸವಾಗಿರುವುದು. ಆದ್ದರಿಂದಲೇ ಅವರ ಆಚಾರವು ಕೆಟ್ಟುದು

೧೬. ಗರುಡನ ಕಕ್ಕುಲಿನ ಜಾತಿಯವರಾದ (ಕಿರಾತರು) ಬೇರೆಯ ಜಾತಿಯವರ ಕುಲದಲ್ಲಿ ಈ ದೈತ್ಯರು ಹುಟ್ಟುತ್ತಾರೆ. ಇವರಿಗೆ ಪುಣ್ಯವು ಬರಬೇಕಾದರೆ ಆಕಸ್ಮಾತ್ತಾಗಿ ಬರಬೇಕು.

೧೭. ದ್ವಿಜರು, ಸ್ತ್ರೀಯರು ಶಿಶುಗಳು ಇವರನ್ನು ಕೊಲ್ಲುತ್ತಾ ಗೋವುಗಳನ್ನು ತಿನ್ನುತ್ತಾ ಅಭಕ್ಷ್ಯಗಳನ್ನು ತಿನ್ನುತ್ತಾ ಇದ್ದು ಸತ್ತಮೇಲೆ ನರಕವನ್ನು ಹೊಂದುತ್ತಾರೆ.

೧೮. ಇವರು ಹುಳುಹುಪ್ಪಟೆಗಳಾಗಿಯೂ, ಮರಗಳು, ಇರುವೆಗಳಾಗಿಯೂ ಹುಟ್ಟುತ್ತಾರೆ. ಮಂತ್ರ ದೇವತೆಗಳಿಗೆ ಇವರ ಬಳಿಯಲ್ಲಿ ಸ್ಥಾನವಿಲ್ಲ.

೧೯. ಇವರು ಅಣ್ಣತಮ್ಮಂದಿರನ್ನೂ ಅವರಲ್ಲಿ ನಡವಳಿಕೆಯನ್ನೂ ನೋಡುವುದೇ ಇಲ್ಲ. ದುರಾಚಾರವುಳ್ಳವರಾಗಿರುತ್ತಾರೆ. ಇವರು ಕೇಶ (ದೊಡ್ಡ ಕೂದಲು) ರೋಮ (ಸಣ್ಣ ಮೈ ಕೂದಲು) ಇವುಗಳಿಂದ ದುಷ್ಟವಾದ ಪದಾರ್ಥಗಳನ್ನೂ, ಪಿತೃಗಳಿಗೆ ಹಾಕತಕ್ಕ ಅನ್ನ ಮುಂತಾದುವನ್ನೂ ತಿನ್ನುವ ಕಾಗೆಯಾಗಿ ಭೂಮಿಯಲ್ಲಿ ಹುಟ್ಟುತ್ತಾರೆ.

ಸಾಹಸಾಚ್ಚ ವ್ರತಂ ದಾನಂ ಸ್ನಾನಂ ಯಜ್ಞಾದಿಕಂ ಚ ಯತ್ ।
ಮತ್ಸ್ಯಮಾಂಸಾದಿಷು ಪ್ರೀತಾ ಮೃಷಾವಚನಭಾಷಿಣಃ ॥ ೨೦ ॥

ಸದಾಕಾಮಾಸ್ಸದಾ ಲೋಭಾಸ್ಸದಾ ಕ್ರೋಧಮದಾನ್ವಿತಾಃ ।
ವಧಬಂಧರತೋದ್ವೇಗಾ ದ್ಯೂತಸಂಗೀತಸಂಪ್ರಿಯಾಃ ॥ ೨೧ ॥

ಕುಭೃತ್ಯಾಃ ಕುಜನಪ್ರೀತಾಃ ಪೂತಿಗಂಧರತಾ ನರಾಃ ।
ನ ದೇವೇಷು ನ ವಿತ್ತೇಷು ನ ಧರ್ಮಶ್ರವಣೇಷು ಚ ॥ ೨೨ ॥

ಸ್ತೋತ್ರಮಂತ್ರಾದಿಕೇ ಪುಣ್ಯೇ ಯಥಾಕಾರ್ಯೇಷ್ವನಿಶ್ಚಯಾಃ ।
ಬಹುರೋಗಾದಿರೋಷಾಚ್ಚ ಬಹುರೂಪಪರಿಚ್ಛದಾಃ ॥ ೨೩ ॥

ನರಜಾತಿಷು ದೈತ್ಯಾನಾಂ ಚಿಹ್ನಾನ್ಯೇತಾನಿ ಭೂತಲೇ ।
ನ ಜಾನಂತಿ ಪರಂ ಲೋಕಂ ನ ಗುರುಂ ಸ್ವಂ ನ ಚಾಪರಂ ॥ ೨೪ ॥

---

೨೦. ಇವರು ವ್ರತದಾನ ಸ್ನಾನಗಳನ್ನೂ ಯಜ್ಞಾದಿಗಳನ್ನೂ ಕೆಟ್ಟರೀತಿಯಲ್ಲಿ ಪೌರುಷದಿಂದ ಮಾಡುತ್ತಾರೆ. ಮೀನು, ಮಾಂಸ ಇವೇ ಮೊದಲಾದುವುಗಳಿಂದ ಪ್ರೀತಿಪಡುತ್ತಾರೆ. ಸುಳ್ಳನ್ನು ಹೇಳುವುದರಲ್ಲಿ ಇವರಿಗೆ ಬಹು ಪ್ರೀತಿ.

೨೧-೨೪. ಯಾವಾಗಲೂ ಕಾಮಿಗಳಾಗಿಯೂ, ಲೋಭಿಗಳಾಗಿಯೂ, ಕೋಪಿಗಳಾಗಿಯೂ, ಮದಿಸಿದವರಾಗಿಯೂ ಇರುತ್ತಾರೆ. ವಧೆಮಾಡುವುದು, ಬಂಧನದಲ್ಲಿಡುವುದು ಇವುಗಳಲ್ಲಿ ಬಹು ಪ್ರೀತಿಯುಳ್ಳವರು. ಉದ್ವೇಗ (ವಿಮರ್ಶೆ ಯಿಲ್ಲದ ಕೋಪ) ಜೂಜು ಸಂಗೀತಗಳಲ್ಲಿ ಪ್ರೀತಿಯುಳ್ಳವರು. ಅಯೋಗ್ಯತನದಿಂದ ಸೇವೆಮಾಡುತ್ತಾರೆ. ಅಯೋಗ್ಯರಲ್ಲಿ ಪ್ರೀತಿಯಿಡುತ್ತಾರೆ. ದುರ್ವಾಸನೆಯಲ್ಲಿ ಇವರು ಬಹು ಆಸಕ್ತಿಯುಳ್ಳವರಾಗಿರುತ್ತಾರೆ. ದೇವತೆಗಳು, ಹಣಗಳು, ಧರ್ಮಶ್ರವಣ, ಸ್ತೋತ್ರಕೀರ್ತನೆ, ಪುಣ್ಯಕೆಲಸ, ಇವುಗಳೊಂದರಲ್ಲಿಯೂ ಅವರಿಗೆ ನಂಬಿಕೆಯಿರು ವುದಿಲ್ಲ. ಮಾಡತಕ್ಕ ಕೆಲಸದಲ್ಲಿ ನಂಬಿಕೆಯಿಲ್ಲ, ಬಹು ರೋಗವುಳ್ಳವರು, ಬಹು ಕೋಪವುಳ್ಳವರು, ನಾನಾ ಬಗೆಯ ಬಟ್ಟೆಗಳನ್ನು ಹಾಕಿಕೊಳ್ಳುತ್ತಾರೆ. ಇವೆಲ್ಲವೂ ಪೂರ್ವಜನ್ಮದಲ್ಲಿ ಈ ಮನುಷ್ಯರು ದೈತ್ಯರಾಗಿದ್ದರೆಂಬುದಕ್ಕೆ ಗುರುತುಗಳು. ಇವರಿಗೆ ಪರಲೋಕವೆಂಬುದೇ ಗೊತ್ತಿಲ್ಲ. ಗುರುಗಳು, ತನ್ನವರು, ಪರರು, ಎಂಬುದೇ ಇವರಿಗೆ ತಿಳಿದಿರುವುದಿಲ್ಲ.

ಗರ್ಭಪೂರಣಮಿಚ್ಛಂತಿ ನಾತಿಥಿಂ ನ ಗುರುದ್ವಿಜಾನ್ ।
ನ ದೇವಂ ನ ಸುತಂ ಗೋತ್ರಂ ನ ಮಿತ್ರಂ ನ ಚ ಬಾಂಧವಂ ॥ ೨೫ ॥

ಸ್ವಪ್ನೇ ದಾನಂ ನ ಜಾನಂತಿ ಭಕ್ಷಣಾಪರಚ್ಛದಂ ।
ಗೋಪಾಯನ್ತಿ ಧನಂ ಯಸ್ಮಾತ್ತೇ ಯಕ್ಷಾ ನರರೂಪಿಣಃ ॥ ೨೬ ॥

ಪ್ರಾಣಾಂತೇಽಪಿ ಧನಂ ಕಿಂಚಿನ್ನ ದದಂತೇ ಚ ರಾಜನಿ ।
ತೇ ಯಕ್ಷಾ ದುರ್ಗತಿಸ್ಥಾಶ್ಚ ಪರಾರ್ಥೇ ಭಾರವಾಹಕಾಃ ॥ ೨೭ ॥

ಪ್ರೇತಾನಾಂ ಲಕ್ಷಣಂ ಯದ್ವಾ ಸರ್ವಲೋಕವಿಗರ್ಹಿತಂ ।
ಸ್ತ್ರೀಣಾಂ ಚ ಪುರುಷಾಣಾಂ ಚ ಶೃಣುಷ್ವೈಕಮನಾ ಮಮ ॥ ೨೮ ॥

ಮಲಪಂಕಧರಾ ನಿತ್ಯಂ ಸತ್ಯಶೌಚವಿವರ್ಜಿತಾಃ ।
ದಂತಕುಂತಳವಸ್ತ್ರಾಣಾಂ ವಪುಷೋ ಮಲಸಂಚಯಾಃ ॥ ೨೯ ॥

---

೨೫. ಹೊಟ್ಟೆ ತುಂಬಿಕೊಳ್ಳುವುದೊಂದನ್ನು ಮಾತ್ರ ಇವರು ಬಲ್ಲರು. ಅತಿಥಿಗಳು, ಗುರುಗಳು, ಬ್ರಾಹ್ಮಣರು, ದೇವತೆಗಳು, ಮಕ್ಕಳು, ಗೋತ್ರದವರು, ಮಿತ್ರರು, ಬಂಧುಗಳು ಇವ್ಯಾವುದೂ ಅವರಿಗೆ ಗೊತ್ತಿಲ್ಲ. ಇವ್ಯೊಂದನ್ನೂ ಅವರು ನೋಡುವುದೂ ಇಲ್ಲ.

೨೬. ಇವರು ದಾನಮಾಡುವುದನ್ನು ಕನಸಿನಲ್ಲಿಯೂ ಕಾಣರು. ತಿಂಡಿ ಅನ್ನ. ಬಟ್ಟೆಗಳನ್ನು ಅನುಭವಿಸುವುದೇ ಇಲ್ಲ ಇವರು ಹಣವನ್ನು ಗುಟ್ಟಾಗಿಟ್ಟು ಕಾಪಾಡುತ್ತಾರೆ. ಈ ವಿಷಯದಲ್ಲಿ ಇವರನ್ನು ಮನುಷ್ಯರೂಪವುಳ್ಳ ಯಕ್ಷರೆಂದೆನ್ನ ಬಹುದು.

೨೭. ಪ್ರಾಣಹೋದರೂ ಕೂಡ ಹಣವನ್ನು ಸ್ವಲ್ಪವೂ ಕೊಡುವುದಿಲ್ಲ. ರಾಜನಿಗೂ ಕೊಡುವುದಿಲ್ಲ. ಇವರು ಭೂಲೋಕವನ್ನು ಹೊಂದಿದ ಯಕ್ಷರು. ಪರರಿಗೋಸ್ಕರ ಭಾರವನ್ನು ಹೊರತಕ್ಕವರು.

೨೮. ಪ್ರೇತಗಳ ಲಕ್ಷಣವಾದರೋ ಕೇವಲ ಲೋಕನಿಂದಿತವು. ಹೆಂಗಸರೇ ಆಗಲಿ, ಗಂಡಸರಾಗಲಿ, ಪ್ರೇತರಾದರೆ ಅವರ ಆಚಾರವು ಲೋಕನಿಂದಿತವು. ಅದನ್ನು ಹೇಳುವೆನು ಕೇಳು.

೨೯. ಯಾವಾಗಲೂ ಕೊಳಕರಾಗಿರುತ್ತಾರೆ. ಸತ್ಯ, ಶೌಚಗಳೆಂಬುದೇ ಇರುವುದಿಲ್ಲ. ಹಲ್ಲು, ತಲೆ, ವಸ್ತ್ರ, ದೇಹಗಳು ಯಾವಾಗಲೂ ಕೊಳಕಾಗಿರುತ್ತವೆ.

ಗೃಹಪೀಠಾತಿಪಾತ್ರಾಣಾಂ ಸಕೃಚ್ಛೌಚಂ ನ ರೋಚತೇ ।
ನ ಪಶ್ಯಂತಿ ಸುಖಂ ಸ್ತ್ರೀಣಾಂ ವಿಶಂತಿ ಕಾನನೇ ದ್ರುತಂ ॥ ೩೦ ॥

ವಿಘಸೋಚ್ಛಿಷ್ಟಪೂತೀನಾಂ ಭಕ್ಷಣೇಭಿರತಾ ಭುವಿ ।
ಅನ್ನಂ ಪಾನಂ ಚ ಶಯನಮಂಧಕಾರೇಷು ರೋಚತೇ ॥ ೩೧ ॥

ಕದಾಚಿತ್ಸ್ವಚ್ಛತಾ ನಾಸ್ತಿ ಕ್ವಚಿದ್ವಾ ಶುಚಿತಾ ತನೌ ।
ಲಕ್ಷಣಂ ನರಲೋಕೇಷು ಪ್ರೇತಾನಾಮೀದೃಶಂ ಕಿಲ ॥ ೩೨ ॥

ಹಿತಾಹಿತಂ ನ ಜಾನಂತಿ ಮಿತ್ರಾ ಮಿತ್ರಂ ಗುಣಾಗುಣಂ ।
ಪಾಪಪುಣ್ಯಾದಿಕಂ ಸ್ಥಾನಂ ಸ್ಥಾನಂ ದೇವದ್ವಿಜಾರ್ಚನಂ ॥ ೩೩ ॥

ಅರಿಂ ಮಿತ್ರಮುದಾಸೀನಂ ನ ವಿಂದಂತಿ ಸ್ವಭಾವತಃ ।
ಮರ್ತ್ಯಸ್ಥಾಃ ಪಶವಸ್ತೇ ಚ ಜ್ಞಾಯಂತೇ ಬುದ್ಧಿಸಮ್ಮತೈಃ ॥ ೩೪ ॥

---

೩೦. ಮನೆ ಆಸನಗಳು, ಪಾತ್ರೆಗಳು ಇವನ್ನು ಒಂದು ಬಾರಿಯಾದರೂ, ತೊಳೆಯಬೇಕೆನ್ನಿಸುವುದಿಲ್ಲ. ಸ್ತ್ರೀಯರನ್ನು ಸುಖವಾಗಿಡಬೇಕೆಂಬುದೇ ಮನಸ್ಸಿನಲ್ಲಿರುವುದಿಲ್ಲ. ಕಾಡಿಗಾದರೂ ಧೈರ್ಯದಿಂದ ನುಗ್ಗುತ್ತಾರೆ.

೩೧. ಅವರು ಶೇಷವಾದುದು, ಎಂಜಲು, ದುರ್ವಾಸನೆ ಬಂದಿರುವುದು ಇವನ್ನು ತಿನ್ನುವುದರಲ್ಲಿ ಆಸೆಯುಳ್ಳವರಾಗಿರುತ್ತಾರೆ. ಊಟಮಾಡುವುದು, ನೀರು ಕುಡಿಯುವುದು, ಮಲಗುವುದು, ಇವು ಅವರಿಗೆ ಕತ್ತಲೆಯಲ್ಲಿಯೇ ಹಿತವಾಗಿರುತ್ತವೆ.

೩೨. ಸ್ವಚ್ಛವಾಗಿ ಇರುವುದೇ ಇಲ್ಲ ದೇಹದಲ್ಲಿ ಕೊಂಚ ಹೊತ್ತಾದರೂ ಶುಚಿಯಾಗಿರುವುದೇ ಇಲ್ಲ. ಪ್ರೇತರಾಗಿದ್ದವರ ಲಕ್ಷಣಗಳು ಈರೀತಿಯಿರುತ್ತವೆ.

೩೩. ಒಳ್ಳೆಯದು ಕೆಟ್ಟದ್ದನ್ನು ಇವರು ತಿಳಿಯರು. ಶತ್ರು ಮಿತ್ರರನ್ನೂ ಗುಣ ದೋಷಗಳನ್ನೂ ತಿಳಿಯುವುದಿಲ್ಲ. ಪಾಪಪುಣ್ಯಗಳ ಯೋಗ್ಯತೆ, ದೇವತೆಗಳು, ಬ್ರಾಹ್ಮಣರ ಪೂಜೆಯ ಯೋಗ್ಯತೆಗಳನ್ನು ತಿಳಿಯರು

೩೪. ಶತ್ರುಗಳು ಮಿತ್ರರು, ಉದಾಸೀನರನ್ನೂ ಸರಿಯಾಗಿ ತಿಳಿಯರು. ಬುದ್ಧಿವಂತರು ಅವರನ್ನು ಮನುಷ್ಯಲೋಕದಲ್ಲಿರುವ ಪಶುಗಳೆಂದು ತಿಳಿದಿರುತ್ತಾರೆ.

ಬುದ್ಧ್ಯಾ ನಾನಾತ್ವಭಾವಾಶ್ಚ ಬ್ರುವಂತಿ ಚ ಮೃಷಾ ಭುವಿ ।
ಯಕ್ಷರೂಪಾ ನರಾಸ್ತೇ ಚ ಸರ್ವಕರ್ಮಬಹಿಷ್ಕೃತಾಃ ॥ ೩೫ ॥

ಏಷಾಂ ಭೇದಂ ಪ್ರವಕ್ಷ್ಯಾಮಿ ಲಕ್ಷಣಂ ಧರಣೀತಲೆ ।
ವಿಜಾತಾ ಮರ್ತ್ಯಲೋಕೇಷು ಪಾಪಸ್ಯೈವಾನುರೂಪತಃ ॥ ೩೬ ॥

ಮಲೀಮಸಭುವಿ ಪ್ರಸ್ಥಂ ನಾಗರಂ ಛದ್ಮರೂಪಿಣಂ ।
ವಿಘಸಾದಿಪ್ರಭೋಕ್ತಾರಂ ಕಾಕಮಾಹುರ್ಮನೀಷಿಣಃ ॥ ೩೭ ॥

ಅಭಕ್ಷ್ಯೇ ನಿರತಃ ಪಾಪಃ ಕುಕ್ಕುರಃ ಪೂತಿಸಂಪ್ರಿಯಃ ।
ಪ್ರವೃತ್ತಃ ಸರ್ವಗುಹ್ಯೇಷು ಭಕ್ಷ್ಯಾಭಕ್ಷ್ಯ ಸಜೀವನಃ ॥ ೩೮ ॥

ಭೂಮ್ಯಾಂ ಪಶ್ವಾದಿಯೋನೀನಾಂ ಕುಲೇಷು ಪ್ರಾಪ್ತಸಂಭವಾಃ ।
ಶುನೋ ವಿಗೃಹ್ಯ ಹಸ್ತೇನ ಮ್ಲೇಚ್ಛಾನಾಂ ಭಕ್ಷಣಪ್ರಿಯಾಃ ॥ ೩೯ ॥

---

೩೫. ಬುದ್ಧಿಯು ಸ್ಥಿಮಿತವಿಲ್ಲದೇ ನಾನಾಬಗೆಯಲ್ಲಿ ಓಡುತ್ತದೆ. ವ್ಯರ್ಥವಾಗಿ ಸುತ್ತುತ್ತಿರುತ್ತಾರೆ. ಅವರು ಕರ್ಮಗಳಿಂದ ಹೊರಗಾದವರಾಗಿ ಯಕ್ಷರೂಪವಾದ ನರರಾಗಿರುತ್ತಾರೆ.

೩೬. ಇವರ ಲಕ್ಷಣಗಳನ್ನು ಹೇಳುತ್ತೇನೆ. ಇವರು ಭೂಮಿಯಲ್ಲಿ ಪಾಪಕ್ಕೆ ಅನುಗುಣವಾಗಿ ಕಾಣುತ್ತಾರೆ.

೩೭. ಕೊಳಕಾದ ಜಾಗದಲ್ಲಿ ಹುಟ್ಟುತ್ತಾರೆ ಕಪಟಿಗಳಾಗಿ ನಗರವಾಸಿಗಳಾಗಿ ಇರುತ್ತಾರೆ. ಕಳೆದುಳಿದುದನ್ನು ತಿನ್ನುತ್ತಾರೆ. ಇಂತಹವರನ್ನು ಕಾಗೆಯೆಂದೆನ್ನುತ್ತಾರೆ.

೩೮. ಆ ಪಾಪಿಯು ತಿನ್ನಬಾರದುದನ್ನು ತಿನ್ನುವುದರಲ್ಲಿಯೇ ಪ್ರೀತಿ ಉಳ್ಳವನಾಗಿರುತ್ತಾನೆ. ನಾಯಾಗಿ ಹುಟ್ಟುತ್ತಾನೆ. ದುರ್ಗಂಧದಲ್ಲಿ ಪ್ರಿಯನು ರಮಿಸಲು ಅವರಿವರೆಂಬ ಭೇದವೇ ಇಲ್ಲ. ತಿನ್ನುವುದು, ತಿನ್ನಬಾರದ್ದು ಇವೆಲ್ಲವನ್ನೂ ತಿಂದು ಜೀವನ ಮಾಡುತ್ತಾನೆ.

೩೯. ಇವರು ಭೂಮಿಯಲ್ಲಿ ನೀಚಯೋನಿಗಳಲ್ಲಿ ಹುಟ್ಟುತ್ತಾರೆ. ಕೈಯಿಂದ ನಾಯಿಗಳನ್ನು ಮುಟ್ಟುತ್ತಾರೆ. ಮ್ಲೇಚ್ಛರು ತಿನ್ನುವ ತಿಂಡಿಯಲ್ಲಿ ಪ್ರೀತಿಯನ್ನು ಉಳ್ಳವರಾಗಿರುತ್ತಾರೆ.

ವಿಶೇಷಾಚ್ಛೂಕರಾಣಾಂ ಚ ತಥಾ ಚರಣಯೋರ್ಧಿನಾಂ ।
ಪೋಷಣೇ ಭಕ್ಷಣೇ ಪ್ರೀತಾ ಪೂತಿಗಂಧೈರ್ಯೇಷ್ವಸಾಧುಷು ॥ ೪೦ ॥

ಪರ್ವತೇ ಕರಣಾದ್ವಹ್ನೇಃ ಕಾಷ್ಠ ಸಂಚಯಸಂಗ್ರಹೇ ।
ವಿಜ್ಞೇಯಾಸ್ತೇ ಸದಾ ಮ್ಲೇಚ್ಛಾ ಕ್ಷತ್ರಿಯಾಣಾಂ-ಭಯಾಕುಲಾಃ ॥ ೪೧ ॥

ಲೋಕಾನಾಂ ನಷ್ಟಧರ್ಮೇ ಚ ಸದಾ ಶೌಚವಿವರ್ಜಿತೇ ।
ಕುಲೀನಾನಾಂ ತದಾ ಮ್ಲೇಚ್ಛಾ ಭವಿಷ್ಯಂತಿ ಚ ದಸ್ಯವಃ ॥ ೪೨ ॥

ಧನಿನೋಧ್ಯಕ್ಷಭಾವಾಪಿ ಸರ್ವತ್ರ ವಿಜಯಾನ್ವಿತಾಃ ।
ಕುವಾಚಾ ಮಧ್ಯ ಸುಧ್ಯೇ ತು ಯೇ ತೇ ಪರ್ವತವಾಸಿನಃ ॥ ೪೩ ॥

ಅನ್ಯೇ ಚ ಭೀರವೋ ಮರ್ತ್ಯಾ ಮ್ಲೇಚ್ಛಾಸ್ತತ್ರೈವ ಸಾಧವಃ ।
ತೇಷಾಂ ಸಂಸರ್ಗತೋನ್ಯೇ ಚ ಸಂಬಂಧಾದನ್ನಭೋಜನಾತ್ ॥ ೪೪ ॥

---

೪೦. ಅವರು ಹಂದಿ ಕೋಳಿಗಳನ್ನೂ, ಸಾಕುವುದರಲ್ಲಿ ಆಸಕ್ತರಾಗಿರುತ್ತಾರೆ. ದುರ್ಗಂಧಗಳಲ್ಲಿಯೂ, ಅಯೋಗ್ಯರಲ್ಲಿಯೂ ಸಹವಾಸವನ್ನು ಮಾಡುತ್ತಾರೆ.

೪೧. ಇವರು ಬೆಟ್ಟಗುಡ್ಡಗಳಲ್ಲಿರುತ್ತಾರೆ. ಬೆಂಕಿಗೋಸ್ಕರ ಸೌದೆಯನ್ನು ಕೂಡಿಹಾಕುತ್ತಾರೆ. ಇವರು ಮ್ಲೇಚ್ಛರು ಮತ್ತು ಕ್ಷತ್ರಿಯರಿಗೂ ಕೂಡ ಭಯಂಕರರು.

೪೨. ಲೋಕವು ಧರ್ಮವೆಲ್ಲವನ್ನೂ ಬಿಟ್ಟಾಗ, ಸದಾಚಾರವನ್ನೂ ಕಳೆದು ಕೊಂಡಾಗ ಒಳ್ಳೆಯವರೂ ಕೂಡ ಮ್ಲೇಚ್ಛರಾಗಿಯೂ, ಕಳ್ಳರಾಗಿಯೂ ಆಗುತ್ತಾರೆ.

೪೩. ಆಗ ಧನಿಕರೇ ದೊಡ್ಡವರಾಗುತ್ತಾರೆ. ಮುಖ್ಯರಾಗುತ್ತಾರೆ ಪರ್ವತ ಗಳಲ್ಲಿ ಮೂಲೆ ಮೂಲೆಯಲ್ಲಿದ್ದರೂ, ದುರ್ಭಾಷೆಗಳನ್ನಾಡುತ್ತಿದ್ದರೂ ಅವರೇ ಮುಖ್ಯರಾಗುತ್ತಾರೆ.

೪೪-೪೬ ಕಳೆದುಳಿದ ಸಾಧುಗಳು ಭಯಿಷ್ಠರಾಗಿ ಅಲ್ಲಲ್ಲಿರುತ್ತಾರೆ. ಮತ್ತೆ ಕೆಲವರು ಅವರ ಸಹವಾಸದಿಂದಲೂ, ಸಂಬಂಧದಿಂದಲೂ, ಅನ್ನವನ್ನು ತಿನ್ನುವುದ

ಮೈಥುನಾತ್ತಸ್ಯ ಯೋಷಾಸು ತದ್ಭಾವಂ ಚ ವ್ರಜಂತಿ ತೇ ।
ತಸ್ಮಿನ್ಕಾಲೇ ಜನಾಸ್ಸರ್ವೇ ದುಃಖರೋಗಪ್ರತಾಪಿತಾಃ ॥ ೪೫ ॥

ದುರ್ಭಿಕ್ಷಾನ್ನಪರಾ ಮೂಢಾಃ ಸದಾ ರಾಜಪ್ರಪೀಡಿತಾಃ ।
ತತ್ರಾಸಕ್ತೇ ರತಾ ಮರ್ತ್ಯಾಃ ಸರ್ವಶೌಚವಿವರ್ಜಿತಾಃ ॥ ೪೬ ॥

ಶ್ರುತಿಸ್ಮೃತಿವಿಲೋಪಾಶ್ಚ ವ್ರತಯಜ್ಞವಿವರ್ಜಿತಾಃ ।
ನ ಶ್ರೂಯಂತೇ ಜನೈರೇವ ಪುರಾಣಾಗಮಸಂಹಿತಾಃ ॥ ೪೭ ॥

ಮದ್ಯಮಾಂಸಪ್ರಿಯಾ ಪಾಪಾಃ ಸರ್ವಭಕ್ಷಾಃ ಸುದಾರುಣಾಃ ।
ದಾರುಣಾಚಾರನಿರತಾ ನಿತ್ಯಂ ಛಲಪರಾಯಣಾಃ ॥ ೪೮ ॥

ನ ಪುಷ್ಣಂತಿ ಸುತಾಸ್ತಾತಂ ಪ್ರಸೂಮೇವ ಗುರೂನಪಿ ।
ನ ಶುಶ್ರೂಷಂತಿ ವೈ ಭೃತ್ಯಾಃ ಸ್ವಾಮಿನಂ ಗುಣಶಾಲಿನಂ ॥ ೪೯ ॥

---

ರಿಂದಲೂ, ಅವರ ಹೆಂಡಿರಲ್ಲಿ ಸಂಗಮಮಾಡುವುದರಿಂದಲೂ ಆ ಮ್ಲೇಚ್ಛರೇ ಆಗುತ್ತಾರೆ. ಆಗ ಜನಗಳೆಲ್ಲರೂ ದುಃಖ, ರೋಗಗಳಿಂದ ಕೂಡಿರುತ್ತಾರೆ. ಅನ್ನವು ಸರಿಯಾಗಿ ಸಿಕ್ಕುವುದಿಲ್ಲ. ಮೂಢರಾಗಿರುತ್ತಾರೆ. ರಾಜರೂ ಯಾವಾಗಲೂ ತೊಂದರೆ ಕೊಡುತ್ತಾರೆ. ಸುಳ್ಳಿನಲ್ಲಿಯೇ ಯಾವಾಗಲೂ ಆಸಕ್ತರಾಗಿರುತ್ತಾರೆ. ಶೌಚಾಚಾರಗಳೊಂದೂ ಅವರಿಗಿರುವುದೇ ಇಲ್ಲ.

೪೭-೪೮. ಶ್ರುತಿಗಳನ್ನೂ, ಸ್ಮೃತಿಗಳನ್ನೂ ಓದುವುದೇ ಇಲ್ಲ ವ್ರತಗಳೂ ಯಜ್ಞಗಳೂ ಒಂದನ್ನೂ ಮಾಡುವುದೇ ಇಲ್ಲ. ಪುರಾಣ, ವೇದ ಸಂಹಿತೆಗಳೊಂದನ್ನೂ ಜನರು ಲಕ್ಷಿಸುವುದೇ ಇಲ್ಲ. ಮದ್ಯ ಮಾಂಸದಲ್ಲಿ ಆಸಕ್ತರಾಗಿರುತ್ತಾರೆ ಪಾಪಿಗಳೂ ಆಗಿರುತ್ತಾರೆ. ಎಲ್ಲರನ್ನೂ ತಿನ್ನುತ್ತಾರೆ. ಕ್ರೂರಿಗಳಾಗಿರುತ್ತಾರೆ. ಕೆಟ್ಟ ಆಚಾರಗಳನ್ನು ಮಾಡುತ್ತಾರೆ. ಯಾವಾಗಲೂ ಮೋಸದಲ್ಲಿ ಆಸಕ್ತರಾಗಿರುತ್ತಾರೆ.

೪೯. ಮಕ್ಕಳು ತಾಯಿತಂದೆಗಳನ್ನು ಕಾಪಾಡುವುದಿಲ್ಲ. ಶಿಷ್ಯರು ಗುರುಗಳನ್ನು ಶುಶ್ರೂಷೆಮಾಡುವುದಿಲ್ಲ. ಆಳುಗಳು ಉತ್ತಮರಾದ ಯಜಮಾನರನ್ನಾದರೂ ಸೇವಿಸುವುದಿಲ್ಲ.

ಭರ್ತಾರಂ ನ ಸ್ತ್ರಿಯಃ ಕಾಶ್ಚಿತ್ ಶ್ವಶುರೌ ಚ ಸ್ವಮಾತರಃ ।
ನಿತ್ಯಕಷ್ಟಾ ನರಾಸ್ತತ್ರ ಕಲಹಶ್ಚ ಗೃಹೇ ಗೃಹೇ ॥ ೫೦ ॥

ನೃಪಾ ಮ್ಲೇಚ್ಛಾಸ್ಸುರಾಪಾಶ್ಚ ತಥಾ ಮಂತ್ರಿಪುರೋಹಿತಾಃ ।
ಮನುಷ್ಯೈಶ್ಚ ಬಲಿಸ್ತೇಷಾಂ ಮತ್ಸ್ಯೈರ್ಮಾಂಸೈರ್ನಿರಾಮಿಷಃ ॥ ೫೧ ॥

ಪಾಷಂಡಾಯಾಸಯೋಗೇಭ್ಯಃ ಪ್ರಧಾನಾ ಗುಣವಾರ್ತಯೋಃ ।
ಧನಿಕೈಃ ಕೋಕಿಲೈರ್ಮಂದೈರ್ವ್ಯಾಪ್ತಂ ತೈಸ್ತು ಮಹೀತಳಂ ॥ ೫೨ ॥

ತತೋನ್ಯೋನ್ಯಾಪ್ರಿಯಾ ಮೂಢಾ ವನೇ ವಾ ನಗರೇಷು ಚ ।
ಭಕ್ಷ್ಯಾಭಕ್ಷ್ಯಂ ಸದಾಶ್ನಂತಿ ಮತ್ಸ್ಯಮಾಂಸಾದಿಕಂ ನರಾಃ ॥ ೫೦ ॥

ವನೇ ದ್ವಿಜಾತಿಭಿಶ್ಚಾನ್ಯೈರ್ಭುಜ್ಯತೇ ಚಾನುಪಾಪಕಂ ।
ಭಕ್ತಿಮಂತಂ ಪಶುಂಚಾನ್ಯತ್ಸರ್ವೇ ಯಾಂತ್ಯಪುನರ್ಭವಂ ॥ ೫೪ ॥

---

೫೦ ಗಂಡನನ್ನು ಹೆಂಡಿರು ಸೇವಿಸುವುದಿಲ್ಲ. ಹೆಂಗಸರು ಅತ್ತೆಯರನ್ನಾಗಲೀ ತಮ್ಮ ತಾಯಿಯರನ್ನಾಗಲೀ ಸೇವಿಸುವುದಿಲ್ಲ. ಜನರು ನಿತ್ಯವೂ ಕಷ್ಟವನ್ನೇ ಹೊಂದಿರುತ್ತಾರೆ. ಮನೆಮನೆಯಲ್ಲಿಯೂ ಜಗಳವಿದ್ದೇ ಇರುತ್ತದೆ

೫೧. ಆಗ ರಾಜರೆಲ್ಲರೂ, ಮ್ಲೇಚ್ಛರೇ ಆಗುತ್ತಾರೆ. ಇವರು ಸುರಾಪಾನ ಮಾಡುತ್ತಾರೆ. ಮನುಷ್ಯರೇ ಮುಂತಾದವರ ಮಾಂಸವು ಅವರಿಗೆ ರುಚಿಸುವುದೇ ಹೊರತು ಮತ್ಸ್ಯಮಾಂಸಗಳು ಅವರಿಗೆ ಬೇಕಾಗಿರುವುದಿಲ್ಲ.

೫೨. ಪಾಷಂಡಿತನ (ನಾಸ್ತಿಕತ್ವ) ವಿರುತ್ತದೆ. ಯೋಗಗಳ ಗುಣಗಳ ಮಾತಿನಲ್ಲಿ ಮಾತ್ರ ನಿರತರಾಗುತ್ತಾರೆ. ಧನಿಕರೂ, ದಡ್ಡರೂ, ಮೋಸಗಾರರೂ ಭೂಮಿಯನ್ನೆಲ್ಲಾ ವ್ಯಾಪಿಸಿಕೊಳ್ಳುತ್ತಾರೆ.

೫೩. ಅವರು ಊರಲ್ಲಾಗಲೀ, ಕಾಡಲ್ಲಾಗಲೀ ಒಬ್ಬರಿಗೊಬ್ಬರು ಕೆಟ್ಟದ್ದನ್ನೇ ಮಾಡಿಕೊಳ್ಳುತ್ತಿರುತ್ತಾರೆ. ಮತ್ಸ್ಯ ಮಾಂಸಾದಿಗಳನ್ನು ವಿವೇಚನೆಯಿಲ್ಲದೆ ತಿನ್ನುತ್ತಿರುತ್ತಾರೆ.

೫೪. ಮೇಲು ಜಾತಿಯವರಾಗಲೀ, ಕೀಳುಜಾತಿಯವರಾಗಲೀ ಕಾಡಿನಲ್ಲಿ ಇದ್ದುಕೊಂಡು ಪಾಪಕೆಲಸಗಳನ್ನು ಮಾಡುತ್ತಿರುತ್ತಾರೆ. ಭಕ್ತಿಯುಳ್ಳವನನ್ನು ಪಶುವನ್ನಾಗಿ ತಿಳಿಯುತ್ತಾರೆ. ಇವೆಲ್ಲರೂ ಮತ್ತೆ ನರಕವನ್ನೇ ಹೊಂದುತ್ತಾರೆ.

ಪಾತಯಂತಿ ಪಿತ್ರ್ಯಾನ್ಪಾಪಾಃ ಸರ್ವೇ ತೇ ಪೂರ್ವದೇವಕಾಃ ।
ಪಿಶಾಚಾ ರಾಕ್ಷಸಾ ಯೇ ಚ ಮರ್ತ್ಯಕಾ ಗುಹ್ಯಕಾ ಧ್ರುವಂ
ಏತೇ ಜಾವಿನಯಪ್ರೀತಾ ನ ದೇವಾ ಚ ಮಾನುಷಾಃ ॥ ೫೫ ॥

॥ ಸಂಜಯ ಉವಾಚ ॥

ಕಥಂ ಚ ಮರ್ತ್ಯಭಾವೇಷು ಲಕ್ಷ್ಮ ಜಾನಂತಿ ಸಾತ್ವಿಕಾಃ ।
ಏವಂ ಮೇ ಸಂಶಯಂ ನಾಥ ದೂರೀಕುರು ತತಸ್ತತಃ ॥ ೫೬ ॥

॥ ವ್ಯಾಸ ಉವಾಚ ॥

ಕೃತಪಾಪಾನುರೂಪಾಸ್ತು ದ್ವಿಜಾತಿಷ್ವನ್ಯಜಾತಿಷು ।
ಅಸುರಾ ರಾಕ್ಷಸಾಃ ಪ್ರೇತಾಃ ಸ್ವಭಾವಂ ನ ತ್ಯಜಂತಿ ತೇ ॥ ೫೭ ॥

ಜಾತಾ ಯೇ ಚಾಸುರಾ ಮರ್ತ್ಯೇ ಸದಾ ತೇ ಕಲಹೋತ್ಸುಕಾಃ ।
ಕುಹಕಾಃ ಕಚ್ಚರಾಃ ಕ್ರೂರಾಃ ವಿಜ್ಞೇಯಾ ರಾಕ್ಷಸಾ ಭುವಿ ॥ ೫೮ ॥

---

೫೫. ಇವೆಲ್ಲರೂ ತಮ್ಮ ಹಿಂದಿನ ಪಿತೃಗಳನ್ನೂ ನರಕಕ್ಕೆ ತಳ್ಳುತ್ತಾರೆ. ಇವರೆಲ್ಲರೂ ರಾಕ್ಷಸರು, ಪಿಶಾಚರು, ದೈತ್ಯರು, ಮನುಷ್ಯ ಜನ್ಮದ ಗುಹ್ಯಕರು. ಖಂಡಿತವು. ಇವರು ಧೂರ್ತತನದಿಂದಲೇ ತುಷ್ಟರಾಗುತ್ತಾರೆ. ಇವರು ಮನುಷ್ಯರೂ ಅಲ್ಲ. ದೇವತೆಗಳೂ ಅಲ್ಲ.

೫೬. ಸಂಜಯನು ಹೇಳಿದನು– ಈ ಮನುಷ್ಯರಲ್ಲಿ ಸಜ್ಜನರು ಹೇಗೆ ಗುರುತನ್ನು ಕಾಣುತ್ತಾರೆ? ಈ ಸಂಶಯವು ನನಗೆ ಹುಟ್ಟಿದೆ. ಇದನ್ನು ದೂರ ಮಾಡು.

೭೭. ವ್ಯಾಸನು ಹೇಳಿದದು- ಉತ್ತಮ ಜಾತಿಯಲ್ಲಾಗಲಿ ಎಲ್ಲಿ ಹುಟ್ಟಿದರೂ ಪಾಪಕ್ಕೆ ಅನುಗುಣವಾಗಿ ಹುಟ್ಟಿದ ದೈತ್ಯರು, ರಾಕ್ಷಸರು, ಪ್ರೇತರು ಅವರ ಸ್ವಭಾವವನ್ನೂ ಅವರು ಬಿಡುವುದಿಲ್ಲ.

೫೮. ಮನುಷ್ಯರಲ್ಲಿ ಯಾವಾಗಲೂ ಜಗಳವಾಡುವವರು ದೈತ್ಯರೆಂದು ತಿಳಿ. ಕುಹುಕಿಗಳೂ, ಮಲಿನರೂ, ಕ್ರೂರಿಗಳೂ ರಾಕ್ಷಸರಾಗಿದ್ದವರೆಂದು ತಿಳಿ.

ಜನೋದ್ವಿಗ್ನಾದಿಕಂ ದಾನಂ ತಥಾ ದೇವಾರ್ಚನಂ ಭುವಿ ।
ಉಗ್ರಭಾವಾದ್ವರಂ ಲಬ್ಧ್ವಾ ರಾಜ್ಯಂ ಭುಂಜಂತಿ ಶಾಶ್ವತಂ ॥ ೫೯ ॥

ಜಯಂ ಶೌರ್ಯಾದಿಕಂ ಪುಣ್ಯಂ ಪುನಃ ಪಾಪಕ್ಷಯಂ ವ್ರಜೇತ್ ।
ಏವಮುರ್ವ್ಯಾಂ ತಥಾ ನಾಕೇ ನಾಗಲೋಕೇ ಮಹಾಲಯೇ ॥ ೬೦ ॥

ಅಗ್ರ್ಯೇಣ ತಪಸಾ ಕಶ್ಚಿತ್ಸುರತ್ವಂ ಲಭತೇ ವಿ ।
ವಾಸುದೇವಂ ಸಮಾರಾಧ್ಯ ಪ್ರಹ್ಲಾದಸ್ಸುರಪೂಜಿತಃ ॥ ೬೧ ॥

ಹರಂ ತಥಾಂಧಕೋ ದೈತ್ಯೋ ಸ್ತುತ್ವಾ ತತ್ಸೇವಕೋಭವತ್ ।
ತಸ್ಯೈವ ಗಣಮುಖ್ಯತ್ವಂ ಲೇಭೇ ಭೃಂಗೀ ಮಹಾಬಲಃ ॥ ೬೨ ॥

ಏತೇ ಚಾನ್ಯೇ ಚ ಬಹವೋ ಬಲಿರಿಂದ್ರೋ ಭವಿಷ್ಯತಿ ।
ಗಚ್ಛಂತಿ ಸದ್ಗತಿಂ ತಾತ ಇಹಾಮುತ್ರ ಚ ಸರ್ವದಾ ॥ ೬೩ ॥

ಕೇಚಿದ್ದೈತ್ಯಕುಲೇ ಜಾತಾಃ ಪೃಥಿವ್ಯಾಂ ಸುರಸತ್ತಮಾಃ ।
ಭಾವಯಂತಿ ಪಿತೄನ್ಸರ್ವಾನ್ಶತಶೋಥ ಸಹಸ್ರಶಃ ॥ ೬೪ ॥

---

೫೯. ಜನರಿಗೆ ಉದ್ವೇಗಕರವಾದ ದಾನವನ್ನು ಮಾಡುತ್ತಾರೆ. ಕೆಟ್ಟ ರೀತಿಯಿಂದ ದೇವರನ್ನು ಪೂಜಿಸತ್ತಾರೆ. ಉಗ್ರಭಾವದಿಂದ ವರವನ್ನು ಹೊಂದಿ ಶಾಶ್ವತವಾಗಿ ರಾಜ್ಯವನ್ನು ಅನುಭವಿಸುತ್ತಾರೆ.

೬೦-೬೩. ಜಯಶೌರ್ಯಪ್ರಧಾನವಾದ ಕೆಲಸಗಳು, ಪುಣ್ಯಕೆಲಸಗಳು ಇವನ್ನು ಮಾಡಿದರೆ ಪಾಪವು ಹೋಗುತ್ತದೆ. ಈರೀತಿ ಭೂಮಿ ಸ್ವರ್ಗ ಪಾತಾಳ ನರಕ ಇವೆಲ್ಲದರಲ್ಲಿಯೂ ಇದ್ದು ಉತ್ತಮವಾದ ತಪಸ್ಸನ್ನೂ ಮಾಡಿ ಯಾವನೋ ಒಬ್ಬನು ದೇವತೆಯಾಗುತ್ತಾನೆ. ಪ್ರಹ್ಲಾದನು ವಾಸುದೇವನನ್ನು ಪೂಜಿಸಿ ದೇವತೆಗಳಿಂದ ಗೌರವವನ್ನು ಪಡೆದನು. ಅಂಧಕಾಸುರನು ಈಶ್ವರನನ್ನು ಪೂಜಿಸಿ ಅವನ ಗಣಗಳಲ್ಲಿ ಮುಖ್ಯನಾದನು. ಬಲಿಯು ವಿಷ್ಣುವನ್ನು ಪೂಜಿಸಿದುದರಿಂದ ಇಂದ್ರನಾಗುವನು. ಇವರೂ ಇನ್ನೂ ಇತರರೂ ಕೂಡ ಈಲೋಕ ಪರಲೋಕಗಳಲ್ಲಿ ಸ್ವಾಮಿಯನ್ನು ಪೂಜಿಸಿ ಉತ್ತಮ ಗತಿಯನ್ನು ಹೊಂದಿರುತ್ತಾರೆ.

೬೪. ಕೆಲವರು ದೈತ್ಯರ ಕುಲದಲ್ಲಿ ಹುಟ್ಟಿದರೂ ಕೂಡ ಅದರಲ್ಲಿಯೂ ಉತ್ತಮವಾಗಿದ್ದು ಅನೇಕ ರೀತಿಯಲ್ಲಿ ಪಿತೃದೇವತೆಗಳನ್ನು ಪೂಜಿಸುತ್ತಾರೆ.

ಏಕೇನಾಪಿ ಸುಪುತ್ರೇಣ ಕುಲತ್ರಾಣಂ ಚ ಧೀಮತಾ ।
ಏಕೋಽಪಿ ವೈಷ್ಣವಃ ಪುತ್ರಃ ಕುಲಕೋಟಿಂ ಸಮುದ್ಧರೇತ್ ॥ ೬೫ ॥

ಮ್ರಿಯಂತೇ ಸರ್ವತೀರ್ಥೇಷು ಮುಕ್ತಿಕ್ಷೇತ್ರೇ ಚ ಜ್ಞಾನತಃ ।
ಬ್ರಹ್ಮಜ್ಞಾನವಿದೋ ಯೇ ತೇ ತಾರಯಂತಿ ತರಂತಿ ಚ ॥ ೬೬ ॥

ಏಕಾ ಪತಿವ್ರತಾ ನಾರೀ ಕುಲಕೋಟಿಂ ಸಮುದ್ಧರೇತ್ ।
ಜಿತೇಂದ್ರಿಯೋಽಪಿ ಧರ್ಮಾತ್ಮಾ ದ್ವಿಜದೇವಾರ್ಚನೇ ರತಃ ॥ ೬೭ ॥

ಕ್ಷಯೇಽಧರ್ಮೇ ಕಲೌ ಶೇಷೇ ಪುರೇ ಜನಪದೇಷು ಚ ।
ಏಕೋ ರಕ್ಷತಿ ಧರ್ಮಾತ್ಮಾ ಪುರಂ ಗ್ರಾಮಂ ಜನಂ ಕುಲಂ ॥ ೬೮ ॥

ವಿಜ್ಞಾತಂ ಮೇ ಪುರಾ ಚಾಸೀದ್ಬ್ರಾಹ್ಮಣಾನಾಂ ಪುರಂ ಮಹತ್ ।
ತತ್ರ ಸರ್ವೇ ದ್ವಿಜಾಶ್ಚಶ್ವತ್ಸಂಧ್ಯೋಪಾಸನತತ್ಪರಾಃ ॥ ೬೯ ॥

---

೬೫. ಸುಪುತ್ರನಾದ ಬುದ್ಧಿವಂತನಾದ ಒಬ್ಬನಾದರೂ, ಕೂಡ ಮಗನು ಕುಲವನ್ನು ಕಾಪಾಡುತ್ತಾನೆ. ವೈಷ್ಣವನಾದ ಒಬ್ಬನು ಮಗನಿದ್ದರೂ ಕುಲಕೋಟಿಯನ್ನೂ ಉದ್ಧಾರಮಾಡುತಾನೆ.

೬೬. ಬ್ರಹ್ಮಜ್ಞಾನಿಗಳು ತೀರ್ಥದಲ್ಲಾಗಲಿ ಮುಕ್ತಿ ಸ್ಥಳಗಳಲ್ಲಾಗಲಿ ಸಾಯುತ್ತಾರೆ. ಬ್ರಹ್ಮಜ್ಞಾನಿಗಳು ತಾವೂ ನರಕದಿಂದ ಪಾರಾಗಿ ಇತರರನ್ನೂ ಪಾರು ಮಾಡುತ್ತಾರೆ.

೬೭. ಪತಿವ್ರತೆಯಾದವಳು ಕೋಟಿಕುಲಗಳನ್ನು ಉದ್ಧಾರ ಮಾಡುತ್ತಾಳೆ. ಜಿತೇಂದ್ರಿಯನೂ, ಧರಾತ್ಮನೂ, ದೇವ ಬ್ರಾಹ್ಮಣ ಪೂಜಕನೂ ಆದವನು ಕುಲ ಕೋಟಿಯನ್ನು ಉದ್ಧಾರಮಾಡುತ್ತಾನೆ.

೬. ಧರ್ಮಾತ್ಮನಾದವನು ಕ್ಷಯದಲ್ಲಿಯೂ, ಅಧರ್ಮದಲ್ಲಿಯೂ, ಜನಗಳಲ್ಲಿಯೂ, ಪಟ್ಟಣ ದೇಶಗಳಲ್ಲಿಯೂ, ಪಟ್ಟಣ ಗ್ರಾಮಕುಲ ಮುಂತಾದುವನ್ನು ರಕ್ಷಿಸುತ್ತಾನೆ.

೬೯-೭೦. ಪೂರ್ವದಲ್ಲಿ ಬ್ರಾಹ್ಮಣರ ಒಂದು ಅಗ್ರಹಾರವಿದ್ದಿತು. ಅಲ್ಲಿರುವ ಬ್ರಾಹ್ಮಣರೆಲ್ಲರೂ ಸಂಧ್ಯಾವಂದನೆಯಲ್ಲಿ ಆಸಕ್ತರು. ವೇದಾಧ್ಯಾಯಿಗಳು, ದೇವತೆಗಳು

ವೇದಪಾಠರತಾ ಧೀರಾ ದೇವಾತಿಥಿ ದ್ವಿಜಾರ್ಚಕಾಃ ।
ಯಜ್ಞವ್ರತಾಗ್ನಿಕರ್ಮಾಣಃ ಷಟ್ಕರ್ಮಪರಿನಿಷ್ಠಯಾಃ ॥ ೭೦ ॥

ಅತಿಕೃಚ್ಛ್ರೇ ಚ ತೇಷಾಂ ವೈ ನ ಪಾಪೇ ವರ್ತತೇ ಮನಃ ।
ಕುರ್ವಂತಿ ಸತತಂ ವೃದ್ಧ್ಯೈ ವ್ರತಂ ಯಜ್ಞಂ ಸನಾತನಂ ॥ ೭೧ ॥

ಕದಾಚಿದ್ದೈವಯೋಗಾಚ್ಚ ಗೃಹಸ್ಥಶ್ಚ ಸ ಕೋವಿದಃ ।
ವಹ್ನೌ ಜುಹೋತಿ ವಿಪ್ರರ್ಷಿಃ ಪ್ರಾಜ್ಯಂ ಮಂತ್ರೇಣ ಮಂತ್ರವಿತ್ ॥ ೭೨ ॥

ತಸ್ಮಿನ್ಕಾಲೇ ಚ ತಸ್ಯೈವ ಮೂತ್ರಕೃಚ್ಛ್ರಂ ಸುದಾರುಣಂ ।
ತತ್ಪ್ರೋಜ್ಝಿತುಂ ಗತಸ್ಸೋಽಪಿ ರಕ್ಷಾರ್ಥಂ ಸ್ಥಾಪ್ಯ ಚೇಟಿಕಾಂ ॥ ೭೩ ॥

ತಸ್ಯಾಸ್ತ್ವನವಧಾನೇನ ಶುನಾ ಪ್ರಾಜ್ಯಂ ಚ ಭಕ್ಷಿತಂ ।
ಭಿಯಾ ತಯಾ ತತಃ ಪಾತ್ರಂ ಸ್ವೀಯಮೂತ್ರೇಣ ಸಂಭೃತಂ ॥ ೭೪ ॥

ಅಸಂಲಕ್ಷ್ಯೈಜುಹೋದಗ್ನೌ ಸ ವಿಪ್ರಸ್ತು ತ್ವರೇಣ ಚ ।
ಆಶ್ಚರ್ಯಂ ಚ ತತೋ ವಹ್ನೌ ಲಕ್ಷಿತಂ ತೇನ ತತ್ಕ್ಷಣಾತ್ ॥ ೭೫ ॥

---

ಅತಿಥಿಗಳು. ಬ್ರಾಹ್ಮಣರು ಇವರ ಪೂಜೆಯನ್ನು ಮಾಡುತ್ತಿದ್ದರು. ಯಜ್ಞ, ವ್ರತ, ಅಗ್ನಿಕಾರ್ಯಗಳಲ್ಲಿ ಆಸಕ್ತರಾಗಿ ಷಟ್ಕರ್ಮನಿರತರಾಗಿದ್ದರು.

೭೧. ಬಹು ಕಷ್ಟಬಂದರೂ, ಅವರು ಕೆಟ್ಟ ಕೆಲಸಕ್ಕೆ ಮನಸ್ಸನ್ನು ಮಾಡುತ್ತಲಿರಲಿಲ್ಲ. ಅವರು ಯಾವಾಗಲೂ ವೃದ್ಧಿಗೋಸ್ಕರ ಪೂರ್ವದಿಂದಲೂ ಬಂದ ವ್ರತ ಯಜ್ಞಗಳನ್ನು ಮಾಡುತ್ತಿದ್ದರು.

೭೨. ಒಂದು ಸಾರಿ ಆ ಊರಿನಲ್ಲಿದ್ದ ಒಬ್ಬ ಬುದ್ಧಿವಂತನಾದ ಗೃಹಸ್ಥನು ಮಂತ್ರವತ್ತಾಗಿ ಅಗ್ನಿಯಲ್ಲಿ ಒಂದು ಸಾರಿ ಹೋಮಮಾಡುತ್ತಿದ್ದನು.

೭೩. ಆಗ ದೈವಯೋಗದಿಂದ ಬಹು ಮೂತ್ರರೋಗವು ಬಂದುದರಿಂದ ಆ ಹೋಮಕಾಲದಲ್ಲಿ ಆ ಅಗ್ನಿ ಮುಂತಾದುವನ್ನು ನೋಡಿಕೊಂಡಿರಲು ಚೇಟಿಗೆ ಹೇಳಿ ಮೂತ್ರವನ್ನು ವಿಸರ್ಜಿಸಲು ಹೋದನು.

೭೪-೭೫. ಆಕೆಯು ಅಜಾಗರೂಕತೆಯಿಂದಿರಲು ಒಂದು ನಾಯಿಯು ಬಂದು ಅಲ್ಲಿಟ್ಟಿದ್ದ ತುಪ್ಪವನ್ನೆಲ್ಲಾ ಕುಡಿಯಿತು. ಆಕೆಯು ಹೆದರಿಕೆಯಿಂದ ಆದರೊಳಗೆ ಮೂತ್ರವನ್ನು ತುಂಬಿದಳು. ಅನಂತರ ಆ ಬ್ರಾಹ್ಮಣನಿಗೆ ಒಂದು ಆಶ್ಚರ್ಯಕರವಾದ ವಿಷಯವು ಕಂಡುಬಂದಿತು.

ಕೊಟಿಂ ಹೇಮಮಯಂ ಸಾಕ್ಷಾತ್ಸ್ವರ್ಣಂ ಜಾಂಬೂನದಪ್ರಭಂ ।
ಗೃಹೀತ್ವಾ ತನ್ಮದಾ ವಿಪ್ರಃ ಪಾಪಯೋಗಂ ಚಕಾರ ಹ　　॥ ೭೬ ॥

ಪಪ್ರಚ್ಛ ವಿಸ್ಮಯಾದ್ದಾಸೀಂ ಕಥಮೇತದ್ವದ ಪ್ರಿಯೇ ।
ಮುದಾ ತತ್ರ ಯಥಾವೃತ್ತಂ ಕಥಿತಂ ತು ತಯಾ ದ್ವಿಜೇ　　॥ ೭೭ ॥

ತತೋ ನಿತ್ಯಂ ಯಥಾಕಾಲಂ ತಚ್ಚ ತಸ್ಯ ಪ್ರವರ್ತತೇ ।
ಸಮೃದ್ಧಿರದ್ಭುತಾ ಗೇಹೇ ಲೋಕವಿಸ್ಮಯಕಾರಿಣೀ　　॥ ೭೮ ॥

ತತಃ ಪರಸ್ಪರಾಚ್ಛ್ರುತ್ವಾ ಸರ್ವೈರೇವ ಚ ತತ್ಪುರೇ ।
ಕೃತಂ ಕರ್ಮ ದುರಾಚಾರಂ ಶ್ರುತ್ವಾಲೋಭಾದಸಾಧುಭಿಃ　　॥ ೭೯ ॥

ಗುರುಲೋಭಾಚ್ಚ ಸುಮಹತ್ ಸ್ವಾಂತೇ ಪಂಕಂ ವಿಶತ್ಯಪಿ ।
ಪಂಕಾದೇವ ಭಯಾನ್ಮೋಹಾವ್ಮತಿಭ್ರಂಶೋಭವತ್ತತಃ　　॥ ೮೦ ॥

ಅಹಂಕಾರಯುತಃ ಪ್ರಾಣಃ ಕ್ರೋಧಾನ್ಮೂಢೋ ಭವೇನ್ನರಃ ।
ತತಃ ಪಾಪೇ ಪ್ರವೃತ್ತಿಸ್ಸ್ಯಾನ್ನಶಾಂತಿಮಧಿಗಚ್ಛತಿ　　॥ ೮೧ ॥

---

೭೬. ಪ್ರಕಾಶಮಾನವಾದ ಒಂದು ಉಂಡೆಯು ಕಂಡು ಬಂದಿತು. ಅದನ್ನು ಆತನು ತೆಗೆದುಕೊಂಡು ಪಾಪದ ಸಂಬಂಧವನ್ನು ಹೊಂದಿದನು.

೭೭. ಆಗ ಆಶ್ಚರ್ಯದಿಂದ ಆ ದಾಸಿಯನ್ನು ಕೇಳಲು ಆಕೆಯು ಸಂತೋಷ ಪಟ್ಟು ನಡೆದುದೆಲ್ಲವನ್ನೂ ಅವನಿಗೆ ತಿಳಿಸಿದಳು.

೭೮. ಇದರ ಗುಟ್ಟನ್ನು ತಿಳಿದು ಅವನು ಅದರಂತೆ ಸಂಪಾದಿಸಿ ಹೋಮ ಮಾಡುತ್ತಾ ಬರಲು ಆವನ ಮನೆಯಲ್ಲಿ ಆಶ್ಚರ್ಯಕರವಾದ ಸಂಪತ್ತು ಉಂಟಾಯಿತು.

೭೯. ಅನಂತರ ಒಬ್ಬರಿಂದೊಬ್ಬರು ಈ ವಿಷಯವನ್ನು ತಿಳಿದು ಆ ಊರಿನಲ್ಲಿ ಎಲ್ಲರೂ ಆಸೆಪಟ್ಟು ದುರಾಚಾರದಿಂದ ಆರೀತಿ ಕೆಟ್ಟಕೆಲಸವನ್ನೇ ಮಾಡುತ್ತ ಬಂದರು.

೮೦ ಹೆಚ್ಚು ಆಸೆಯಿಂದ ಎಲ್ಲರ ಮನಸ್ಸೂ ಪಾಪದಿಂದ ಕೂಡಿತು. ಈ ಪಾಪದಿಂದ ಭಯವೂ ಮೋಹವೂ ಉಂಟಾಗಿ ಇವುಗಳಿಂದ ಬುದ್ಧಿಯು ಕೆಟ್ಟಿತು.

೮೧. ಮನಸ್ಸು ಅಹಂಕಾರದಿಂದ ಕೂಡಿಕೊಂಡಿತು. ಅದರಿಂದ ಕೋಪವೂ ಅದರಿಂದ ಮೂಢತನವೂ ಬಂದಿತು. ಅದರಿಂದ ಪಾಪದಲ್ಲಿಯೇ ಬುದ್ಧಿಯುಂಟಾಗಿ ಮನಸ್ಸಿಗೆ ಶಾಂತಿಯೇ ಸಿಕ್ಕಲಿಲ್ಲ.

ಅಥರ್ವಣೇನ ಚ ತೇ ತಾವತ್ತತೋಽಭದ್ರಾಣಿ ಪಶ್ಯತಿ ।
ತತಸ್ಸಪತ್ನಾನ್ ಜಯತಿ ಸಮೂಲಂ ಚ ವಿನಶ್ಯತಿ ॥ ೮೨ ॥

ಅಥ ಕಿಲ್ಬಿಷಕೂಟೇನ ದಗ್ಧಮೇವ ಪುರಂ ಚ ತತ್ ।
ಸ್ತ್ರೀಯೋ ದುಷ್ಟಾ ಜನಾ ದುಷ್ಟಾಃ ಸರ್ವೇ ಪಾಪಬಲಾತ್ತದಾ ॥ ೮೩ ॥

ದೃಷ್ಟ್ವಾಽಜಾನಾದ್ದ್ವಿಜಸ್ತತ್ರ ತತ್ಕಾರ್ಯೇ ನ ಮತಿಂ ದಧೌ ।
ತಸ್ಯ ಭಾರ್ಯಾ ತದಾ ಸಾಧ್ವೀ ಪುರುದುಃಖೇನ ಪೀಡಿತಾ ।
ಭರ್ತಾರಂ ಕೃಚ್ಛ್ರಸಂತಪ್ತಾ ಪುರಕಾರ್ಯಂ ಜಗಾದ ಸಾ ॥ ೮೪ ॥

॥ ಬ್ರಾಹ್ಮಣ್ಯುವಾಚ ॥

ಕಷ್ಟಂ ಮೇ ವರ್ತತೇ ನಾಥ ದೃಷ್ಟ್ವಾ ತ್ವಾಂ ದುಃಖಸಂಯುತಂ ।
ಗ್ರಾಮಾಚಾರಮಿದಂ ಯದ್ವಾ ಪುರಟಂ ಕರ್ತುಮರ್ಹಸಿ ॥
ತತಸ್ತತ್ರ ಸ ದೋಷಜ್ಞಃ ಸ್ಮಿತ್ವಾ ವಚನಮಬ್ರವೀತ್ ॥ ೮೫ ॥

---

೮೨. ಅಥರ್ವಣದಲ್ಲಿ ಬುದ್ಧಿಹುಟ್ಟಿದೊಡನೆಯೇ ಕೆಡಕುಗಳು ಕಾಣುತ್ತವೆ. ಇದರಿಂದ ಶತ್ರುಗಳನ್ನು ಜಯಿಸಲು ಪ್ರಯತ್ನಿಸಿ ತಾನೇ ಬುಡಮುಟ್ಟ ಹಾಳಾಗುತ್ತಾನೆ.

೮೩. ಈ ಪಾಪದ ಬಲದಿಂದ ಆ ಊರೆಲ್ಲವೂ ಕೆಟ್ಟುಹೋಯಿತು ಹೆಂಗಸರು ಗಂಡಸರುಗಳೆಲ್ಲರೂ ಆ ಪಾಪದ ಬಲದಿಂದ ದುಷ್ಟರಾದರು.

೮೪. ಅವರಲ್ಲಿ ಒಬ್ಬ ಬ್ರಾಹ್ಮಣನು ಇದೆಲ್ಲವನ್ನೂ ನೋಡಿ ಈ ಪಾಪ ಕಾರ್ಯದಲ್ಲಿ ಮನಸ್ಸನ್ನು ಮಾಡಲಿಲ್ಲ. ಆಗ ಅವನ ಹೆಂಡತಿಯು ಬಹು ದುಃಖದಿಂದ ಕೂಡಿದವಳಾಗಿ ಪಟ್ಟಣಿಗರು ಮಾಡುವ ಕೆಲಸವನ್ನೂ ಅವರ ಸಂತೋಷವನ್ನೂ ಗಂಡನಿಗೆ ಹೇಳಿದಳು.

೮೫. ಬ್ರಾಹ್ಮಣನ ಹೆಂಡತಿಯು ಹೇಳಿದನು- ಎಲೈ ನಾಥನೇ ! ನೀನು ಕಷ್ಟಪಡುತ್ತಿರುವುದನ್ನು ನೋಡಿದರೆ ನನಗೆ ಸಂಕಟವುಂಟಾಗುತ್ತದೆ ಈ ಊರಲ್ಲಿ ಚಿನ್ನವನ್ನು ಮಾಡುವುದೇ ಆಚಾರವಾಗಿ ಹೋಗಿದೆ. ನೀನೂ ಕೂಡ ಅದರಂತೆ ಮಾಡು. ಎಂದಳು. ಆಗ ಆ ವಿವೇಕಿಯು ನಕ್ಕು ಇಂತೆಂದನು.

॥ ದ್ವಿಜ ಉವಾಚ ॥

ಯಸ್ತು ಜೀವತಿ ಪಾಪೇನ ತ್ಯಕ್ತ್ವಾ ಧರ್ಮಂ ಪರಂ ಹಿತಂ ।
ಸ ವೈಧೇ ಯೋ ಮಹಾಭಾಗೇ ಪ್ರಗಚ್ಛತ್ಯಪುನರ್ಭವಂ ॥ ೮೬ ॥

ಏತೇ ವಿಪ್ರಾ ದುರಾಚಾರಾಃ ಸದಾಚಾರಾಸ್ಸಪರಿಚ್ಛದಾಃ ।
ಅತಿಪಾತಕಯೋಗಾಚ್ಚ ಮಹಾಪಾತಕಸಮ್ಮತಾಃ ॥ ೮೭ ॥

ಸಹ ಪಾಪೇನ ಮಹತಾ ಪ್ರಯಾಸ್ಯಂತಿ ರಸಾತಳಂ ।
ಅನ್ತೇಽಪುನರ್ಭವಂ ಪ್ರಾಪ್ಯಾಪರಾಧನ್ತೋ ನ ವಿದ್ಯತೇ ॥
ಅಹಮೇಕೋತ್ರ ತಿಷ್ಠಾಮಿ ಸ್ವಪುಣ್ಯಪರಿರಕ್ಷಣಾತ್ ॥ ೮೮ ॥

॥ ವ್ಯಾಸ ಉವಾಚ ॥

ತತಸ್ಸಾ ತಮುವಾಚೇದಂ ಲೋಕಹಾಸ್ಯಂ ವಚಸ್ತ್ವವ ।
ವಕ್ತು ಮರ್ಹಸಿ ನಶ್ಚಾಗ್ರೇ ನ ಪುರೋನ್ಯಸ್ಯ ಕಸ್ಯ ಚಿತ್ ॥ ೮೯ ॥

---

೮೬. ಬ್ರಾಹ್ಮಣನು ಹೇಳಿದನು- ಯಾವನು ಉತ್ತಮವಾದ ಧರ್ಮವನ್ನು ಬಿಟ್ಟು ಪಾಪದಿಂದ ಜೀವಿಸುತ್ತಾನೆಯೋ ಅವನು ಮೂಢನು, ಅವನು ಶಾಶ್ವತವಾದ ನರಕವನ್ನು ಹೊಂದುತ್ತಾನೆ.

೮೭. ಈ ಬ್ರಾಹ್ಮಣರು ದುರಾಚಾರಿಗಳು, ಇವರ ಹೆಂಡಿರು ಮಕ್ಕಳೂ ಹಾಗೆಯೇ ಆಗಿದ್ದಾರೆ. ಅವರು ಅತಿಪಾತಕವನ್ನು ಮಾಡುತ್ತ ಮಹಾಪಾತಕಕ್ಕೆ ಒಳಗಾಗಿದ್ದಾರೆ.

೮೮. ಇವರು ಮಹಾಪಾಪಿಗಳಾಗಿ ಪಾತಾಳವನ್ನು ಹೊಂದುತ್ತಾರೆ. ಇವರೆಲ್ಲರೂ ನರಕಕ್ಕೆ ಹೋಗುತ್ತಾರೆ. ಇವರ ಪಾಪಕ್ಕೆ ಕೊನೆಯೇ ಇಲ್ಲ. ನಾನೊಬ್ಬ ಮಾತ್ರ ಇಲ್ಲಿ ನನ್ನ ಧರ್ಮವನ್ನು ಕಾಪಾಡಿಕೊಂಡಿರುತ್ತೇನೆ.

೮೯. ವ್ಯಾಸನು ಹೇಳಿದನು- ಆಗ ಆಕೆಯು ಎಲೈ ಪತಿಯೇ ! ನೀನು ಹೇಳುವುದು ಲೋಕಕ್ಕೆ ಹಾಸ್ಯಕರವಾದ ಮಾತು. ನನ್ನ ಎದುರಿಗೇನೋ ಹೇಳಿದೆ. ಇನ್ನೊಬ್ಬರ ಎದುರಿಗೂ ಹೇಳಬೇಡ. ನಾಚಿಕೆಯಾದೀತು ?

॥ ದ್ವಿಜ ಉವಾಚ ॥

ಯದಿ ಯಾಸ್ಯಾಮಿ ಚಾನ್ಯತ್ರ ಇತೋಽಹಂ ತತ್ಕ್ಷಣಾತ್ಪ್ರಿಯೇ ।
ಸವಿತ್ತೈಸ್ಸ್ವಜನೈರೇವ ಪುರೀ ಯಾಸ್ಯತ್ಯಧೋಗತಿಂ ॥ ೯೦ ॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಪರಮಪ್ರೀತಃ ಸಂಗೃಹ್ಯ ಚ ಧನಂ ಸ್ವಕಂ ।
ಕ್ಷಿಪ್ರಂ ಸ ಚ ತಯಾ ಸಾರ್ಧಂ ಯಯೌ ಸೀಮಾನ್ತರಂ ದ್ವಿಜಃ ॥ ೯೧ ॥

ಸ್ಥಿತ್ವಾಪಶ್ಯತ್ಪುರೀತಾವತ್ಸ್ಥಿರಾ ತಿಷ್ಠತಿ ಪೂರ್ವವತ್ ।
ಸಾ ಚಾಹ ತಂ ಪತಿಂ ಸಾಧ್ವೀ ಪುರೀ ಚೇಯಂ ನ ನಶ್ಯತಿ ॥ ೯೨ ॥

ವಿಮೃಶ್ಯ ತಾಮುವಾಚೇದಂ ವಿಪ್ರವರ್ಯಃ ಸುವಿಸ್ಮಿತಃ ।
ಕಿಂ ತು ತಿಷ್ಠತಿ ತತ್ರೈವ ದ್ರವ್ಯಮಸ್ಮದ್ಗೃಹಾದ್ಬಹಿಃ ॥ ೯೩ ॥

ವಿಚಾರ್ಯ ಸಾ ಧವಂ ಪ್ರಾಹ ಮಯಾ ಭ್ರಾನ್ತ್ಯಾ ಉಪಾನಹೌ ।
ನಾನೀತೌ ತಿಷ್ಠತಸ್ತತ್ರ ಧಾರಯಿಷ್ಯಾಮಿ ಕಿಂ ತು ವೈ ॥ ೯೪ ॥

---

೯೦. ಬ್ರಾಹ್ಮಣನು ಹೇಳಿದನು- ಎಲೈ ಪ್ರಿಯಳೇ ! ನಾನು ಈ ಊರನ್ನು ಬಿಟ್ಟು ಬೇರೆ ಊರಿಗೆ ಹೋದೊಡನೆಯೇ ಈ ಊರು ನಾಶವಾಗಿ ಹೋಗುತ್ತದೆ.

೯೧. ವ್ಯಾಸನು ಹೇಳಿದನು- ಆಗ ಅವನು ಸಂತೋಷಗೊಂಡು ತನ್ನ ಸಾಮಾನುಗಳೆಲ್ಲವನ್ನೂ ತೆಗೆದುಕೊಂಡು ಹೆಂಡತಿಯನ್ನು ಕರೆದುಕೊಂಡು ಊರಿನ ಎಲ್ಲೆಯನ್ನೂ ದಾಟಿದನು.

೯೨. ಅಲ್ಲಿ ನಿಂತುಕೊಂಡು ನೋಡಲು ಪಟ್ಟಣವು ಮೊದಲಿನಂತೆಯೇ ಇದ್ದಿತು. ಆಗ ಆಕೆಯು ಎಲೈ ಪತಿಯೇ! ನಮ್ಮ ಊರು ನಾಶವಾಗಲಿಲ್ಲವಲ್ಲ ? ಎಂದಳು.

೯೩. ಆಗ ಅವನು ಯೋಚಿಸಿ ಆಶ್ಚರ್ಯಪಟ್ಟು ನಮ್ಮದು ಯಾವುದೋ ಪದಾರ್ಥವು ಮನೆಯ ಹೊರಗಿರಬೇಕು ? ಎಂದನು

೯೪. ಆಕೆಯು ಯೋಚಿಸಿ ನಾನು ಮನೆಯ ಹೊರಗೆ ಕೆರಗಳನ್ನು ಮರೆತು ಬಂದೆನು. ಈಗ ತೆಗೆದುಕೊಂಡು ಬರುತ್ತೇನೆಂದು ಗಂಡನಿಗೆ ಹೇಳಿದಳು.

ಏವಮುಕ್ತ್ವಾ ಪತಿಂ ಸಾಧ್ವೀ ಗೃಹೀತ್ವಾ ತಾವುಪಾಗತಾ ।
ಪತ್ಯುರಭ್ಯಾಸತೋ ದೃಷ್ಟಂ ಪುರಂ ನಿರ್ವ್ಯಥನಂ ಗತಂ ॥ ೯೫ ॥

ತತೋ ವಿಪ್ರಾದಯೋ ವರ್ಣಾಃ ಕೆಚ್ಚರಾಃ ಪುರವಾಸಿನಃ ।
ತಿಷ್ಠಂತಿ ನರಕೇ ಘೋರೇ ದುಃಖಿತಾಶ್ಚಾಪುನರ್ಭವೇ ॥ ೯೬ ॥

ಕೃಚ್ಛ್ರಾದ್ಯಮಪುರಂ ಯಾನ್ತಿ ನಾಸ್ತಿ ತೇಷಾಂ ಚ ನಿಷ್ಕೃತಿಃ ।
ಪೂತಿಗಂಧಂ ತತೋ ಮೇಧ್ಯಂ ವರ್ಜನೀಯಂ ಪ್ರಕೀರ್ತಿತಂ ॥ ೯೭ ॥

ಪೂರ್ವವದ್ಭಕ್ಷಣೇ ಪ್ರೀತಃ ಅದ್ಯ ಪಾಪಂ ಕರೋತಿ ಚ ।
ಸ್ತೇಯಶೀಲೋ ನಿಶಾಚಾರೀ ಬುಧೈರ್ಜ್ಞೇಯಸ್ಸ ವಂಚಕಃ ॥ ೯೮ ॥

ಅಬುಧಸ್ಸರ್ವಕಾರ್ಯೇಷು ಅಜ್ಞಾತಸ್ಸರ್ವಕರ್ಮಸು ।
ಸಮುಯಾಚಾರಹೀನಸ್ತು ಪ್ರಭುರೇವ ಸ ಬಾಲಿಶಃ ॥ ೯೯ ॥

---

೯೫. ಆ ಹೆಂಗಸು ಹೀಗೆಂದು ಹೇಳಿ ಆ ಕೆರಗಳನ್ನು ತೆಗೆದುಕೊಂಡು ಗಂಡನ ಬಳಿಗೆ ಬಂದು ಹಿಂತಿರುಗಿ ನೋಡಲು ಆ ಊರು ಹಾಳಾಗಿ ಹೋಗಿತ್ತು.

೯೬. ಆಗ ಆ ಪಾಪಿಗಳಾದ ಆ ಊರಿನ ಬ್ರಾಹ್ಮಣರೇ ಮುಂತಾದವರು ದುಃಖಗೊಂಡು ಮತ್ತೆ ಮೇಲಕ್ಕೇಳದ ಘೋರನರಕದಲ್ಲಿದ್ದರು.

೯೭. ಈ ರೀತಿಯಾಗಿ ಪಾಪಾಚಾರಿಗಳು ಯಮಪುರಕ್ಕೆ ಹೋಗುತ್ತಾರೆ. ಇವರಿಗೆ ಬಿಡುಗಡೆಯೇ ಇಲ್ಲ. ದುರ್ಗಂಧವಾದುದು, ಪವಿತ್ರವಲ್ಲದುದು ಇವನ್ನು ಮುಟ್ಟಬಾರದು.

೯೮. ಹಿಂದಿನಜನ್ಮದ ವಾಸನೆಯಿಂದ ಅದನ್ನು ತಿನ್ನುತ್ತಾ ಈಗ ಪಾಪವನ್ನು ಮಾಡುತ್ತಾನೆ. ಕಳ್ಳತನಮಾಡುವವನೂ ರಾತ್ರಿಯಲ್ಲಿ ಸಂಚರಿಸುವವನೂ ರಾಕ್ಷಸನು. ಅವನು ವಂಚಕನೆಂದು ತಿಳಿ.

೯೯. ಕೆಲಸದಲ್ಲಿ ಬುದ್ಧಿವಂತನಲ್ಲದವನೂ, ಕೆಲಸವನ್ನು ತಿಳಿಯದವನೂ, ರೀತಿ ಆಚಾರಗಳನ್ನು ಆಚರಿಸದವನೂ ಪಶುವು.

ಏವಮುಷ್ಟ್ರಾದಯಸ್ಸನ್ತಿ ಭಕ್ಷ್ಯಾದಿನಕುಲಾದಯಃ ।
ಹಿಂಸ್ರೋ ಜ್ಞಾತಿಜನೋದ್ವೇಗೀ ರಸೇ ಯುದ್ಧೇ ಚ ಕಾತರಾಃ ॥ ೧೦೦ ॥

ವಿಘಸಾದಿಪ್ರಿಯೋ ನಿತ್ಯಂ ಜನಃ ಶ್ವಾ ಕೀರ್ತಿತೋ ಬುಧೈಃ ।
ಚೌರ್ಯಕರ್ಮರತೋ ನಿತ್ಯಂ ಬಹುಮಿತ್ರಪ್ರವಂಚಕಃ ॥ ೧೦೧ ॥

ಮಿಥುನೇ ಕಲಹೋ ನಿತ್ಯಂ ಮರ್ತ್ಯಸ್ತು ಪರಿಕೀರ್ತಿತಃ ।
ಪ್ರಕೃತ್ಯಾ ಚಪಲೋ ನಿತ್ಯಂ ಸದಾ ಭೋಜನ ಚಂಚಲಃ ॥ ೧೦೨ ॥

ಪ್ಲವಗಃ ಕಾನನಪ್ರೀತೋ ನರಶ್ಶಾಖಾಮೃಗೋ ಭುವಿ ।
ಸೂಚಕೋ ಭಾಷಯಾ ಬುದ್ಧ್ಯಾ ಸ್ವಜನೇಽನ್ಯಜನೇಷು ಚ ॥ ೧೦೩ ॥

ಉದ್ವೇಗಜನಕತ್ವಾಚ್ಚ ಸಪುಮಾನುರಗಸ್ಸ್ಮೃತಃ ।
ಬಲವಾನ್ಸ್ವಾಕ್ರಾನ್ತಶೀಲಶ್ಚ ಸತತಂ ವ್ಯಾನಪತ್ರಪಃ ॥ ೧೦೪ ॥

---

೧೦೦. ಪ್ರಗಂಚಿದಲ್ಲಿ ಒಂಟೆ ಮುಂತಾದ ಪ್ರಾಣಿ ಹಿಂಸಕವಲ್ಲದ ಪ್ರಾಣಿಗಳೂ ಪ್ರಾಣಿ ಹಿಂಸಕವಾದ ಮುಂಗಸಿ (ಕೀರ) ಮುಂತಾದ ಪ್ರಾಣಿಗಳೂ ಇವೆ. ಇವುಗಳಲ್ಲಿ ಕೆಲವು ರತಿಯಲ್ಲಿ ಹೆಚ್ಚು ಇಚ್ಛೆಯುಳ್ಳವು. ಇಲ್ಲವೆ ಹಿಂಸೆಯಲ್ಲಿ ಮನಸ್ಸುಳ್ಳವು. ಉಪಯೋಗವೇನು ?

೧೦೧–೧೦೬. ಒಬ್ಬರು ತಿಂದು ಮಿಕ್ಕದ್ದನ್ನು ತಿನ್ನುವ ಮನುಷ್ಯನನ್ನು ಜನರು ನಾಯಿ ಎಂದೆನ್ನುತ್ತಾರೆ. ಕಳ್ಳತನ, ಮಿತ್ರವಂಚನೆ, ರತಿಗೋಸ್ಕರಲೇ ಕಲಹ ಇಂತಹವನು ನಾಯಿಯೆಂದು ಹಿರಿಯರು ಹೇಳುತ್ತಾರೆ. ಸ್ವಭಾವವಾಗಿಯೇ ಮನುಷ್ಯನು ಚಪಲ ಸ್ವಭಾವನು, ಕಾಡಿನಲ್ಲಿರಬೇಕೆನ್ನುವವನು ತಿಂಡಿಯಲ್ಲಿಯೇ ಆಸಕ್ತಿಯುಳ್ಳವನು. ಇಂತಹವನು ಕಾಡಿನ ಕಪಿಯೇ ಸರಿ. ಭಾಷೆಯಿಂದಲೂ, ಬುದ್ಧಿಯಿಂದಲೂ, ತನ್ನ ಸ್ವಭಾವವನ್ನು ಸೂಚಿಸುವವನಾಗಿರುವುದರಿಂದ ಮತ್ತು ಅದೇ ಭಾಷೆಯಿಂದ ತನ್ನವರನ್ನೂ, ಇತರರನ್ನೂ ತೊಂದರೆ ಪಡಿಸುವುದರಿಂದಲೂ ಎಲ್ಲರಿಗೂ ಹೆದರಿಕೆಯನ್ನುಂಟುಮಾಡುತ್ತಾನಾದುದರಿಂದ ಇವನನ್ನು ಹಾವೆಂದೆನ್ನಬಹುದು. ಬಲವಾಗಿಯೂ, ಇನ್ನೊಬ್ಬರ ಮೇಲೆ ಬೀಳುವವನಾಗಿಯೂ ಲಜ್ಜೆ ಬಿಟ್ಟವನಾಗಿಯೂ

**ಪೂತಿಮಾಂಸಪ್ರಿಯೋ ಭೋಗೀ ನೃಸಿಂಹಃ ಸಮುದಾಹೃತಃ |
ತತ್ಸ್ವನಾದೇವ ಸೀದಂತಿ ಭೀತಾ ಅನ್ಯೇ ವೃಕಾದಯಃ || ೧೦೫ ||**

**ದ್ವಿರದಾದಿ ನರಾ ಯೇ ಚ ಜ್ಞಾಯಂತೇ ದೂರದರ್ಶಿನಃ |
ಏವಮಾದಿಕ್ರಮೇಣೈವ ವಿಜಾನೀಯಾನ್ನರೇಷು ಚ || ೧೦೬ ||**

**ಸುರಾಣಾಂ ಲಕ್ಷಣಂ ಬ್ರೂಮೋ ನರರೂಪವ್ಯವಸ್ಥಿತಾನ್ |
ದ್ವಿಜದೇವಾತಿಥೀನಾಂ ಚ ಗುರುಸಾಧುತಪಸ್ವಿನಾಂ || ೧೦೭ ||**

**ಪೂಜಾತತ್ಪರೋರತೋ ನಿತ್ಯಂ ಧರ್ಮಶಾಸ್ತ್ರೇಷು ನೀತಿಷು |
ಕ್ಷಮಾಶೀಲೋ ಜಿತಕ್ರೋಧೋ ಸತ್ಯವಾದೀ ಜಿತೇಂದ್ರಿಯಃ || ೧೦೮ ||**

**ಅಲುಬ್ಧಃ ಪ್ರಿಯವಾಕ್ಶಾಂತೋ ಧರ್ಮಶಾಸ್ತ್ರಾರ್ಥ ಸಂಪ್ರಿಯಃ |
ದಯಾಳುರ್ದಯಿತೋ ಲೋಕೇ ರೂಪವಾನ್ಮಧುರಸ್ವರಃ || ೧೦೯ ||**

---

ದುರ್ಗಂಧವುಳ್ಳ ಮಾಂಸದಲ್ಲಿ ಇಷ್ಟವುಳ್ಳವನಾಗಿಯೂ, ಸುಖಪಡುವವನಾಗಿಯೂ, ಇರುವುದರಿಂದಲೂ ಈತನನ್ನು ನರಸಿಂಹ ( ಮನುಷ್ಯನಾದರೂ ಸಿಂಹವೆಂಬ ಪ್ರಾಣಿ ) ಎಂದೆನ್ನಬಹುದು. ಈ ಮನುಷ್ಯನ ಧ್ವನಿಯಿಂದಲೇ ತೋಳ ಮುಂತಾದುವು ಓಡುತ್ತವಾದುದರಿಂದಲೂ ದೂರದಲ್ಲಿರುವುದನ್ನು ಕಾಣುವ ಶಕ್ತಿಯಿರುವುದರಿಂದಲೂ ಇವನನ್ನು ಆನೆಯೆಂದೆನ್ನಬಹುದು. ಈ ರೀತಿ ಮನುಷ್ಯರನ್ನು ತಿಳಿದುಕೊಳ್ಳಬಹುದು.

೧೦೭-೧೦೮. ಮನುಷ್ಯರೂಪದಲ್ಲಿರುವ ದೇವತೆಗಳ ಲಕ್ಷಣವನ್ನು ಹೇಳುತ್ತೇನೆ ಕೇಳು. ಅವರು, ಬ್ರಾಹ್ಮಣರು, ದೇವತೆಗಳು, ಅತಿಥಿಗಳು, ಗುರುಗಳು, ಸಾಧುಗಳು, ತಪಸ್ವಿಗಳು, ಇವರ ಪೂಜೆಯನ್ನು ಯಾವಾಗಲೂ, ಮಾಡುತ್ತಿರುತ್ತಾರೆ. ಧರ್ಮಶಾಸ್ತ್ರದಲ್ಲಿಯೂ, ನೀತಿಯಲ್ಲಿಯೂ, ಅವರಿಗೆ ಆಸಕ್ತಿ ಹೆಚ್ಚು. ಕ್ಷಮೆಯೇ ಅವರ ಸ್ವಭಾವ. ಕೋಪಮಾಡುವುದಿಲ್ಲ. ಸತ್ಯವನ್ನೇ ಆಡುತ್ತಾರೆ. ಇಂದ್ರಿಯಗಳನ್ನು ನಿಗ್ರಹಿಸಿರುತ್ತಾರೆ.

೧೦೯-೧೧೦. ಲೋಭವಿರುವುದಿಲ್ಲ. ಪ್ರಿಯವಾದ ಮಾತಾಡುತ್ತಾರೆ. ಶಾಂತಸ್ವಭಾವದವರು. ಧರ್ಮಶಾಸ್ತ್ರದ ಅರ್ಥದಲ್ಲಿ ಪ್ರೀತಿಯುಳ್ಳವರು. ದಯಾವಂತರು. ಪ್ರೀತಿಯುಳ್ಳವರು. ರೂಪವಂತರು. ಮಧುರವಾದ ಧ್ವನಿಯುಳ್ಳವರು. ಮಾತಿನಲ್ಲಿ

ವಾಗೀಶಸ್ಸರ್ವಕಾರ್ಯೇಷು ಗುಣೀ ದಕ್ಷೋ ಮಹಾಬಲಃ ।
ಸಾಕ್ಷರಶ್ಚಾಪಿ ವಿದ್ವಾಂಶ್ಚ ಗೀತನೃತ್ಯಾರ್ಥತತ್ವವಿತ್ ॥ ೧೧೦ ॥

ಆತ್ಮವಿದ್ಯಾದಿಕಾರ್ಯೇಷು ಸರ್ವತಂತ್ರೀಸ್ವರೇಷು ಚ ।
ಹವಿಷ್ಯೇಷು ಚ ಸರ್ವೇಷು ಗವ್ಯೇಷು ಚ ನಿರಾಮಿಷೇ ॥ ೧೧೧ ॥

ಸದ್ಯೋಗಾಸ್ವಾದದ್ರವ್ಯೇಷು ಪ್ರತ್ಯಗ್ರೇ ಚಾತಿಶೋಭನೇ ।
ಗಂಧಮಾಲ್ಯೇಷು ವಸ್ತ್ರೇಷು ಶಾಸ್ತ್ರೇಷ್ವಾಭರಣೇಷು ಚ ॥ ೧೧೨ ॥

ಸಂಪ್ರೀತಿಶ್ಚಾತಿಥೌ ದಾನೇ ಪರ್ವನೀತಿಷು ಕರ್ಮಸು ।
ಸ್ನಾನದಾನಾದಿಭಿಃ ಕಾರ್ಯೈಃ ವ್ರತಯಜ್ಞೈಸ್ಸುರಾರ್ಚನೈಃ ॥ ೧೧೩ ॥

ಕಾಲೋ ಗಚ್ಛತಿ ಪಾರ್ಶ್ವೈಶ್ಚ ನ ಕ್ಲೀಬಂ ವಾಸರಂ ಭವೇತ್ ।
ಅಯಮೇವ ಮನುಷ್ಯಾಣಾಂ ಸದಾಚಾರೋ ನಿರಂತರಂ ॥ ೧೧೪ ॥

---

ಗಟ್ಟಿಗರು. ಗುಣವುಳ್ಳವರು. ಶಕ್ತರು. ಬಲಿಷ್ಠರು. ಅಕ್ಷರಜ್ಞರು. ವಿದ್ಯಾವಂತರು. ಗೀತನೃತ್ಯಗಳನ್ನು ಚೆನ್ನಾಗಿ ತಿಳಿದಿರುವವರು.

೧೧೧–೧೧೨. ವೇದಾಂತವನ್ನು ಬಲ್ಲವರಾಗಿರುತ್ತಾರೆ. ತಂತಿಯಿರುವ ಧ್ವನಿಗಳಲ್ಲಿ ವೀಣೆ ಮುಂತಾದುವುಗಳಲ್ಲಿ ಆಸಕ್ತರಾಗಿರುತ್ತಾರೆ. ಹವಿಸ್ಸಿನಲ್ಲಿ ಆಸಕ್ತಿಯೂ ಗೋವಿನ ಹಾಲು, ತುಪ್ಪಗಳಲ್ಲಿ ಪ್ರೀತಿಯೂ ಇರುತ್ತದೆ. ಮಾಂಸವನ್ನು ದೂರ ಮಾಡಿರುತ್ತಾರೆ. ಒಳ್ಳೆಯವರ ಸಹವಾಸದಲ್ಲಿಯೂ, ಧರ್ಮದಲ್ಲಿಯೂ, ಹೊಸ ಹೊಸದರಲ್ಲಿಯೂ ಚೆನ್ನಾಗಿರುವುದರಲ್ಲಿಯೂ ಪ್ರೀತಿ ಹೆಚ್ಚು. ಗಂಧ, ಹೂ, ಬಟ್ಟೆ ಶಾಸ್ತ್ರ ಒಡವೆಗಳಲ್ಲಿಯೂ ಪ್ರೀತಿಯು ಹೆಚ್ಚಾಗಿರುತ್ತದೆ.

೧೧೩-೧೧೪. ಅತಿಥಿ ದಾನ, ಅಮಾವಾಸ್ಯಾದಿಪರ್ವಗಳು, ಹಬ್ಬಗಳು, ಸ್ನಾನ, ವ್ರತ, ಯಜ್ಞ, ದೇವತಾರ್ಚನೆ, ಇವುಗಳಲ್ಲಿಯೇ ಆಸಕ್ತರಾಗಿ ಇವುಗಳಿಂದಲೂ, ಪಾಠವನ್ನು ಹೇಳುವುದರಿಂದಲೂ, ದಿನವನ್ನು ಕಳೆಯುತ್ತಾರೆ. ದಿನವನ್ನು ವ್ಯರ್ಥವನ್ನಾಗಿ ಮಾಡುವುದೇ ಇಲ್ಲ. ಇದೇ ಮನುಷ್ಯರಿಗೆ ಯಾವಾಗಲೂ ಆಚಾರವು.

ದೇವವನ್ಮಾನವಾಚಾರೋ ಗೀಯತೇ ಮುನಿಸತ್ತಮೈಃ ।
ಕಿಂತು ಸತ್ವಾಧಿಕೋ ದೇವೋ ಮನುಷ್ಯೋ ಭೀತ ಏವ ಚ　　॥ ೧೧೫ ॥

ಗಂಭೀರಸ್ಸರ್ವದಾ ದೇವೋ ಸದೈವ ಮಾನವೋ ಮೃದುಃ ।
ದ್ವಯೋಸ್ತುಲ್ಯಾ ಚ ಸಂಪ್ರೀತಿಃ ನ ದೈತ್ಯಾವೌ ಭವೇತ್ಕಿಲ　　॥ ೧೧೬ ॥

ಪ್ರೀತಿಭಾವಃ ಪರಂ ಸೌಖ್ಯಂ ಸೌಹೃದಂ ಸುಕೃತಂ ಶುಭಂ ।
ದೈವಮಾನುಷಯೋರೇವ ದೈತ್ಯರಾಕ್ಷಸಯೋಸ್ತಥಾ　　॥ ೧೧೭ ॥

ಪ್ರೇತಾದೀನಾಂ ಚ ಪ್ರೇತೇಷು ಪಶೌ ಪ್ರೀತಿಃ ಪಶೋರಪಿ ।
ಕಾಕಾದಯಃ ಸ್ವಜಾತೌ ಚ ತಥಾನ್ಯೇ ಚ ಸ್ವಜಾತಿಷು　　॥ ೧೧೮ ॥

ಪ್ರೀತಾ ಭವಂತಿ ಚಾಪ್ರೀತಾ ವಿದ್ಯಾ ತೇಷಾಂ ಚ ಲಕ್ಷಣಂ ।
ಏವಂ ಪುಣ್ಯವಿಶೇಷಾಣಾಮವಿಶೇಷೇಷು ಜಾತಿಷು　　॥ ೧೧೯ ॥

---

೧೧೫. ದೇವತೆಗಳ ಆಚಾರದಂತೆಯೇ ಮನುಷ್ಯನ ಆಚಾರವು ಇರುವುದು. ಆದರೆ ದೇವತೆಯು ಸತ್ತ್ವಗುಣವುಳ್ಳವನು. ಧೈರ್ಯಶಾಲಿಯು. ಮನುಷ್ಯನು ಹೆದರಿಕೆಯುಳ್ಳವನು.

೧೧೬. ದೇವತೆಯಾಗಿದ್ದವನು, ಯಾವಾಗಲೂ ಗಂಭೀರನಾಗಿರುತ್ತಾನೆ. ಮನುಷ್ಯನಾಗಿದ್ದವನು ಯಾವಾಗಲೂ ಮೃದುವಾಗಿರುತ್ತಾನೆ. ಇವರಿಬ್ಬರಿಗೂ ಪ್ರೀತಿಯಿರುತ್ತದೆ. ದೈತ್ಯರಿಗೂ, ದೇವತೆ ಮನುಷ್ಯರಿಗೂ ಸ್ನೇಹವಿರುವುದಿಲ್ಲ.

೧೧೭. ದೇವ ಮನುಷ್ಯರಿಗೆ ಪ್ರೀತಿಯೂ, ಸೌಖ್ಯವೂ, ಸ್ನೇಹವೂ ಪುಣ್ಯವೂ ಉಂಟು. ಅದೇ ರೀತಿ ದೈತ್ಯ ರಾಕ್ಷಸರಿಗೂ ಇರುತ್ತದೆ.

೧೧೮-೧೨೦. ಪ್ರೇತಜಾತಿಯವರಿಗೆ ಪ್ರೇತಜಾತಿಯವರಲ್ಲೂ ಪಶುಜಾತಿಯವರಿಗೆ ಪಶುಜಾತಿಯವರಲ್ಲೂ ಸ್ನೇಹವಿರುತ್ತದೆ. ಕಾಗೆಯೇ ಮುಂತಾದುವು ತಮ್ಮ ತಮ್ಮ ಜಾತಿಯಲ್ಲಿ ಪ್ರೀತಿಯನ್ನು ಹೊಂದುವಂತೆ ಆಯಾಯ ಜಾತಿಯವರು ಅಯಾಯ ಜಾತಿಯಲ್ಲಿ ಪ್ರೀತಿಯನ್ನು ಹೊಂದುತ್ತಾರೆ. ಆಯಾಯ ವಿದ್ಯೆಯೂ ಅವರವರ ಲಕ್ಷಣಗಳು. ಈ ರೀತಿಯಾಗಿ ಸಮಾನವಾದ ಜಾತಿಯಲ್ಲಿ ಪುಣ್ಯಗಳನ್ನು

ಪ್ರಿಯಾಪ್ರಿಯಂ ವಿಜಾನೀಯಾತ್ಪುಣ್ಯಾಪುಣ್ಯಂ ಗುಣಾಗುಣಂ ।
ದಂಪತ್ಯೋರ್ನ ಸುಖಂ ಕಿಂಚಿಜ್ಜಾತಿಭೇದಾನ್ನೃಣಾಂ ಭುವಿ ॥ ೧೨೦ ॥

ಸ್ವಜಾತಿಷು ಭವೇತ್ಪ್ರೀತಿಃ ಮುಕ್ತೌ ವಾ ನಿರಯೇಪಿ ವಾ ।
ಅತಿಪುಣ್ಯಾಲ್ಲಭೇದಾಯುಃ ಶೋಭನಾಃ ಪುಣ್ಯಕಾರಿಣಃ ॥ ೧೨೧ ॥

ಪಾಪಾತ್ಮಾನೋ ಲಭಂತೇಂತಂ ಯೇ ಚ ದೈತ್ಯಾದಯೋ ನರಾಃ ।
ಕೃತೇ ಜಾತಾಸ್ಸುರಾ ಭೂಮೌ ನ ದೈತ್ಯಾಶ್ಚಾನ್ಯ ಜಾತಯಃ ॥ ೧೨೨ ॥

ತ್ರೇತಾಯಾಮೇಕಪಾದಂ ಚ ದ್ವಿಪದಂ ದ್ವಾಪರೇ ಯುಗೇ ।
ಸಂಧ್ಯಾಯಾಂ ಚ ಕಲೇರೇವ ಸರ್ವಪಾದಂ ಚ ಸಂಕುಲಂ ॥ ೧೨೩ ॥

ದೇವಾದೀನಾಂ ಭವೇಜ್ಜಾತಂ ಭಾರತಂ ಯತ್ಪ್ರವರ್ತಿತಂ ।
ಯೇ ತೇ ದುರ್ಯೋಧನಸ್ಯೈವ ಯೋಧಾಸ್ಸೈನ್ಯಾದಯಸ್ತಥಾ ॥ ೧೨೪ ॥

---

ಪ್ರೀತಿದ್ವೇಷಗಳನ್ನೂ, ಗುಣದುರ್ಗುಣಗಳನ್ನೂ ನೋಡಬೇಕು. ಪ್ರಪಂಚದಲ್ಲಿ ಆ ಜಾತಿಭೇಧ (ಯೋನಿಭೇಧ) ಇದ್ದರೆ ಆ ಗಂಡಹೆಂಡಿರಿಗೆ ಸುಖವಿರುವುದಿಲ್ಲ.

೧೨೧. ಒಂದೇ ಜಾತಿಯಾಗಿದ್ದರೆ ಅವರಿಬ್ಬರೂ ಒಂದೇ ಮನಸ್ಸಿನಿಂದ ಪುಣ್ಯ ಕೆಲಸವನ್ನಾಗಲೀ, ಪಾಪಕೆಲಸವನ್ನಾಗಲೀ, ಮಾಡುತ್ತಾರೆ. ಪುಣ್ಯವಂತರು ಒಳ್ಳೇ ಕೆಲಸಗಳನ್ನು ಮಾಡುವುದರಿಂದ ಆಯುಸ್ಸನ್ನು ಹೆಚ್ಚಿಸಿಕೊಳ್ಳುತ್ತಾರೆ

೧೨೨. ಪಾಪಿಗಳಾದ ದೈತ್ಯರು ಬೇಗ ಸಾಯುತ್ತಾರೆ. ಕೃತಯುಗದಲ್ಲಿ ಭೂಮಿಯಲ್ಲಿ ದೇವತೆಗಳೇ ಹುಟ್ಟುವರು. ದೈತ್ಯರಾಗಲಿ. ಬೇರೆಯವರಾಗಲಿ ಹುಟ್ಟುವುದಿಲ್ಲ.

೧೨೩. ಕಲಿಯು ತ್ರೇತಾಯುಗದಲ್ಲಿ ಒಂದು ಕಾಲನ್ನೂ, ದ್ವಾಪರದಲ್ಲಿ ಎರಡು ಕಾಲನ್ನೂ, ಕಲಿಯುಗದಲ್ಲಿ ನಾಲ್ಕು ಪಾದಗಳನ್ನೂ ಇಟ್ಟು ನಿಲ್ಲುತ್ತಾನೆ.

೧೨೪-೧೨೬. ಭಾರತ ಯುದ್ಧವು ದೇವದಾನವರಿಗೆ ನಡೆದುದಾಗಿದೆ. ದುರ್ಯೋಧನನೂ, ಅವನ ಕಡೆಯ ಯೋಧರೂ, ಸೈನ್ಯದವರೂ, ಕರ್ಣಾದಿಗಳೂ,

ತೇ ಚ ದೈತ್ಯಾದಯಸ್ಸರ್ವೇ ಯೇ ಚ ಕರ್ಣಾದಯೋ ಭುವಿ ।
ಗಾಂಗೇಯೋ ವಸುಮುಖ್ಯಶ್ಚ ದ್ರೋಣೋ ದೇವಮುನಿಃ ಪ್ರಭುಃ॥ ೧೨೫ ॥

ಅಶ್ವತ್ಥಾಮಾ ಹರಿಸ್ಸಾಕ್ಷಾತ್ ಹರಿರ್ನಂದಕುಲೋಲೋದ್ಭವಃ ।
ಪಂಚೇಂದ್ರಾಃ ಪಾಂಡವಾ ಜಾತಾ ವಿದುರೋ ಧರ್ಮ ಏವ ಚ ॥ ೧೨೬ ॥

ಗಾಂಧಾರೀ ದ್ರೌಪದೀ ಕುಂತೀ ಏತಾ ದೇವ್ಯೋ ಧರಾತಲೇ ।
ದೇವದೈತ್ಯಾಃ ಕಲೇರ್ಮಧ್ಯೇ ದೈಶ್ಯೇಘಾ ಚ ಮಾನವಾಃ ॥ ೧೨೭ ॥

ಉತ್ಪತ್ಸ್ಯಂತೆ ಸದಾ ಪ್ರೇತಾಃ ಕ್ರವ್ಯಾದಾಃ ಪಶುಪಕ್ಷಿಣಃ ।
ತೇಷಾಂ ಚ ಕುಲಟಾ ದಾಸೀ ನಿತ್ಯಕಷ್ಟಾ ಯವೀಯಸೀ ॥ ೧೨೮ ॥

ನಿತ್ಯಂ ದ್ವಂದ್ವೇಷು ಸಂಪ್ರೀತಾ ತೇಷಾಮಾಚಾರಭಾಷಿಣೀ ।
ಕಿಲ್ಬಿಷೇಷು ಚ ಸರ್ವೇಷು ಕಲಹೇ ನ್ಯಾಯಕರ್ಮಣಿ ॥
ರತಾದ್ದೈತ್ಯಾದಯೋ ಯೇ ತೇ ಸರ್ವೇ ನಿರಯಗಾಮಿನಃ ॥ ೧೨೯ ॥

---

ಭೂಲೋಕದಲ್ಲಿ ದೈತ್ಯಾಂಶದಿಂದ ಬಂದು ಹುಟ್ಟಿದ ಮನುಜರು. ಭೀಷ್ಮನು-ವಸುವು, ದ್ರೋಣನು-ದೇವಮುನಿಯು, ಅಶ್ವತ್ಥಾಮನು-ಹರನು. ಹರಿಯು-ವಿಷ್ಣುವು, ಪಾಂಡವರು ಐವರು-ಇಂದ್ರರು, ವಿದುರನು. ಧರ್ಮನು.

೧೨೭. ಗಾಂಧಾರಿ, ದ್ರೌಪದಿ, ಕುಂತಿ, ಇವರು ದೇವತಾಸ್ತ್ರೀಯರು. ಕಲಿ ಯುಗವು ಆರಂಭಿಸುವ ಸಂಭ್ರಮದಲ್ಲಿ ದೇವತೆಗಳೂ, ದೈತ್ಯರೂ, ಹುಟ್ಟುತಾರೆ. ಆಮೇಲೆ ಕಲಿಯುಗದಲ್ಲಿರುವ ಮನುಜರು ದೈತ್ಯರೆಂದು ತಿಳಿ.

೧೨೮. ರಾಕ್ಷಸರೂ, ಪ್ರೇತರೂ, ಪಶುಪಕ್ಷಿಗಳಾಗಿ ಹುಟ್ಟುತ್ತಾರೆ. ಅವರು ಗಳಿಗೆ ಆಳಾಗಿದ್ದವರು ಹಾದರಗಿತ್ತಿಯರಾಗಿಯೂ, ಕಷ್ಟಜೀವಿಗಳಾಗಿಯೂ ಇರುತ್ತಾರೆ.

೧೨೯. ಅವಳು ತಾನು ಅನುಸರಿಸಿರುವವರ ಮಾತು ಆಚಾರಗಳನ್ನು ಉಳ್ಳವಳಾಗಿ ಅವರ ಕಷ್ಟ ಸುಖಗಳನ್ನೇ ಹೊಂದುತ್ತಾಳೆ. ಪಾಪ, ಜಗಳ, ಅನ್ಯಾಯ ವಾದ ಕೆಲಸಗಳಲ್ಲಿಯೇ ಆಸಕ್ತಳಾಗಿರುತ್ತಾಳೆ. ಇವುಗಳಲ್ಲಿ ಆಸಕ್ತರಾಗಿರುವವರು ದೈತ್ಯರು. ಅವರೆಲ್ಲರೂ ನರಕಕ್ಕೆ ಹೋಗುತ್ತಾರೆ.

॥ ವೈಶಂಪಾಯನ ಉವಾಚ ॥

ದೈತ್ಯಾದೀನಾಂ ಮೃಷಾಭಾವಾತ್ಸುರತ್ವಂ ನ ಸುರಾಲಯಂ ।
ಕಥಂ ಭೋಗ್ಯಂ ಕಥಂ ಸೌಖ್ಯಂ ಆರೋಗ್ಯಂ ಬಲಸಂಚಯಂ ॥ ೧೩೦ ॥

ರಾಜ್ಯಮಾಯುಸ್ತಥಾ ಕೀರ್ತಿಂ ಅಭೀಷ್ಟಂ ದಯಿತಂ ಬಲಂ ।
ನೀತಿವಿದ್ಯಾದಿಕಂ ಭಾವ್ಯಂ ಜನ್ಮ ವೃದ್ಧಂ ಸನಾತನಂ ॥ ೧೩೧ ॥

ದಾನಾಧ್ಯಯನಕರ್ಮಾಣಿ ಯಜ್ಞಾದಿ ಚ ಕಥಂ ಪ್ರಭೋ ।
ಏತದಾಪ್ತಾಯ ಶಿಷ್ಯಾಯ ಮಹ್ಯಂ ಭೋ ವಕ್ತುಮರ್ಹಸಿ ॥ ೧೩೨ ॥

॥ ವ್ಯಾಸ ಉವಾಚ ॥

ದೈತ್ಯಾನಾಂ ಸಾಹಸಾದೇವ ತಪೋ ಭವತಿ ನಿಶ್ಚಿತಂ ।
ವ್ರತಂ ಯಜ್ಞಾದಿಕಂ ಚೈವ ಸಂಪ್ರೀತಿಸ್ಸ್ವಜನಸ್ಯ ಚ ॥ ೧೩೩ ॥

ಯೋ ದಾನ್ತೋ ವಿಗುಣೈರ್ಮುಕ್ತೋ ನೀತಿಶಾಸ್ತ್ರಾರ್ಥತತ್ವಗಃ ।
ಏತೈಶ್ಚ ವಿವಿಧೈಃ ಪ್ರೀತಃ ಸಭವೇತ್ಸುರಲಕ್ಷಣಃ ॥ ೧೩೪ ॥

ಪುರಾಣಾಗಮಕರ್ಮಾಣಿ ನಾಕೇಷ್ವತ್ರ ಚ ವೈ ದ್ವಿಜಃ ।
ಸ್ವಯಮಾಚರತೇ ಪುಣ್ಯಂ ಸ ಧರೋದ್ಧರಣಕ್ಷಮಃ ॥ ೧೩೫ ॥

---

೧೩೦-೧೩೨. ವೈಶಂಪಾಯನನು ಹೇಳಿದನು- ದೈತ್ಯಾದಿಗಳು ಸುಳ್ಳು ಹೇಳುವುದರಿಂದ ಸುರತ್ವವಿಲ್ಲ. ಸ್ವರ್ಗವಿಲ್ಲ. ಸುಖವಿಲ್ಲ, ಭೋಗಿಸುವಂತಿಲ್ಲ. ಆರೋಗ್ಯ ಬಲಗಳಿಲ್ಲ. ರಾಜ್ಯ, ಆಯುಸ್ಸು, ಕೀರ್ತಿ ಇಷ್ಟಾರ್ಥಗಳಿಲ್ಲ. ನೀತಿ, ವಿದ್ಯೆ, ಉತ್ತಮವಾದ ಜನ್ಮ, ದಾನ, ಅಧ್ಯಯನ, ಯಜ್ಞಾದಿಗಳೂ ಒಂದೂ ಇಲ್ಲ. ಅದಕ್ಕೆ ಹೇಗೆ ಏನು ಮಾಡಬೇಕು ? ಇದನ್ನು ಆಪ್ತಶಿಷ್ಯನಾದ ನನಗೆ ಹೇಳು.

೧೩೩-೧೩೪. ವ್ಯಾಸನು ಹೇಳಿದನು- ದೈತ್ಯರು ಸಾಹಸಕಾರ್ಯವನ್ನು ಮಾಡುವುದರಿಂದಲೇ ಅವರು ತಪಸ್ಸು ಮಾಡುತ್ತಾರೆಂಬುದನ್ನು ಹೇಳಿದಂತಾಯಿತು. ವ್ರತ, ಯಜ್ಞ, ಸ್ವಜನರಲ್ಲಿ ಪ್ರೀತಿ, ಇಂದ್ರಿಯನಿಗ್ರಹ, ಮುಕ್ತಿಯ ಅಪೇಕ್ಷೆ, ನೀತಿಶಾಸ್ತ್ರಗಳನ್ನು ತಿಳಿಯುವುದು, ಇವುಗಳಿಂದ ಸಂತೋಷಪಡುವುದು, ದೇವಲಕ್ಷಣ.

೧೩೫. ವೇದ ಪುರಾಣಗಳ ಕರ್ಮಗಳನ್ನು ಸ್ವರ್ಗಕ್ಕೋಸ್ಕರ ಮಾಡತಕ್ಕ ಬ್ರಾಹ್ಮಣನೇ ಭೂಮಿಯನ್ನುದ್ಧಾರಮಾಡತಕ್ಕವನು.

ಯಶ್ಶೈವೋ ವೈಷ್ಣವಶ್ಚಾಂಡಃ ಸೌರೋ ಗಾಣಾಪ ಏವ ಚ ।
ತಾರಯಿತ್ವಾ ಪಿತ್ರ್ಯಾನ್ಸರ್ವಾನ್ಸಧರೋದ್ಧಾರಣಕ್ಷಮಃ ॥ ೧೩೬ ॥

ವಿಶೇಷೇ ವೈಷ್ಣವಂ ದೃಷ್ಟ್ವಾ ಪ್ರೀಯತೇ ಪೂಜಯೇಚ್ಚ ತಂ ।
ವಿಮುಕ್ತಸ್ಸರ್ವಪಾಪೇಭ್ಯಃ ಸ ಧರೋದ್ಧರಣಕ್ಷಮಃ ॥ ೧೩೭ ॥

ಷಟ್ಕರ್ಮನಿರತೋ ವಿಪ್ರಃ ಸರ್ವಯಜ್ಞರತಸ್ಸದಾ ।
ಧರ್ಮಾಖ್ಯಾನಪ್ರಿಯೋ ನಿತ್ಯಂ ಸ ಧರೋದ್ಧರಣಕ್ಷಮಃ ॥ ೧೩೮ ॥

ವಿಶ್ವಾಸಘಾತಿನೋ ಯೇ ಚ ಕೃತಘ್ನಾ ವ್ರತಲೋಪಿನಃ ।
ದ್ವಿಜದೇವೇಷು ವಿದ್ವಿಷ್ಟಾಃ ಶಾತಯಂತೆ ಧರಾಂ ನರಾಃ ॥ ೧೩೯ ॥

ಪಿತರೌ ಯೇ ನ ಪುಷ್ಣಂತಿ ಸ್ತ್ರಿಯೋ ಗುರುಜನಾನ್ ಶಿಶೂನ್ ।
ದೇವದ್ವಿಜನೃಪಾಣಾಂ ಚ ವಸು ಯೇ ಚ ಹರಂತಿ ವೈ ॥ ೧೪೦ ॥

---

೧೩೬. ಶಿವ, ವಿಷ್ಣು, ಚಂಡಿ, ಸೂರ್ಯ, ಗಣಪರಲ್ಲಿ ಭಕ್ತಿಯುಳ್ಳವನು ತನ್ನ ಪಿತೃಗಳನ್ನುದ್ಧಾರಮಾಡುವುದಲ್ಲದೆ ಭೂಮಿಯನ್ನೂ ಉದ್ಧಾರಮಾಡುತ್ತಾನೆ.

೧೩೭. ವಿಶೇಷ ದಿನಗಳಲ್ಲಿ ವೈಷ್ಣವನನ್ನು ನೋಡಿ ಪ್ರೀತಿಗೊಂಡು ಪೂಜಿಸುವವನು ಪಾಪಗಳಿಂದ ಬಿಡುಗಡೆ ಹೊಂದುವುದಲ್ಲದೆ ಭೂಮಿಯನ್ನು ಉದ್ಧಾರ ಮಾಡುತ್ತಾನೆ.

೧೩೮. ಆರು ಕರ್ಮಗಳಲ್ಲಿ ಆಸಕ್ತನಾಗಿ ಎಲ್ಲಾ ಯಜ್ಞಗಳನ್ನೂ ಮಾಡುತ್ತ ಧರ್ಮದಲ್ಲಿ ಆಸಕ್ತಿಯಿರುವವನು ಭೂಮಿಯನ್ನು ಉದ್ಧರಿಸುತ್ತಾನೆ.

೧೩೯. ವಿಶ್ವಾಸಘಾತಕರು, ಕೃತಘ್ನರು, ವ್ರತಘ್ನರು, ಗೋಬ್ರಾಹ್ಮಣ ದ್ವೇಷಿಗಳು, ಇವರು ಭೂಮಿಯನ್ನು ನಾಶಮಾಡುತ್ತಾರೆ

೧೪೦-೧೪೯. ತಾಯಿತಂದೆಗಳನ್ನು ಪೋಷಿಸದವರೂ, ಸ್ತ್ರೀಯರನ್ನೂ ಗುರುಗಳನ್ನೂ, ಮಕ್ಕಳನ್ನೂ ಪೋಷಿಸದವರೂ, ದೇವರು ಬ್ರಾಹ್ಮಣರು, ರಾಜರು, ಇವರ ಪದಾರ್ಥಗಳನ್ನು ಕದಿಯುವವರೂ, ಶಾಶ್ವತ ನರಕವನ್ನು ಹೊಂದುವವರಾಗಿ

ಅಪುನರ್ಭವಶಾಸ್ತ್ರೇ ಚ ಶಾತಯಂತಿ ಧರಾಂ ನರಾಃ |
ಯೇ ಚ ಮದ್ಯರತಾಃ ಪಾಪಾ ದ್ಯೂತಕರ್ಮರತಾಸ್ತಥಾ || ೧೪೧ ||

ಪಾಷಂಡಪತಿತಾಲಾಪಾಃ ಶಾತಯಂತಿ ಧರಾಂ ನರಾಃ |
ಮಹಾಪಾತಕಿನೋ ಯೇ ಚ ಅತಿಪಾತಕಿನಸ್ತಥಾ || ೧೪೨ ||

ಘಾತಕಾ ಬಹುಜಂತೂನಾಂ ಶಾತಯಂತಿ ಧರಾಂ ನರಾಃ |
ಸುಕರ್ಮರಹಿತಾ ಯೇ ಚ ನಿತ್ಯೋದ್ವೇಗಾಶ್ಚ ನಿರ್ಭಯಾಃ || ೧೪೩ ||

ಸ್ಮೃತಿಶಾಸ್ತ್ರಾರ್ಥಕೋದ್ವಿಗ್ನಾಃ ಶಾತಯಂತಿ ಧರಾಂ ನರಾಃ |
ನಿಜವೃತ್ತಿಂ ಪರಿತ್ಯಜ್ಯ ಕುರ್ವಂತಿ ಚಾಧಮಾಂ ಚ ಯೇ || ೧೪೪ ||

ಗುರುನಿಂದಾರತಾ ದ್ವೇಷಾಶ್ಶಾತಯಂತಿ ಧರಾಂ ನರಾಃ |
ಯೇ ರೋಧಯಂತಿ ದಾತಾರಂ ಪಾತಕೇ ಪ್ರೇರಯಂತಿ ಚ || ೧೪೫ ||

ದೀನಾನಾಥಾನ್ಪೀಡಯಂತಿ ಶಾತಯಂತಿ ಧರಾಂ ನರಾಃ |
ಏತೇ ಚಾನ್ಯೇ ಚ ಬಹವಃ ಪಾಪಕರ್ಮಕೃತೋ ನರಾಃ || ೧೪೬ ||

ಪುರುಷಾನ್ಪಾತಯಿತ್ವಾ ತು ಶಾತಯಂತಿ ಧರಾಂ ನರಾಃ |
ಯ ಇದಂ ಶೃಣುಯಾದ್ರಮ್ಯಂ ಗುಹ್ಯಾದ್ಗುಹ್ಯಂ ಪರಂ ಹಿತಂ || ೧೪೭ ||

---

ಭೂಮಿಯನ್ನೇ ನಾಶಮಾಡುತ್ತಾರೆ. ಮಧ್ಯಪಾನಮಾಡುವವರೂ, ಜೂಜು ಕೋರರೂ, ನಾಸ್ತಿಕರೂ ಪತಿತರೂ ಭೂಮಿಯನ್ನು ನಾಶಮಾಡುತ್ತಾರೆ. ಮಹಾ ಪಾತಕಿಗಳೂ, ಅತಿ ಪಾತಕಿಗಳೂ, ಪ್ರಾಣಿಹಿಂಸಕರೂ ಭೂಮಿಯನ್ನು ನಾಶಮಾಡು ತ್ತಾರೆ. ತಮ್ಮ ಮತಕ್ಕೆ ಯೋಗ್ಯವಾದ ಧರ್ಮವನ್ನು ಬಿಟ್ಟು ಅಧರ್ಮ ಕೆಲಸವನ್ನು ಮಾಡುವವರೂ, ಗುರುನಿಂದೆ ಮಾಡುವವರೂ, ಭೂಮಿಯನ್ನು ನಾಶಮಾಡುತ್ತಾರೆ. ದಾನಮಾಡುವವರನ್ನು ತಡೆಯುವವರೂ, ಪಾಪಕೆಲಸದಲ್ಲಿ ಪ್ರೇರಿಸುವವರೂ, ದೀನರು, ಅನಾಥರನ್ನು ಪೀಡಿಸುವವರೂ, ಭೂಮಿಯನ್ನು ನಾಶಮಾಡುತ್ತಾರೆ. ಇವರೂ ಪಾಪಕರ್ಮದಲ್ಲಿ ಆಸಕ್ತರಾದ ಉಳಿದವರೂ ತಮ್ಮ ಪಿತೃಗಳನ್ನು ನರಕಕ್ಕೆ ತಳ್ಳಿ ಭೂಮಿಯನ್ನು ನಾಶಮಾಡುತ್ತಾರೆ. ರಮ್ಯವಾದ ಅತಿ ಗುಹ್ಯವಾದ ಹಿತವಾದ

ನ ತಸ್ಯ ದುರ್ಗತಿರ್ದುಃಖಂ ದೌರ್ಭಾಗ್ಯಂ ದೀನತಾ ಭುವಿ |
ನ ದೈತ್ಯಾದೌ ಭವೇಜ್ಜನ್ಮ ಸ್ವರ್ಲೋಕೇ ಶಾಶ್ವತಂ ಸುಖಂ || ೧೪೮ ||

ನಾಕಾಲೇ ಮರಣಂ ತಸ್ಯ ನಚ ಪಾಪೈಃ ಪ್ರಲಿಪ್ಯತೇ |
ಇಹ ಸರ್ವಜನಾಧ್ಯಕ್ಷಸ್ತ್ರಿದಿವೇ ತ್ರಿದಿವೇಶ್ವರಃ |
ಕಲ್ಪಂ ಕಲ್ಪಂ ದಿವಂ ಭುಕ್ತ್ವಾ ಮೋಕ್ಷಮಾರ್ಗಂ ವ್ರಜತ್ಯಸೌ || ೧೪೯ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪುಣ್ಯವ್ಯಕ್ತಿರ್ನಾಮ
ಚತುಸ್ಸಪ್ತತಿತಮೋಽಧ್ಯಾಯಃ

---

ಈ ವಿಷಯವನ್ನು ಕೇಳಿದವನು ನರಕಭಾಗಿಯಾಗುವುದಿಲ್ಲ. ದುಃಖವನ್ನೂ ಕೆಟ್ಟತನವನ್ನೂ ದೀನತೆಯನ್ನೂ ಹೊಂದುವುದಿಲ್ಲ. ಅವನಿಗೆ ದೈತ್ಯರಲ್ಲಿ ಜನ್ಮ ಬರುವುದಿಲ್ಲ. ಸ್ವರ್ಗದಲ್ಲಿ ಶಾಶ್ವತ ಸುಖವನ್ನು ಹೊಂದುತ್ತಾನೆ. ಅಕಾಲ ಮರಣ ಬರುವುದಿಲ್ಲ. ಪಾಪವು ಅಂಟುವುದಿಲ್ಲ. ಈ ಲೋಕದಲ್ಲಿ ಸರ್ವರಿಗೂ ಒಡೆಯನಾಗಿದ್ದು ದೇವಲೋಕದಲ್ಲಿ ಅವರಿಗೆ ಒಡೆಯನಾಗಿದ್ದು ಕಲ್ಪ ಕಲ್ಪದಲ್ಲಿಯೂ ಸ್ವರ್ಗ ಸುಖವನ್ನು ಅನುಭವಿಸಿ ಮೋಕ್ಷವನ್ನು ಹೊಂದುತ್ತಾನೆ.

ಇಂತು ಶ್ರೀಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಪುಣ್ಯವ್ಯಕ್ತಿಯೆಂಬ
ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಪಂಚಸಪ್ತತಿತಮೋಽಧ್ಯಾಯಃ ॥



॥ ವೈಶಂಪಾಯನ ಉವಾಚ ॥

ಪ್ರಭವತ್ಯಯಮಾಕಾಶೇ ನಿತ್ಯಂ ದ್ವಿಜವರ ಪ್ರಭೋ ।
ಕೋಽಯಂ ಕೋ ವಾ ಪ್ರಭಾವೋಽಸ್ಯ ಕುತ್ರ ಜಾತೋ ಘೃಣೀಶ್ವರಃ ॥ ೧ ॥
ಕಿಂ ಕರೋತಿ ಹಿ ಕಾರ್ಯಂ ವೈ ಯತೋ ರಶ್ಮಿಮಯೋ ಭೃಶಂ ।
ದೇವೈರ್ಮುನಿವರೈಸ್ಸಿದ್ಧೈಶ್ಚಾರಣೈರ್ದೈತ್ಯರಾಕ್ಷಸೈಃ ॥ ೨ ॥
ನಿಖಿಲೈರ್ಮಾನವೈಃ ಪೂಜ್ಯಃ ಸದೈವ ಬ್ರಾಹ್ಮಣಾದಿಭಿಃ ।

॥ ವ್ಯಾಸ ಉವಾಚ ॥

ಪರಮಂ ಬ್ರಹ್ಮಣಸ್ತೇಜೋ ಬ್ರಹ್ಮದೇಹಾದ್ವಿನಿಸ್ಸೃತಂ ।
ಸಾಕ್ಷಾದ್ಬ್ರಹ್ಮಮಯಂ ವಿದ್ಧಿ ಧರ್ಮಕಾಮಾರ್ಥಮೋಕ್ಷದಂ ॥ ೩ ॥

---

## ಎಪ್ಪತ್ತೈದನೆಯ ಅಧ್ಯಾಯವು

೧-೨. ವೈಶಂಪಾಯನನು ಹೇಳಿದನು- ಎಲೈ ಸ್ವಾಮಿಯೇ! ಆಕಾಶದಲ್ಲಿ ಬೆಳಗುವ ಈತನಾರು ? ಈತನ ಮಹಿಮೆಯೇನು ? ಎಲ್ಲಿ ಹುಟ್ಟಿದವನು ? ಇವನ ಕೆಲಸವೇನು ? ಈತನು ಇಷ್ಟು ಪ್ರಕಾಶವಾಗಿರಲು ಕಾರಣವೇನು ? ದೇವತೆಗಳು ಋಷಿಗಳು, ಸಿದ್ಧರು, ಚಾರಣರು, ದೈತ್ಯರು, ರಾಕ್ಷಸರು, ಮಾನವರು ಎಲ್ಲರೂ ಈತನನ್ನು ಪೂಜಿಸುತ್ತಿರುವರಲ್ಲ ? ಬ್ರಾಹ್ಮಣರು ನಿತ್ಯವೂ ನಮಸ್ಕರಿಸುತ್ತಿರುವರಲ್ಲ! ಕಾರಣವೇನು ?

೩. ವ್ಯಾಸನು ಹೇಳಿದನು- ಇದು ಬ್ರಹ್ಮನ ಉತ್ತಮವಾದ ತೇಜಸ್ಸು. ಬ್ರಹ್ಮನ ದೇಹದಿಂದಲೇ ಈಚೆಗೆ ಬಂದುದು, ಧರ್ಮ, ಕಾಮ, ಅರ್ಥ, ಮೋಕ್ಷ ಗಳನ್ನು ಪ್ರತ್ಯಕ್ಷವಾಗಿ ಕೊಡುವ ಬ್ರಹ್ಮಸ್ವರೂಪವೆಂದೇ ತಿಳಿ.

ಮಯೂಖೈರ್ನಿಖಿಲೈಃ ಕೂಟಮತಿಚಂಡಂ ಸುದುಸ್ಸಹಂ ।
ದೃಷ್ಟ್ವಾ ಪ್ರದುದ್ರುವುರ್ಲೋಕಾಃ ಕರೈಶ್ಚಂಡೈಃ ಪ್ರಪೀಡಿತಾಃ ॥ ೪ ॥

ತತಶ್ಚ ಸಾಗರಾಸ್ಸರ್ವೇ ವರನದ್ಯೋ ನದಾದಯಃ ।
ಶುಷ್ಯಂತಿ ಜಂತವಸ್ತತ್ರ ಮ್ರಿಯಂತೇ ಚಾತುರಾ ಜನಾಃ ॥ ೫ ॥

ಅಥ ಶಕ್ರಾದಯೋ ದೇವಾ ಬ್ರಹಾಣಂ ಸಮುಪಾಗತಾಃ ।
ಇಮಮರ್ಥಂ ತದಾ ಪ್ರೋಚುರ್ದೇವಾಂಶ್ಚ ವಿಧಿರಬ್ರವೀತ್ ॥ ೬ ॥

॥ ಬ್ರಹ್ಮೋವಾಚ ॥

ಆದಿಬ್ರಹ್ಮತನೋರ್ದೇವಾಃ ಸಂಜಾತೋಽಪ್ಸು ಚ ತತ್ಸಮಃ ।
ಅಯಂ ತೇಜೋಮಯೋ ನಿತ್ಯಂ ತಯೋಃ ಪಶ್ಯತ ನಾಂತರಂ ॥ ೭ ॥

ಆಬ್ರಹ್ಮಸ್ತಂಬಪರ್ಯಂತಂ ತ್ರೈಲೋಕ್ಯೇ ಸಚರಾಚರೇ ।
ತಿಷ್ಠತ್ಯಸ್ಯೈವ ಸದ್ಭಾವಃ ಸತ್ವಗೋ ಜನಕಃ ಪ್ರಭುಃ ॥ ೮ ॥

---

೪. ಬಹು ಕಿರಣಗಳ ಉಂಡೆ. ಬಹು ಕ್ರೂರವಾದುದು. ತಡೆಯಲಾಗುವುದಿಲ್ಲ. ಇದನ್ನು ನೋಡಿ ಜನಗಳು ಕಿರಣಗಳ ಬಾಧೆಯನ್ನು ತಡೆಯಲಾರದೆ ಓಡಿದರು.

೫. ಆಗ ಸಮುದ್ರಗಳೆಲ್ಲವೂ, ಒಣಗಿದುವು. ನದ ನದಿಗಳೆಲ್ಲವೂ ಬರಿದಾದುವು. ಜನಗಳು ತಡೆಯಲಾರದೆ ಸತ್ತರು.

೬. ಆಗ ಇದನ್ನು ನೋಡಿ ಇಂದ್ರನೇ ಮುಂತಾದವರು ಬ್ರಹ್ಮನ ಬಳಿಗೆ ಬಂದು ಈ ತೇಜಸ್ಸಿನ ವಿಷಯವನ್ನು ಅರಿಕೆಮಾಡಿಕೊಳ್ಳಲು ಆ ಬ್ರಹ್ಮನು ದೇವತೆಗಳನ್ನು ಕುರಿತು ಇಂತೆಂದನು.

೭. ಬ್ರಹ್ಮನು ಹೇಳಿದನು– ಎಲೈ ದೇವತೆಗಳಿರ ! ಆದಿ ಬ್ರಹ್ಮನ ದೇಹದಿಂದ ಇದು ಹುಟ್ಟಿದೆ. ಅವನಿಗೆ ಸಮವಾದುದು. ಆ ಬ್ರಹ್ಮನಿಗೂ ಇದಕ್ಕೂ ಭೇದವೇ ಇಲ್ಲ.

೮. ಈ ತೇಜಸ್ಸು ಬ್ರಹ್ಮನು ಮೊದಲುಗೊಂಡು ಹುಲ್ಲು ಕಡ್ಡಿಯವರೆಗೂ, ಈ ಚರಾಚರಗಳಲ್ಲಿ ಇರುತ್ತದೆ. ಸತ್ವಗುಣವುಳ್ಳದು. ಸೃಷ್ಟಿಕರ್ತನು. ಪ್ರಭುವು.

ಅಯಂ ರಜೋಮಯಸ್ಸಾಕ್ಷಾತ್ಸುಧಾಂಶುಸ್ತನುಮಧ್ಯಗಃ ।
ಏತಾಭ್ಯಾಂ ಪಾಲಿತಾ ಲೋಕಾಃ ತ್ರೈಲೋಕ್ಯೇ ಸಚರಾಚರಾಃ ॥ ೯ ॥

ದಿವ್ಯೋಪಪಾದುಕಾ ದೇವಾ ಯೇ ವಾತ್ರೈವ ಜರಾಯುಜಾಃ ।
ಅಂಡಜಾ ಸ್ವೇದಜಾಶ್ಚೈವ ಯೇ ವಾತ್ರೈವೋದ್ಭಿಜಾದಯಃ ॥ ೧೦ ॥

ಸೂರ್ಯಸ್ಯಾಸ್ಯ ಪ್ರಭಾವಂ ತು ವಕ್ತುಮೇವ ನ ಶಕ್ನುಮಃ ।
ಅನೇನ ರಕ್ಷಿತಾ ಲೋಕಾ ಜನಿತಾ ಪಾಲಿತಾ ಧ್ರುವಂ ॥ ೧೧ ॥

ಅಸ್ಯೈವ ಸದೃಶೋ ನಾಸ್ತಿ ಸರ್ವೇಷಾಂ ಪರಿರಕ್ಷಣಾತ್ ।
ಯಂ ಚ ದೃಷ್ಟ್ವಾಪ್ಯುಷಃಕಾಲೇ ಪಾಪರಾಶಿಃ ಪ್ರಲೀಯತೇ ॥ ೧೨ ॥

ತಮಾರಾಧ್ಯ ಜನಾ ಮೋಕ್ಷಂ ಸಾಧಯನ್ತಿ ದ್ವಿಜಾತಯಃ ।
ಸಂಧ್ಯೋಪಾಸನಕಾಲೇ ತು ವಿಪ್ರಾ ಬ್ರಹ್ಮವಿದಃ ಕಿಲ ॥ ೧೩ ॥

---

೯. ಈತನು ರಜೋಗುಣವುಳ್ಳವನು. ಈತನ ಮಧ್ಯದಲ್ಲಿ ಅಮೃತಮಯನೊಬ್ಬನಿದ್ದಾನೆ. ಇವರಿಬ್ಬರೂ ಚರಾಚರವಾದ ಈ ಲೋಕವನ್ನು ರಕ್ಷಿಸುತ್ತಿದ್ದಾರೆ.

೧೦. ಎಲೈ ದೇವತೆಗಳಿರಾ ! ಜರಾಯುಜಗಳು (ಜರಾಯುವೆಂಬ ನರದಿಂದ ಸುತ್ತಲ್ಪಟ್ಟುವು) ಅಂಡಜ (ಮೊಟ್ಟೆಯಿಂದ ಹುಟ್ಟುವುದು) ಉದ್ಭಿಜ (ಕುಂಬಳ ಬೀಜ ಮುಂತಾದ ಬೀಜಗಳಿಂದ ಹುಟ್ಟಿದುವು) ಇವೆಲ್ಲವೂ ಕೂಡ ಈತನ ಸಹಾಯದಿಂದಲೇ ಹುಟ್ಟುತ್ತವೆ.

೧೧. ಈ ಸೂರ್ಯನ ಪ್ರಭಾವವನ್ನು ಹೇಳಲಾಗುವುದಿಲ್ಲ. ಈತನೇ ಲೋಕವನ್ನು ಕಾಪಾಡುತ್ತಾನೆ. ಇವನೇ ಉತ್ಪತ್ತಿಮಾಡುತ್ತಾನೆ. ನಿಶ್ಚಯವು.

೧೨. ಎಲ್ಲರನ್ನೂ ಕಾಪಾಡುವುದರಿಂದ ಇವನಿಗೆ ಸಮವು ಮತ್ತೊಂದಿಲ್ಲ. ಬೆಳಗಿನಲ್ಲಿ ಈತನನ್ನು ನೋಡಿದರೆ ಪಾಪಗಳೆಲ್ಲವೂ ನಾಶವಾಗುತ್ತವೆ.

೧೩. ಪರಬ್ರಹ್ಮನನ್ನು ತಿಳಿದ ದ್ವಿಜರು ಸಂಧ್ಯಾವಂದನೆಯ ಕಾಲದಲ್ಲಿ ಈತನನ್ನು ಪೂಜಿಸಿ ಮೋಕ್ಷವನ್ನು ಹೊಂದುತ್ತಾರೆ.

ಉದ್ಭಾಹವೋ ಭವಂತ್ಯೇವ ತೇ ಚ ದೇವಪ್ರಪೂಜಿತಾಃ ।
ಅಸ್ಯೈವ ಮಂಡಲಸ್ಥಾಂ ಚ ದೇವೀಂ ಸಂಧ್ಯಾಸ್ವರೂಪಿಣೀಂ ॥ ೧೪ ॥

ಸಮುಪೋಷ್ಯ ದ್ವಿಜಾಸ್ಸರ್ವೇ ಲಭಂತೇ ಸ್ವರ್ಗಮೋಕ್ಷಕಂ ।
ಧರಾಯಾಂ ಪತಿತೋಚ್ಛಿಷ್ಟಾಃ ಪೂತಾಸ್ತೇ ಚಾಸ್ಯ ರಶ್ಮಿಭಿಃ ॥ ೧೫ ॥

ಸಂಧ್ಯೋಪಾಸನಮಾತ್ರೇಣ ಕಲ್ಮಷಾತ್ಪೂತತಾಂ ವ್ರಜೇತ್ ।
ದೃಷ್ಟ್ವಾ ಚಂಡಾಲಕಂ ಗೋಘ್ನಂ ಪತಿತಂ ಕುಷ್ಠಸಂಗತಂ ॥ ೧೬ ॥

ಮಹಾಪಾತಕಸಂಕೀರ್ಣಮುಪಪಾತಕಸಂವೃತಂ ।
ಪಶ್ಯಂತಿ ಯೇ ನರಾಸ್ಸೂರಂ ತೇ ಪೂತಾ ಗುರುಕಿಲ್ಬಿಷಾತ್ ॥ ೧೭ ॥

ಅಸ್ಯೋಪಾಸನಮಾತ್ರೇಣ ಸರ್ವರೋಗಾತ್ಪ್ರಮುಚ್ಯತೇ ।
ನಾಂಧತ್ವಂ ನ ಚ ದಾರಿದ್ರ್ಯಂ ನ ದುಃಖಂ ನ ಚ ಶೋಚ್ಯತಾಂ ॥ ೧೮ ॥

---

೧೪-೧೫. ಅಂತಹವರು ದೇವತೆಗಳಿಂದಲೂ ಪೂಜಿತರಾಗಿ ಗೌರವವುಳ್ಳವರಾಗುತ್ತಾರೆ. ಇವನ ಮಂಡಲದಲ್ಲಿಯೇ ಇರುವ ಸಂಧ್ಯಾಸ್ವರೂಪಿಣಿಯಾದ ದೇವಿಯನ್ನು ದ್ವಿಜರೂ ಧ್ಯಾನಿಸಿ ಸ್ವರ್ಗ ಮೋಕ್ಷಗಳನ್ನೂ ಹೊಂದುತ್ತಾರೆ. ಭೂಮಿಯಲ್ಲಿ ಪತಿತರೂ ಉಚ್ಛಿಷ್ಟಗಳೂ ಇವನ ಕಾಂತಿಗಳಿಂದ ಪವಿತ್ರರಾಗುತ್ತಾರೆ.

೧೬-೧೭. ಸಂಧ್ಯಾವಂದನೆ ಮಾಡಿದ ಮಾತ್ರದಿಂದಲೇ ಪಾಪವು ಹೋಗಿ ಪರಿಶುದ್ಧರಾಗುತ್ತಾರೆ. ಚಂಡಾಲ, ಗೋಹತಕ, ಪತಿತ, ಕುಷ್ಠರೋಗಿ, ಮಹಾಪಾಪಗಳಿಂದ ಕೂಡಿದವರು, ಉಪಪಾತಕಿಗಳು, ಇವರನ್ನು ನೋಡಿದ ಪಾಪವು ಸೂರ್ಯದರ್ಶನದಿಂದ ಹೋಗುತ್ತದೆ.

೧೮. ಇವನನ್ನು ಪೂಜಿಸಿದರೆ ಎಲ್ಲಾ ರೋಗಗಳೂ ಹೋಗುತ್ತವೆ. ಕುರುಡುತನ, ದಾರಿದ್ರ್ಯ, ದುಃಖ, ದುಸ್ಥಿತಿಗಳೊಂದೂ ಉಂಟಾಗುವುದಿಲ್ಲ.

ಲಭಂತೇ ಚ ಇಹಾಮುತ್ರ ಸಮುಪಾಸ್ಯ ವಿರೋಚನಂ ।
ಪ್ರದೃಷ್ಟಾ ನೈವ ಲೋಕೈಶ್ಚ ದೇವಾ ಹರಿಹರಾದಯಃ ॥
ಧ್ಯಾನರೂಪಪ್ರಗಮ್ಯಾಸ್ತೇ ದೃಷ್ಟೋ ದೇವ ಇಹ ಸ್ಮೃತಃ ॥ ೧೯ ॥

॥ ದೇವಾ ಊಚುಃ ॥

ಅಸ್ತು ಪ್ರಸಾದನಾರಾಧ್ಯಮಸ್ತುಪಾಸನಪೂಜನಂ ।
ಅಸ್ಯೈವ ದರ್ಶನಂ ಬ್ರಹ್ಮನ್ಪ್ರಲಯಾನಲಸನ್ನಿಭಂ ॥ ೨೦ ॥

ಸರ್ವೇ ನರಾದಯಸ್ಸತ್ವಾ ಮೃತಾವಸ್ಥಾಂ ಗತಾ ಭುವಿ ।
ಅಸ್ಯ ತೇಜಃಪ್ರಭಾವೇಣ ಪ್ರಣಷ್ಟಾಸ್ಸಾಗರಾದಯಃ ॥ ೨೧ ॥

ನ ಸಮರ್ಥಾ ವಯಂ ಸೋಢುಂ ಕಥಮನ್ಯೇ ಪೃಥಗ್ಜನಾಃ ।
ತಸ್ಮಾತ್ತವ ಪ್ರಸಾದಾಚ್ಚ ಪೂಜಯಾನೋ ಯಥಾ ರವಿಂ ॥
ಯಜಂತಿ ಚ ನರಾ ಭಕ್ತ್ಯಾ ತದುಪಾಯೋ ವಿಧೀಯತಾಂ ॥ ೨೨ ॥

---

೧೯. ಈ ಸೂರ್ಯನನ್ನು ಪೂಜಿಸಿ ಇಹಪರಗಳಲ್ಲಿ ಒಳ್ಳೆಯದನ್ನು ಹೊಂದುತ್ತಾರೆ. ಹರಿಹರಾದಿ ದೇವತೆಗಳನ್ನು ಜನರು ನೋಡಲು ಆಗುವುದಿಲ್ಲ. ಅವರು ಧ್ಯಾನದಿಂದ ತಿಳಿಯಲರ್ಹರು. ಈ ಸೂರ್ಯನು ಪ್ರತ್ಯಕ್ಷನಾಗಿರುವನು.

೨೦. ದೇವತೆಗಳು ಹೇಳಿದರು- ಈತನನ್ನು ಪೂಜಿಸಿ ಆರಾಧಿಸಬಹುದು. ಧ್ಯಾನದಿಂದಲೂ, ಪೂಜಿಸಬಹುದು. ಆದರೆ ಇವನ ದರ್ಶನವು ಪ್ರಳಯಕಾಲದ ಅಗ್ನಿಗೆ ಸಮಾನವಾದುದು.

೨೧. ಮನುಷ್ಯರೇ ಮೊದಲಾದ ಪ್ರಾಣಿಗಳು ಲೋಕದಲ್ಲಿ ಸತ್ತವರಂತೆ ಕಾರ್ಯ ಶೂನ್ಯರಾಗಿ ಈತನ ತೇಜಸ್ಸಿನಿಂದ ಬಿದ್ದಿರುತ್ತಾರೆ. ಇವನ ಕಾಂತಿಯಿಂದಲೇ ಸಮುದ್ರಗಳೂ ಶೋಷಿಸುತ್ತವೆ.

೨೨. ನಮ್ಮಗಳ ಕೈಯಲ್ಲಿಯೇ ಅವನ ತೇಜಸ್ಸನ್ನೂ ತಡೆಯಲಾಗುವುದಿಲ್ಲ. ಬೇರೆಯವರು ಹೇಗೆ ತಡೆದಾರು ? ಆದ್ದರಿಂದ ನಿನ್ನ ಅನುಗ್ರಹದಿಂದ ನಾವೂ ಬೇರೆ ಯವರೂ ಆತನನ್ನು ಪೂಜಿಸುವ ಉಪಾಯವನ್ನು ತಿಳಿಸು.

॥ ವ್ಯಾಸ ಉವಾಚ ॥

ದೇವಾನಾಂ ವಚನಂ ಶ್ರುತ್ವಾ ಗತೋ ಬ್ರಹ್ಮಾ ಖಗೇಶ್ವರಂ ।
ಗತ್ವಾ ಸ್ತೋತುಂ ಸಮಾರೇಭೇ ಸರ್ವಲೋಕಹಿತಾಯ ವೈ ॥ ೨೩ ॥

॥ ಬ್ರಹ್ಮೋವಾಚ ॥

ದೇವ ತ್ವಂ ಸರ್ವಲೋಕಸ್ಯ ಚಕ್ಷುರ್ಭೂತೋ ನಿರಾಮಯಃ ।
ಬ್ರಹ್ಮರೂಪಧರಸ್ಸಾಕ್ಷಾದ್ದುಷ್ಪ್ರೇಕ್ಷಃ ಪ್ರಳಯಾನಲಃ ॥ ೨೪ ॥

ಸರ್ವದೇವಸ್ಸ್ಥಿತಸ್ತ್ವಂ ಹಿ ಸದಾ ವಾಯುಸಖಸ್ತನೌ ।
ಅನ್ನಾದಿಪಾಚನಂ ತ್ವತ್ತೋ ಜೀವನಂ ಚ ಭವೇದ್ಧ್ರುವಂ ॥ ೨೫ ॥

ಉತ್ಪತ್ತಿಪ್ರಳಯೇ ದೇವ ತ್ವಮೇಕೋ ಭುವನೇಶ್ವರಃ ।
ತ್ವದೃತೇ ಸರ್ವಲೋಕಾನಾಂ ದಿನೈಕಂ ನಾಸ್ತಿ ಜೀವನಂ ॥ ೨೬ ॥

---

೨೩. ವ್ಯಾಸನು ಹೇಳಿದನು- ದೇವತೆಗಳ ಈ ಮಾತನ್ನು ಕೇಳಿ ಬ್ರಹ್ಮನು ಆ ಸೂರ್ಯನ ಬಳಿಗೆ ಹೋಗಿ ಎಲ್ಲಾ ಪ್ರಾಣಿಗಳಿಗೂ ಹಿತವನ್ನುಂಟುಮಾಡುವ ಆಸೆಯಿಂದ ಆತನನ್ನು ಸ್ತೋತ್ರಮಾಡಲು ಪ್ರಾರಂಭಿಸಿದನು.

೨೪. ಬ್ರಹ್ಮನು ಹೇಳಿದನು- ಎಲೈ ಸ್ವಾಮಿಯೇ! ನೀನೇ ಲೋಕಕ್ಕೆಲ್ಲಾ ಕಣ್ಣಾದವನು. ರೋಗರಹಿತನು. ಬ್ರಹ್ಮಸ್ವರೂಪಿಯು. ಪ್ರಳಯಕಾಲದ ಅಗ್ನಿಯಂತೆ ನೋಡಲು ಅಸಾಧ್ಯನಾದವನು.

೨೫. ನೀನು ಎಲ್ಲಾ ದೇವರಲ್ಲಿಯೂ ಇದ್ದೀಯೆ. ದೇಹದಲ್ಲಿದ್ದುಕೊಂಡು ವಾಯುವಿನಿಂದ ಪ್ರೇರಿಸಲ್ಪಟ್ಟು ಅನ್ನಾದಿಗಳನ್ನು ಪಚನಮಾಡುತ್ತೀಯೆ. ನಿನ್ನಿಂದಲೇ ಜೀವನವು ಇರುವುದು ಖಂಡಿತ.

೨೬. ಎಲೈ ಸ್ವಾಮಿಯೇ! ಉತ್ಪತ್ತಿ ನಾಶಗಳು ನಿನ್ನಿಂದಲೇ ಆಗುತ್ತವೆ. ನೀನೇ ಲೋಕಕ್ಕೆಲ್ಲಾ ಒಡೆಯನು. ನೀನು ಒಂದುದಿವಸವಿಲ್ಲದಿದ್ದರೂ ಆ ಪ್ರಾಣಿಗಳು ಜೀವಿಸುವುದೇ ಇಲ್ಲ.

ಪ್ರಭುಸ್ತ್ವಂ ಸರ್ವಲೋಕಾನಾಂ ತ್ರಾತಾ ಗೋಪ್ತಾ ಪಿತಾ ಪ್ರಸೂಃ ।
ಚರಾಚರಾಣಾಂ ಸರ್ವೇಷಾಂ ತ್ವತ್ಪ್ರಸಾದಾದ್ಧೃತಂ ಜಗತ್ ॥ ೨೭ ॥

ದೇವೇಷು ತ್ವತ್ಸಮೋ ನಾಸ್ತಿ ಭಗವಂಸ್ತ್ವಖಿಲೇಷು ಚ ।
ಅಂತರ್ದೇಹೇಷು ಬಾಹ್ಯೇಷು ಸರ್ವೇಷು ಭುವನೇಷು ಚ ॥
ಸರ್ವತ್ರ ತೇಽಸ್ತಿ ಸದ್ಭಾವಃ ತ್ವಯ್ಯೈವ ಧಾರಿತಂ ಜಗತ್ ॥ ೨೮ ॥

ರೂಪಗಂಧಾದಿಕಾರಿತ್ವಂ ರಸಾನಾಂ ಸ್ವಾದುತಾ ತಥಾ ।
ಏವಂ ವಿಶ್ವೇಶ್ವರಸ್ಸೂರ್ಯೋ ನಿಖಿಲಸ್ಥಿತಿಕಾರಕಃ ॥ ೨೯ ॥

ತೀರ್ಥಾನಾಂ ಪುಣ್ಯಕ್ಷೇತ್ರಾಣಾಂ ಮಖಾನಾಂ ಜಗತಃ ಪ್ರಭೋ ।
ತ್ವಮೇಕಃ ಪ್ರಯತೋ ಹೇತುಃ ಸರ್ವಸಾಕ್ಷೀ ಗುಣಾಕರಃ ॥ ೩೦ ॥

ಸರ್ವಜ್ಞಸ್ಸರ್ವಕರ್ತಾ ಚ ಹರ್ತಾ ಪಾತಾ ಸದೋತ್ಸುಕಃ ।
ಧ್ವಾಂತ ಪಂಕಾಮಯಘ್ನಶ್ಚ ದುಃಖದಾರಿದ್ರ್ಯನಾಶನಃ ॥ ೩೧ ॥

---

೨೭-೨೮. ನೀನೇ ಲೋಕಕ್ಕೆಲ್ಲಾ ಪ್ರಭುವು. ಕಷ್ಟದಿಂದಲೂ, ಆಹಾರದಾನದಿಂದಲೂ ಕಾಪಾಡತಕ್ಕವನು. ಉತ್ಪತ್ತಿಕರ್ತನು. ಚರಾಚರವಾದ ಜಗತ್ತು ನಿನ್ನ ಅನುಗ್ರಹದಿಂದಲೇ ಧರಿಸಲ್ಪಟ್ಟಿದೆ. ದೇವತೆಗಳಲ್ಲಿ ನಿನಗೆ ಸಮರಿಲ್ಲ. ಪ್ರಪಂಚದಲ್ಲಿಯೇ ನಿನ್ನ ಸಮರಿಲ್ಲ ದೇಹದಲ್ಲಿ ಒಳಗೆ ಹೊರಗೆ ಪ್ರಪಂಚದಲ್ಲಿ ಎಲ್ಲಾ ಕಡೆಯಲ್ಲಿಯೂ ಎಲ್ಲೆಲ್ಲಿಯೂ ನೀನೇ ಇದ್ದೀಯೆ. ನೀನೇ ಪ್ರಪಂಚವನ್ನು ಧರಿಸಿದ್ದೀಯೆ.

೨೯. ನೀನೇ ರೂಪವನ್ನೂ, ಗಂಧವನ್ನೂ, ರಸವನ್ನೂ, ರುಚಿಯನ್ನೂ ಉಂಟುಮಾಡುತ್ತೀಯೆ. ನೀನೇ ವಿಶ್ವೇಶ್ವರನು. ಸೂರ್ಯನು. ಎಲ್ಲವೂ ಇರುವಂತೆ ಮಾಡಿರತಕ್ಕವನು.

೩೦. ತೀರ್ಥಗಳು, ಪುಣ್ಯಕ್ಷೇತ್ರಗಳು, ಯಜ್ಞಗಳು ಇವೆಲ್ಲಕ್ಕೂ ನೀನೇ ಕಾರಣನು. ನೀನೇ ಎಲ್ಲಕ್ಕೂ ಸಾಕ್ಷಿಯಾಗಿರುತ್ತೀಯೆ. ಗುಣಗಳಿಗೆ ಸ್ಥಾನನು.

೩೧. ನೀನು ಸರ್ವಜ್ಞನು. ಸರ್ವಕ್ಕೂ ಕರ್ತನು. ನಾಶಕನು. ಕಾಪಾಡುವವನು. ಒಳ್ಳೆಯ ಮನಸ್ಸುಳ್ಳವನು. ಕತ್ತಲೆ ಕೆಸರು ರೋಗಗಳನ್ನು ನಾಶಮಾಡುವವನು. ದುಃಖದಾರಿದ್ರ್ಯಗಳನ್ನು ನಾಶಮಾಡುವವನು.

ಪ್ರೇತ್ಯೇಹ ಚ ಪರೋ ಬಂಧುಃ ಸರ್ವಜ್ಞಸ್ಸರ್ವಲೋಕನಃ ।
ತ್ವದೃತೇ ಸರ್ವಲೋಕಾನಾಮುಪಕಾರೀ ನ ವಿದ್ಯತೇ ॥ ೩೨ ॥

ಪಿತಾಮಹ ಮಹಾಪ್ರಾಜ್ಞ ವಿಶ್ವೇಂದ್ರ ವಿಶ್ವಭಾವಕ ।
ಬ್ರೂಹಿ ಶೀಘ್ರಂ ಪರಂ ಯತ್ತೇ ಕರಿಷ್ಯಾಮಿ ಕೃತಂ ವಿಧೇ ॥ ೩೩ ॥

॥ ಬ್ರಹ್ಮೋವಾಚ ॥

ಮಯೂಖಿಸ್ತ್ವತಿ ಚಂಡಶ್ಚ ಲೋಕಾನಾಮತಿದುಸ್ಸಹಃ ।
ಯಥೈವ ಮೃದುತಾಮೇತಿ ತಥಾ ಕುರು ಸುರೇಶ್ವರ ॥ ೩೪ ॥

॥ ಆದಿತ್ಯ ಉವಾಚ ॥

ಕಿರಣಂ ಕೋಟಿಕೋಟಿಂ ಮೇ ಲೋಕನಾಶಕರಂ ಪರಂ ।
ಪೆಚಾಭೀಷ್ಣಕರಂ ಲೋಕೇ ಪ್ರಯೋಗೇಣಾಚ್ಛಿದ ಪ್ರಭೋ ॥ ೩೫ ॥

---

೩೨. ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ನೀನೇ ಬಂಧುವು. ಸರ್ವಜ್ಞನು. ಎಲ್ಲವನ್ನೂ ನೋಡುವವನು. ನಿನ್ನ ಹೊರತು ಪ್ರಪಂಚಕ್ಕೆ ಬೇರೆ ಉಪಕಾರಿಯೇ ಇಲ್ಲವು.

೩೩. ಆದಿತ್ಯನು ಹೇಳಿದನು-ಎಲೈ ಪ್ರಾಜ್ಞನೂ, ಪ್ರಪಂಚಕ್ಕೆ ಒಡೆಯನೂ ಆದ ಪಿತಾಮಹನೇ! ನಿನಗೇನು ಬೇಕು? ಹೇಳು. ಮಾಡಿಕೊಡುತ್ತೇನೆ.

೩೪. ಬ್ರಹ್ಮನು ಹೇಳಿದನು– ನಿನ್ನ ಕಿರಣಗಳು ಬಹು ಉಗ್ರವಾಗಿವೆ. ಲೋಕವು ತಡೆಯಲಾರದು. ಅದು ಮೃದುವಾಗುವಂತೆ ಮಾಡು.

೩೫. ಆದಿತ್ಯನು ಹೇಳಿದನು– ನನ್ನ ಕಿರಣಗಳು ಕೋಟಿ ಕೋಟಿಗಟ್ಟಲೆ ಇವೆ. ಲೋಕವನ್ನೇನೋ ನಾಶಮಾಡುತ್ತವೆ. ಲೋಕಕ್ಕೆ ಹಿತಕರಗಳಲ್ಲ. ಇದನ್ನು ಏನಾದರೂ ಮಾಡಿ ನೀನೇ ಕಡಿಮೆ ಮಾಡು.

॥ ವ್ಯಾಸ ಉವಾಚ ॥

ತತೋ ವಿರಿಂಚಿನಾ ತೂರ್ಣಂ ರವಿವಾಕ್ಯವಶಾದ್ಧ್ರುವಂ ।
ಆಹೂಯ ವಿಶ್ವಕರ್ಮಾಣಂ ಕೃತ್ವಾ ವಜ್ರಮಯೀಂ ಭ್ರಮೀಂ ॥ ೩೬ ॥

ಚಿಚ್ಛೇದ ಚ ರವೇರ್ಭಾನುಂ ಪ್ರಳಯಾನಲಸನ್ನಿಭಂ ।
ತೇನೈವ ರಚಿತಂ ತತ್ರ ವಿಷ್ಣೋಶ್ಚಕ್ರಂ ಸುದರ್ಶನಂ ॥ ೩೭ ॥

ಅಮೋಘೋ ಯಮದಂಡಶ್ಚ ಶೂಲಂ ಪಶುಪತೇಸ್ತಥಾ ।
ಕಾಲಸ್ಯ ಚ ಪರಃ ಖಡ್ಗಃ ಶಕ್ತಿರ್ಗುಹಪ್ರಮೋದಿನೀ ॥ ೩೮ ॥

ಚಂಡಿಕಾಯಾಃ ಪರಂ ಶಸ್ತ್ರಂ ವಿಚಿತ್ರಂ ಶೂಲಕಂ ತಥಾ ।
ಚಕ್ರೇ ಬ್ರಹ್ಮಾಜ್ಞಯಾ ಶೀಘ್ರಂ ತೇನೈವ ವಿಶ್ವಕರ್ಮಣಾ ॥ ೩೯ ॥

ಸಹಸ್ರಕಿರಣಂ ಶಿಷ್ಟಮನ್ಯಚ್ಛೈವ ಪ್ರಶಾತಿತಂ
ಅಜನೋಪಾಯಭಾವೇನ ಪುನಶ್ಚ ಕಶ್ಯಪಾನ್ಮುನೇಃ ॥ ೪೦ ॥

---

೩೬–೩೭. ವ್ಯಾಸನು ಹೇಳಿದನು- ಆಗ ಸೂರ್ಯನ ಈ ಮಾತಿನಿಂದ ಬ್ರಹ್ಮನು ವಿಶ್ವಕರ್ಮನನ್ನು ಕರೆಸಿ ವಜ್ರದ ಚಕ್ರವನ್ನು ಮಾಡಿಸಿ ಪ್ರಳಯಾಗ್ನಿಯಂತಿದ್ದ ಆ ಸೂರ್ಯನ ಕಿರಣಗಳನ್ನು ಕತ್ತರಿಸಿದನು. ಆ ಕಾಂತಿಯಿಂದಲೇ ವಿಷ್ಣುವಿಗೆ ಸುದರ್ಶನ ವನ್ನೂ ಮಾಡಿಕೊಟ್ಟನು.

೩೮–೩೯. ಅದರಿಂದಲೇ ಯಮನಿಗೆ ಯಮದಂಡವನ್ನೂ, ಶಿವನಿಗೆ ಶೂಲ ವನ್ನೂ, ಕಾಲನಿಗೆ ಖಡ್ಗವನ್ನೂ, ಗುಹನಿಗೆ ಶಕ್ತ್ಯಾಯುಧವನ್ನೂ, ಚಂಡಿಕೆಗೆ ಶಸ್ತ್ರ ವನ್ನೂ, (ಶಕ್ತಿ) ವಿಚಿತ್ರವಾದ ಶೂಲವನ್ನೂ ಆ ವಿಶ್ವಕರ್ಮನು ಬ್ರಹ್ಮನ ಅಪ್ಪಣೆ ಯಿಂದಲೇ ಮಾಡಿಕೊಟ್ಟನು.

೪೦–೪೧. ಅವನಿಗೆ ಸಾವಿರ ಕಿರಣಗಳು ಮಾತ್ರ ಉಳಿದುವು. ಅವನ್ನು ಮಾತ್ರ ಪ್ರಕಾಶಿಸುವನು. ಮಿಕ್ಕುದೆಲ್ಲವನ್ನೂ ಉಜ್ಜಿಬಿಟ್ಟನು. ಮತ್ತೆ ಕಶ್ಯಪನಿಂದ

**ಅದಿತೇರ್ಗರ್ಭಸಂಜಾತ ಆದಿತ್ಯ ಇತಿ ವೈ ಸ್ಮೃತಃ ।**
**ಅಯಂ ಚರತಿ ವಿಶ್ವಾಂತೇ ಮೇರುಶೃಂಗಂ ಭ್ರಮತ್ಯಪಿ ॥ ೪೧ ॥**

**ಸದೋರ್ಧ್ವಂ ದಿನರಾತ್ರಂ ಚ ಧರಣ್ಯಾ ಲಕ್ಷಯೋಜನೇ ।**
**ಗ್ರಹಾಶ್ಚಂದ್ರಾದಯಸ್ತತ್ರ ಚರಂತಿ ವಿಧಿನೋದಿತಾಃ ॥ ೪೨ ॥**

**ಸೂರ್ಯಸ್ಸಂಚರತೇ ಮಾಸಾನ್ದ್ವಾದಶದ್ವಾದಶಾತ್ಮಕಃ ।**
**ಸಂಕ್ರಮಾದಸ್ಯ ಸಂಕ್ರಾಂತಿಃ ಸರ್ವೈರೇವ ಪ್ರಗೀಯತೇ ॥ ೪೩ ॥**

**ತಾಸು ಯದ್ವಾ ಫಲಂ ಬ್ರೂಮೋ ಲೋಕಾನಾಂ ನಿಖಿಲಂ ಮುನೇ ।**
**ಧನುರ್ಮಿಥುನಮೀನೇಷು ಕನ್ಯಾಯಾಂ ಷಡಶೀತಯಃ ॥ ೪೪ ॥**

**ವೃಷವೃಶ್ಚಿಕಕುಂಭೇಷು ಸಿಂಹೇ ವಿಷ್ಣುಪದೀ ಸ್ಮೃತಾ ।**
**ಷಡಶೀತಿ ಸಹಸ್ರಾಣಿ ಷಡಶೀತ್ಯಾಂ ಫಲಂ ಲಭೇತ್ ॥ ೪೫ ॥**

---

ಅದಿತಿಯು ಗರ್ಭದಲ್ಲಿ ಹುಟ್ಟಿ ಆದಿತ್ಯನೆಂದು ಹೆಸರನ್ನು ಹೊಂದಿದನು. ಇವನೇನೇ ಲೋಕದಲ್ಲೆಲ್ಲಾ ಸುತ್ತುತ್ತಿರುವನು. ಮೇರುವಿನ ಶಿಖರವನ್ನೂ ಸುತ್ತುತ್ತಿರುವನು.

೪೨. ಭೂಮಿಗೆ ಲಕ್ಷಯೋಜಗಳ ಮೇಲೆ ಈ ಸೂರ್ಯನು ಹಗಲೂ ರಾತ್ರಿಯೂ ಸುತ್ತುತ್ತಿರುವನು. ಅಲ್ಲಿಯೇ ಬ್ರಹ್ಮನ ಅಪ್ಪಣೆಯಂತೆ ಚಂದ್ರಾದಿಗ್ರಹಗಳೂ ಸುತ್ತುತ್ತಿರುತ್ತವೆ.

೪೩. ಸೂರ್ಯನು ಹನ್ನೆರಡು ಭಾಗಗಳಾಗಿ ಭಾಗಿಸಿಕೊಂಡು ಮಾಸಮಾಸಕ್ಕೂ ಬೇರೆ ಬೇರೆಯಾಗಿ ಸಂಚರಿಸುವನು. ಇವನು ತಿಂಗಳಿಗೊಂದಾವರ್ತಿ ಒಂದು ಜಾಗದಲ್ಲಿ ಸೇರುವುದರಿಂದ ಸಂಕ್ರಾಂತಿಯೆಂದು ಹೆಸರಾಗುತ್ತದೆ.

೪೪. ಆ ಸಂಕ್ರಾಂತಿಗಳಲ್ಲಿ ಲೋಕಕ್ಕೆ ಉಂಟಾಗುವ ಫಲವನ್ನೂ ಹೇಳುತ್ತೇನೆ. ಧನುಸ್ಸು, ಮಿಥುನ, ಕನ್ಯ, ಮೀನಗಳಲ್ಲಿ ಸಂಕ್ರಾಂತಿಗೆ ಷಡಶೀತಿ ಪುಣ್ಯಕಾಲವೆಂದು ಹೆಸರು.

೪೫. ವೃಷಭ, ವೃಶ್ಚಿಕ, ಕುಂಭ, ಸಿಂಹಗಳ ಸಂಕ್ರಮಣಕ್ಕೆ ವಿಷ್ಣುಪದೀ ಪುಣ್ಯಕಾಲವೆಂದು ಹೆಸರು. ಷಡಶೀತಿ ಪುಣ್ಯಕಾಲಗಳಲ್ಲಿ ಎಂಭತ್ತಾರು ಸಾವಿರ ಫಲಗಳನ್ನು ಹೊಂದುತ್ತಾನೆ.

ವಿಷ್ಣುಪದ್ಯಾಂ ತು ಲಕ್ಷಂ ತು ಅಯನೇ ಕೋಟಿಕೋಟಿಕಂ ।
ದ್ವಯೋರಯನಯೋಃ ಕರ್ಮ ಯತ್ಕೃತಂ ಚಾಕ್ಷಯಂ ಭವೇತ್ ॥ ೪೬ ॥

ಮಕರೇ ಚ ಯದಾಚಾರೇ ಶೃಣು ಸಂಕ್ರಮಣೇ ದ್ವಿಜ ।
ಸ್ನಾನಂ ತತ್ರಾಪ್ಯುಷಃ ಕಾಲೇ ಗೋದಾನಾದಯುತಂ ಫಲಂ ॥ ೪೭ ॥

ತರ್ಪಣಂ ಚಾಕ್ಷಯಂ ವಿದ್ಧಿ ದಾನಂ ದೇವಾರ್ಚನಂ ತಥಾ ।
ವಿಷ್ಣುಪದ್ಯಾಂ ತಥಾ ದಾನಮಕ್ಷಯಂ ಪರಿಕೀರ್ತಿತಂ ॥ ೪೮ ॥

ದಾತುರ್ವದಾಮಿ ಸಾನ್ನಿಧ್ಯಂ ಸದಾ ಜನ್ಮನಿ ಜನ್ಮನಿ ।
ಶೀತೇ ತೂಲಪಟೀದಾನಾನ್ನ ದುಃಖಂ ಜಾಯತೇ ತನೌ ॥ ೪೯ ॥

ತುಲಾದಾನಂ ತಥಾ ಶಯ್ಯಾ ದ್ವಯೋರೇವಾಕ್ಷಯಂ ಫಲಂ ।
ಸರ್ವೋಪಕರಣಾಂ ಶಯ್ಯಾಂ ಯೋ ದದಾತಿ ವಿಮತ್ಸರಃ ॥ ೫೦ ॥

---

೪೬. ವಿಷ್ಣುಪದಿಯಲ್ಲಿ ಲಕ್ಷವಷ್ಟು, ಕಟಕ, ಮಕರಗಳ ಉತ್ತರಾಯಣ ದಕ್ಷಿಣಾಯನ ಪುಣ್ಯಕಾಲಗಳಲ್ಲಿ ಕೋಟಿ ಕೋಟಿಯಷ್ಟು ಫಲವು ಬರುತ್ತದೆ. ಉತ್ತರಾಯಣ ದಕ್ಷಿಣಾಯನಗಳಲ್ಲಿ ಮಾಡಿದ ಕರ್ಮವು ಅಕ್ಷಯವಾಗುತ್ತದೆ.

೪೭. ಮಕರ ಸಂಕ್ರಮಣದಲ್ಲಿ ಬರುವ ಪುಣ್ಯವನ್ನು ಕೇಳು. ಉಷಃ ಕಾಲದಲ್ಲಿ ಸ್ನಾನಮಾಡಿದರೆ ಗೋದಾನ ಮಾಡಿದರೆ ಬರುವ ಫಲದ ಸಾವಿರದಷ್ಟು ಫಲವು ಬರುತ್ತದೆ.

೪೮. ಆಗ ಮಾಡಿದ ತರ್ಪಣವು ಅಕ್ಷಯವಾಗುತ್ತದೆ. ದಾನ, ದೇವತೆಗಳ ಪೂಜೆಯೂ ಅಕ್ಷಯವಾಗುತ್ತವೆ. ವಿಷ್ಣುಪದಿಯಲ್ಲಿ ಸ್ನಾನಮಾಡಿದರೂ, ಅಕ್ಷಯ ಪುಣ್ಯವು ಬರುತ್ತದೆ.

೪೯. ದಾನಮಾಡಿದವನು ಜನ್ಮಜನ್ಮಕ್ಕೂ ಆ ಧರ್ಮದ ಫಲವನ್ನು ಹೊಂದುತ್ತಾನೆ. ಶೀತಕಾಲದಲ್ಲಿ ಹತ್ತಿಯ ಬಟ್ಟೆಯನ್ನು ದಾನಮಾಡಿದರೆ ದೇಹದಲ್ಲಿ ದುಃಖವನ್ನು ಹೊಂದುವುದಿಲ್ಲ.

೫೦-೫೧. ತುಲಾದಾನ ಶಯ್ಯಾದಾನಗಳಿಗೆ ಅಕ್ಷಯವಾದ ಫಲವುಂಟು ಉಪಕರಣಗಳಿಂದ ಕೂಡಿದ ಹಾಸಿಗೆಯನ್ನು ದುಃಖಪಡದೆ ಬ್ರಾಹ್ಮಣನಿಗೆ ದಾನಮಾ

ವರ್ಣಮುಖ್ಯಾಯ ವಿಪ್ರಾಯ ಸ ರಾಜಪದವೀಂ ಲಭೇತ್ ।
ತಥೈವಾಗ್ನಿ ಜಲಂ ದತ್ವಾ ನದೀತೀರೇ ಪಥಿ ಪ್ರಗೇ ॥ ೫೧ ॥

ದತ್ವಾ ಚ ತೈಲತಾಂಬೂಲಮುರ್ವ್ಯಾ ಅಧಿಪತಿರ್ಭವೇತ್ ।
ಭಕ್ತಿಭಾವಾದ್ದ್ವಿಜಂ ನತ್ವಾ ಧನೀಚಾಕ್ಷಯತಾಂ ವ್ರಜೇತ್ ॥ ೫೨ ॥

ಮಾಘೇ ಮಾಸ್ಯಸಿತೇ ಪಕ್ಷೇ ಪಂಚದಶ್ಯಾಮುಹರ್ಮುಖೇ ।
ಪಿತೄಂಸ್ತೃಣಜಲೈರೇವ ತರ್ಪಯಿತ್ವಾಽಕ್ಷಯೋ ದಿವಿ ॥ ೫೩ ॥

ಸುಲಕ್ಷಣಾಂ ಚ ಗಾಂ ದತ್ವಾ ಹೇಮಶೃಂಗಾಂ ಮಣಿಪ್ರಭಾಂ ।
ರೌಪ್ಯಖುರಪ್ರದೇಶಾಂ ಚ ತಥಾ ಕಾಂಸ್ಯಸುದೋಹನಾಂ ॥ ೫೪ ॥

ಏತಾಂ ದತ್ವಾ ದ್ವಿಜಾಗ್ರ್ಯಾಯ ಸಾರ್ವಭೌಮೋ ಭವೇನ್ನೃಪಃ ।
ದತ್ವಾನ್ನಾಭರಣಂ ರಾಜಾ ಮಂಡಲೇಶೋ ಧನೇಶ್ವರಃ ॥ ೫೫ ॥

ತಿಲಧೇನುಂ ಚ ಯೋ ದದ್ಯಾತ್ಸರ್ವೋಪಸ್ಕರಣಾನ್ವಿತಾಂ ।
ಸಪ್ತಜನ್ಮಾರ್ಜಿತಾತ್ಪಾಪಾನ್ಮುಕ್ತೋ ನಾಕೇಽಕ್ಷಯೋ ಭವೇತ್ ॥ ೫೬ ॥

---

ಡಿದರೆ ಅವನಿಗೆ ರಾಜಪದವಿಯು ಬರುತ್ತದೆ. ನದಿಯ ದಡದಲ್ಲಿ, ದಾರಿಯಲ್ಲಿ, ಬೆಳಗಿನ ಹೊತ್ತಿನಲ್ಲಿ, ಜಾಗಕ್ಕೆ ಅನುಸಾರವಾಗಿ, ಬೆಂಕಿ ನೀರುಗಳನ್ನೂ. ಎಣ್ಣೆ ತಾಂಬೂಲಗಳನ್ನೂ, ಕೊಟ್ಟರೆ ಭೂಮಿಗೆ ಅಧಿಪತಿಯಾಗುತ್ತಾನೆ ಭಕ್ತಿಯಿಂದ ಬ್ರಾಹ್ಮಣನಿಗೆ ನಮಸ್ಕರಿಸಿದರೆ ಧನವನ್ನು ಅಕ್ಷಯವಾಗಿ ಹೊಂದುತ್ತಾನೆ.

೫೩. ಮಾಘಮಾಸದ ಕೃಷ್ಣಪಕ್ಷದ ಅಮಾವಾಸ್ಯೆಯಲ್ಲಿ ಬೆಳಗ್ಗೆ ಪಿತೃಗಳಿಗೆ ತರ್ಪಣ ಮಾಡಿದರೆ ಸ್ವರ್ಗದಲ್ಲಿ ಅಕ್ಷಯವಾಗುತ್ತದೆ.

೫೪-೫೫. ಚಿನ್ನದ ಕೊಂಬಿನ ಗೊಣಸುಳ್ಳ, ಮಣಿಗಳಿಂದ ಅಲಂಕೃತವಾದ, ಬೆಳ್ಳಿಯ ಕಾಲು ಗೊರಸನ್ನು ಹಾಕಿರುವ, ಕರೆಯುವ ಹಸುವನ್ನು, ಕಂಚಿನ ಕರೆಯುವ ಪಾತ್ರೆಗಳೊಡನೆ ಬ್ರಾಹ್ಮಣನಿಗೆ ಕೊಟ್ಟರೆ ಚಕ್ರವರ್ತಿಯಾಗುತ್ತಾನೆ. ಅನ್ನ ಒಡವೆಗಳನ್ನು ದಾನಮಾಡಿದರೆ ಚಕ್ರವರ್ತಿಯಾಗುವನು.

೫೬. ಪರಿಕರಗಳಿಂದ ಕೂಡಿಥ ತಿಲಧೇನುವನ್ನು ದಾನಮಾಡಿದರೆ ಏಳು ಜನ್ಮಗಳ ಪಾಪಗಳೂ ಹೋಗಿ ಅಕ್ಷಯವಾದ ಮುಕ್ತಿಯನ್ನು ಹೊಂದುತ್ತಾನೆ.

ಭೋಜ್ಯಾನ್ನಂ ಬ್ರಾಹ್ಮಣೇ ದತ್ವಾ ಅಕ್ಷಯಂ ಸ್ವರ್ಗಮಶ್ನುತೇ ।
ಧಾನ್ಯಂ ವಸ್ತ್ರಂ ತಥಾ ಭೃತ್ಯಂ ಗೃಹಪೀಠಾದಿಕಂ ಚ ಯತ್ ॥ ೫೭ ॥

ಯೋ ದದಾತಿ ದ್ವಿಜಾಗ್ರ್ಯಾಯ ತಂ ಚ ಲಕ್ಷ್ಮೀರ್ನಮುಂಚತಿ ।
ಯತ್ಕಿಂಚಿದ್ದೀಯತೇ ದಾನಂ ಸ್ವಲ್ಪಂ ವಾ ಯದಿ ವಾ ಬಹು ॥ ೫೮ ॥

ಅಕ್ಷಯಂ ಪರಲೋಕೇಷು ಯುಗಾದ್ಯಾಸು ತಥೈವ ಚ ।
ಯದ್ವಾ ದೇವಾರ್ಚನಂ ಸ್ತೋತ್ರಂ ಧರ್ಮಾಖ್ಯಾನಪ್ರತಿಶ್ರವಃ ॥ ೫೯ ॥

ಪುನಾತಿ ಸರ್ವಪಾಪೇಭ್ಯೋ ದಿವಿ ಪೂಜ್ಯೋ ಭವತ್ಯಸೌ ।
ತೃತೀಯಾ ಮಾಘಮಾಸಸ್ಯ ಸಿತಾ ಮನ್ವಂತರಾ ಸ್ಮೃತಾ ॥ ೬೦ ॥

ತಸ್ಯಾಂ ಯದ್ದೀಯತೇ ದಾನಂ ಸರ್ವಮಕ್ಷಯಮಶ್ನುತೇ ।
ಧನಂ ಭೋಗ್ಯಂ ತಥಾ ರಾಜ್ಯಂ ನಾಕಂ ಕಲ್ಪೋತ್ತರಸ್ಥಿತಂ ॥ ೬೧ ॥

ತಸ್ಮಾದ್ದಾನಂ ಸತಾಂ ಪೂಜಾ ಪ್ರೇತ್ಯಾನಂದಫಲಪ್ರದಂ ।
ಮನ್ವಂತರಾ ತು ಮಾಘೇಸ್ಯಾತ್ಸಪ್ತಮೀ ಯಾಽಸಿತೇತರಾ ॥ ೬೨ ॥

---

೫೭-೬೧. ಬ್ರಾಹ್ಮಣನಿಗೆ ಸಾಕಾಗುವಷ್ಟು ಊಟದ ವೃತ್ತಿಯನ್ನು ಕಲ್ಪಿಸಿದರೆ ಅಕ್ಷಯವಾದ ಸ್ವರ್ಗವು ಬರುತ್ತದೆ. ಧಾನ್ಯ, ವಸ್ತ್ರ, ಮನೆ, ಆಳು, ಪೀಠ, ಮುಂತಾದುವನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಸಂಪತ್ತು ಇವನನ್ನು ಬಿಡುವುದೇ ಇಲ್ಲ. ಯುಗಾದಿಗಳಲ್ಲಿ ಹೆಚ್ಚಾಗಿಯಾಗಲಿ ಸ್ವಲ್ಪವಾಗಿಯಾಗಲಿ ದಾನಮಾಡಿದರೆ ಪರಲೋಕದಲ್ಲಿ ಅದು ಅಕ್ಷಯವಾಗುತ್ತದೆ ಆ ಯುಗಾದಿಗಳಲ್ಲಿ ದೇವತಾರ್ಚನೆ, ಮಾಡುತ್ತ ದೇವತಾ ಸ್ತೋತ್ರಗಳನ್ನೂ, ಹೇಳಿದರೆ ಅಥವಾ ಕೇಳಿದರೆ ಎಲ್ಲಾ ಪಾಪಗಳನ್ನು ಕಳೆದುಕೊಂಡು ಸ್ವರ್ಗವನ್ನು ಹೊಂದುತ್ತಾನೆ

೬೧-೬೫. ಆಗ ಮಾಡಿದ ದಾನವು ಅಕ್ಷಯವಾಗುತ್ತದೆ. ಧನ, ಭೋಗ ಪದಾರ್ಥ, ರಾಜ್ಯ, ಸ್ವರ್ಗಗಳೆಲ್ಲವೂ ಬಹುಕಾಲವಿರಬೇಕಾದರೆ ದಾನಮಾಡಬೇಕು. ಸತ್ಪುರುಷರಿಗೆ ಪೂಜೆ ಮಾಡಬೇಕು. ಹಾಗೆ ಮಾಡಿದರೆ ಸತ್ತನಂತರ ಅನಂತಫಲ ವನ್ನೂ ಹೊಂದುತ್ತಾನೆ. ಮಾಘಮಾಸದ ಶುದ್ಧ ಸಪ್ತಮಿಯು ಮನ್ವಂತರವೆಂದೆ

ತಿಥಿಃ ಪುಣ್ಯತಮಾ ಪ್ರೋಕ್ತಾ ಪುರಾಣೈರಭಿರಕ್ಷಿತಾ ।
ಮಾಘಮಾಸೇ ಸಿತೇ ಪಕ್ಷೇ ಸಪ್ತಮೀ ಕೋಟಿಭಾಸ್ಕರಾ ॥ ೬೩ ॥

ತಾಮುಪೋಷ್ಯ ನರಃ ಪುಣ್ಯಾಂ ಮುಚ್ಯತೇ ಜನ್ಮಬಂಧನಾತ್ ।
ಸೂರ್ಯಗ್ರಹಣತುಲ್ಯಾ ಹಿ ಶುಕ್ಲಾ ಮಾಘಸ್ಯ ಸಪ್ತಮೀ ॥
ಅರುಣೋದಯವೇಲಾಯಾಂ ತಸ್ಯಾಂ ಸ್ನಾನಂ ಮಹಾಫಲಂ ॥ ೬೪ ॥

ಯಚ್ಚ ತತ್ರ ಕೃತಂ ಪಾಪಂ ಮಯಾ ಸಪ್ತಸು ಜನ್ಮಸು ।
ತನ್ಮೇ ರೋಗಂ ಚ ಶೋಕಂ ಚ ಭಾಸ್ಕರೀ ಹನ್ತು ಸಪ್ತಮೀ ॥ ೬೫ ॥

ಜನನೀ ಸರ್ವಭೂತಾನಾಂ ಸಪ್ತಮೀ ಸಪ್ತ ಸಪ್ತಿಕೆ ।
ಸಪ್ತಮ್ಯಾಮುದಿತೇ ದೇವಿ ನಮಸ್ತೇ ರವಿಮಂಡಲೇ ॥ ೬೬ ॥

ಅರ್ಕಪತ್ರಂ ಯವಾಃ ಪುಷ್ಪಂ ಸುಗಂಧಿ ಬದರೀಫಲಂ ।
ತತ್ಪತ್ರೇ ತಾಮ್ರಪಾತ್ರೇ ವಾ ಯುಕ್ತಮಾನೀಯ ತಂಡುಲಂ ॥ ೬೭ ॥

---

ನ್ನಿಸಿಕೊಳ್ಳುತ್ತದೆ. ಆ ತಿಥಿಯು ಪುಣ್ಯತಮವಾದುದು ಎಂದು ಪುರಾಣದಲ್ಲಿ ಹೇಳಲ್ಪಟ್ಟಿದೆ. ಮಾಘಮಾಸದ ಶುದ್ಧ ಸಪ್ತಮಿಯು ಕೋಟ್ಯಂತರ ಸೂರ್ಯರ ಶಕ್ತಿಯುಳ್ಳದ್ದು. ಅದರಲ್ಲಿ ಉಪವಾಸ ಮಾಡಿದರೆ ಜನ್ಮವನ್ನು ಮತ್ತೆ ಹೊಂದುವುದೇ ಇಲ್ಲ. ಮಾಘಮಾಸದ ಶುದ್ಧ ಸಪ್ತಮಿಯು ಸೂರ್ಯಗ್ರಹಣಕ್ಕೆ ಸಮಾನವಾದುದು. ಆಗ ಅರುಣೋದಯವೇಳೆಯಲ್ಲಿ ಸ್ನಾನಮಾಡಿದರೆ ಮಹಾಫಲವುಂಟು. ನಾನು ಮಾಡಿದ ಏಳು ಜನ್ಮದ ಪಾಪವನ್ನೂ, ರೋಗವನ್ನೂ ದುಃಖವನ್ನೂ ಈ ಸೂರ್ಯಸಪ್ತಮಿಯು ನಾಶ ಮಾಡಲಿ ಎಂದು ಹೇಳಬೇಕು.

೬೬. ಸೂರ್ಯನ ಸಪ್ತಮಿಯೇ! ನೀನು ಸರ್ವಭೂತಗಳಿಗೂ ತಾಯಿಯು. ನೀನು ರವಿಮಂಡಲದಲ್ಲಿ ಸಪ್ತಮಿಯಲ್ಲಿ ಹುಟ್ಟಿದ್ದೀಯೆ. ನಮಸ್ಕಾರವು.

೬೭. ಎಕ್ಕದ ಎಲೆ, ಯವ, ಹೂ, ಗಂಧ, ಎಗಚೀಹಣ್ಣು, ಅಕ್ಕಿ ಇವನ್ನು ಒಂದು ತಾಮ್ರದ ಪಾತ್ರೆಯಲ್ಲಾಗಲಿ, ಎಕ್ಕದ ಎಲೆಯಲ್ಲಾಗಲಿ ಇಟ್ಟುಕೊಳ್ಳಬೇಕು.

ಯಜ್ಞಸೂತ್ರಂ ಸಸಿಂಧೂರಂ ದತ್ವಾ ಚಾರ್ಘ್ಯಂ ಸುಶೋಭನಂ ।
ಸರ್ವಂ ಪಾಪಂ ಕ್ಷಯಂ ಯಾತಿ ಸಪ್ತಜನ್ಮಕೃತಂ ಚ ಯತ್ ॥ ೬೮ ॥

ನರಕೈಃ ಪೀಡ್ಯತೇ ತಾವದ್ರೋಗೈಃ ಪಾಪೈಶ್ಚ ದುಃಖದೈಃ ।
ಹವಿಷ್ಯಂ ಭೋಜಯೇದನ್ನಂ ಶುದ್ಧಮಾತಪತಂಡುಲೈಃ ॥ ೬೯ ॥

ವರ್ಜಯೇಚ್ಚ ಶಿಲಾಘೃಷ್ಟಂ ಶೃಂಗಬೇರಂ ತು ಶಾಕಕಂ ।
ಕೋರದೂಷಕಪತ್ರಂ ಚ ರಂಭಾಚ್ಛಾಗೀ ಘೃತಂ ತಥಾ ॥ ೭೦ ॥

ಕೇಶಕೀಟಾದಿಕಂ ವರ್ಜ್ಯಮುಷ್ಣೋದಸ್ನಾನಮೇವ ಚ ।
ಅಲ್ಪಬೀಜಾದಿಕಂ ಸರ್ವಂ ವ್ರತೇ ಸೌರಸ್ಯ ವರ್ಜಯೇತ್ ॥ ೭೧ ॥

ಅನ್ಯಚ್ಚ ನಾಚರೇತ್ತತ್ರ ಧರ್ಮಚಿನ್ತಾಂ ವಿನಾ ವ್ರತೀ ।
ಸೌರವ್ರತಂ ಮಹಾಪುಣ್ಯಂ ಪುರಾಣೈರಭಿನಂದಿತಂ ॥ ೭೨ ॥

---

೬೮. ಜನಿವಾರ, ಚಂದಿರ, ಇವನ್ನೂ ಕೂಡ ಇಟ್ಟುಕೊಂಡು ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟರೆ ಎಲ್ಲಾ ಪಾಪವೂ ನಾಶವಾಗುತ್ತವೆ. ಏಳುಜನ್ಮದ ಪಾಪವು ನಾಶವಾಗುತ್ತದೆ.

೬೯. ಅಲ್ಲಿಯವರೆಗೂ ನರಕಬಾಧೆ, ರೋಗಬಾಧೆ, ಪಾಪ, ದುಃಖಗಳೆಂಬುವು ಇರುತ್ತವೆ. ಅನಂತರ ಹೋಗುತ್ತವೆ. ಬಿಸಲಿಗೆ ಒಣಹಾಕಿದ್ದ ಶುದ್ಧವಾದ ಅಕ್ಕಿಯಿಂದ ಹವಿಸ್ಸಿನ ರೂಪವಾದ ಅನ್ನವನ್ನು ಮಾಡಬೇಕು.

೭೦-೭೨. ಕಲ್ಲಿನಿಂದ ಉಜ್ಜಿ ಮಾಡಿದ ಅಕ್ಕಿಯನ್ನೂ ಹಿಟ್ಟನ್ನೂ ಬಿಡಬೇಕು. ಶುಂಠಿಯನ್ನೂ ಬಿಟ್ಟುಬಿಡಬೇಕು. ಹಾರಕ, ಸೊಪ್ಪು, ಬಾಳೆಲೆ, ಆಡು ಕುರಿಗಳ ತುಪ್ಪ, ಕೂದಲು ಹುಳುಗಳಿಂದ ದುಷ್ಟವಾದುವು, ಇವನ್ನು ಬಿಡಬೇಕು. ಬಿಸಿನೀರಿನಲ್ಲಿ ಸ್ನಾನಮಾಡಕೂಡದು. ಸಣ್ಣಸಣ್ಣ ಬೀಜಗಳಿರುವ ಕಾಯಿ ಹಣ್ಣುಗಳನ್ನು ತಿನ್ನಕೂಡದು ಇದು ಈ ಸೂರ್ಯವ್ರತಕ್ಕೆ ನಿಷಿದ್ಧವು. ಈ ವ್ರತವನ್ನು ಮಾಡುವವನು ಧರ್ಮದ ಯೋಚನೆಯೊಂದನ್ನು ಬಿಟ್ಟು ಮತ್ತೇನನ್ನೂ ಮಾಡಬಾರದು. ಈ ಸೂರ್ಯವ್ರತವು ಬಹು ಪುಣ್ಯಕರವು. ಪುರಾಣಗಳಲ್ಲಿ ಬಹುವಾಗಿ ಹೇಳಿದ್ದಾರೆ.

ವರ್ಷಕೋಟಿಸಹಸ್ರಾಣಿ ವರ್ಷಕೋಟಿ ಶತಾನಿ ಚ ।
ಆದಿತ್ಯಸ್ಯ ಸಮಂ ಭೋಗ್ಯಂ ಲಭತೇ ದಿವಿ ಶಾಶ್ವತಶಂ ॥ ೭೩ ॥

ಏವಂ ಸ್ವರ್ಗಕ್ಷಯಾದೇವ ರಾಜಾ ಭೂಮೌ ಮಹಾಧನೀ ।
ಮರ್ತ್ಯಲೋಕೇ ಪುರಾಭ್ಯಾಸಾತ್ಕರೋತಿ ಭಾಸ್ಕರವ್ರತಂ ॥ ೭೪ ॥

ತಥಾ ಸ್ವಯಂ ಸುಖಂ ಭೋಗ್ಯಂ ಲಭತೇ ದಿವಿ ಶಾಶ್ವತಂ ।
ಆರೋಗ್ಯಂ ಸಂಪದಂ ಜನ್ಮೇ ಭಾಸ್ಕರಸ್ಯ ಪ್ರಸಾದತಃ ॥ ೭೫ ॥

ರವಿವಾರೇ ಭವೇದ್ಯಾಚ ಸಪ್ತಮೀ ಮಾಘಶುಕ್ಲಕೇ ।
ಮಹಾಜಯೇತಿ ವಿಖ್ಯಾತಾ ಅನ್ಯತ್ರ ವಿಜಯಾ ಸ್ಮೃತಾ ॥ ೭೬ ॥

ವಿಜಯಾ ಕೋಟಿಲಕ್ಷಂ ಸ್ಯಾದನಂತಂ ಸ್ಯಾನ್ಮಹಾಜಯಾ ।
ತತ್ರೈಲೇಕೇನ ವ್ರತೇನೈವ ಮುಚ್ಯತೇ ಜನ್ಮಬಂಧನಾತ್ ॥ ೭೭ ॥

---

೭೩. ಈ ವ್ರತವನ್ನು ಮಾಡಿದರೆ ಸಾವಿರದ ನೂರುಕೋಟಿ ವರ್ಷಗಳವರೆಗೂ ಸ್ವರ್ಗದಲ್ಲಿ ಆ ಸೂರ್ಯನಿಗೆ ಸಮವಾದ ಭೋಗವನ್ನು ಹೊಂದುತ್ತಾರೆ.

೭೪ ಹೀಗೆ ಸ್ವರ್ಗವನ್ನು ಅನುಭವಿಸಿ ಮುಗಿಯುತ್ತಲೂ ಭೂಮಿಯಲ್ಲಿ ಧನವಂತನಾದ ರಾಜನಾಗಿ ಹುಟ್ಟಿ ಹಿಂದಿನ ಜನ್ಮದ ವಾಸನೆಯಿಂದ ಮತ್ತೆ ಸೂರ್ಯನ ವ್ರತವನ್ನು ಮಾಡುತ್ತಾನೆ.

೭೫. ಮತ್ತೆ ಈ ರೀತಿಯಾದ ಸುಖಭೋಗಗಳನ್ನೂ ಶಾಶ್ವತವಾಗಿ ಹೊಂದುವುದಲ್ಲದೆ ಆ ಸೂರ್ಯನ ಅನುಗ್ರಹದಿಂದ ಆರೋಗ್ಯ ಸಂಪತ್ತುಗಳನ್ನೂ ಹೊಂದುತ್ತಾನೆ.

೭೬. ಮಾಘ ಶುಕ್ಲ ಸಪ್ತಮಿಯು ಭಾನುವಾರ ಬಂದರೆ ಅದಕ್ಕೆ ಮಹಾಜಯುವೆಂದು ಹೆಸರು. ಆ ಮಾಘಮಾಸ ಹೊರತು ಶುದ್ಧಸಪ್ತಮಿಯು ಭಾನುವಾರವಾದರೆ ವಿಜಯಾ ಎನ್ನಿಸಿಕೊಳ್ಳುತ್ತದೆ.

೭೭. ವಿಜಯೆಯಲ್ಲಿ ಕೋಟಿ ಲಕ್ಷ ಪುಣ್ಯ ಬರುತ್ತದೆ. ಮಹಾಜಯೆಯಲ್ಲಿ ಅನಂತವಾದ ಫಲವು ಬರುತ್ತದೆ. ಈ ಒಂದು ವ್ರತವನ್ನು ಮಾಡಿದರೇನೇ ಈ ಜನ್ಮ ಬಂಧನವನ್ನು ತಪ್ಪಿಸಿಕೊಂಡು ಮುಕ್ತನಾಗುತ್ತಾನೆ.

ಅಶ್ವಂ ರತ್ನಂ ಸುವರ್ಣಂ ಚ ರಕ್ತವಸ್ತ್ರಂ ಚ ಧಾನ್ಯಕಂ ।
ದದಾತಿ ಭಾಸ್ಕರಪ್ರೀತ್ಯಾ ಸ್ವರ್ಗಮರ್ತ್ಯಪತಿಃ ಕ್ರಮಾತ್ ॥ ೭೮ ॥

ಏಷಾಂ ಭೇದಂ ಪ್ರವಕ್ಷ್ಯಾಮಿ ಶೃಣು ವಿಪ್ರ ಯಥಾರ್ಥವತ್ ।
ಉತ್ತಮಾಭರಣೈರ್ಯುಕ್ತಂ ಸದ್ವಾಹಂ ಯೋ ದದಾತಿ ಚ ॥ ೭೯ ॥

ಸಮುದ್ರೈಃ ಸಪ್ತಭಿರ್ಜುಷ್ಟಾಂ ಭೂಮಿಮೇತ್ಯವರ್ಜಿರಿತಾಂ ।
ಲಭೇದ್ಭವಾಂತರೇ ಮರ್ತ್ಯಮೇಕೇನೈಕಾಧಿಪೋ ಭವೇತ್ ॥ ೮೦ ॥

ಅಶ್ವಹೀನಂ ಚ ಪತ್ರಾಂಗಂ ವೃಷಭೈರ್ವಾಪ್ಯಲಂಕೃತಂ ।
ಹೇಮಮಾಷಂ ದ್ವಿಮಾಷಂ ವಾ ದಕ್ಷಿಣಾ ವಿಹಿತಾ ಬುಧೈಃ ॥ ೮೧ ॥

ರತ್ನಭಾಂಡಂ ಮಹಾರ್ಘಂ ಚ ಹೈಮ್ಯೈರೇವ ಕೃತಂ ಚ ಯತ್ ।
ಸ್ವರ್ಣಂ ವಾ ಕೇವಲಂ ದತ್ವಾ ತ್ರಿವಿಷ್ಟಪಧನೇಶ್ವರಃ ॥ ೮೨ ॥

---

೭೮. ಕುದುರೆ ಚಿನ್ನ, ಕೆಂಪುಬಟ್ಟೆ, ಧಾನ್ಯಗಳನ್ನು ಸೂರ್ಯಪ್ರೀತಿಗೋಸ್ಕರ ಕೊಟ್ಟರೆ ಸ್ವರ್ಗಾಧಿಪತಿಯಾಗಿ ಸುಖವನ್ನು ಅನುಭವಿಸಿ ಜನ್ಮತಾಳಿ ಮನುಷ್ಯ ಲೋಕದಲ್ಲಿಯೂ ರಾಜನಾಗಿರುತ್ತಾನೆ.

೭೯-೮೦. ಈ ದಾನಗಳ ಭೇದವನ್ನು ಹೇಳುತ್ತೇನೆ ಕೇಳು. ಒಳ್ಳೆಯ ಆಭರಣಗಳನ್ನು ತೊಡಿಸಿ ಒಳ್ಳೆಯ ಕುದುರೆಯನ್ನು ಕಟ್ಟಿದ ರಥವನ್ನು ದಾನಮಾಡಿದರೆ ಸಪ್ತಸಮುದ್ರಗಳಿಂದಲೂ ಕೂಡಿದ ಶತ್ರುಬಾಧೆಯಿಲ್ಲದ ರಾಜ್ಯಾಧಿಪತ್ಯವನ್ನು ಮುಂದಿನ ಜನ್ಮದಲ್ಲಿ ಹೊಂದುತ್ತಾನೆ.

೮೧. ಕುದುರೆಯಿಲ್ಲದಿದ್ದರೆ ರಥದಲ್ಲಿ ಅಲಂಕರಿಸಿದ ಎತ್ತುಗಳನ್ನು ಕಟ್ಟಿಯಾಗಲಿ ಕೊಡಬಹುದು. ಎರಡುಮಾಷ ಚಿನ್ನ ಅಥವಾ ಒಂದುಮಾಷ ಚಿನ್ನವಾಗಲಿ, ಇದಕ್ಕೆ ದಕ್ಷಿಣೆಯು. ಎಂದು ಹೇಳಿದ್ದಾರೆ.

೮೨. ಚಿನ್ನದ ಪಾತ್ರೆಯನ್ನಾಗಲಿ, ರತ್ನದ ಪಾತ್ರೆಯನ್ನಾಗಲಿ, ಅಥವಾ ಅದಕ್ಕೆ ಸಮವಾದ ಚಿನ್ನವನ್ನಾಗಲೀ ಕೊಟ್ಟರೆ ಸ್ವರ್ಗಪತಿ ಯಾಗುವುನಲ್ಲದೆ ಮುಂದಿನ ಜನ್ಮದಲ್ಲಿ ಧನೇಶ್ವರನಾಗುತ್ತಾನೆ

ರಕ್ತವಸ್ತ್ರಂ ಚ ಧಾನ್ಯಂ ಚ ಶಕ್ತಿತೋ ಯಃ ಪ್ರಯಚ್ಛತಿ ।
ಸ್ವರ್ಗಾರ್ಯೋರೀಶತಾಮೋತಿ ನ ತಂ ಲಕ್ಷ್ಮೀ ವಿಮುಂಚತಿ　　　　॥ ೮೩ ॥

ಅರೋಗೀ ಸುಪ್ರಸನ್ನಾತ್ಮಾ ದಸ್ಯು ಜೇತಾ ಪ್ರತಾಪವಾನ್ ।
ಯಾವತ್ಪ್ರಭಾಸತೇ ಭಾನುಸ್ತಾವತ್ಪೂಜ್ಯತಮೋ ಹಿ ಸಃ　　　　॥ ೮೪ ॥

ಮಾಘಾದಾವೀದೃಶೀಂ ನಾ ಯಃ ಸಪ್ತಮೀಂ ಕಾರಯೇತ್ಸ ತು ।
ಇಹಾಭೀಷ್ಟಫಲಂ ಭುಕ್ತ್ವಾ ಸುರೈಶ್ಚೈವ ಪ್ರಪೂಜ್ಯತೇ　　　　॥ ೮೫ ॥

ಅರ್ಕಾಹ್ವಸಪ್ತಮೀವ್ರತಂ ಕೃತ್ವಾ ಚ ವಿಧಿವದ್ಬುಧಃ ।
ಪಾಪಾತ್ಪೂತ ಇಹಾಭೀಷ್ಟಂ ಸಂಪ್ರಾಪ್ಯ ಮುಕ್ತಿಮಾಪ್ನುಯಾತ್　॥ ೮೬ ॥

ಲಕ್ಷಣಂ ಚ ಪ್ರವಕ್ಷ್ಯಾಮಿ ಮಾಸಿ ಮಾಸಿ ಚ ಯೋ ವಿಧಿಃ ।
ವ್ರತಸ್ಯಾಸ್ಯ ಪ್ರಭಾವಾಚ್ಚ ಸುರಾಣಾಮರ್ಚಿತೋ ದಿವಿ　　　　॥ ೮೭ ॥

---

೮೩. ಕೆಂಪುಬಟ್ಟೆ, ಧಾನ್ಯಗಳನ್ನು (ಭತ್ತ, ಗೋಧಿ) ಶಕ್ತಿಗೆ ಮೀರದಂತೆ ಕೊಟ್ಟರೆ ಸ್ವರ್ಗಕ್ಕೂ, ಭೂಮಿಗೂ ಒಡೆಯನಾಗುತ್ತಾನೆ. ಲಕ್ಷ್ಮಿಯು ಅವನನ್ನು ಬಿಡುವುದಿಲ್ಲ

೮೪. ಅವನು ರೋಗವಿಲ್ಲದೆಯೂ, ಸಂತೋಷವುಳ್ಳವನಾಗಿಯೂ, ಶತ್ರುಗಳನ್ನು ನಿಗ್ರಹಮಾಡುವವನಾಗಿಯೂ, ಪ್ರತಾಪಿಯಾಗಿಯೂ, ಸೂರ್ಯನಿರುವವರೆಗೂ ಸುಖಪಡುತ್ತಾನೆ.

೮೫. ಮಾಘಾದಿಮಾಸಗಳಲ್ಲಿ ಈ ರೀತಿಯಾದ ಸಪ್ತಮಿಯನ್ನು ಆಚರಿಸಿದವನು ಈ ಲೋಕದಲ್ಲಿ ಇಷ್ಟಾರ್ಥವನ್ನು ಹೊಂದಿ ದೇವತೆಗಳಿಂದಲೂ ಗೌರವಿಸಲ್ಪಡುತ್ತಾನೆ.

೮೬. ಈ ಭಾನುಸಪ್ತಮಿಯನ್ನು ವಿಧಿವತ್ತಾಗಿ ಮಾಡಿದವನು ಪಾಪವನ್ನು ಕಳೆದುಕೊಂಡು ಇಷ್ಟಾರ್ಥವನ್ನು ಹೊಂದಿ ಮುಕ್ತಿಯನ್ನೂ ಹೊಂದುತ್ತಾನೆ.

೮೭. ಈ ವ್ರತಕ್ಕೆ ಲಕ್ಷಣವನ್ನೂ ತಿಂಗಳುತಿಂಗಳಿಗೂ ಮಾಡಬೇಕಾದ ವಿಧಿಯನ್ನೂ ಹೇಳುತ್ತೇನೆ. ಈ ವ್ರತದ ಪ್ರಭಾವದಿಂದ ಸ್ವರ್ಗದಲ್ಲಿ ದೇವತೆಗಳಿಗೆ ಪೂಜ್ಯನಾಗುತ್ತಾನೆ.

ಶುಕ್ಲಪಕ್ಷೇ ರವಿದಿನೇ ಪ್ರವೃತ್ತೇ ಚೋತ್ತರಾಯಣೇ ।
ಪುನ್ನಾಮಧೇಯನಕ್ಷತ್ರೇ ಗೃಹ್ಣೀಯಾತ್ಸಪ್ತಮೀವ್ರತಂ ॥ ೮೮ ॥

ಹಸ್ತೋ ಮೈತ್ರಂ ತಥಾ ಪುಷ್ಯಃ ಶ್ರವೋ ಮೃಗಪುನರ್ವಸು ।
ಪುನ್ನಾಮಧೇಯನಕ್ಷತ್ರಾಣ್ಯೇತಾನ್ಯಾಹುರ್ಮನೀಷಿಣಃ ॥ ೮೯ ॥

ಪಂಚಮ್ಯಾಮೇಕಭುಕ್ತಂ ತು ಷಷ್ಠ್ಯಾಂ ನಕ್ತಂ ಪ್ರಕೀರ್ತಿತಂ ।
ಸಪ್ತಮ್ಯಾಮುಪವಾಸಶ್ಚ ಅಷ್ಟಮ್ಯಾಂ ಪಾರಣಂ ಭವೇತ್ ॥ ೯೦ ॥

ಅರ್ಕಾಗ್ರಂ ಶುಚಿಗೋಮಯಂ ಸುಮರಿಚಂ ತೋಯಂ ಫಲಂ ಚಾಶ್ನುತೇ
ಮೂಲಂ ನಕ್ತಮುಪೋಷಣಂ ಚ ವಿಧಿವತ್ಕೃತ್ವೈಕಭಕ್ತಂ ತಥಾ
ಕ್ಷೀರಂ ವಾಯ್ವಶನಂ ಘೃತಾಕ್ತಮಿತಿ ಚ ಪ್ರೋಕ್ತಾಃ ಕ್ರಮೇಣಾಮುನಾ
ಕೃತ್ವಾ ವಾಸರಸಪ್ತಮೀಂ ದಿನಕೃತಃ ಪ್ರಾಪ್ನೋತ್ಯಭೀಷ್ಟಂ ಫಲಂ ॥ ೯೧ ॥

---

೮೮. ಉತ್ತರಾಯಣದ ಶುಕ್ಲಪಕ್ಷದಲ್ಲಿ ಸಪ್ತಮಿಯು ಭಾನುವಾರ ಬಂದರೆ ಆ ದಿನ ನಕ್ಷತ್ರವು ಗಂಡು ನಕ್ಷತ್ರವಾಗಿದ್ದರೆ ಈ ವ್ರತವನ್ನು ಹಿಡಿಯಬೇಕು.

೮೯. ಹಸ್ತ, ಮೈತ್ರ, ಪುಷ್ಯ, ಶ್ರವಣ, ಮೃಗಶೀರ್ಷ, ಪುನರ್ವಸು ಈ ನಕ್ಷತ್ರಗಳು ಗಂಡು ನಕ್ಷತ್ರಗಳು.

೯೦. ಪಂಚಮಿಯದಿನ ಒಪ್ಪತ್ತು ಊಟಮಾಡಬೇಕು. ಷಷ್ಠಿಯದಿನ ಹಾಲು ಹಣ್ಣು ತೆಗೆದುಕೊಳ್ಳಬಹುದು. ಸಪ್ತಮಿಯದಿನ ಉಪವಾಸವಿದ್ದು ಅಷ್ಟಮಿಯ ದಿನ ಪಾರಣೆ ಮಾಡಬೇಕು.

೯೧. ಗ್ರಾಮದ ಪೂರ್ವಕ್ಕಾಗಲೀ, ಉತ್ತರ ದಿಕ್ಕಿಗಾಗಲಿ ಇರುವ ಎಕ್ಕದ ಗಿಡದಲ್ಲಿ ತುದಿಯ ಎರಡು ಸಣ್ಣ ಚಿಗುರನ್ನು ತೆಗೆದುಕೊಂಡು ಅದನ್ನು ನೀರಿನಲ್ಲಿ ಹಾಕಿಕೊಂಡು ಹಲ್ಲಿಗೆ ತಗುಲದಂತೆ ಕುಡಿಯಬೇಕು.

**ಅರ್ಕಾಂಗ್ರಂ :- ಗ್ರಾಮಾತ್ಪೂರ್ವೋತ್ತರ ದಿಗ್ಗತಾರ್ಕವಿಟಪಸ್ಯ**
**ಶಾಖಾಗ್ರಸ್ಥಿತಂ ವಿಶಿಷ್ಟಂ ಸೂಕ್ಷ್ಮಪತ್ರದ್ವಯಂ**
**ಸತೋಯಂ ದಂತೈರಸ್ಪೃಷ್ಟಂ ಪಾತವ್ಯಂ ॥**
**ಶುಚಿಗೋಮಯಂ :- ಭೂಮಾವಪತಿತಂ ಮಧ್ಯಾಂಗುಷ್ಠಾಭ್ಯಾಂ**
**ಪಲಮೂತ್ರಂ ದಂತೈರಸ್ಪೃಷ್ಟಂ ಸತೋಯಂ ಪಾತವ್ಯಂ ॥**
**ಸಮರಿಚಮವ್ರಣಮಪುರಾತನಂ ಸ್ಥೂಲಮವಶುಷ್ಕಮೇಕಂ**
**ದಂತೈರಸ್ಪೃಷ್ಟಂ ಸತೋಯಂ ಪಾತವ್ಯಂ ॥**
**ತೋಯಂ :- ಬ್ರಹ್ಮಪಿತ್ರಾಂಗುಳೀಮೂಲಪ್ರಕರಂ ಪಾತವ್ಯಂ ॥**
**ಫಲಂ ಖರ್ಜೂರ ನಾರಿಕೇಳಾನಾಮನ್ಯತಮಂ ದಂತೈರಸ್ಪೃಷ್ಟಂ ಪಾತವ್ಯಂ ॥**
**ಘೃತಾಕ್ತಮಿತಿ ಚಾಹಾರಂ ಮಯೂರಡಿಂಭಪರಿಮಾಣಂ**
**ಘೃತಮಪಿ ತತ್ಪರಿಮಾಣಂ ॥ ೯೨ ॥**

---

೯೨. ಹಸುವು ಸಗಣಿ ಹಾಕುತ್ತಿರುವಾಗ ಅದನ್ನು ನೆಲದಮೇಲೆ ಬೀಳುವುದಕ್ಕೆ ಮುಂಚೆ ಹೆಬ್ಬೆರಳು ಮಧ್ಯದ ಬೆರಳುಗಳಿಂದ ಪಲಮಾತ್ರದಷ್ಟು ತೆಗೆದುಕೊಳ್ಳಬೇಕು. ಆದನ್ನು ನೀರಿಗೆ ಹಾಕಿಕೊಂಡು ಹಲ್ಲಿಗೆ ತಗುಲದಂತೆ ಕುಡಿಯಬೇಕು. ಹುಳುಕಾಗದ ಹಳೆಯದಲ್ಲದ, ದಪ್ಪವಾಗಿರುವ, ಒಣಗಿದ, ಒಂದು ಮೆಣಸನ್ನು ನೀರಿನಲ್ಲಿ ಹಾಕಿಕೊಂಡು ಹಲ್ಲಿಗೆ ತಗುಲದಂತೆ ನೀರಿನೊಡನೆ ಕುಡಿಯಬೇಕು. ಅಂಗುಷ್ಠದ ಮೂಲದಿಂದ ಬರುವ ನೀರಿಗೆ ಬ್ರಾಹ್ಮವೆಂದು ಹೆಸರು. ಅಂಗುಷ್ಠಕ್ಕೂ ಅಂಗುಳಿಗೂ ಮಧ್ಯೆ ಬರುವ ನೀರು ಪೈತ್ರವು. ಇವನ್ನು ಆ ರೀತಿಯಾಗಿ ಬಾಯಿಗೆ ಬೀಳುವಂತೆ ಹಾಕಿಕೊಂಡು ಹಲ್ಲಿಗೆ ಮುಟ್ಟದ ರೀತಿಯಿಂದ ಕುಡಿಯಬೇಕು. ಖರ್ಜೂರ ತೆಂಗಿನಕಾಯಿ ಇವನ್ನು ಕುಡಿದರೆ ಒಳಗೆ ಹೋಗುವ ರೀತಿಯಲ್ಲಿ ಸಣ್ಣಗೆ ಮಾಡಿಕೊಂಡು ನೀರಿನಲ್ಲಿ ಹಾಕಿಕೊಂಡು ಹಲ್ಲಿಗೆ ತಗುಲದಂತೆ ಕುಡಿಯಬೇಕು. ಅನ್ನವನ್ನು ನವಿಲಿನ ಮೊಟ್ಟೆಯ ಗಾತ್ರವನ್ನು ತೆಗೆದುಕೊಳ್ಳಬೇಕು ತುಪ್ಪವನ್ನೂ ಅಷ್ಟೇ ತೆಗೆದುಕೊಂಡು ಎರಡನ್ನೂ ಸೇರಿಸಿ ತಿನ್ನಬೇಕು.

(ಮೇಲಿನ ಪದ್ಯದ ಅರ್ಥ) ಪಂಚಮಿಯ ದಿನ ಪೂರ್ವಾಹ್ಣದಲ್ಲಿ ಊಟಮಾಡಬೇಕು. ಷಷ್ಠಿಯದಿನ ನಕ್ತವ್ರತವನ್ನಾಚರಿಸಬೇಕು. ಆಗಲೇ ಎಕ್ಕದ ಚಿಗುರು ಸಗಣಿ, ಫಲಗಳನ್ನು ತಿನ್ನಬೇಕು. ಹಾಲನ್ನಾದರೂ ಕುಡಿಯಬಹುದು. ಇದೂ ನಕ್ತವಾಗುತ್ತದೆ. ಮೇಲೆ ಹೇಳಿದ ಪ್ರಮಾಣದಲ್ಲಿ ಅನ್ನವನ್ನೂ, ತುಪ್ಪವನ್ನೂ ತಿಂದರೂ ನಕ್ತವಾಗುತ್ತದೆ. ಹೀಗಿದ್ದು ಭಾನುಸಪ್ತಮಿಯದಿನ ಉಪವಾಸಮಾಡಿ ಮಾರನೆಯ ದಿನ ಪಾರಣೆಮಾಡಿದರೆ ಭಾನುಸಪ್ತಮಿಯ ಫಲವು ಬರುತ್ತದೆ.

ಆತ್ಮನೋ ದ್ವಿಗುಣಾಂ ಛಾಯಾಂ ಯದಾ ಕುರ್ವೀತ ಭಾಸ್ಕರಃ ।
ತದಾ ನಕ್ತಂ ವಿಜಾನೀಯಾನ್ನ ನಕ್ತಂ ನಿಶಿ ಭೋಜನಂ ॥ ೯೩ ॥

ಪ್ರಥಮಂ ಪೂಜಯೇದ್ದೇವಂ ಫಲಪುಷ್ಪಾದಿಮಂತ್ರಕೈಃ ।
ಅನ್ನದಾನಂ ತತಃ ಕುರ್ಯಾದ್ವಿಧ್ಯುಕ್ತಪರಿಮಾಣಕಂ ॥ ೯೪ ॥

॥ ತತೋ ಧ್ಯಾನಂ ॥

ಸರ್ವಲಕ್ಷಣಸಂಪೂರ್ಣಂ ಸರ್ವಾಭರಣಭೂಷಿತಂ ।
ದ್ವಿಭುಜಂ ರಕ್ತವರ್ಣಂ ಚ ರಕ್ತಪಂಕಜಧೃಕ್ಕರಂ ॥ ೯೫ ॥
ತೇಜೋಬಿಂಬಂ ಬುಹುಜಲಮಧ್ಯಸ್ಥಂ ಸುಪರಿಚ್ಛದಂ ।

ಪದ್ಮಾಸನಗತಂ ದೇವಂ ರಕ್ತಗಂಧಾನುಲೇಪನಂ ॥
ಆದಿತ್ಯಂ ಚಿಂತಯೇದ್ದೇವಂ ಪೂಜಾಕಾಲೇ ವಿಶೇಷತಃ ॥ ೯೬ ॥

॥ ಮಂತ್ರಶ್ಚಾಯಂ ॥

ಭಾಸ್ಕರಾಯ ವಿದ್ಮಹೇ ಸಹಸ್ರರಶ್ಮಯೇ ಧೀಮಹಿ ।
ತನ್ನಃ ಸೂರ್ಯಃ ಪ್ರಚೋದಯಾತ್ ॥ ೯೭ ॥

---

೯೩. ಮಧ್ಯಾಹ್ನದ ಮೇಲೆ ಯಾವ ಪದಾರ್ಥಕ್ಕೇ ಆಗಲಿ ಸೂರ್ಯನ ಬಿಸಿಲು ಬಿದ್ದರೆ ನೆರಳು ಆದರೆರಡರಷ್ಟು ಆಗುತ್ತದೆಯೋ ಅದೇ ನಕ್ತ ಮಾಡುವುದಕ್ಕೆ ಸಮಯವು. ರಾತ್ರಿಯಲ್ಲಿ ತಿನ್ನುವುದು ನಕ್ತವಲ್ಲ.

೯೪. ಮೊದಲು ದೇವರನ್ನು ಹೂವು, ಹಣ್ಣು, ಮಂತ್ರಗಳಿಂದ ಪೂಜಿಸಬೇಕು ಅನಂತರ ಶಾಸ್ತ್ರದಂತೆ ಅನ್ನದಾನಮಾಡಬೇಕು.

೯೫–೯೬. ಅನಂತರ ಧ್ಯಾನವು– ಎಲ್ಲಾ ಲಕ್ಷಣಗಳಿಂದ ಕೂಡಿದ, ಎಲ್ಲಾ ಆಭರಣಗಳನ್ನೂ ತೊಟ್ಟಿರುವ ಎರಡು ತೋಳುಗಳುಳ್ಳ, ಕೆಂಪು ಬಟ್ಟೆಯನ್ನುಟ್ಟು ಕೆಂಪು ಕಮಲವನ್ನು ಹಿಡಿದಿರುವ, ತೇಜೋರೂಪನಾದ, ಬಹು ನೀರಿನ ಮಧ್ಯದಲ್ಲಿ ಇರುವ, ಒಳ್ಳೆಯ ಪರಿವಾರಗಳುಳ್ಳ, ಪದ್ಮಾಸನದಲ್ಲಿರುವ, ಕೆಂಪು ಗಂಧವನ್ನು ಪೂಸಿಕೊಂಡಿರುವ, ಆದಿತ್ಯನನ್ನು ಪೂಜೆಯ ಕಾಲದಲ್ಲಿ ಧ್ಯಾನಮಾಡಬೇಕು.

೯೭. ಇದು ಮಂತ್ರವು- ಸ್ಯೂರ್ಯನ ಸಂಬಂಧವಾದ ಧ್ಯಾನವನ್ನು ಮಾಡುತ ಇದ್ದೇನೆ. ಸೂರ್ಯನಿಗೋಸ್ಕರ ನಮಸ್ಕರಿಸುತ್ತಿದ್ದೇನೆ. ಆ ಸೂರ್ಯನು ನನ್ನನ್ನು ಕಾಪಾಡಲಿ.

ಜಾಪ್ಯ ಏಷ ಪರಃ ಪ್ರೋಕ್ತಃ ಸಪ್ತಮ್ಯಾಂ ಜಯಮಾವಹಃ ।
ಕರವೀರೈಃ ಕರಂಜೈಶ್ಚ ರಕ್ತಕುಂಕುಮಸನ್ನಿಭೈಃ ॥ ೯೮ ॥

ಪಶ್ಚಾಚ್ಚ ಪಾರಣಾ ಕಾರ್ಯಾ ತಥಾಷ್ಟಮ್ಯಾಂ ವಿಶೇಷತಃ ।
ಅಷ್ಟಮ್ಯಾಮೇವ ಕರ್ತವ್ಯಂ ನವಮ್ಯಾಂ ನೈವ ಪಾರಣಂ ॥ ೯೯ ॥

ವ್ರತೇ ಫಲಂ ನ ಚಾಪ್ನೋತಿ ನವಮ್ಯಾಂ ಪಾರಣೇ ಕೃತೇ ।
ಪಾರಣಂ ತ್ವಪರಾಹ್ಣೇ ತು ಕಟುತಿಕ್ತಾಮ್ಲವರ್ಜಿತಂ ॥ ೧೦೦ ॥

ತಂಡುಲಂ ಶೋಧಯೇದ್ಯತ್ನಾತ್ತೃಣಬೀಜಾದಿಕಂ ತ್ಯಜೇತ್ ।
ಮುದ್ಗಮಾಷತಿಲಾದೀನಿ ಘೃಷ್ಟಂ ಚ ಪರಿವರ್ಜಯೇತ್ ॥ ೧೦೧ ॥

ಬ್ರಾಹ್ಮಣಾನ್ಭೋಜಯೇದ್ಭಕ್ತ್ಯಾ ಶಕ್ತಃ ಕ್ಷೀರಾದಿಹವ್ಯಕೈಃ ।
ಯಥಾಶಕ್ತ್ಯನ್ನಪಾನೈಶ್ಚ ವ್ಯಂಜನೈಶ್ಚ ನಿರಾಮಿಷೈಃ ॥ ೧೦೨ ॥

---

೯೮. ಈ ಮಂತ್ರವನ್ನು ಸಪ್ತಮಿಯ ದಿನ ಜಪಿಸಿದರೆ ಜಯವನ್ನು ಕೊಡುತ್ತದೆ. ಕೆಂಪು ಕಣಗಿಲೆ, ದಾಸವಾಳ, ಮತ್ತು ಕೆಂಪಗೆ ಇರುವ ಕುಂಕುಮದ ಬಣ್ಣದ ಹೂಗಳಿಂದ ಪೂಜಿಸಬೇಕು.

೯೯. ಅಷ್ಟಮಿಯಲ್ಲಿ ಪಾರಣೆಯನ್ನು ಮಾಡಬೇಕು. ಆ ಪಾರಣೆಯು ನವಮಿಯು ಸೇರಿರುವಾಗ ಕೂಡದು.

೧೦೦. ನವಮಿಯಲ್ಲಿ ಪಾರಣೆ ಮಾಡಿದರೆ ವ್ರತದ ಫಲವು ಬರುವುದಿಲ್ಲ. ಪಾರಣೆಯನ್ನು ಅಪರಾಹ್ಣದಲ್ಲಿ ಮಾಡಬೇಕು. ಕಾರ, ಹುಳಿ, ಒಗರುಗಳ ಪದಾರ್ಥ ಕೂಡದು.

೧೦೧. ಅಕ್ಕಿಯಲ್ಲಿ ಮತ್ತಾವ ಬೀಜಗಳೂ ಇಲ್ಲದಂತೆ ಶೋಧಿಸಬೇಕು ಹೆಸರು, ಉದ್ದು, ಎಳ್ಳು ಇವನ್ನೂ ಹುರಿದ ಪದಾರ್ಥವನ್ನೂ ಬಿಡಬೇಕು.

೧೦೨. ಬ್ರಾಹ್ಮಣರಿಗೆ ಹಾಲು, ಅನ್ನ, ಪಾನ, ವ್ಯಂಜನಗಳಿಂದ ಶಕ್ತ್ಯನುಗುಣವಾಗಿ ತೃಪ್ತಿಪಡಿಸಬೇಕು. ಮಾಂಸ ಕೂಡದು.

ವಿಪ್ರಾಯ ದಕ್ಷಿಣಾಂ ದದ್ಯಾದ್ದ್ವಿಜೇಭ್ಯಶ್ಚಾನುರೂಪತಃ ।
ಇಮಾಮನಂತಫಲದಾಂ ಯಃ ಕುರ್ಯಾತ್ಸಪ್ತಮೀಂ ನರಃ ॥ ೧೦೩ ॥

ಸರ್ವಪಾಪಪ್ರಶಮನೀಂ ಧನಪುತ್ರವಿವರ್ಧನೀಂ ।
ಮಾಸಿ ಮಾಸಿ ದ್ವಿಜಶ್ರೇಷ್ಠ ವ್ರತಂ ಕೃತ್ವಾರ್ಕತುಷ್ಟಯೇ ॥ ೧೦೪ ॥

ಯಃ ಕುರ್ಯಾತ್ಪಾರಣಂ ಭಕ್ತ್ಯಾ ಸೂರ್ಯಲೋಕಂ ಸ ಗಚ್ಛತಿ ।
ಕಲ್ಪಕೋಟಿಂ ವಸೇತ್ಸ್ವರ್ಗೇ ತತೋ ಯಾತಿ ಪರಾಂ ಗತಿಂ ॥ ೧೦೫ ॥

ಇದಮೇವ ಪರಂ ಗುಹ್ಯಂ ಭಾಷಿತಾಂ ಶಂಭುನಾ ಪುರಾ ।
ಶ್ರವಣಾತ್ಸತತಂ ತಸ್ಯ ವ್ರತಸ್ಯ ಪರಿಪಾಲನಾತ್ ।
ಶ್ರಾವಯೇದ್ವಾಪಿ ಲೋಕಸ್ಯ ಫಲಂ ತುಲ್ಯಂ ಪ್ರಕೀರ್ತಿತಂ ॥ ೧೦೬ ॥

**ಇತಿ ಶ್ರೀ ಪದ್ಮಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಅರ್ಕಾಹ್ವಸಪ್ತಮೀ ನಾಮ ಪಂಚಸಪ್ತತಿತಮೋಽಧ್ಯಾಯಃ**

---

೧೦೩-೧೦೪. ಬ್ರಾಹ್ಮಣರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ದಕ್ಷಿಣೆಯನ್ನು ಕೊಡಬೇಕು. ಪಾಪನಾಶಕವಾದ, ಅನಂತ ಫಲವನ್ನು ಕೊಡುವ, ಪುತ್ರಪೌತ್ರರನ್ನು ಕೊಡುವ, ಹಣವನ್ನು ಹೆಚ್ಚಿಸುವ, ಈ ವ್ರತವನ್ನು ಸೂರ್ಯನ ತೃಪ್ತಿಗೋಸ್ಕರ ತಿಂಗಳು ತಿಂಗಳಿಗೂ ಮಾಡಬೇಕು.

೧೦೫. ಭಕ್ತಿಯಿಂದ ಪಾರಣೆ ಮಾಡಿದರೆ ಸೂರ್ಯಲೋಕವನ್ನು ಸೇರುತ್ತಾನೆ. ಒಂದು ಕೋಟಿ ಕಲ್ಪಗಳು ಸ್ವರ್ಗದಲ್ಲಿದ್ದು ಅನಂತರ ಮೋಕ್ಷವನ್ನು ಹೊಂದುತ್ತಾನೆ.

೧೦೬. ಈ ಗುಟ್ಟಾದ ವ್ರತವನ್ನು ಶಂಭುವು ಪೂರ್ವದಲ್ಲಿ ಹೇಳಿದನು. ಇದನ್ನು ಕೇಳುವುದರಿಂದಲೂ, ವ್ರತವನ್ನು ಮಾಡುವುದರಿಂದಲೂ, ಜನಗಳಿಗೆ ಹೇಳುವುದರಿಂದಲೂ ಒಂದೇ ರೀತಿಯಾದ ಫಲವು ಬರುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಭಾನುಸಪ್ತಮಿಯೆಂಬ ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಷಟ್ಸಪ್ತತಿತಮೋಽಧ್ಯಾಯಃ ॥



॥ ವೈಶಂಪಾಯನ ಉವಾಚ ॥

ಭಗವಂಸ್ತ್ವತ್ಪ್ರಸಾದಾಚ್ಚ ಶ್ರುತಂ ಮೇ ಪಾವನಂ ವ್ರತಂ ।
ಅಪರಂ ಶ್ರೋತುಮಿಚ್ಛಾಮಿ ಬ್ರಧ್ನಸ್ಯ ಚ ಪ್ರಿಯಂ ಚ ಯತ್ ॥ ೧ ॥

॥ ವ್ಯಾಸ ಉವಾಚ ॥

ಕೈಲಾಸಶಿಖರೇ ರಮ್ಯೇ ಸುಖಾಸೀನಂ ಮಹೇಶ್ವರಂ ।
ಪ್ರಣಮ್ಯ ಶಿರಸಾ ಭೂಮೌ ಸ್ಕಂದೋ ವಚನಮಬ್ರವೀತ್ ॥ ೨ ॥

ಅರ್ಕಾಂಗಾಖ್ಯೋ ವಿಧಿಸ್ತ್ವತ್ತೋ ಮಯೈವಂ ವಿಸ್ತರಾಚ್ಛ್ರುತಃ ।
ವಾರಾದೇರ್ಯತ್ಫಲಂ ನಾಥ ಶ್ರೋತುಮಿಚ್ಛಾಮಿ ತತ್ತ್ವತಃ ॥ ೩ ॥

---

## ಎಪ್ಪತ್ತಾರನೆಯ ಅಧ್ಯಾಯವು

೧. ವೈಶಂಪಾಯನನು ಹೇಳಿದನು- ಸ್ವಾಮಿ! ನೀವು ಕೃಪೆಯಿಟ್ಟು ಈ ಉತ್ತಮವಾದ ವ್ರತವನ್ನು ಹೇಳಿದಿರಿ. ಇನ್ನು ಯಾವುದಾದರೂ ಉತ್ತಮವಾದ ಸೂರ್ಯ ವ್ರತವನ್ನು ಹೇಳಿ

೨. ವ್ಯಾಸನು ಹೇಳಿದನು–ಉತ್ತಮವಾದ ಕೈಲಾಸಶಿಖರದಲ್ಲಿ ಸಂತೋಷದಿಂದ ಕುಳಿತಿರುವ ಮಹೇಶ್ವರನಿಗೆ ಸ್ಕಂದನು ನಮಸ್ಕರಿಸಿ ಇಂತೆಂದನು.

೩. ಸೂರ್ಯಸಪ್ತಮಿಯ ವ್ರತವನ್ನು ವಿಸ್ತಾರವಾಗಿ ಕೇಳಿದೆನು. ವಾರಗಳ ಫಲವನ್ನು ಹೇಳು, ಕೇಳುವೆನು.

॥ ಈಶ್ವರ ಉವಾಚ ॥

ರಕ್ತಪುಷ್ಪೈಃ ರವೇರ್ವಾರೇ ಅರ್ಘ್ಯಂ ದದ್ಯಾದ್ವ್ರತೀ ನರಃ ।
ನಕ್ತಾಹಾರಂ ಹವಿಷ್ಯಾನ್ನಂ ಕೃತ್ವಾ ಸ್ವರ್ಗಾನ್ನ ಹೀಯತೇ ॥ ೪ ॥

ಸಪ್ತಮ್ಯಾಶ್ಚ ಸದಾಚಾರಂ ಸರ್ವಮೇಷಾರ್ಕವಾಸರೇ ।
ಕುರ್ವತಃ ಪ್ರೀತಿಮಾಪ್ನೋತಿ ಸಗಣಃ ಪರಮೇಶ್ವರಃ ॥ ೫ ॥

ಸೂರ್ಯಸ್ಯ ಸದೃಶಂ ಯಾತಿ ತಿಥಿವಾರಸ್ಯ ಪಾಲನಾತ್ ।
ಏಕೇನ ಗಾಣಪತ್ಯಸ್ಯ ಯಾವತ್ಸೂರೋ ನಭಸ್ತಲೇ ॥ ೬ ॥

ಸರ್ವಕಾಮಪ್ರದಂ ಪುಣ್ಯಮೈಶ್ವರ್ಯಂ ರೋಗನಾಶನಂ ।
ಸ್ವರ್ಗದಂ ಮೋಕ್ಷದಂ ಪುಣ್ಯಂ ರವಿವಾರೇ ವ್ರತಂ ಹಿತಂ ॥ ೭ ॥

ರವಿವಾರೇಣ ಸಂಕ್ರಾಂತ್ಯಾ ಸಪ್ತಮ್ಯಾ ತದ್ದಿನೇ ಶಿವೇ ।
ವ್ರತಪೂಜಾದಿಕಂ ಜಾಪ್ಯಂ ಸರ್ವಂ ಚಾಕ್ಷಯತಾಂ ವ್ರಜೇತ್ ॥ ೮ ॥

---

೪. ಈಶ್ವರನು ಹೇಳಿದನು- ವ್ರತ ಮಾಡುವವನು ಭಾನುವಾರದ ದಿನ ಕೆಂಪು ಹೂವುಗಳಿಂದ ಸೇರಿದ ಅರ್ಘ್ಯವನ್ನು ಕೊಡಬೇಕು. ಹವಿಷ್ಯಾನ್ನವನ್ನು ತಿನ್ನಬೇಕು. ಸ್ವರ್ಗವು ತಪ್ಪುವುದಿಲ್ಲ.

೫. ಭಾನುಸಪ್ತಮಿಯದಿನ ಈ ರೀತಿ ಅರ್ಘ್ಯವನ್ನು ಕೊಟ್ಟರೆ ಪರಮೇಶ್ವರನು ಗಣಗಳೊಡನೆ ಪ್ರೀತಿಯನ್ನು ಹೊಂದುತ್ತಾನೆ

೬. ತಿಥಿ ವಾರಗಳನ್ನು ಈ ರೀತಿ ವ್ರತದಿಂದ ಅನುಸರಿಸಿದರೆ ಸೂರ್ಯನಿಗೆ ಸಮನಾಗುವನು. ಇವೆರಡರಲ್ಲಿ ಒಂದನ್ನೇ ಕಾಪಾಡಿದರೆ ಗಾಣಪತ್ಯಲೋಕವನ್ನು ಸೂರ್ಯನಿರುವವರೆಗೂ ಅನುಸರಿಸುತ್ತಾನೆ.

೭ ಇದು ಇಷ್ಟಾರ್ಥವನ್ನು ಕೊಡುವುದು. ಐಶ್ವರ್ಯ ಬರುವುದು ರೋಗನಾಶವಾಗುವುದು. ಸ್ವರ್ಗ ಮೋಕ್ಷಗಳು ಬರುವುವು. ಈ ರೀತಿಯಾಗಿ ಭಾನುವಾರ ವ್ರತವು ಹಿತವಾದುದು.

೮. ಭಾನುವಾರವೂ, ಸಂಕ್ರಾಂತಿಯೂ ಸೇರಿ ಆ ದಿನ ಸಪ್ತಮಿಯೂ ಬಂದರೆ ಆ ದಿನ ಮಾಡಿದ ವ್ರತ, ಪೂಜೆ, ಜಪ ಇವೆಲ್ಲವೂ ಅಕ್ಷಯವಾಗುತ್ತವೆ.

ಆದಿತ್ಯವಾಸರೇ ಶುಭ್ರೇ ಗ್ರಹಾಧಿಪಪ್ರಪೂಜನಂ ।
ಪ್ರಾಣಾದಹತವಕ್ತ್ರೇಣ ನಿಸ್ಸಾರ್ಯಂ ಮಂಡಲೇ ನ್ಯಸೇತ್ ॥ ೯ ॥

ದ್ವಿಭುಜಂ ರಕ್ತಪದ್ಮಸ್ಥಂ ಸುಗಲಂ ರಕ್ತವಾಸಕಂ ಸರ್ವರಕ್ತಾಭರಣಂ ।
ಧ್ಯಾತ್ವಾ ಹಸ್ತಾಭ್ಯಾಂ ಪುಷ್ಪಂ ವಿಧೃತ್ಯ ಸಂಘ್ರಾಯ್ಯೈಶಾನ್ಯಾಂ
ಸೆವಾಕ್ಷಿಪೇತ್ ॥ ೧೦ ॥

ಆದಿತ್ಯಾಯ ವಿದ್ಮಹೇ ಭಾಸ್ಕರಾಯ ಧೀಮಹಿ ।
ತನ್ನೋ ಭಾನುಃ ಪ್ರಚೋದಯಾತ್ ॥ ೧೧ ॥

ತತೋ ಗುರೂಪದಿಷ್ಟೇನ ವಿಧಿ ದಿಷ್ಟೇನ ತತ್ತ್ವತಃ ।
ಪೂಜಯೇದ್ಭಕ್ತಿ ಪುಷ್ಪೈಶ್ಚ ಕದಲ್ಯಾದಿಫಲೈಃ ಶುಭೈಃ ॥ ೧೨ ॥

ಪೂಜಯೇದ್ಯೋ ರವಿಂ ನಿತ್ಯಂ ಸ ಯಾತಿ ಭಾಸ್ಕರಾಲಯಂ ।
ಪುಷ್ಪಂ ದತ್ವಾ ಜಲಂ ದೇಯಂ ಜಲಾಂತೇ ಚ ವಿಲೇಪನಂ ॥ ೧೩ ॥

---

೯ ಶುದ್ಧ ಭಾನುವಾರದಲ್ಲಿ ಸೂರ್ಯ ಪೂಜೆಯನ್ನು ಮಾಡಬೇಕು. ಗಾಳಿಯು ತುಟಿಯ ಮೇಲೆ ಬೀಳದ ರೀತಿಯಲ್ಲಿ ಉಸಿರು ಬಿಡುತ್ತಾ ಪ್ರತಿಮೆಯನ್ನು ಮಂಡಲದಲ್ಲಿ ಇಡಬೇಕು.

೧೦. ಎರಡು ಭುಜಗಳುಳ್ಳ, ಕೆಂಪು ಪದ್ಮದಲ್ಲಿರುವ, ಒಳ್ಳೆಯ ಕತ್ತುಳ್ಳ, ಕೆಂಪು ಬಟ್ಟೆಯುಳ್ಳ, ಕೆಂಪು ಒಡವೆಗಳುಳ್ಳ, ಸೂರ್ಯನನ್ನು ಧ್ಯಾನಿಸಿ, ಕೈಯ್ಯಲ್ಲಿ ಹೂವನ್ನು ಹಿಡಿದುಕೊಂಡು ಮೂಸಿನೋಡಿ, ಈಶಾನ್ಯಕ್ಕೆ ಎಸೆಯಬೇಕು.

೧೧. ಆದಿತ್ಯನಿಗೆ ಸಂಬಂಧವಾದ ಧ್ಯಾನವನ್ನು ಹೊಂದುತ್ತೇನೆ. ಭಾಸ್ಕರನಿಗೆ ನಮಸ್ಕರಿಸುತ್ತೇನೆ. ಅಂತಹ ಭಾನುವು ನನ್ನನ್ನು ಕಾಪಾಡಲಿ.

೧೨. ಗುರುವು ಹೇಳಿದ ರೀತಿಯಲ್ಲಿ ವಿಧಿವತ್ತಾಗಿ ಭಕ್ತಿಯಿಂದ ಕೂಡಿ ಹೂಗಳಿಂದಲೂ ಬಾಳೆಹಣ್ಣು ಮುಂತಾದ ಹಣ್ಣುಗಳಿಂದಲೂ ಪೂಜಿಸಬೇಕು.

೧೩. ಸೂರ್ಯನನ್ನು ನಿತ್ಯವೂ ಪೂಜಿಸುವವನು ಸೂರ್ಯಲೋಕವನ್ನು ಹೊಂದುತ್ತಾನೆ. ಹೂವನ್ನು ಪೂಜೆಮಾಡಿ ಸ್ನಾನಮಾಡಿಸಬೇಕು. ಆದಾದನಂತರ ಗಂಧಾದಿ ಲೇಪನವನ್ನು ಹಚ್ಚಬೇಕು.

ವಿಲೇಪಾಂತೇ ಚ ಸದ್ಧೂಪಂ ಧೂಪಾಂತೇ ಚ ಪ್ರದೀಪಕಂ ।
ಪ್ರದೀಪಾಂತೇ ಚ ನೈವೇದ್ಯಂ ತತೋ ವಾರಿ ನಿವೇದಯೇತ್ ॥ ೧೪ ॥

ತತೋ ಜಾಪ್ಯಂ ಸ್ತುತಿಂ ಮುದ್ರಾಂ ನಮಸ್ಕಾರಂ ತು ಕಾರಯೇತ್ ।
ಅಂಜಲಿಃ ಪ್ರಥಮಾ ಮುದ್ರಾ ದ್ವಿತೀಯಾ ಧೇನುಕಾ ಸ್ಮೃತಾ ॥ ೧೫ ॥

ಏವಂ ಯಃ ಪೂಜಯೇದರ್ಕಂ ರವಿಸಾಯುಜ್ಯತಾಂ ವ್ರಜೇತ್ ।
ಅಸ್ಮದ್ಬ್ರಹ್ಮವಧಾದ್ಘೋರಂ ಕಪಾಲಂ ಕರಲಗ್ನಕಂ ॥ ೧೬ ॥

ರವೇಸ್ತಸ್ಯ ಪ್ರಸಾದಾತ್ತು ಮುಕ್ತಂ ವಾರಾಣಸೀತಟೇ ।
ರವೇಃ ಪರತರಂ ದೈವಂ ತ್ರೈಲೋಕ್ಯೇ ನ ತು ವರ್ತತೇ ॥
ಯಸ್ಯ ಪ್ರಸಾದತೋ ಘೋರಾನ್ಮುಕ್ತೋಽಹಂ ಗುರುಕಿಲ್ಬಿಷಾತ್ ॥ ೧೭ ॥

---

೧೪. ವಿಲೇಪನವಾದ ನಂತರ ಧೂಪವನ್ನೂ, ಧೂಪವಾದ ನಂತರ ದೀಪವನ್ನೂ ದೀಪವಾದ ನಂತರ ನೈವೇದ್ಯವನ್ನೂ, ಅರ್ಪಿಸಬೇಕು. ಅನಂತರ ನೀರನ್ನು ಕೈಕಾಲುಗಳಿಗೆ ಕೊಡಬೇಕು.

೧೫. ಅನಂತರ ಜಪವನ್ನು ಮಾಡಬೇಕು. ಆಮೇಲೆ ಅಂಜಲಿ ಮುದ್ರೆಯನ್ನು ತೋರಿಸಬೇಕು. ಇದೇ ಮೊದಲನೆಯ ಮುದ್ರೆಯು. ಧೇನುಕಾ ಮುದ್ರೆಯು ಎರಡನೆಯದು. ಅದನ್ನು ಎರಡನೆಯ ಬಾರಿ ತೋರಿಸಬೇಕು.

೧೬-೧೭. ಈ ರೀತಿ ಸೂರ್ಯನನ್ನು ಪೂಜಿಸಿದವನು ಸೂರ್ಯನ ಸಾರೂಪ್ಯವನ್ನು ಹೊಂದುತ್ತಾನೆ. ನಾನು ಬ್ರಹ್ಮವಧೆ ಮಾಡಿದುದರಿಂದ ಕಪಾಲವು ಕೈಯ್ಯಲ್ಲಿ ಅಂಟಿಕೊಂಡಿದ್ದಿತು. ರವಿಯ ಈ ವ್ರತವನ್ನು ಕಾಶಿಯಲ್ಲಿ ಗಂಗಾ ನದಿಯ ದಡದಲ್ಲಿ ಮಾಡಿದ್ದರಿಂದ ಮುಕ್ತನಾದೆನು. ಸೂರ್ಯನಿಗಿಂತ ಉತ್ತಮವಾದ ದೇವರು ಮೂರು ಲೋಕದಲ್ಲಿಯೂ ಇನ್ನೊಂದಿಲ್ಲ. ಅವನ ಅನುಗ್ರಹದಿಂದಲೇ ನಾನು ಗುರುವಾದ ಪಾಪದಿಂದ ಬಿಡುಗಡೆಯನ್ನು ಹೊಂದಿದೆನು.

॥ ಸ್ಕಂದ ಉವಾಚ ॥

ಶ್ರುತ್ವಾ ತ್ವತ್ತೋ ಗಿರಂ ನಾಥ ವಿಸ್ಮಯೋ ಮೇಽಭವತ್ಪ್ರಭೋ ।
ತ್ವದನ್ಯೋಽಸ್ತಿ ನ ಕೋ ದೇವಃ ಕಥಂ ಬ್ರಹ್ಮವಧಸ್ತ್ವಯಿ ॥ ೧೮ ॥

ತ್ವಂ ಚ ಜ್ಞಾನೀಶ್ವರೋ ಯೋಗೀ ಲೋಕೇ ಭೋಕ್ತಾಽಕ್ಷರೋಽವ್ಯಯಃ ।
ದೇವಾನಾಂ ಗುರುರೇಕಸ್ತ್ವಂ ವ್ಯಾಪ್ತರೂಪೀ ಮಹೇಶ್ವರಃ ॥ ೧೯ ॥

ಸರ್ವಜ್ಞೋ ವರದೋ ನಿತ್ಯಂ ಸರ್ವೇಷಾಂ ಪ್ರಾಣಿನಾಂ ಪ್ರಭುಃ ।
ದುಷ್ಕೃತಂ ತೇ ಕುತೋ ನಾಥ ತಥಾ ಕ್ರೋಧೋ ವಿಶೇಷತಃ ॥ ೨೦ ॥

॥ ಶಂಭುರುವಾಚ ॥

ಲೋಕಾನಾಂ ಚ ಹಿತಾರ್ಥಾಯ ಪೃಥಗ್ಭೂತ್ವಾ ಯುಗೇ ಯುಗೇ ।
ಸರ್ವಂ ಕುರ್ಮೋ ವಯಂ ಪುತ್ರ ಬ್ರಹ್ಮವಿಷ್ಣುಮಹೇಶ್ವರಾಃ ॥ ೨೧ ॥

ನಾಸ್ಮಾಕಂ ಬಂಧಮೋಕ್ಷೌ ಚ ನಾಕಾರ್ಯಂ ಕಾರ್ಯಮೇವ ಚ ।
ತಥಾ ಲೋಕಸ್ಯ ರಕ್ಷಾರ್ಥಂ ಚರಾಮೋ ವಿಧಿಪೂರ್ವಕಂ ॥ ೨೨ ॥

---

೧೮. ಸ್ಕಂದನು ಹೇಳಿದನು- ಎಲೈ ಸ್ವಾಮಿಯೇ ! ನಿನ್ನ ಮಾತನ್ನು ಕೇಳಿ ನನಗೆ ಆಶ್ಚರ್ಯವಾಗಿದೆ. ನಿನಗಿಂತಲೂ ಬೇರೇ ದೇವರೇ ಇಲ್ಲ. ನಿನಗೆ ಬ್ರಹ್ಮವಧೆ ಹೇಗೆ ಬಂದೀತು ?

೧೯. ನೀನು ಜ್ಞಾನಿಯು, ಈಶ್ವರನು, ಯೋಗಿಯು, ಭೋಕ್ತೃವು, ನಾಶ ರಹಿತನು, ಲೋಕಗಳಿಗೆ ಗುರುವು, ಅದ್ವಿತೀಯನು, ವ್ಯಾಪಕನು, ಮಹೇಶ್ವರನು.

೨೦. ನೀನು ಸರ್ವಜ್ಞನು, ವರಕೊಡತಕ್ಕವನು, ಎಲ್ಲರಿಗೂ ಒಡೆಯನು, ಇಂತಹ ನಿನಗೆ ಪಾಪವೆಂದರೇನು ? ಕೋಪತಾನೇ ಹೇಗೆ ಬಂದೀತು ?

೨೧. ಶಂಭುವು ಹೇಳಿದನು–ಎಲೈ ಪುತ್ರನೇ ! ನಾನು ಲೋಕಹಿತಕ್ಕೋಸ್ಕರ ಯುಗಯುಗದಲ್ಲಿಯೂ ಬ್ರಹ್ಮ, ವಿಷ್ಣು, ಮಹೇಶ್ವರನ ಅವತಾರವನ್ನು ಹೊಂದಿ ಎಲ್ಲ ಧರ್ಮಗಳನ್ನೂ ಮಾಡುತ್ತೇನೆ.

೨೨. ನಮಗೆ ಬಂಧಗಳಾಗಲಿ, ಮೋಕ್ಷಗಳಾದಲಿ, ಇಲ್ಲ ಪುಣ್ಯ ಪಾಪಗಳಿಲ್ಲ ಆದರೂ ಲೋಕದ ರಕ್ಷಣೆಗೆ ವಿಧಿವತ್ತಾಗಿ ಕೆಲಸಗಳನ್ನು ಮಾಡುತ್ತೇವೆ.

ಸರ್ವಂ ಚ ಪರಮಂ ಚೈವ ಸರ್ವವಿಘ್ನವಿನಾಶನಂ ।
ಸರ್ವರೋಗಪ್ರಶಮನಂ ಸರ್ವಾರ್ಥಪ್ರತಿಸಾಧಕಂ ॥ ೨೩ ॥

ಏಕೋಽಸೌ ಬಹುಧಾ ಭೂತ್ವಾ ಕಾಲಭೇದಾದನಿಂದಿತಃ ।
ಮಾಸೇ ಮಾಸೇ ತು ತಪತಿ ಏಕೋ ದ್ವಾದಶತಾಂ ವ್ರಜೇತ್ ॥ ೨೪ ॥

ಮಿತ್ರೋ ಮಾರ್ಗಶಿರೇ ಮಾಸಿ ಪೌಷೇ ವಿಷ್ಣುಃ ಸನಾತನಃ ।
ವರುಣೋ ಮಾಘಮಾಸೇ ತು ಸೂರ್ಯೋ ವೈ ಫಾಲ್ಗುನೇಽಪಿ ಚ ॥ ೨೫ ॥

ಚೈತ್ರಮಾಸೇ ತಪೇದ್ಭಾನುರ್ವೈಶಾಖೇ ತಾಪನಃ ಸ್ಮೃತಃ ।
ಜ್ಯೇಷ್ಠೇ ಮಾಸಿ ತಪೇದಿಂದ್ರ ಆಷಾಢೇ ತಪತೇ ರವಿಃ ॥ ೨೬ ॥

ಗಭಸ್ತಿಃ ಶ್ರಾವಣೇ ಮಾಸೇ ಯಮೋ ಭಾದ್ರಪದೇ ತಥಾ ।
ಹಿರಣ್ಯರೇತಾಶ್ವಯುಜಿ ಕಾರ್ತಿಕೇ ತು ದಿವಾಕರಃ ॥ ೨೭ ॥

ಇತ್ಯೇತೇ ದ್ವಾದಶಾದಿತ್ಯಾ ಮಾಸಿ ಮಾಸಿ ಪ್ರಕೀರ್ತಿತಾಃ ।
ಉಗ್ರರೂಪಾ ಮಹಾತೇಜಾ ಯುಗಾಂತಾನಲವರ್ಚಸಃ ॥ ೨೮ ॥

---

೨೩. ಈ ಆದಿತ್ಯನು ಸರ್ವರೂಪನು, ಉತ್ತಮನು, ಎಲ್ಲಾ ವಿಘ್ನಗಳನ್ನೂ, ನಾಶಮಾಡುವವನು, ರೋಗಗಳನ್ನೂ ನಾಶಮಾಡುವವನು, ಎಲ್ಲಾ ಇಷ್ಟಗಳನ್ನೂ ಕೊಡುವವನು.

೨೪. ಈತನು ಒಬ್ಬನೇ ಆದರೂ ಕಾಲಭೇದದಿಂದ ಬಹು ರೂಪನಾಗಿ ಆಗುತ್ತಾನೆ. ಈ ಒಬ್ಬನೇ ಹನ್ನೆರಡು ಅವತಾರವನ್ನು ಹೊಂದಿ ತಿಂಗಳು ತಿಂಗಳಲ್ಲಿಯೂ ಪ್ರಕಾಶಿಸುತ್ತಾನೆ.

೨೫-೨೮. ಈ ಸೂರ್ಯನು ಮಾರ್ಗಶಿರದಲ್ಲಿ ಮಿತ್ರನೆಂದೂ, ಪುಷ್ಯದಲ್ಲಿ ವಿಷ್ಣುವೆಂದೂ, ಮಾಘದಲ್ಲಿ ವರುಣನೆಂದೂ, ಫಾಲ್ಗುಣದಲ್ಲಿ ಸೂರ್ಯನೆಂದೂ, ಚೈತ್ರದಲ್ಲಿ ಭಾನುವೆಂದೂ, ವೈಶಾಖದಲ್ಲಿ ತಾಪಸನೆಂದೂ, ಜೇಷ್ಠದಲ್ಲಿ ಇಂದ್ರನೆಂದೂ, ಆಷಾಢದಲ್ಲಿ ರವಿಯೆಂದೂ, ಶ್ರಾವಣದಲ್ಲಿ ಗಭಸ್ತಿಯೆಂದೂ, ಭಾದ್ರಪದದಲ್ಲಿ ಯಮನೆಂದೂ, ಆಶ್ವಯುಜದಲ್ಲಿ ಹಿರಣ್ಯರೇತನೆಂದೂ, ಕಾರ್ತಿಕದಲ್ಲಿ ದಿವಾಕರನೆಂದೂ, ಹೆಸರನ್ನು ಹೊಂದಿ ಅವತರಿಸಿ ಪ್ರಕಾಶಿಸುವನು. ಈ ರೀತಿಯಾಗಿ ಆ ಆದಿತ್ಯನ ತಿಂಗಳು ತಿಂಗಳುಗಳಲ್ಲಿ ಬರುವ ಹೆಸರುಗಳು ಇವರೆಲ್ಲರೂ ಉಗ್ರರು, ಮಹಾತೇಜಸ್ವಿಗಳು, ಪ್ರಳಯ ಕಾಲದ ಅಗ್ನಿಯಂತೆ ಕಾಂತಿಯುಳ್ಳವರು.

ಯ ಇದಂ ಪಠತೇ ನಿತ್ಯಂ ತಸ್ಯ ಪಾಪಂ ನ ವಿದ್ಯತೇ ।
ನ ರೋಗೋ ನ ಚ ದಾರಿದ್ರ್ಯಂ ನಾಪಮಾನೋ ಭವೇತ್ಕ್ವಚಿತ್ ॥ ೨೯ ॥

ಅಕ್ಷಯಂ ಲಭತೇ ಸ್ವರ್ಗಂ ಸುಖಂ ರಾಜ್ಯಂ ಯಶಃ ಕ್ರಮಾತ್ ।
ಮಹಾಮಂತ್ರಂ ಪ್ರವಕ್ಷ್ಯಾಮಿ ಸರ್ವಪ್ರೀತಿಕರಂ ಪರಂ ॥ ೩೦ ॥

ನಮಃ ಸಹಸ್ರಬಾಹವೇ ಆದಿತ್ಯಾಯ ನಮೋ ನಮಃ ।
ನಮಸ್ತೇ ಪದ್ಮಹಸ್ತಾಯ ವರುಣಾಯ ನಮೋ ನಮಃ ॥ ೩೧ ॥

ನಮಸ್ತಿಮಿರನಾಶಾಯ ಶ್ರೀಸೂರ್ಯಾಯ ನಮೋ ನಮಃ ।
ನಮಃ ಸಹಸ್ರಜಿಹ್ವಾಯ ಭಾನವೇ ಚ ನಮೋ ನಮಃ ॥ ೩೨ ॥

ತ್ವಂ ಚ ಬ್ರಹ್ಮಾ ತ್ವಂ ಚ ವಿಷ್ಣು ರುದ್ರಸ್ತ್ವಂ ಚ ನಮೋ ನಮಃ ।
ತ್ವಮಗ್ನಿಃ ಸರ್ವಭೂತೇಷು ವಾಯುಸ್ತ್ವಂ ಚ ನಮೋ ನಮಃ ॥ ೩೩ ॥

ಸರ್ವಗಃ ಸರ್ವಭೂತೇಷು ನ ಹಿ ಕಿಂಚಿತ್ತ್ವಯಾ ವಿನಾ ।
ಚರಾಚರೇ ಜಗತ್ಯಸ್ಮಿನ್ಸರ್ವದೇಹೇ ವ್ಯವಸ್ಥಿತಃ ॥ ೩೪ ॥

---

೨೯-೩೨. ಇದನ್ನು ನಿತ್ಯವೂ ಓದುವವನಿಗೆ ಪಾಪವೆಂಬುದು ಇರುವುದಿಲ್ಲ ರೋಗ ದಾರಿದ್ರ್ಯಗಳು ಬರುವುದಿಲ್ಲ. ಯಾವ ಜಾಗದಲ್ಲಿಯೂ ಅವಮಾನವಾಗುವುದೇ ಇಲ್ಲ. ಅಕ್ಷಯವಾದ ಸುಖವನ್ನು ಹೊಂದುತ್ತಾನೆ. ಸುಖ, ರಾಜ್ಯ, ಯಶಸ್ಸುಗನ್ನುಳ ಹೊಂದುತ್ತಾನೆ. ಎಲ್ಲರಿಗೂ ಪ್ರೀತಿಯನ್ನುಂಟುಮಾಡುವ ಮಹಾಮಂತ್ರವನ್ನು ಹೇಳುತ್ತೇನೆ. ಸಹಸ್ರ ತೋಳುಗಳುಳ್ಳ ಸೂರ್ಯನಿಗೆ ನಮಸ್ಕಾರವು. ಪದ್ಮವನ್ನು ಹಿಡಿದಿರುವ ಸ್ವಾಮಿಗೆ ನಮಸ್ಕಾರವು. ವರುಣನಿಗೆ ನಮಸ್ಕಾರವು. ಕತ್ತಲೆಯನ್ನು ನಾಶಮಾಡುವ ಸ್ವಾಮಿಗೆ ನಮಸ್ಕಾರವು. ಸೂರ್ಯನಿಗೆ ನಮಸ್ಕಾರವು. ಸಾವಿರ ನಾಲಿಗೆ (ಕಿರಣ) ಗಳುಳ್ಳ ಸ್ವಾಮಿಗೆ ನಮಸ್ಕಾರವು. ಭಾನುವಿಗೆ ನಮಸ್ಕಾರವು

೩೩. ಎಲೈ ಸ್ವಾಮಿಯೇ! ನೀನೇ ಬ್ರಹ್ಮನು, ನೀನೇ ವಿಷ್ಣುವು, ನೀನೇ ಅಗ್ನಿಯು, ನೀನೇ ವಾಯುವು, ಇಂತಹ ನಿನಗೆ ನಮಸ್ಕಾರವು.

೩೪. ನೀನೇ ಎಲ್ಲಾ ಕಡೆಯಲ್ಲಿಯೂ ಇರುವವನು ಎಲ್ಲಾ ಪ್ರಾಣಿಗಳಲ್ಲಿಯೂ ನೀನೇ ಇದ್ದೀಯೇ ನೀನಲ್ಲದಿರುವುದು ಯಾವುದೂ ಇಲ್ಲ ಚರಾಚರವಾದ ಈ ಜಗತ್ತಿನಲ್ಲಿರುವ ಎಲ್ಲ ದೇಹದಲ್ಲಿಯೂ ನೀನಿದ್ದೀಯೇ.

ಇತಿ ಜಪ್ತ್ವಾ ಲಭೇತ್ಕಾಮಂ ಸ್ವರ್ಗಭೋಗ್ಯಾದಿಕಂ ಕ್ರಮಾತ್ ।
ಆದಿತ್ಯೋ ಭಾಸ್ಕರಃ ಸೂರ್ಯಃ ಅರ್ಕೋ ಭಾನುರ್ದಿವಾಕರಃ ॥ ೩೫ ॥

ಸುವರ್ಣರೇತಾ ಮಿತ್ರಶ್ಚ ಪೂಷಾ ತ್ವಷ್ಟಾ ಚ ತೇ ದಶ ।
ಸ್ವಯಂಭೂಸ್ತಿಮಿರಾಶಶ್ಚ ದ್ವಾದಶಃ ಪರಿಕೀರ್ತಿತಃ ॥ ೩೬ ॥

ನಾಮಾನ್ಯೇತಾನಿ ಸೂರ್ಯಸ್ಯ ಶುಚಿರ್ಯಸ್ತು ಪಠೇನ್ನರಃ ।
ಸರ್ವಪಾಪಾಚ್ಚ ರೋಗಾಚ್ಚ ಮುಕ್ತೋ ಯಾತಿ ಪರಾಂ ಗತಿಂ ॥ ೩೭ ॥

ಪುನರನ್ಯತ್ಪ್ರವಕ್ಷ್ಯಾಮಿ ಭಾಸ್ಕರಸ್ಯ ಮಹಾತ್ಮನಃ ।
ರಕ್ತಾಖ್ಯಾ ಯೇ ರಕ್ತನಿಭಾಃ ಸಿಂದೂರಾರುವಿಗ್ರಹಾಃ ॥ ೩೮ ॥

ಯಾನಿ ನಾಮಾನಿ ಮುಖ್ಯಾನಿ ತಚ್ಛೃಣುಷ್ವ ಷಡಾನನ ।
ತಪನಸ್ತಾಪನಶ್ಚೈವ ಕರ್ತಾ ಹರ್ತಾ ಮಹೇಶ್ವರಃ ॥ ೩೯ ॥

ಲೋಕಸಾಕ್ಷೀ ತ್ರಿಲೋಕೇಶೋ ವ್ಯೋಮಾಧಿಪೋ ದಿವಾಕರಃ ।
ಅಗ್ನಿಗರ್ಭೋ ಮಹಾವಿಪ್ರಃ ಖಗಃ ಸಪ್ತಾಶ್ವವಾಹನಃ ॥ ೪೦ ॥

---

೩೫-೩೬. ಈ ರೀತಿ ಜಪಿಸಿದರೆ ಇಷ್ಟವನ್ನೂ ಸ್ವರ್ಗ ಭೋಗಗಳನ್ನೂ ಹೊಂದುತ್ತಾನೆ. ಆದಿತ್ಯ, ಭಾಸ್ಕರ, ಸೂರ್ಯ, ಅರ್ಕ, ಭಾನು, ದಿವಾಕರ, ಸುವರ್ಣರೇತನು, ಮಿತ್ರ, ಪೂಷಾ, ತ್ವಷ್ಟ, ಸ್ವಯಂಭೂ, ತಿಮಿರನಾಶನ, ಎಂದು ಹನ್ನೆರಡು ಹೆಸರುಗಳು ಈತನಿಗೆ ಪ್ರಸಿದ್ಧವು.

೩೭. ಸೂರ್ಯನ ಈ ನಾಮಗಳನ್ನು ಶುಚಿಯಾಗಿ ಪಠಿಸುವವನು ರೋಗಗಳಿಂದಲೂ ಮುಕ್ತನಾಗಿ ಉತ್ತಮ ಗತಿಯನ್ನು ಹೊಂದುತ್ತಾನೆ.

೩೮-೪೧. ಸೂರ್ಯನ ಉತ್ತಮವಾದ ಹೆಸರುಗಳನ್ನು ಹೇಳುತ್ತೇನೆ. ಕೇಳು. ಕೆಂಪು ಮತ್ತು ಕೆಂಪಿಗೆ ಸಮಾನವಾದ ಚಂದ್ರದಂತೆ ಬಣ್ಣವುಳ್ಳ ಹೆಸರುಗಳನ್ನು ಹೇಳುತ್ತೇನೆ. ಕೇಳು. ಇವು ಅವನ ಮುಖ್ಯವಾದ ಹೆಸರುಗಳು. ತಪನ, ತಾಪನ, ಕರ್ತ, ಹರ್ತ, ಮಹೇಶ್ವರ, ಲೋಕಸಾಕ್ಷೀ, ತ್ರಿಲೋಕೇಶ, ವ್ಯೋಮಾಧಿಪ, ದಿವಾಕರ, ಅಗ್ನಿಗರ್ಭ, ಮಹಾವಿಪ್ರ, ಖಗ, ಸಪ್ತಾಶ್ವವಾಹನ, ಪದ್ಮಹಸ್ತ,

ಪದ್ಮಹಸ್ತಸ್ತಮೋಭೇದೀ ಋಗ್ವೇದೋ ಯಜುಸಾಮಗಃ ।
ಕಾಲಪ್ರಿಯಂ ಪುಂಡರೀಕಂ ಮೂಲಸ್ಥಾನಂ ಚ ಭಾವಿತಂ ॥ ४೧ ॥

ಯಃ ಸ್ಮರೇಚ್ಚ ಸದಾ ಭಕ್ತ್ಯಾ ತಸ್ಯ ರೋಗಭಯಂ ಕುತಃ ।
ಶೃಣು ಕಾರ್ತಿಕ ಯತ್ನೇನ ಸರ್ವಪಾಪಹರಂ ಶುಭಂ ॥ ४೨ ॥

ನ ಸಂದೇಹೋ ಮನಾಕ್ಕಾರ್ಯ ಆದಿತ್ಯಸ್ಯ ಮಹಾಮತೇ ।
ಓಂ ಇಂದ್ರಾಯ ನಮಃ ಓಂ ವಿಷ್ಣವೇ ನಮಃ ॥ ४೩ ॥

ಏಷ ಜಪ್ಯಶ್ಚ ಹೋಮಶ್ಚ ಸಂಧ್ಯೋಪಾಸನಮೇವ ಚ ।
ಸರ್ವಶಾಂತಿಕರಶ್ಚೈವ ಸರ್ವವಿಘ್ನವಿನಾಶನಃ ॥ ४४ ॥

ನಾಶಯೇತ್ಸರ್ವರೋಗಾಂಶ್ಚ ಲೂತಾವಿಸ್ಫೋಟಕಾದಿಕಾನ್ ।
ಕಾಮಲಾದಿಕರೋಗಾಂಶ್ಚ ಯೇ ರೋಗಾಶ್ಚೈವ ದಾರುಣಾಃ ॥ ४೫ ॥

ಐಕಾಹಿಕಂ ದ್ವ್ಯಾಹಿಕಂ ಚ ಜ್ವರಂ ಚಾತುರ್ಥಿಕಂ ತಥಾ
ಕುಷ್ಠರೋಗಂ ಕ್ಷಯಂ ರೋಗಂ ಕುಕ್ಷಿರೋಗಂ ಜ್ವರಂ ತಥಾ ॥ ४೬ ॥

---

ತಮೋಭೇದಿ ಋಗ್ವೇದ, ಯಜುರ್ವೇದ, ಸಾಮವೇದ, ಕಾಲಪ್ರಿಯ, ಪುಂಡರೀಕ, ಮೂಲಸ್ಥಾನ, ಎಂಬುದಾಗಿ ಅವನಿಗೆ ವಿಶೇಷವಾದ ಹೆಸರುಗಳಿವೆ.

४೨-४४. ಈ ಹೆಸರುಗಳನ್ನು ಭಕ್ತಿಯಿಂದ ಯಾವಾಗಲೂ ಸ್ಮರಿಸುತ್ತಿರುವವನಿಗೆ ರೋಗಭಯವೆಲ್ಲಿಂದ ಬಂದೀತು ? ಎಲೈ ಸ್ಕಂದನೇ ! ಇವು ಪಾಪಹರವೂ ಶುಭವೂ ಆದ ನಾಮಗಳು. ಇದನ್ನು ಪ್ರಯತ್ನದಿಂದ ಕೇಳು. ಆದಿತ್ಯನ ಈ ಮಹಿಮೆಯಲ್ಲಿ ಸ್ವಲ್ಪವೂ ಸಂದೇಹ ಪಡಬೇಡ. ಓಂ ಇಂದ್ರನಿಗೆ ನಮಸ್ಕಾರ. ಓಂ ವಿಷ್ಣುವಿಗೆ ನಮಸ್ಕಾರ. ಇದೇ ಜಪಿಸುವ ಮಂತ್ರವು. ಇದೇ ಹೋಮದ ಮಂತ್ರವು. ಇದೇ ಸರ್ವ ಶಾಂತಿಯನ್ನುಂಟುಮಾಡುವ ಮಂತ್ರವು. ಇದೇ ಎಲ್ಲ ವಿಘ್ನವನ್ನೂ ನಾಶಮಾಡುವ ಮಂತ್ರವು

४೫-४೬. ಲೂತ, ಶಿಡುಬು, ಕಾಮಾಲೆ ಮತ್ತು ಕ್ರೂರವಾದ ರೋಗಗಳು, ಐಕಾಹಿಕ, ದ್ವ್ಯಾಹಿಕ ಜ್ವರಗಳು, ಚಾತುರ್ಥಿಕ ಜ್ವರ, ಕುಷ್ಠ, ಕ್ಷಯ, ಹೊಟ್ಟೆಶೂಲೆ, ಬಗೆಬಗೆಯ ಜ್ವರಗಳು, ಅಶ್ಮರಿಯೆಂಬ ಕಲ್ಲು ಬೀಳುವ ರೋಗ, ಮೂತ್ರ ಕೃಚ್ಛ್ರವೆಂಬ ಮೂತ್ರರೋಗ ಮತ್ತು ಬಗೆಬಗೆಯ ರೋಗಗಳು, ಮತ್ತು ವಾತದಿಂದ

ಅಶ್ಮರೀಮೂತ್ರಕೃಚ್ಛ್ರಾಂಶ್ಚ ನಾನಾರೋಗಭಯಂ ತಥಾ ।
ಯೇ ವಾತಪ್ರಭವಾ ರೋಗಾ ಯೇ ರೋಗಾ ಗರ್ಭಸಂಭವಾಃ ॥ ೪೭ ॥

ಮರ್ದ ಮರ್ದ ಮಹಾರೋಗಾ ಮೂರ್ಚ್ಛಿತ್ವಾ ವೇದನಾತ್ಮಕಂ ।
ವಿಲಯಂ ಯಾಂತಿ ತೇ ಸರ್ವೇ ಆದಿತ್ಯೋಚ್ಚಾರಣೇನ ತು ॥ ೪೮ ॥

ರಕ್ಷ ಮಾಂ ದೇವದೇವೇಶ ಗ್ರಹರೋಗಭಯೇಷು ಚ ।
ಪ್ರಶಮಂ ಯಾಂತಿ ತೇ ಸರ್ವೇ ಕೀರ್ತಿತೇ ತು ದಿವಾಕರೇ ॥ ೪೯ ॥

ಮೂಲಮಂತ್ರಂ ಪ್ರವಕ್ಷ್ಯಾಮಿ ಸರ್ವಕಾಮಾರ್ಥ ಸಾಧಕಂ ।
ಭುಕ್ತಿಮುಕ್ತಿಪ್ರದಂ ನಿತ್ಯಂ ಭಾಸ್ಕರಸ್ಯ ಮಹಾತ್ಮನಃ ॥ ೫೦ ॥

ಮಂತ್ರಶ್ಚಾಯಂ-ಓಂ ಹ್ರಾಂ ಹ್ರೀಂ ಸಃ ಸೂರ್ಯಾಯ ನಮಃ ।
ಅನೇನ ಮಂತ್ರೇಣ ಸದಾ ಸರ್ವಸಿದ್ಧಿರ್ಭವೇದ್ಧ್ರುವಂ ॥ ೫೧ ॥

---

ಹುಟ್ಟುವ ಅನೇಕ ರೋಗಗಳು, ಗರ್ಭದಿಂದಲೇ ಬರುವ ರೋಗಗಳು ಎಲ್ಲವನ್ನೂ ಈ ನಾಮಸ್ಮರಣೆಯು ನಾಶಮಾಡುತ್ತದೆ.

೪೮. ಇನ್ನೂ ತೊಂದರೆ ಕೊಡುವ ಮಹಾರೋಗಗಳು ಮೂರ್ಛೆಗಳೂ, ನೋವನ್ನುಂಟುಮಾಡುವ ಇನ್ನೂ ಅನೇಕ ರೋಗಗಳೂ ಆದಿತ್ಯನ ಈ ನಾಮದ ಉಚ್ಚಾರಣೆಯಿಂದಲೇ ನಾಶವಾಗುತ್ತವೆ.

೪೯. ದೇವದೇವನಾದ ಎಲೈ ಸೂರ್ಯನೇ ! ಗ್ರಹರೋಗ ಭಯಾದಿಗಳನ್ನೂ ನಾಶಮಾಡೆಂದು ಪ್ರಾರ್ಥಿಸಬೇಕು. ಹೀಗೆ ದಿವಾಕರನ ಹೆಸರನ್ನು ಹೇಳಿದರೇನೇ ಎಲ್ಲವೂ ನಾಶಹೊಂದುತ್ತವೆ.

೫೦. ತಿಂಡಿಯನ್ನೂ, ಮುಕ್ತಿಯನ್ನೂ, ಎಲ್ಲಾ ಇಷ್ಟಗಳನ್ನೂ ಕೊಡುವ ಸೂರ್ಯನ ಮೂಲಮಂತ್ರವನ್ನು ಹೇಳುತ್ತೇನೆ.

೫೧. ಇದು ಮೂಲಮಂತ್ರವು ಓಂ, ಹ್ರಾಂ, ಹ್ರೀಂ ಸಃ ಸೂರ್ಯಾಯ ನಮಃ ಎಂಬುದು. ಯಾವಾಗಲೂ ಈ ಮಂತ್ರದಿಂದ ಎಲ್ಲಾ ಸಿದ್ಧಿಗಳೂ ಉಂಟಾಗುತ್ತವೆ.

ವ್ಯಾಧಯೋ ನೈವ ಬಾಧಂತೇ ನ ಚಾನಿಷ್ಟಭಯಂ ಭವೇತ್ ।
ಸೂರ್ಯಾವರ್ತೋದಕಂ ಯಸ್ತು ಗೃಹೀತ್ವಾ ತು ಕ್ರಮೇಣ ತು ॥ ೫೨ ॥

ತಸ್ಯ ಪ್ರಾಶನಮಾತ್ರೇಣ ನರೋ ರೋಗಾತ್ಪ್ರಮುಚ್ಯತೇ ।
ನ ದಾತವ್ಯಂ ನ ಖ್ಯಾತವ್ಯಂ ಜಪ್ತವ್ಯಂ ಚ ಪ್ರಯತ್ನತಃ ॥ ೫೩ ॥

ಅಭಕ್ತೇಷ್ವಸಪತ್ಯೇಷು ಪಾಖಂಡಲೌಕಿಕೇಷು ಚ ।
ಕಟುತೈಲಸಮಾಯುಕ್ತಂ ನಸ್ಯೇ ಪಾನೇ ಚ ದಾಪಯೇತ್ ॥ ೫೪ ॥

ಸೂರ್ಯಾವರ್ತಜಲಂ ಪುತ್ರ ಸರ್ವರೋಗಾದ್ವಿಮುಂಚತಿ ।
ಮೂಲಮಂತ್ರಸ್ತು ಜಪ್ತವ್ಯಃ ಸಂಧ್ಯಾಯಾಂ ಹೋಮಕರ್ಮಸು ॥ ೫೫ ॥

ಜಪ್ಯಮಾನೇತು ನಶ್ಯಂತಿ ರೋಗಾಃ ಕ್ರೂರಗ್ರಹಾಸ್ತಥಾ ।
ಕಿಮನ್ಯೈರ್ಬಹುಭಿಃ ಶಾಸ್ತ್ರೈರ್ಮಂತ್ರೈರ್ವಾ ಬಹುವಿಸ್ತರೈಃ ॥ ೫೬ ॥

ಸರ್ವಶಾಂತಿರಿಯಂ ವತ್ಸ ಸರ್ವಾರ್ಥಪ್ರತಿಸಾಧಿಕಾ ।
ನಾಸ್ತಿಕಾಯ ನ ದಾತವ್ಯಾ ದೇವಬ್ರಾಹ್ಮಣನಿಂದಕೇ ॥ ೫೭ ॥

---

೫೨–೫೪. ಇದನ್ನು ಜಪಿಸಿದವನಿಗೆ ರೋಗಗಳು ಬಾಧಿಸುವುದಿಲ್ಲ. ಅನಿಷ್ಟವು ಉಂಟಾಗುವುದಿಲ್ಲ. ಈ ಮಂತ್ರದಿಂದ ಮಂತ್ರಿಸಿದ ನೀರನ್ನು ಕುಡಿದರೆ ರೋಗಗಳು ಹೋಗುತ್ತವೆ. ಇದನ್ನು ಮತ್ತೊಬ್ಬರಿಗೆ ಉಪದೇಶಿಸಬಾರದು. ಪ್ರಕಾಶಪಡಿಸಲೂ ಬಾರದು. ಪ್ರಯತ್ನಪಟ್ಟು ಜಪಿಸಬೇಕು. ಭಕ್ತರಲ್ಲದರಿಗೆ, ಮಕ್ಕಳಿಲ್ಲದವರಿಗೆ, ನಾಸ್ತಿಕರಿಗೆ, ಲೌಕಿಕರಿಗೆ ಹೇಳಕೂಡದು. ಕಟುವಾದ ತೈಲಗಳನ್ನು ಮೂಗು, ಪಾನಗಳಲ್ಲಿ ಸೇರಿಸಿ ತೆಗೆದುಕೊಳ್ಳಬೇಕು.

೫೫-೬೫. ಈ ಸೂರ್ಯ ಮಂತ್ರವನ್ನು ಜಪಿಸಿದ ನೀರನ್ನು ಕುಡಿದರೆ ಎಲ್ಲ ರೋಗಗಳೂ ಹೋಗುತ್ತವೆ. ಸಂಧ್ಯಾಕಾಲ ಹೋಮದ ಸಮಯಗಳಲ್ಲಿ ಈ ಮೂಲ ಮಂತ್ರಗಳನ್ನು ಜಪಿಸಬೇಕು. ಇದನ್ನು ಜಪಿಸಿದರೆ ರೋಗಗಳೂ, ಕ್ರೂರ ಗ್ರಹಗಳೂ ಹೋಗುತ್ತವೆ. ಅನೇಕ ಶಾಸ್ತ್ರ, ವಿಸ್ತಾರವಾದ ಮಂತ್ರಗಳಿಂದ ಉಪಯೋಗವಿಲ್ಲ. ಇದೇ ಸರ್ವಶಾಂತಿಯನ್ನು ಕೊಡುತ್ತದೆ. ಮತ್ತು ಎಲ್ಲಾ ಇಷ್ಟಾರ್ಥಗಳನ್ನು ಉಂಟು ಮಾಡುತ್ತದೆ. ಈ ಮಂತ್ರವನ್ನು ನಾಸ್ತಿಕನಿಗೂ, ದೇವಬ್ರಾಹ್ಮಣರನ್ನು ನಿಂದಿಸ

ಗುರುಭಕ್ತಾಯ ದಾತವ್ಯಾ ನಾನ್ಯೇಭ್ಯೋಽಪಿ ಕದಾಚನ ।
ಪ್ರಾಥರುತ್ಥಾಯ ಯೋ ನಿತ್ಯಂ ಕೀರ್ತಯಿಷ್ಯತಿ ಮಾನವಃ ॥ ೫೮ ॥

ಗೋಘ್ನಃ ಕೃತಘ್ನಕಶ್ಚೈವ ಮುಚ್ಯತೇ ಸರ್ವಪಾತಕೈಃ ।
ಶರೀರಾರೋಗ್ಯಕೃಚ್ಚೈವ ಧನವೃದ್ಧಿಯಶಸ್ಕರಃ ॥ ೫೯ ॥

ಜಾಯತೇ ನಾತ್ರ ಸಂದೇಹೋ ಯಸ್ಯ ತುಷ್ಟೋ ದಿವಾಕರಃ ।
ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ನಿತ್ಯಮೇವ ಚ ॥ ೬೦ ॥

ಯಃ ಪಠೇದ್ರವಿಸಾನ್ನಿಧ್ಯೇ ಸೋಽಭೀಷ್ಟಂ ಫಲಮಾಪ್ನುಯಾತ್ ।
ಪುತ್ರಾರ್ಥೀ ಲಭತೇ ಪುತ್ರಂ ಕನ್ಯಾರ್ಥೀ ಕನ್ಯಕಾಂ ಲಭೇತ್ ॥ ೬೧ ॥

ವಿದ್ಯಾರ್ಥೀ ಲಭತೇ ವಿದ್ಯಾಂ ಧನಾರ್ಥೀ ಲಭತೇ ಧನಂ ।
ಶೃಣುಯಾತ್ಸಂಯತೋ ಭಕ್ತ್ಯಾ ಶುದ್ಧಾಚಾರಸಮನ್ವಿತಃ ॥ ೬೨ ॥

ಸರ್ವಪಾಪವಿನಿರ್ಮುಕ್ತಃ ಸೂರ್ಯಲೋಕಂ ವ್ರಜತ್ಯಪಿ ।
ಭಾಸ್ಕರಸ್ಯ ವ್ರತೇ ಯಶ್ಚ ವ್ರತಾಚಾರಮುಖೇಷು ಚ ॥ ೬೩ ॥

---

ತಕ್ಕವನಿಗೂ, ಹೇಳಕೂಡದು. ಗುರುವಿನಲ್ಲಿ ಭಕ್ತಿಯುಳ್ಳವನಿಗೆ ಹೇಳಿಕೊಡಬೇಕು ಮಿಕ್ಕವರಿಗೆ ಹೇಳಕೂಡದು. ಬೆಳಿಗ್ಗೆ ಎದ್ದು ಯಾವನು ಇದನ್ನು ಹೇಳುತ್ತಾನೆಯೋ ಅವನು ಗೋಹತ್ಯೆಯನ್ನು ಮಾಡಿದ್ದರೂ ಕೃತಘ್ನನಾಗಿದ್ದರೂ ಎಲ್ಲಾ ಪಾಪಗಳಿಂದಲೂ ಮುಕ್ತನಾಗುತ್ತಾನೆ. ಆರೋಗ್ಯ, ಐಶ್ವರ್ಯ, ಧನದ ವೃದ್ಧಿ, ಯಶಸ್ಸು ಇವುಗಳನ್ನು ಸಂತೋಷಗೊಂಡು ಸೂರ್ಯನು ಕೊಡುವನು. ಯಾರು ಇದನ್ನು ಸೂರ್ಯನ ಬಳಿ ದಿನಕ್ಕೆ ಒಂದು ಬಾರಿಯಾಗಲಿ, ಎರಡು ಬಾರಿಯಾಗಲಿ, ಹೇಳುವರೋ ಅವರು ಇಷ್ಟಾರ್ಥವನ್ನು ಹೊಂದುವರು. ಮಗನನ್ನು ಅಪೇಕ್ಷಿಸುವವನು ಮಗನನ್ನೂ, ಕನ್ಯೆಯನ್ನು ಅಪೇಕ್ಷಿಸುವವನು ಕನ್ಯೆಯನ್ನೂ, ವಿದ್ಯಾರ್ಥಿಯು ವಿದ್ಯೆಯನ್ನೂ, ಧನಾರ್ಥಿಯು ಧನವನ್ನೂ, ಇದನ್ನು ಓದಿದರೆ ಹೊಂದುತ್ತಾರೆ. ಭಕ್ತಿಯಿಂದಲೂ ಶುದ್ಧವಾದ ಆಚಾರವಂತನಾಗಿಯೂ ಕೇಳಿದರೆ ಪಾಪಗಳನ್ನು ಕಳೆದುಕೊಂಡು ಸೂರ್ಯ ಲೋಕವನ್ನು ಹೊಂದುವನು. ಸೂರ್ಯನ ವ್ರತದಲ್ಲಿಯೂ ಉಳಿದ ವ್ರತ ಆಚಾರ

ಪುಣ್ಯಸ್ಥಾನೇಷು ತೀರ್ಥೇಷು ಪಠೇತ್ಕೋಟಿಗುಣಂ ಭವೇತ್ ।
ಗ್ರಹೇ ಭೋಜ್ಯೇಷು ಪೂಜಾಯಾಂ ಬ್ರಹ್ಮಭೋಜ್ಯೇ ದ್ವಿಜಾಗ್ರತಃ ॥ ೬೪ ॥

ಯ ಇದಂ ಪಠತೇ ವಿಪ್ರಸ್ತಸ್ಯಾನಂತಫಲಂ ಭವೇತ್ ।
ತಪಸ್ವಿನಾಂ ಚ ವಿಪ್ರಾಣಾಂ ದೇವಾನಾಮಗ್ರತಃ ಸುಧೀಃ ॥
ಯಃ ಪಠೇತ್ಪಾಠಯೇದ್ವಾಽಪಿ ಸೂರ್ಯಲೋಕೇ ಮಹೀಯತೇ ॥ ೬೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಸೂರ್ಯಶಾಂತಿರ್ನಾಮ
ಷಟ್ಸಪ್ತತಿತಮೋಽಧ್ಯಾಯಃ

---

ಅನುಸರಣೆಗಳಲ್ಲಿಯೂ, ಪುಣ್ಯಸ್ಥಾನ ತೀರ್ಥಗಳಲ್ಲಿಯೂ ಇದನ್ನು ಹೇಳಿದರೆ ಕೋಟಿಯಷ್ಟು ಹೆಚ್ಚಿನ ಫಲವುಂಟು. ಗ್ರಹಣಗಳಲ್ಲಿ, ಊಟದ ಸಮಯದಲ್ಲಿ, ಪೂಜೆ, ಮಾಡುವಾಗ, ಬ್ರಾಹ್ಮಣರು ಊಟಮಾಡುವಾಗ, ಎದುರಿಗೆ ಇದನ್ನು ಹೇಳಿದರೆ ಅನಂತವಾದ ಫಲವುಂಟು. ತಪಸ್ವಿಗಳಾದ ಬ್ರಾಹ್ಮಣರ ಎದುರಿಗೂ, ದೇವತೆಗಳ ಎದುರಿಗೂ ಇದನ್ನು ಓದಿದವನೂ, ಓದಿಸಿದವನೂ, ಸೂರ್ಯಲೋಕವನ್ನೇ ಹೊಂದುತ್ತಾನೆ.

ಇಂತು ಶ್ರೀಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಸೂರ್ಯಶಾಂತಿಯೆಂಬ
ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಸಪ್ತಸಪ್ತತಿತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

**ಮಧ್ಯದೇಶೇ ಸ್ವರಾಟ್ಸಂವ್ರಾಡ್ಭದ್ರೇಶ್ವರ ಇತಿ ಶ್ರುತಃ ।**
**ತಪೋಭಿರ್ಬಹುಭಿಃ ಪೂತೋ ವ್ರತೈರ್ನಾನಾವಿಧೈರಪಿ ॥ ೧ ॥**

**ದೇವಾಂಸ್ತು ಪೂಜಯೇನ್ನಿತ್ಯಂ ದ್ವಿಜಾತಿಥಿಗುರೂನಪಿ ।**
**ನ್ಯಾಯವರ್ತೀ ಸುಶೀಲಾತ್ಮಾ ಶಾಸ್ತ್ರಾರ್ಥವಿಧಿಪಾರಗಃ ॥ ೨ ॥**

**ಜನಾಂಸ್ತು ಪಾಲಯೇನ್ನಿತ್ಯಂ ಸುಭಾವೇನ ಸದಾ ಖಲು ।**
**ತಸ್ಯ ಸವ್ಯೇಽಭವತ್ಕುಷ್ಠಂ ಕರೇ ಶ್ವೇತಮಜಾಯತ ॥ ೩ ॥**

---

## ಎಪ್ಪತ್ತೇಳನೆಯ ಅಧ್ಯಾಯವು

೧. ವ್ಯಾಸನು ಹೇಳಿದನು- ಮಧ್ಯದೇಶದಲ್ಲಿ ಭದ್ರೇಶ್ವರನೆಂಬ ರಾಜನೊಬ್ಬನಿದ್ದನು. ನಾನಾ ಬಗೆಯಾದ ತಪಸ್ಸು, ವ್ರತ ಉಪವಾಸಗಳನ್ನಾಚರಿಸಿ ಪರಿಶುದ್ಧನಾಗಿದ್ದನು.

೨. ದಿನವೂ, ದೇವತೆಗಳು, ಬ್ರಾಹ್ಮಣರು, ಗುರುಗಳು ಇವರನ್ನು ಪೂಜಿಸುತ್ತಿದ್ದನು. ನ್ಯಾಯವುಳ್ಳವನಾಗಿಯೂ, ಶೀಲವುಳ್ಳವನಾಗಿಯೂ, ಶಾಸ್ತ್ರಗಳನ್ನು ತಿಳಿದವನಾಗಿಯೂ ಇದ್ದನು.

೩. ಒಳ್ಳೆಯತನದಿಂದಲೇ ಪ್ರಜಾಪಾಲನೆ ಮಾಡಿಕೊಂಡಿದ್ದನು. ಇಂತಹವನಿಗೆ ಬಲದ ಕೈಯಲ್ಲಿ ಬಿಳಿಯ ತೊನ್ನು ಉಂಟಾಯಿತು.

ತತೋ ಭಿಷಕ್ಪ್ರಯೋಗಾಚ್ಚ ಲಕ್ಷಣಂ ದೃಶ್ಯತೇ ಪುರಾ ।
ಆಹೂಯ ದ್ವಿಜಮುಖ್ಯಾಂಶ್ಚ ಮಂತ್ರಿಣಃ ಸೋಽಬ್ರವೀದ್ವಚಃ ॥ ೪ ॥

॥ ರಾಜೋವಾಚ ॥

ಕಿಲ್ಬಿಷಂ ಮೇ ಕರೇ ವಿಪ್ರಾ ದುಸ್ಸಹಂ ಲೋಕಗರ್ಹಿತಂ ।
ತಸ್ಮಾತ್ಪುಣ್ಯೇ ಮಹಾಕ್ಷೇತ್ರೇ ಯತ್ರ ತ್ಯಕ್ಷ್ಯಾಮಿ ವಿಗ್ರಹಂ ॥ ೫ ॥

ಆಜ್ಞಾಪಯುತ ಧರ್ಮಜ್ಞಾಃ ಪರಲೋಕಹಿತಾಯ ವೈ ।
ವಂಶಹೀನಸ್ಯ ಮೇ ವೀರಾಃ ಪ್ರೇತ್ಯಾಮುತ್ರ ಹಿತಂ ಚ ಯತ್ ॥
ತದ್ಬ್ರೂತ ಸುಪ್ರಸನ್ನಾ ಮೇ ಉದ್ದಿಷ್ಟಂ ಯತ್ಕರೋಮ್ಯಹಂ ॥ ೬ ॥

॥ ದ್ವಿಜಾ ಊಚುಃ ॥

ಪರಿತ್ಯಕ್ತೇ ತ್ವಯಾ ರಾಷ್ಟ್ರೇ ಧರ್ಮಶೀಲೇನ ಧೀಮತಾ ।
ನಷ್ಟಂ ಜಗದಿದಂ ರಾಜಂಸ್ತಸ್ಮಾನ್ನೋ ವಕ್ತುಮರ್ಹಸಿ ॥ ೭ ॥

---

೪. ವೈದ್ಯರು ಚಿಕಿತ್ಸೆ ಮಾಡುತ್ತಿದ್ದರೂ ಹೆಚ್ಚುತ್ತಲೇ ಬಂದಿತು. ಆಗ ಆ ರಾಜನು ಬ್ರಾಹ್ಮಣರನ್ನೂ, ಮಂತ್ರಿಗಳನ್ನೂ ಕರೆದು ಇಂತೆಂದನು.

೫. ರಾಜನು ಹೇಳಿದನು- ಎಲೈ ಬ್ರಾಹ್ಮಣರಿರಾ ! ನನ್ನ ಕೈಯಲ್ಲಿ ಈ ನಿಂದ್ಯವಾದ, ಪಾಪರೂಪವಾದ, ತೊನ್ನು ಕಾಣಿಸಿಕೊಂಡಿದೆ. ಆದ್ದರಿಂದ ಯಾವುದಾದರೂ ಪುಣ್ಯಕ್ಷೇತ್ರದಲ್ಲಿದ್ದುಕೊಂಡು ಪ್ರಾಣವನ್ನು ಬಿಡಬೇಕು.

೬. ಧರ್ಮವನ್ನು ಬಲ್ಲ ಬ್ರಾಹ್ಮಣರಿರಾ ! ನನಗೆ ಮಕ್ಕಳಿಲ್ಲ. ಈ ರೋಗವು ಪ್ರಾಪ್ತವಾಗಿದೆ. ನಾನೆಲ್ಲಿದ್ದುಕೊಂಡು ಪ್ರಾಣವನ್ನು ಬಿಟ್ಟರೆ ನನಗೆ ಈ ಲೋಕ ಪರಲೋಕಗಳ ಸೌಖ್ಯವು ಲಭಿಸುವುದೋ ಅಂತಹ ಸ್ಥಳವನ್ನು ಹೇಳಿರಿ. ಹಾಗೆ ಮಾಡುತ್ತೇನೆ.

೭. ಬ್ರಾಹ್ಮಣರು ಹೇಳಿದರು- ಎಲೈ ದೊರೆಯೇ ! ನೀನು ಈ ಪ್ರಜಾಪಾಲನೆಯನ್ನು ಬಿಟ್ಟು ಹೋದರೆ ಈ ದೇಶವೇ ಹಾಳಾಗಿ ಹೋಗುತ್ತದೆ. ಆದ್ದರಿಂದ ಈ ಮಾತನ್ನು ಹೇಳಬೇಡ.

ಅಯಮುಸ್ಯ ಪ್ರತೀಕಾರೋ ಹ್ಯಸ್ಮಾಭಿರವಗಮ್ಯತೇ ।
ಸೂರಮತ್ರ ಮಹಾದೇವಂ ಯತ್ನಾದಾರಾಧಯ ಪ್ರಭೋ ॥ ೮ ॥

॥ ರಾಜೋವಾಚ ॥

ಕೇನೋಪಾಯೇನ ವಿಪ್ರೇಂದ್ರಾಸ್ತೋಷಯಿಷ್ಯಾಮಿ ಭಾಸ್ಕರಂ ।
ಅಮೇಧ್ಯೇನಾಥ ಕುಷ್ಠೇನ ಲೋಕಾನಾಂ ಗರ್ಹಿತೇನ ಚ ॥ ೯ ॥

ಅದೃಶ್ಯಃ ಸರ್ವಭೂತಾನಾಂ ಗರ್ಹಿತೋಽಹಂ ದ್ವಿಜಾತಯಃ ।
ಕಿಂ ಕರಿಷ್ಯಾಮಿ ರಾಜ್ಯಂ ಚ ಕಿಂ ಸ್ಯಾದಾರಾಧನೇನ ತು ॥ ೧೦ ॥

॥ ದ್ವಿಜಾ ಊಚುಃ ॥

ಅತ್ರ ಸ್ಥಿತ್ವಾ ಸ್ವರಾಜ್ಯೇ ತು ಸಮುಪಾಸ್ಯ ವಿರೋಚನಂ ।
ಪ್ರಮುಚ್ಯ ಕಿಲ್ಬಿಷಾದ್ಘೋರಾತ್ಸ್ವರ್ಗಂ ಮೋಕ್ಷಂ ಚ ಲಪ್ಸ್ಯಸೇ ॥ ೧೧ ॥

---

೮. ನಾವು ಇದಕ್ಕೆ ಒಂದು ಪ್ರತೀಕಾರವನ್ನು ಹೇಳುತ್ತೇವೆ. ಪ್ರಯತ್ನಪಟ್ಟು ಮಹಾದೇವನಾದ ಸೂರ್ಯನನ್ನು ಆರಾಧಿಸು.

೯. ರಾಜನು ಹೇಳಿದನು-ಎಲೈ ಬ್ರಾಹ್ಮಣರಿರಾ! ನಾನು ಹೇಗೆ ಸೂಯನನ್ನು ಆರಾಧಿಸಲಿ? ಈ ಶುಚಿಯಿಲ್ಲದ ಕುಷ್ಠದಿಂದ ಪ್ರಪಂಚದಲ್ಲಿಯೇ ಎಲ್ಲರಿಗೂ ಅಶುಚಿ ಯಾಗಿರುವೆನೆಲ್ಲ?.

೧೦. ಈ ರೀತಿ ನಿಂದ್ಯನಾಗಿರುವ ನಾನು ಯಾರಿಗೂ ಕಾಣದಂತೆ ಹೋಗು ವೆನು. ರಾಜ್ಯದಿಂದಲಾಗಲಿ, ಪೂಜೆಯಿಂದಲಾಗಲಿ ಏನು ಪ್ರಯೋಜನವಾದೀತು? ನಾನು ಎಲ್ಲರಿಂದಲೂ ತಿರಸ್ಕರಿಸಲ್ಪಡುವವನಾಗಿದ್ದೇನೆ.

೧೧. ಬ್ರಾಹ್ಮಣರು ಹೇಳಿದರು- ಇಲ್ಲಿ ನಿನ್ನ ರಾಜ್ಯದಲ್ಲಿಯೇ ಇರು. ಇದ್ದು ಸೂರ್ಯನನ್ನು ಸೇವಿಸು. ಆಗ ಈ ಕುಷ್ಠವು ಹೋಗುತ್ತದೆ. ಸ್ವರ್ಗವನ್ನೂ ಮೋಕ್ಷವನ್ನೂ ಹೊಂದುತ್ತೀಯೆ.

॥ ವ್ಯಾಸ ಉವಾಚ ॥

ಏತಚ್ಛ್ರುತ್ವಾ ತು ರಾಜೇಂದ್ರ ಪ್ರಣಿಪತ್ಯ ದ್ವಿಜೋತ್ತಮಾನ್ ।
ಅಕಾರ್ಷೀತ್ತಸ್ಯ ಸೂರ್ಯಸ್ಯ ಪರಮಾರಾಧನಂ ಚ ಯತ್ ॥ ೧೨ ॥

ನಿತ್ಯಪೂಜಾಂ ತಥಾ ಮಂತ್ರೈರುಪಹಾರೈರ್ವಿಲೇಪನೈಃ ।
ಫಲೈರ್ನಾನಾವಿಧೈರಘ್ಯೈ್ರರಕ್ಷತಾತಪತಂಡುಲೈಃ ॥ ೧೩ ॥

ಜಪಾಪುಷ್ಪಾರ್ಕಪರ್ಣೈಶ್ಚ ಕರವೀರಕರಂಜಕೈಃ ।
ರಕ್ತಕುಂಕುಮಸಿಂಧೂರೈಸ್ತಥಾ ವಾಸಂತಿಕಾದಿಭಿಃ ॥ ೧೪ ॥

ಸುಗಂಧಕದಲೀಪತ್ರೈಸ್ತತ್ಫಲೈಃ ಸುಮನೋಹರೈಃ ।
ಅರ್ಘ್ಯಮೌದುಂಬರೇ ಕೃತ್ವಾ ಸದಾ ಸೂರ್ಯಾಯ ಪಾರ್ಥಿವಃ ॥ ೧೫ ॥

ಆದಿತ್ಯಸಮ್ಮುಖೋ ದತ್ತೇ ಸದಾ ಮಂತ್ರಿಪುರೋಹಿತೈಃ ।
ಮಹಿಷೀಭಿಸ್ತಥಾಚಾರ್ಯೈರ್ಭೋಗಿನೀಭಿಃ ಸಮಂತತಃ ॥ ೧೬ ॥

---

೧೨. ವ್ಯಾಸನು ಹೇಳಿದನು-ರಾಜನು ಈ ಮಾತನ್ನು ಕೇಳಿ ಆ ಬ್ರಾಹ್ಮಣರಿಗೆ ನಮಸ್ಕರಿಸಿ ಆ ಸೂರ್ಯನನ್ನು ಆರಾಧಿಸತೊಡಗಿದನು.

೧೩. ಮಂತ್ರಗಳಿಂದಲೂ, ಗಂಧ ಹೂಗಳಿಂದಲೂ, ನಾನಾ ಬಗೆಯಾದ ಹಣ್ಣುಗಳಿಂದಲೂ, ಮೊನೆ ಮುರಿಯದ ಅಕ್ಷತೆಗಳಿಂದಲೂ, ಅರ್ಘ್ಯಗಳಿಂದಲೂ ನಿತ್ಯವೂ ಪೂಜೆಮಾಡಿದನು.

೧೪. ದಾಸವಾಳದ ಹೂ, ಎಕ್ಕದ ಎಲೆ, ಕಣಿಗಿಲೆ ಹೂ, ಸುರಹೊನ್ನೇ ಹೂಗಳಿಂದಲೂ, ಕೆಂಪು ಕುಂಕುಮ, ಚಂದ್ರಗಳಿಂದಲೂ ಪೂಜೆಮಾಡಿದನು.

೧೫. ಚೆನ್ನಾಗಿರುವ ಬಾಳೆಯ ಎಲೆ, ಹಣ್ಣುಗಳಿಂದಲೂ, ಅತ್ತಿ ಎಲೆಯಲ್ಲಿ ಅರ್ಘ್ಯವನ್ನು ಕೊಡುವುದರಿಂದಲೂ, ಸೂರ್ಯನನ್ನು ಪೂಜಿಸಿದನು.

೧೬. ಮಂತ್ರಿ, ಪುರೋಹಿತ, ಆಚಾರ್ಯ, ಹೆಂಡತಿಯರು, ಭೋಗಿನಿಯರು ಇವರೊಡನೆ ಆದಿತ್ಯನಿಗೆ ಎದುರಾಗಿ ಅರ್ಘ್ಯವನ್ನು ಕೊಟ್ಟನು.

ಸರ್ವೈರಂತಃಪುರಸ್ಥೈಶ್ಚ ಸಪತ್ನೀಕೈಶ್ಚ ರಕ್ಷಿಭಿಃ ।
ಚೇಟವರ್ಗೈಸ್ತಥಾ ಚಾನ್ಯೈರ್ದೀಯತೇಽರ್ಘ್ಯಂ ದಿನೇ ದಿನೇ ॥ ೧೭ ॥

ಅರ್ಕಶಾಂತಿಭಿರತ್ಯುಗ್ರೈಃ ಸ್ತೋತ್ರಮಂತ್ರಾದಿಭಿಃ ಪರೈಃ ।
ಮೂಲಮಂತ್ರಾನ್ಯಮಂತ್ರೈಶ್ಚ ಯಜಂತಿ ಸ್ಮ ದಿವಾಕರಂ ॥ ೧೮ ॥

ತಥಾಽರ್ಕಾಂಗವ್ರತಂ ಚಾನ್ಯತ್ಕೃತಂ ತೈಃ ಸುಸಮಾಹಿತೈಃ ।
ಕ್ರಮಾತ್ಸಮಾಂ ಸಮಾಸಾದ್ಯ ರೋಗಸ್ಯಾಂತಂ ಗತೋ ನೃಪಃ ॥ ೧೯ ॥

ಬಾಧಿತೇ ಚಾಮಯೇ ಘೋರೇ ಸ ರಾಜಾ ನಿಖಿಲಂ ಜಗತ್ ।
ನಿಯಮ್ಯ ಕಾರಯಾಮಾಸ ಕಲ್ಯೇ ಚ ಯಾಜನಂ ವ್ರತಂ ॥ ೨೦ ॥

ಏವಮೇವ ಜಪಾಪುಷ್ಪಂ ಸುಗಂಧಂ ಕದಲೀಫಲಂ ।
ಬಾಣೈರ್ಜಾಯಾಭಿರಾಲಭ್ಯಮರ್ಕಪರ್ಣಾನ್ಯಪುಷ್ಪಕಂ ॥ ೨೧ ॥

---

೧೭. ಅಂತಃಪುರದವರೊಡನೆಯೂ, ಪತ್ನಿಯರೊಡನೆಯೂ, ಆಳುಗಳೊಡನೆಯೂ, ಚೇಟರೊಡನೆಯೂ, ಒಟ್ಟಿನಲ್ಲಿ ಎಲ್ಲರೊಡನೆಯೂ ಪ್ರತಿದಿನವೂ ಅರ್ಘ್ಯವನ್ನು ಕೊಟ್ಟನು.

೧೮. ಉತ್ತಮವಾದ ಅರ್ಕಶಾಂತಿಗಳಿಂದಲೂ, ಸ್ತೋತ್ರಗಳಿಂದಲೂ, ಮಂತ್ರಗಳಿಂದಲೂ, ಮೂಲ ಮಂತ್ರಗಳಿಂದಲೂ, ಇತರ ಮಂತ್ರಗಳಿಂದಲೂ, ಸೂರ್ಯನನ್ನು ಪೂಜಿಸಿದನು.

೧೯. ಬೇರೆ ಬೇರೆಯಾದ ಸೂರ್ಯ ವ್ರತಕ್ಕೆ ಸಂಬಂಧಪಟ್ಟ ವ್ರತಗಳನ್ನೂ ನಿಯಮದಿಂದ ಮಾಡಿದನು. ಹೀಗೆ ವರ್ಷವು ಕಳೆಯಲು ರೋಗವು ನಾಶವಾಯಿತು.

೨೦. ಈ ರೀತಿಯಾಗಿ ತನ್ನ ರೋಗವು ಹೋಗಲು ರಾಜನು ತನ್ನ ರಾಜ್ಯದಲ್ಲೆಲ್ಲಾ ಅಪ್ಪಣೆಮಾಡಿ ಬೆಳಗಿನ ಹೊತ್ತಿನಲ್ಲಿ ಈ ವ್ರತವನ್ನು ಮಾಡಿಸಿದನು.

೨೧. ಇದೇ ರೀತಿಯಲ್ಲಿ ಜನರು ದಾಸವಾಳದ ಹೂವು, ಒಳ್ಳೆಯ ಬಾಳೆಯ ಹಣ್ಣುಗಳಿಂದಲೂ, ಹೆಂಡಿರು, ಸ್ನೇಹಿತರುಗಳಿಂದಲೂ, ಕೂಡಿಕೊಂಡು ದಾಸವಾಳದ ಹೂ, ಎಕ್ಕದ ಹೂ, ಮುಂತಾದ ಅನೇಕ ಹೂವುಗಳಿಂದ ಪೂಜಿಸಿದರು.

ಏವಮೇವ ಮಹಾಪುಣ್ಯಂ ಕೃತ್ವಾ ಸರ್ವೋ ಜನಃ ಪ್ರಿಯಾತ್ ।
ಹವಿಷ್ಯಾನ್ನೋ ನಿರಾಹಾರೋ ಜನೋ ಯಜ ಭಾಸ್ಕರಂ ॥ ೨೨ ॥

ಏವಮೇವ ತ್ರಿಭಿರ್ವರ್ಗೈರರ್ಚಿತಸ್ತ್ರೈರ್ವಿಭಾಕರಃ
ಸಂತುಷ್ಟೋ ಭೂಪಮಾಗಮ್ಯ ಕೃಪಯಾ ಚಾಬ್ರವೀದ್ವಚಃ ॥ ೨೩ ॥

॥ ಸೂರ್ಯ ಉವಾಚ ॥

ವರಂ ವರಯ ಚಾಭಿಷ್ಟಂ ಯಸ್ತೇ ಮನಸಿ ವರ್ತತೇ ।
ಸರ್ವೇಷಾಂ ವೋ ಹಿತಾರ್ಥಾಯ ಸಾನುಗಃ ಪುರವಾಸಿನಾಂ ॥ ೨೪ ॥

॥ ರಾಜೋವಾಚ ॥

ಯದೀಚ್ಛಸಿ ವರಂ ದಾತುಂ ಸರ್ವಲೋಚನ ಮತ್ಪ್ರಿಯಂ ।
ಸರ್ವೇಷಾಂ ನಃ ಪರಂ ಸ್ವರ್ಗಂ ತ್ವತ್ಸಕಾಶೇ ಭವತ್ವಿತಿ ॥ ೨೫ ॥

॥ ಸೂರ್ಯೋವಾಚ ॥

ಅಮಾತ್ಯಾಸ್ತೇ ದ್ವಿಜಾ ವಿಪ್ರಾಃ ಸದಾರಾಃ ಸಪರಿಚ್ಛದಾಃ ।
ನವೀನಯೌವನಾಃ ಶುದ್ಧಾ ಯಾವದಾಭೂತಸಂಪ್ಲವಂ ॥ ೨೬ ॥

---

೨೨. ಈ ರೀತಿಯಾಗಿ ಪುಣ್ಯರೂಪವಾದ ಇದನ್ನು ಜನರು ಮಾಡುತ್ತ ಹವಿಷ್ಯಾನ್ನವನ್ನು ತಿಂದುಕೊಂಡು ನಿರಾಹಾರವಾಗಿ ಸೂರ್ಯನನ್ನು ಪೂಜಿಸಿದರು.

೨೩. ಹೀಗೆ ಬ್ರಹ್ಮ, ಕ್ಷತ್ರಿಯ, ವೈಶ್ಯರು, ಸೂರ್ಯನನ್ನು ಪೂಜಿಸಿದರು ಕೊನೆಗೆ ಸೂರ್ಯನು ಸಂತೋಷಗೊಂಡು ಬಂದು ರಾಜನನ್ನು ಕುರಿತು ಇಂತೆಂದನು.

೨೪. ಸೂರ್ಯನು ಹೇಳಿದನು- ಎಲೈ ರಾಜನೇ ! ನಿನ್ನ ಮನಸ್ಸಿನಲ್ಲಿರುವುದನ್ನು ಕೇಳಿಕೋ. ಅಲ್ಲದೇ ನಿನ್ನ ಜನರಿಗೂ ಹಿತವಾದುದನ್ನು ಕೇಳಿಕೋ.

೨೫. ರಾಜನು ಹೇಳಿದನು- ಎಲೈ ಸೂರ್ಯನೇ ! ನೀನು ನನಗೆ ಬೇಕಾದ ವರವನ್ನು ಕೊಡುವ ಪಕ್ಷದಲ್ಲಿ ನಮಗೆಲ್ಲರಿಗೂ ನಿನ್ನ ಲೋಕದಲ್ಲಿರುವ ಸ್ವರ್ಗವು ಸಿಕ್ಕಲಿ.

೨೬-೨೮. ಸೂರ್ಯನು ಹೇಳಿದನು- ನಿನ್ನ ಮಂತ್ರಿಗಳೂ, ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ ಎಲ್ಲರೂ ಹೆಂಡಿರು ಪರಿವಾರಗಳೊಡನೆ ಒಳ್ಳೆಯ

ತಿಷ್ಠಂತು ಮತ್ಪುರೇ ಸೌಮ್ಯೇ ಸರ್ವಭೋಗೈರ್ನಿರಾಮಯಾಃ ।
ಸುರದ್ರುಮೈಸ್ಸುಸಂಪೂರ್ಣೈಃ ಪ್ರಾಸಾದೈರ್ದ್ರುಮಕಲ್ಪಕೈಃ ॥ ೨೭ ॥

ಪ್ರಮದಾಭಿರ್ಮಹಾಭಾಗಾ ನೃತ್ಯಗೀತಾದಿಭಿಃ ಪರೈಃ ।
ಪಂಚಕಲ್ಪಾಂತರೇ ರಾಜಾ ಮನ್ವಾದೌ ತ್ವಂ ಭವಿಷ್ಯಸಿ ॥ ೨೮ ॥

ಅಮೀ ತೇ ಮನುಜಾ ಭೂಪ ಪುರಸ್ಥಾಶ್ಚ ಪುರೋಧಸಃ ।
ತಥಾ ಜನಪದಸ್ಥಾಶ್ಚ ವಿಬ್ರಾಂಸೋ ಧನಿನೋ ನರಾಃ ॥
ತತ್ರ ಮತ್ತೋ ವರಂ ಲಬ್ಧ್ವಾ ಸುಖಂ ಸ್ವರ್ಗಮವಾಪ್ಸ್ಯಥ ॥ ೨೯ ॥

॥ ವ್ಯಾಸ ಉವಾಚ ॥

ಏವಮುಕ್ತ್ವಾ ಜಗಚ್ಚಕ್ಷುಸ್ತತ್ರೈವಾಂತರಧೀಯತ ।
ತತೋ ಭದ್ರೇಶ್ವರೋ ರಾಜಾ ಸಪುರೋ ದಿವಿ ಮೋದತೇ ॥ ೩೦ ॥

ತತ್ರ ಕೀಟಾದಯೋ ಯೇ ಚ ತೇ ಪ್ರಿತಾಃ ಸಸುತಾದಯಃ ।
ಸ್ವರ್ಗೇ ದೇವದ್ರುಮೇ ಭೋಗ್ಯಂ ಕುರ್ವಂತಿ ಮಹದದ್ಭುತಂ ॥ ೩೧ ॥

---

ಯೌವನದಿಂದ ಕೂಡಿದವರಾಗಿ ಎಲ್ಲಾ ಭೋಗಗಳನ್ನೂ ಹೊಂದುತ್ತಾ ರೋಗವಿಲ್ಲದೆ ಕಲ್ಪಾಂತರದವರೆಗೂ ನನ್ನ ಲೋಕದಲ್ಲಿರಲಿ ಕಲ್ಪ ವೃಕ್ಷಗಳುಳ್ಳ ದೊಡ್ಡ ದೊಡ್ಡ ಮನೆಗಳಲ್ಲಿದ್ದುಕೊಂಡು ಹೆಂಗಸರೊಡನೆ ಭೋಗಪಡುತ್ತ ನೃತ್ಯ ಗೀತಗಳಿಂದ ಸಂತೋಷಪಡುತ್ತಲಿದ್ದು ಐದು ಕಲ್ಪಗಳಾದಮೇಲೆ ಮನ್ವಾದಿಯಲ್ಲಿ ನೀನು ರಾಜನಾಗಿ ಹುಟ್ಟುತ್ತೀಯೆ.

೨೯. ನಿನ್ನ ಈ ಪ್ರಜೆಗಳೂ, ಪಟ್ಟಣಿಗರೂ, ಪುರೋಹಿತರೂ, ಅನೇಕ ವಿಧ ವಾದ ಜನಗಳೂ, ನನ್ನಿಂದ ವರವನ್ನು ಹೊಂದಿ ಸುಖವಾಗಿ ಸ್ವರ್ಗವನ್ನು ಹೊಂದುವರು.

೩೦. ವ್ಯಾಸನು ಹೇಳಿದನು- ಸೂರ್ಯನು ಹೀಗೆಂದು ಹೇಳಿ ಅಂತರ್ಧಾನ ನಾದನು. ಅನಂತರ ಭದ್ರೇಶ್ವರನು ಎಲ್ಲರೊಡನೆಯೂ, ಸ್ವರ್ಗದಲ್ಲಿ ಸುಖಿಸಿದನು.

೩೧. ಅವನ ದೇಶದಲ್ಲಿದ್ದ ಕೀಟಾದಿ ಪ್ರಾಣಿಗಳೂ ಕೂಡ ಮಕ್ಕಳುಗಳೊಡನೆ ಸ್ವರ್ಗದಲ್ಲಿರುವ ಕಲ್ಪವೃಕ್ಷದಲ್ಲಿ ಸುಖವಾಗಿದ್ದುವು.

ಏವಮೇವ ನೃಪಾ ವಿಪ್ರಾ ಮುನಯಃ ಸಂಶಿತವ್ರತಾಃ ।
ಯೇ ಚ ಕ್ಷತ್ರಾದಯೋ ವರ್ಣಾಃ ಸೂರಸ್ವರ್ಗಂ ಯಯುದ್ರುತಂ ॥ ೩೨ ॥

ಕೈಶ್ಚಿದಭ್ಯರ್ಥಿತಂ ವಿತ್ತಂ ಪುತ್ರದಾರಾಸ್ತಥಾ ಪರೈಃ ।
ಸುಖಂ ಸ್ವಗಂ ತಥಾಽರೋಗ್ಯಂ ಭಾಸ್ಕರಸ್ಯ ಪ್ರಸಾದತಃ ॥ ೩೩ ॥

ಪುಣ್ಯಕೂಟಮಿದಂ ಭದ್ರಂ ಯಃ ಪಠೇನ್ಮಾನವಃ ಶುಚಿಃ ।
ಸರ್ವಪಾಪಕ್ಷಯಸ್ತಸ್ಯ ರುದ್ರವತ್ಪೂಜಿತೋ ಭುವಿ ॥ ೩೪ ॥

ಸರ್ವಸಾಕ್ಷೀ ಭವೇತ್ಸ್ವರ್ಗೇ ವರದೋ ಭಾಸ್ಕರಪ್ರಿಯಃ ।
ಶೃಣೋತಿ ಸಂಯುತೋ ಮರ್ತ್ಯಃ ಸೋಽಭೀಷ್ಟಂ ಫಲಮಾಪ್ನುಯಾತ್ ॥ ೩೫ ॥

ಪಾರಗಃ ಸರ್ವಪಾಪಾನಾಂ ಭಾಸ್ಕರಸ್ಯೈವ ಸಂಸ ।
ವಾವದೂಕೋ ಭವೇನ್ನಿತ್ಯಂ ಶ್ರವಣಾತ್ಪುಣ್ಯವಾನ್ ಧನೀ ॥ ೩೬ ॥

---

೩೨. ಈ ರೀತಿಯಲ್ಲಿಯೇ ಮುನಿಗಳೂ ಋಷಿಗಳೂ, ಎಲ್ಲಾ ವರ್ಣದವರು ಸೂರ್ಯ ಸ್ವರ್ಗವನ್ನು ಹೊಂದಿದರು

೩೩. ಕೆಲವರು ಹಣವನ್ನು, ಕೆಲವರು ಹೆಂಡಿರನ್ನೂ, ಕೆಲದರು ಮಕ್ಕಳನ್ನೂ ಕೆಲವರು ಸುಖ, ಸ್ವರ್ಗ, ಆರೋಗ್ಯವನ್ನೂ ಕೇಳಿಕೊಂಡು ಸೂರ್ಯನ ಅನುಗ್ರಹ ದಿಂದ ಅವೆಲ್ಲವನ್ನೂ ಹೊಂದಿದರು.

೩೪. ಈ ಪುಣ್ಯಕಥೆಯನ್ನು ಓದಿದವನು, ಕೇಳಿದವನು, ಮಂಗಳವನ್ನು ಹೊಂದುತ್ತಾನೆ ಪಾಪಗಳೆಲ್ಲವನ್ನೂ ಕಳೆದುಕೊಳ್ಳುತ್ತಾನೆ ರುದ್ರನಂತೆ ಪೂಜಿತ ನಾಗುತ್ತಾನೆ

೩೫. ಸ್ವರ್ಗದಲ್ಲಿಯೂ ಸರ್ವಸಾಕ್ಷಿಯಾಗಿರುತ್ತಾನೆ. ಸೂರ್ಯನಿಗೆ ಪ್ರಿಯ ನಾಗಿ ಎಲ್ಲರಿಗೂ ವರವನ್ನು ಕೊಡುತ್ತಾನೆ ಕೇಳಿದವನು ಇಷ್ಟವನ್ನೆಲ್ಲಾ ಹೊಂದುತ್ತಾನೆ.

೩೬ ಪಾಪಗಳನ್ನು ಕಳೆದುಕೊಂಡು ಸೂರ್ಯನ ಸಭೆಯಲ್ಲಿ ವಾಗ್ಮಿಯಾಗಿರು ತ್ತಾನೆ. ಇದನ್ನು ಕೇಳುವುದರಿಂದ ಪುಣ್ಯವಂತನೂ, ಧನಿಕನೂ, ಆಗುತ್ತಾನೆ.

**ಇದಂ ಗುಹ್ಯಾತಿಗುಹ್ಯಂ ಚ ಭಾಸ್ಕರೇಣ ಪ್ರಚಾರಿತಂ ।**
**ಇದಂ ಯಮಾಯ ಕಥಿತಂ ಕ್ಷಿತೌ ವ್ಯಾಸೇನ ಕೀರ್ತಿತಂ ॥ ೩೭ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಭದ್ರೇಶ್ವರಾಖ್ಯಾನಂನಾಮ ಸಪ್ತಸಪ್ತತಿತಮೋಽಧ್ಯಾಯಃ**

---

೩೭. ಇದು ಬಹು ರಹಸ್ಯವಾದುದು. ಸೂರ್ಯನೇ ಇದನ್ನು ಯಮನಿಗೆ ಹೇಳಿ ಪ್ರಚಾರಮಾಡಿದನು. ವ್ಯಾಸನು ಇದನ್ನು ಭೂಮಿಯಲ್ಲಿ ಹೇಳಿದನು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಭದ್ರೇಶ್ವರಾಖ್ಯಾನವೆಂಬ ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಅಷ್ಟಸಪ್ತತಿತಮೋಽಧ್ಯಾಯಃ ॥



॥ ವೈಶಂಪಾಯನ ಉವಾಚ ॥

ಶ್ರುತೋ ಗ್ರಹೇಶ್ವರಸ್ಯೈಷ ಪ್ರಭಾವಸ್ತ್ವತ್ಪ್ರಸಾದತಃ ।
ರವ್ಯಾದೀನಾಂ ಗ್ರಹಾಣಾಂ ಚ ಸಾಧನಂ ನೋ ವದ ದ್ವಿಜ ॥ ೧ ॥

ತೇ ತೇ ರವ್ಯಾದಯಸ್ತೇಷಾಂ ಕಥಂ ತೋಷಃ ಕಥಂ ಪ್ರಿಯಂ ।
ಕಾಲೇ ದೇಶೇ ತು ಸಂಪ್ರಾಪ್ತೇ ದರ್ಶನಂ ತಚ್ಛಿವಾಶಿವಂ ॥ ೨ ॥

॥ ವ್ಯಾಸ ಉವಾಚ ॥

ಗ್ರಹಾದಯೋ ಯೇ ಲೋಕೇ ತು ಭುಂಜಂತಿ ಪುಣ್ಯಪಾತಕಂ ।
ಶಿವಾಶಿವಂ ಚ ಕುರ್ವಂತಿ ವಿಶ್ವಕರ್ಮಕ್ಷಯಾಯ ವೈ ॥ ೩ ॥

---

## ಎಪ್ಪತ್ತೆಂಟನೆಯ ಅಧ್ಯಾಯವು

೧. ವೈಶಂಪಾಯನನು ಹೇಳಿದನು- ನಿನ್ನ ಅನುಗ್ರಹದಿಂದ ಸೂರ್ಯನ ಈ ಮಹಿಮೆಯನ್ನು ತಿಳಿದೆನು. ಸೂರ್ಯನೇ ಮುಂತಾದ ಗ್ರಹಗಳಿಗೆ ಸಾಧನಗಳೇನು? ಅದನ್ನು ಹೇಳು.

೨. ಈ ಸೂರ್ಯನೇ ಮುಂತಾದವರು ಯಾರು ? ಅವರಿಗೆ ಹೇಗೆ ಸಂತೊಷವು ಉಂಟಾಗುತ್ತದೆ ? ಅವರಿಗಿಷ್ಟವಾದುದೇನು ? ಅವರ ದರ್ಶನವು ಯಾವ ಕಾಲದಲ್ಲಿ ಯಾವ ದೇಶದಲ್ಲಿ ಶುಭವು ? ಎಲ್ಲಿ ಅಶುಭವು ? ಹೇಳು.

೩. ವ್ಯಾಸನು ಹೇಳಿದನು- ಲೋಕದ ಜನರು ಪುಣ್ಯ ಪಾಪಗಳನ್ನು ಅನುಭವಿಸುವುದಕ್ಕೂ, ಶುಭಾಶುಭಗಳನ್ನು ಮಾಡುವುದಕ್ಕೂ, ಕರ್ಮವನ್ನು ನಾಶಮಾಡಿಕೊಳ್ಳುವುದಕ್ಕೂ, ಕಾರಣವಾದುವೇ ಗ್ರಹಗಳು.

ಸೂರಃ ಕಾಲೋಽಂತಕೋ ಜ್ಞೇಯೋ ಜನೇಷು ಚ ಗ್ರಹೇಷು ಚ ।
ಉಗ್ರಸೌಮ್ಯಾಚ್ಚ ಯೋಗಾತ್ಸ ನಿಗ್ರಹಾನುಗ್ರಹೇ ಪ್ರಭುಃ ॥ ೪ ॥

ಗ್ರಹಭಾವಾಚ್ಚ ತಸ್ಯೈವ ಸಂತೋಷಂ ನಿಗದಾಮ್ಯಹಂ ।
ಉದುಂಬರಪಲಾಶಾಭ್ಯಾಂ ಪಲ್ಲವಾಭ್ಯಾಂ ಜುಹೋತಿ ಯಃ ॥ ೫ ॥

ಆಕೃಷ್ಣೇನೇತಿ ಮಂತ್ರೇಣ ಮೂಲಕೇನಾಥ ಶಾಂತಯೇ ।
ಜುಹುಯಾದಾಜ್ಯಯುಕ್ತಾಭ್ಯಾಮಭೀಷ್ಟಫಲಹೇತವೇ ॥ ೬ ॥

ಶಾಂತಯೇ ಸರ್ವರೋಗಾಣಾಂ ವಧಬಂಧವಿಮೋಚನೇ ।
ಏಕೈಕೇನ ತು ಮಂತ್ರೇಣ ಹೋತವ್ಯಂ ಚ ಶತಂ ಶತಂ ॥ ೭ ॥

ಸಿತಂ ಚ ಛಾಗಲಂ ದದ್ಯಾತ್ಸೂರಾಯಾದಿತ್ಯವಾಸರೇ ।
ಭೋಜಯೇದ್ಬ್ರಾಹ್ಮಣಾನ್ ಶಕ್ತ್ಯಾ ಹವ್ಯಕವ್ಯೈರ್ಮನೋಹರೈಃ ॥ ೮ ॥

---

೪. ಸೂರ್ಯನು ಜನಕ್ಕೂ, ಗ್ರಹಕ್ಕೂ, ಕಾಲರೂಪನು. ಯಮರೂಪನು. ಅವನ ಸೌಮ್ಯತೆ, ಕ್ರೂರತೆಗಳು, ಜನರಿಗೆ ನಿಗ್ರಹ, ಅನುಗ್ರಹಗಳನ್ನು ಉಂಟು ಮಾಡುತ್ತವೆ. ಅದಕ್ಕೆ ಅವನು ಸಮರ್ಥನು.

೫. ಆ ಗ್ರಹಕ್ಕೆ ಸಂತೋಷವಾಗುವ ರೀತಿಯನ್ನು ಹೇಳುತ್ತೇನೆ. ಅತ್ತಿ, ಮುತ್ತುಗಳ ಚಿಗುರನ್ನು ಅವನನ್ನುದ್ದೇಶಿಸಿ ಹೋಮ ಮಾಡಬೇಕು

೬. ಆಕೃಷ್ಣೇನ ಎಂಬ ಮಂತ್ರದಿಂದಲೂ, ಸೂರ್ಯನ ಮೂಲ ಮಂತ್ರದಿಂದಲೂ ತುಪ್ಪವನ್ನು ಸೇರಿಸಿಕೊಂಡು ಆ ಅತ್ತಿ ಮುತ್ತುಗಗಳಿಂದ ಹೋಮಮಾಡಿದರೆ ಇಷ್ಟಸಿದ್ಧಿಯಾಗುತ್ತದೆ.

೭. ಒಂದೊಂದು ಮಂತ್ರದಿಂದಲೂ ನೂರು ನೂರು ಹೋಮಗಳನ್ನು ಮಾಡಬೇಕು ಹಾಗೆ ಮಾಡಿದರೆ ರೋಗ ಶಾಂತಿಯಾಗುವುದಲ್ಲದೆ ವಧ ಬಂಧಗಳೂ ತಪ್ಪುತ್ತವೆ.

೮. ಬಿಳಿಯ ಆಡನ್ನು ದಾನಮಾಡಬೇಕು. ಮತ್ತು ಆದಿತ್ಯವಾರದ ದಿನ ಶಕ್ತ್ಯನುಗುಣವಾಗಿ ಹವ್ಯಕವ್ಯಗಳಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

ಸಪ್ತಮ್ಯಾಂ ಚ ಸಿತೇ ಪಕ್ಷೇ ಪಂಚದಶ್ಯಾಂ ತಥೈವ ಚ ।
ರೋಗಾದ್ವಿಮುಚ್ಯತೇ ರೋಗೀ ನ ರೋಗಾತ್ಕೃಚ್ಛ್ರಮೇಷ್ಯತಿ ॥ ೯ ॥

ಪರಮಂ ಚಾಪರಂ ಸತ್ತ್ವಮಾಬ್ರಹ್ಮಸ್ತಂಬಮಾತ್ರಕೇ ।
ಬ್ರಹ್ಮಾಂಡೇ ಚಾಣುಮಾತ್ರೇ ಚ ಸೂರಃ ಸಂಭಾವಯಿಷ್ಯತೇ ॥ ೧೦ ॥

ಸಂಹಾರಾಂತಂ ಕ್ರಮಾತ್ಸರ್ವಮುತ್ಪತ್ತಿಸ್ಥಿತಿಕಾರಣಾತ್ ।
ಪ್ರಾಣಸರ್ಗೇ ಜನಾನಾಂ ಚ ಪಾತಾ ವಿಶ್ವಚರಸ್ತನೌ ॥ ೧೧ ॥

ಮೃತ್ಯುಕಾಲೇ ತನೋರ್ಮೂರ್ಧ್ನಾತ್ಪ್ರಾಣೇನ ಸಹ ಗಚ್ಛತಿ ।
ಶೀರ್ಷಾಂತಸ್ಥಃ ಸದಾ ಚಂದ್ರೋ ದ್ವಿರಷ್ಟಕಲಯಾ ಯುತಃ ॥ ೧೨ ॥

ಅಹರ್ನಿಶಂ ಸುಧಾವೃಷ್ಟಿಂ ದೇಹೇ ವರ್ಷತ್ಯಧೋಮುಖಃ ।
ಜಂತವಸ್ತೇನ ಜೀವಂತಿ ಮಹಾಸತ್ವಾನುಮಾತ್ರಕಾಃ ॥ ೧೩ ॥

---

೯. ಈ ರೀತಿಯಾದ ದಾನಗಳನ್ನು ಶುಕ್ಲಪಕ್ಷದ ಪಂಚಮಿಯಲ್ಲಾಗಲಿ, ಹುಣ್ಣಿಮೆಯಲ್ಲಾಗಲಿ ಮಾಡಬೇಕು. ಆಗ ರೋಗವು ನಾಶವಾಗುತ್ತದೆ.

೧೦. ಬ್ರಹ್ಮಾಂಡದಲ್ಲಿ ಈ ಸೂರ್ಯನೆಂಬ ಪದಾರ್ಥವು ಅತ್ಯುತ್ತಮವಾದ ಪ್ರಾಣಿಯು. ಬ್ರಹ್ಮಾಂಡದಲ್ಲಿರುವ ಸಣ್ಣ ಪ್ರಾಣಿಯಲ್ಲಿಯೂ ಕೂಡ ಸೂರ್ಯ ನಿರುತ್ತಾನೆ.

೧೧. ಈತನೇ ಉತ್ಪತ್ತಿ, ಸ್ಥಿತಿ ಸಂಹಾರಗಳನ್ನು ಮಾಡುತ್ತಾನೆ. ಎಲ್ಲಾ ಜನರ ದೇಹದಲ್ಲಿಯೂ ಇದ್ದುಕೊಂಡು ಎಲ್ಲವನ್ನೂ ಕಾಪಾಡುತ್ತಾನೆ.

೧೨-೧೩. ಆ ಸೂರ್ಯನು ಪ್ರಾಣಿಯು ಸಾಯುವಾಗ ಪ್ರಾಣದ ಜೊತೆಯಲ್ಲಿ ಹೋಗುತ್ತಾನೆ. ಚಂದ್ರನು ಹದಿನಾರು ಕಲೆಗಳಿಂದ ಕೂಡಿ ಪ್ರಾಣಿಯ ತಲೆಯು ಒಳಗಿದ್ದುಕೊಂಡು ಹಗಲೂ ರಾತ್ರಿಯೂ ತಳ ಮುಖವಾಗಿ ಸುಧೆಯನ್ನು ಸುರಿಸುತ್ತಿರುವನು. ಆದರಿಂದಲೇ ಜೀವಿಸುತ್ತಿರುತ್ತವೆ.

ಉರ್ವ್ಯಾಃ ಸಸ್ಯಾನಿ ಪುಷ್ಪಾಣಿ ತಥಾ ಸ್ಥಾವರಜಂಗಮಾಃ ।
ಏತಾಭ್ಯಾಂ ಪುಷ್ಪವದ್ಭ್ಯಾಂ ಚ ಧಾರಿತಂ ಜನಿತಂ ಜಗತ್ ॥ ೧೪ ॥

ತಯೋರಾರಾಧನಾತ್ಪುಷ್ಟಿಃ ಸದಾ ಪುಣ್ಯಾತ್ಪರಾರ್ಥಕಂ ।
ಸಾಧಯೇತ್ಸರ್ವಕಾರ್ಯಾಣಿ ಸಾಧಕಃ ಸರ್ವದಾ ಶುಚಿಃ ॥ ೧೫ ॥

ನ ಪೂಜಯತಿ ಯೋ ಮೋಹಾತ್ಸುಧಾಂಶುಂ ಮಾನವಾಧಮಃ ।
ಆಯುಸ್ತಸ್ಯ ಕ್ಷಯಂ ಯಾತಿ ನರಕಂ ಚಾಧಿಗಚ್ಛತಿ ॥ ೧೬ ॥

ನಿಷ್ಕಲಂಕಕಲಾಧಾರ ಗಂಗಾಧರಶಿರೋಮಣೇ ।
ದ್ವಿತೀಯಾಯಾಂ ಜಗನ್ನಾಥ ತುಭ್ಯಂ ಚಂದ್ರ ನಮೋಽಸ್ತು ತೇ ॥ ೧೭ ॥

ತಿಥಿಮನ್ಯಾಮನುಪ್ರಾಪ್ಯ ನಮಸ್ಕಾರಂ ವಿಧೋರಪಿ ।
ಪ್ರಕರೋತಿ ನರೋ ಯಸ್ತು ಸೋಽಭೀಷ್ಟಂ ಫಲಮಾಪ್ನುಯಾತ್ ॥ ೧೮ ॥

---

೧೪. ಈ ಚಂದ್ರನು ಭೂಮಿಯಲ್ಲಿರುವ ಸಸ್ಯಗಳನ್ನೂ ಸ್ಥಾವರ ಜಂಗಮ ಪ್ರಾಣಿಗಳನ್ನೂ ಕಾಪಾಡುತ್ತಾನೆ. ಈ ಸೂರ್ಯ ಚಂದ್ರರಿಂದಲೇ ಭೂಮಿಯು ಧರಿಸಲ್ಪಟ್ಟಿರುವುದು.

೧೫. ಇವರಿಬ್ಬರನ್ನೂ ಪೂಜಿಸುವುದರಿಂದ ಪುಷ್ಟಿಯೂ, ಹೆಚ್ಚಾದ ಪುಣ್ಯವೂ ಬರುತ್ತದೆ. ಸದಾಕಾಲದಲ್ಲಿಯೂ, ಶುಚಿಯಾಗಿದ್ದುಕೊಂಡು ಪೂಜಿಸುವವನು ಎಲ್ಲಾ ಕೆಲಸಗಳನ್ನೂ ಸಾಧಿಸಬಹುದು.

೧೬. ಯಾವನು ತಿಳಿವಳಿಕೆಯಿಲ್ಲದೆ ಚಂದ್ರನನ್ನು ಪೂಜಿಸುವುದಿಲ್ಲವೋ ಅವನಿಗೆ ಆಯುಸ್ಸು ಕ್ಷೀಣವಾಗುತ್ತದೆ. ನರಕವನ್ನು ಹೊಂದುತ್ತಾನೆ.

೧೭. ಕಳಂಕವಿಲ್ಲದವನೇ ! ಶಿವನ ತಲೆಯಲ್ಲಿರುವವನೇ ! ಚಂದ್ರನಾದ ನಿನ್ನನ್ನು ದ್ವಿತೀಯೆಯಲ್ಲಿ ನಮಸ್ಕರಿಸುವೆನು.

೧೮. ದ್ವಿತೀಯೆಯು ಮುಖ್ಯ. ಮಿಕ್ಕ ತಿಥಿಗಳಲ್ಲಿಯೂ ಕೂಡ ಚಂದ್ರನನ್ನು ನಮಸ್ಕರಿಸಿದರೆ ಇಷ್ಟವಾದ ಫಲವನ್ನು ಹೊಂದುತ್ತಾನೆ.

**ಅತ್ರಿನೇತ್ರೋದ್ಭವ ಕ್ಷೀರೋದಮಥನೋದ್ಭವ ।**
**ಮಹೇಶಮುಕುಟಾವಾಸ ತುಭ್ಯಂ ಚಂದ್ರ ನಮೋಸ್ತು ತೇ ॥ ೧೯ ॥**

**ದಿವ್ಯರೂಪ ನಮಸ್ತುಭ್ಯಂ ಸುಧಾಕಾರ ಜಗತ್ಪತೇ ।**
**ಶುಕ್ಲಪಕ್ಷೇ ತಥಾ ಕೃಷ್ಣೇ ತ್ರಿಯಾಮಾಯಾಂ ವಿದುರ್ಬುಧಾಃ ॥ ೨೦ ॥**

**ಓಂ ಹ್ರಾಂ ಹ್ರೀಂ ಸೋಮಾಯ ನಮಃ ।**
**ಇತಿ ಜಪ್ಯಮಂತ್ರಃ ಪ್ರಭಾತೇ ಜಪನೀಯಃ ॥**
**ಏವಂ ಯಃ ಪೂಜಯೇಚ್ಛೋಮಂ ಶ್ರಾವಯೇಚ್ಚ ಶೃಣೋತಿ ವಾ ।**
**ಸ ಪೀಯೂಷಸಮೋ ಲೋಕೇ ಭವೇಜ್ಜನ್ಮನಿ ಜನ್ಮನಿ ॥ ೨೧ ॥**

**ಏವಂ ಸಹಸ್ರನಾಮ್ನಾ ಯಃ ಸ್ತೌತಿ ಪೂಜಯತೇ ಭುವಿ ।**
**ಸೋಽಕ್ಷಯಂ ಲಭತೇ ಸ್ವರ್ಗಂ ಪುನರಾವೃತ್ತಿದುರ್ಲಭಂ ॥ ೨೨ ॥**

---

೧೯. ಅತ್ರಿಯ ಕಣ್ಣಿನಿಂದ ಹುಟ್ಟಿದವನೇ! ಮತ್ತು ಕ್ಷೀರಸಮುದ್ರದ ಮಥನ ಕಾಲದಲ್ಲಿ ಹುಟ್ಟಿದವನೆ! ಈಶ್ವರನ ತಲೆಯಲ್ಲಿರುವವನೆ! ಇಂತಹನಿನಗೆ ನಮಸ್ಕಾರವು.

೨೦. ದಿವ್ಯರೂಪನೇ! ಸುಧಾಕರನೇ! ಜಗತ್ಪತಿಯೇ! ನಿನಗೆ ನಮಸ್ಕಾರವು ನಿನ್ನನ್ನು ರಾತ್ರಿಯಲ್ಲಿ ಶುಕ್ಲ, ಕೃಷ್ಣ ಪಕ್ಷಗಳೆರಡರಲ್ಲೂ ಇರುತ್ತೀಯೆಂದು ತಿಳಿದವರು ಹೇಳುವರು.

೨೧ ಓಂ ಹ್ರಾಂ ಹ್ರೀಂ ಸೋಮಾಯನಮಃ ॥ ಎಂಬುದೇ ಜಪಮಾಡುವ ಮಂತ್ರವು. ಬೆಳಗಿನ ಹೊತ್ತು ಜಪಮಾಡಬೇಕು. ಈ ರೀತಿ ಚಂದ್ರನನ್ನು ಪೂಜಿಸುವವನೂ, ಕಥೆಯನ್ನು ಕೇಳುವವನೂ ಹೇಳುವವನೂ ಚಂದ್ರನಿಗೆ ಸಮನಾಗಿ ಜನ್ಮ ಜನ್ಮದಲ್ಲಿಯೂ ಹುಟ್ಟುತ್ತಾರೆ.

೨೨. ಯಾವನು ಈ ಚಂದ್ರನನ್ನು ಸಹಸ್ರನಾಮಗಳಿಂದ ಸ್ತುತಿಸುವನೋ ಅಥವಾ ಪೂಜಿಸುವನೋ ಅವನು ಪುನರಾವೃತ್ತಿ ಇಲ್ಲದ ಅಕ್ಷಯ ಲೋಕವನ್ನು ಹೊಂದುವನು.

॥ ಇತಿ ಸೋಮಾಪೂಜಾ ॥

ಪಿತ್ತಲೇ ಭಾಜನೇ ಕಾಂಸ್ಯೇ ದಧಿಪೂರ್ಣೇ ಘೃತೇ ಶಿವೇ ।
ನ್ಯೂನಾಧಿಕಸ್ತು ವಿಭವಾಚ್ಛೃತ್ವಾ ಕರ್ಮ ವಿಮತ್ಸರಃ ॥ ೨೩ ॥

ಸ್ವರ್ಣೇ ವಾ ರಜತೇ ಕಾಂಸ್ಯೇ ಸೌಮ್ಯೇ ಕೃಷ್ಣಭವೇ ಬುಧಃ ।
ಸಂಪ್ರಾಪ್ಯ ಪರ್ವಸಂಸ್ಥಾನೇ ದದ್ಯಾದ್ಬಹುಸುತಾಯ ಚ ॥ ೨೪ ॥

ಪರಂ ಭವತಿ ಸೌಭಾಗ್ಯಂ ಪೀಯೂಷಾದಧಿಕಂ ಭೃಶಂ ।
ಸ್ತ್ರೀಣಾಂ ಚ ಪುರುಷಾಣಾಂ ಚ ನ ದೌರ್ಭಾಗ್ಯಂ ಕದಾಚನ ॥ ೨೫ ॥

ರೂಪಸೌಭಾಗ್ಯಕಾಮೋಽಹಂ ದಧಿ ಸ್ವರ್ಣಂ ಚ ರಾಜತಂ ।
ದದಾಮಿ ಕಾಂಸ್ಯಪಾತ್ರಸ್ಥಂ ದೇಹಿ ಸೌಭಾಗ್ಯರೂಪಕಂ ॥ ೨೬ ॥

ದ್ವಿಜಾಯ ವಾಕ್ಯಪೂರ್ವೇಣ ದದ್ಯಾದ್ವಿಮತ್ಸರೋ ನರಃ ।
ಶಕ್ತಿತೋ ದಕ್ಷಿಣಾ ದೇಯಾ ತಥಾ ವಸ್ತ್ರಾದಿಕಂ ನವಂ ॥ ೨೭ ॥

---

ಇದು ಚಂದ್ರನ ಪೂಜೆಯು—

೨೩-೨೪. ಹಿತ್ತಾಳೆ ಅಥವಾ ಕಂಚಿನ ಪಾತ್ರೆಯಲ್ಲಿ ಮೊಸರನ್ನಾಗಲಿ, ತುಪ್ಪವನ್ನಾಗಲಿ ತುಂಬಿ ತನ್ನ ಶಕ್ತ್ಯನುಗುಣವಾಗಿ ಮಾಡಿ ಪರ್ವ ದಿವಸದಲ್ಲಿಯಾಗಲಿ, ಕೃಷ್ಣ ಪಕ್ಷದ ಸೋಮವಾರದಲ್ಲಿಯಾಗಲಿ ಮಕ್ಕಳೊಂದಿಗನಾದ ಬ್ರಾಹ್ಮಣನಿಗೆ ಕೊಡಬೇಕು. ಇನ್ನೂ ಹೆಚ್ಚಾಗಿ ಮಾಡಬೇಕಾದರೆ ಬೆಳ್ಳಿ ಚಿನ್ನದ ಪಾತ್ರೆಗಳಲ್ಲಿ ಈ ಮೊಸರು ತುಪ್ಪಗಳನ್ನು ತುಂಬಿ ಮಕ್ಕಳೊಂದಿಗನಿಗೆ ದಾನಮಾಡಬೇಕು.

೨೫. ಹೆಂಗಸು, ಗಂಡಸು, ಯಾರು ಕೊಟ್ಟರೂ ಸರಿ ಅಮೃತಕ್ಕಿಂತಲೂ ಹೆಚ್ಚಾದ ಐಶ್ವರ್ಯವು ಬರುತ್ತದೆ. ಬಡತನವೆಂಬುದು ಬರುವುದೇ ಇಲ್ಲ.

೨೬. ರೂಪ ಐಶ್ವರ್ಯಗಳನ್ನು ಅಪೇಕ್ಷಿಸಿ, ಮೊಸರು, ಚಿನ್ನ, ಬೆಳ್ಳಿಗಳನ್ನು ಈ ಕಂಚಿನ ಪಾತ್ರೆಯಲ್ಲಿ ಹಾಕಿಕೊಡುತ್ತೇನೆ. ನನಗೆ ಆ ರೂಪ ಸೌಭಾಗ್ಯಗಳನ್ನು ಕೊಡು. ಎಂದು ಹೇಳಬೇಕು.

೨೭. ಈ ಮಂತ್ರವನ್ನು ಹೇಳಿ ಬ್ರಾಹ್ಮಣನಿಗೆ ಶುದ್ಧವಾದ ಮನಸ್ಸಿನಿಂದ ಕೊಡಬೇಕು. ಶಕ್ತಿಗನುಗುಣವಾಗಿ ವಸ್ತ್ರವನ್ನೂ ದಕ್ಷಿಣೆಯನ್ನೂ ಕೊಡಬೇಕು.

ಭೋಜ್ಯಾನ್ನಂ ಸರ್ವಸಂಪೂರ್ಣಂ ತಾಂಬೂಲಂ ಸುಮನೋಹರಂ ।
ಪುಷ್ಪಮೂಲಾಧಿಕಂ ದದ್ಯಾದ್ರೂಪಸೌಭಾಗ್ಯಹೇತವೇ ॥ ೨೮ ॥

ಏವಂ ಯಃ ಕುರತೇ ದಾನಂ ಸೋಮೋದ್ದಿಷ್ಟಂ ದ್ವಿಜಾತಯೇ ।
ಸ್ವರ್ಲೋಕೇ ನರಲೋಕೇ ವಾ ರೂಪಸೌಭಾಗ್ಯಭುಗ್ಭವೇತ್ ॥ ೨೯ ॥

ಇತಿ ಶ್ರೀ ಪದ್ಮಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಸೋಮಾರ್ಚನೇ
ರೂಪಸೌಭಾಗ್ಯಕಾಮತೋ ದ್ರವ್ಯಾದಿದಾನಂ ನಾಮ
ಅಷ್ಟಸಪ್ತತಿತಮೋಽಧ್ಯಾಯಃ

---

೨೮. ಉತ್ತಮವಾಗಿರುವ ಅನ್ನವನ್ನು ಹಾಕಿ ಭೋಜನ ಮಾಡಿಸಿ ತಾಂಬೂಲವನ್ನೂ, ಹೂವು ಗಂಧಗಳನ್ನೂ, ಕೊಡಬೇಕು. ಹೀಗೆ ಮಾಡಿದರೆ ಸೌಭಾಗ್ಯ, ಸೌಂದರ್ಯಗಳು ಬರುತ್ತವೆ.

೨೯. ಯಾವನು ಹೀಗೆ ಚಂದ್ರನನ್ನುದ್ದೇಶಿಸಿ ದಾನಮಾಡುವನೋ ಅವನು ಸ್ವರ್ಗದಲ್ಲಿಯಾಗಲಿ, ಭೂಲೋಕದಲ್ಲಿಯಾಗಲಿ, ರೂಪಸೌಭಾಗ್ಯಗಳನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದ ಸೋಮಾರ್ಚನೆಯಲ್ಲಿ
ರೂಪ ಸೌಭಾಗ್ಯದ ಆಸೆಯಿಂದ ದ್ರವ್ಯದಾನವೆಂಬ
ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಊನಾಶೀತಿತಮೋಽಧ್ಯಾಯಃ ॥



॥ ವೈಶಂಪಾಯನ ಉವಾಚ ॥

ಉದ್ಭವಂ ಲೋಹಿತಾಂಗಸ್ಯ ಸಂತೋಷಂ ತು ಜನೇಷು ಚ ।
ಪ್ರಭಾವಂ ವೈಭವಂ ತೇಜಃ ಶ್ರೋತುಮಿಚ್ಛಾಮಿ ತತ್ತ್ವತಃ ॥ ೧ ॥

॥ ವ್ಯಾಸ ಉವಾಚ ॥

ಹರಾಂಶಸಂಭವೋ ದೇವಃ ಕುಜಾತಃ ಪೃಥಿವೀಸುತಃ ।
ಸತ್ತ್ವಸ್ಥಃ ಸತ್ತ್ವಸಂಪೂರ್ಣಃ ಶೂರಃ ಶಕ್ತಿಧರೋ ಭುವಿ ॥ ೨ ॥

ತೀಕ್ಷ್ಣಃ ಕ್ರೂರಗ್ರಹೋ ದೇವೋ ಲೋಹಿತಾಂಗಃ ಪ್ರತಾಪವಾನ್ ।
ಕುಮಾರೋ ರೂಪಸಂಪನ್ನೋ ವಿದ್ಯುತ್ಪಾತಮಯಃ ಪ್ರಭುಃ ॥ ೩ ॥

---

## ಎಪ್ಪತ್ತೊಂಭತ್ತನೆಯ ಅಧ್ಯಾಯವು

೧ ವೈಶಂಪಾಯನನು ಹೇಳಿದನು– ಅಂಗಾರಕನ ಹುಟ್ಟುವಿಕೆಯನ್ನೂ ಏನು ಮಾಡಿದರೆ ಜನರಲ್ಲಿ ಅವನು ಸಂತೋಷಪಡುವನು ಎಂಬುದನ್ನೂ ಅವನ ಪ್ರಭಾವ ಶಕ್ತಿಗಳನ್ನೂ ಕೇಳಲು ಇಚ್ಛಿಸುತ್ತೇನೆ.

೨. ವ್ಯಾಸನು ಹೇಳಿದನು– ಈ ಅಂಗಾರಕನು ಈಶ್ವರನ ಅಂಶದಿಂದ ಹುಟ್ಟಿದವನು. ಭೂಮಿಯ ಮಗನು. ಸತ್ವಗುಣದಿಂದ ಕೂಡಿದವನು. ಶೂರನು.

೩. ತೀಕ್ಷ್ಣನು, ಕ್ರೂರವಾದ ಗ್ರಹವು, ಕೆಂಪಾಗಿರುವನು, ಪ್ರತಾಪಿಯು, ಸುಂದರನು, ಯುವಕನು, ಮಿಂಚಿನಂತಿರುವನು, ಒಡೆಯನು.

ಅನೇನ ಭರ್ಜಿತಾ ದೈತ್ಯಾಃ ಕ್ರವ್ಯಾದಾ ಯೇ ಸುರದ್ವಿಷಃ ।
ದಶಾಯೋಗಾಚ್ಚ ಮನುಜಾ ಉದ್ಭಿಜಾಃ ಪಶುಪಕ್ಷಿಣಃ ॥ ೪ ॥

॥ ವೈಶಂಪಾಯನ ಉವಾಚ ॥

ಶಂಭೋರೇಷ ಕಥಂ ಜಾತಃ ಕಥಂ ಜಾತೋ ಮಹೀಸುತಃ ।
ಗ್ರಹೋ ದೇವಃ ಕಥಂ ಕ್ರೂರ ಏತದಿಚ್ಛಾಮಿ ವೇದಿತುಂ ॥ ೫ ॥

ಕಥಮಸ್ಯ ಭವೇತ್ತುಷ್ಟಿಃ ಸರ್ವಲೋಕೇಷು ಸರ್ವದಾ ।
ಗುರೋ ಮಯ್ಯಾಪ್ತಭಾವೇ ತು ವದ ನಿಸ್ಸಂಶಯಂ ಮುಖಾತ್ ॥ ೬ ॥

॥ ವ್ಯಾಸ ಉವಾಚ ॥

ಹಿರಣ್ಯಾಕ್ಷಕುಲೇ ಧೀಮಾನಸುರಾಣಾಂ ಚ ಪಾರ್ಥಿವಃ ।
ಅಂಧಕೇತಿ ಸಮಾಖ್ಯಾತೋ ದೈತ್ಯಃ ಸರ್ವಸುರಾಂತಕೃತ್ ॥ ೭ ॥

ಜಾತೋ ವಿಷ್ಣುವರಾದೇವ ಜಾತೋ ವಿಷ್ಣುಪರಾಕ್ರಮಃ ।
ತೇನೈವ ನಿರ್ಜಿತಾ ದೇವಾಃ ಸೇಂದ್ರಾಃ ಕ್ರತುಭುಜಃ ಕ್ರಮಾತ್ ॥ ೮ ॥

---

೪. ದೇವತೆಗಳಿಗೆ ಶತ್ರುಗಳಾದ ದೈತ್ಯದಾನವರೆಲ್ಲರನ್ನೂ ಇವನು ಸೋಲಿಸಿದನು. ಮನುಷ್ಯರು, ಸಸ್ಯಗಳು, ಪಶುಪಕ್ಷಿಗಳು, ಇವೆಲ್ಲವೂ ಇವನ ದೆಶೆ ಬಂದಾಗ ತೊಂದರೆ ಪಡುತ್ತವೆ.

೫ ವೈಶಂಪಾಯನನು ಹೇಳಿದನು- ಈ ಅಂಗಾರಕನು ಶಂಭುವಿನಿಂದ ಹೇಗೆ ಹುಟ್ಟಿದನು ? ಭೂಮಿಯ ಮಗನಾದುದು ಹೇಗೆ ? ಈ ಗ್ರಹವು ಕ್ರೂರವಾದುದು ಹೇಗೆ ? ಇದನ್ನು ತಿಳಿಸು.

೬. ಜನಗಳು ಏನು ಮಾಡಿದರೆ ಇವನಿಗೆ ಸಂತೋಷವಾಗುವುದು ? ಎಲೈ ಗುರುವೇ ! ನನ್ನಲ್ಲಿರುವ ಪ್ರೀತಿಯಿಂದ ನೀನು ಇದೆಲ್ಲವನ್ನೂ ಹೇಳು.

೭. ವ್ಯಾಸನು ಹೇಳಿದನು- ಹಿರಣ್ಯಾಕ್ಷನ ವಂಶದಲ್ಲಿ ಅಂಧಕನೆಂಬುವನು ಒಬ್ಬನು ದೊರೆಯಾಗಿದ್ದನು. ಅವನು ದೇವತೆಗಳಿಗೆಲ್ಲಾ ತೊಂದರೆ ಕೊಡುತ್ತಿದ್ದನು.

೮. ಇವನು ವಿಷ್ಣುವಿನ ವರದಿಂದ ಹುಟ್ಟಿ ವಿಷ್ಣುವಿನಂತೆ ಪರಾಕ್ರಮಿಯಾಗಿದ್ದನು. ಅಮೃತ ಪಾನವನ್ನು ಮಾಡಿದನು. ಇವನು ಇಂದ್ರನೇ ಮುಂತಾದ ದೇವತೆಗಳನ್ನೆಲ್ಲಾ ಜಯಿಸಿದನು.

ತತೋ ದೇವಾ ವಿಧಿಂ ಗತ್ವಾ ವಚನಂ ಚೇದಮಬ್ರುವನ್ ।
ಅಂಧಕೇನೈವ ಚಾಸ್ಮಾಕಂ ಹೃತಂ ರಾಜ್ಯಂ ಸುಖಂ ಮಖಃ ॥ ೯ ॥

ತಸ್ಮಾತ್ತಸ್ಯ ವಧೋಪಾಯಮುಚ್ಯತಾಂ ತದ್ವಿಧೀಯತಾಂ ।
ಅಥ ಧಾತಾಽಬ್ರವೀದ್ವಾಕ್ಯಂ ದೇವಾನಸ್ಯ ಚ ನೈಧನಂ ॥ ೧೦ ॥

ನಾಸ್ತಿ ವಿಷ್ಣುವರಾದೇವ ಪೀಯೂಷಸ್ಯ ಚ ಭಕ್ಷಣಾತ್ ।
ಕಿಂತು ತಸ್ಯಾಸುರತ್ವಸ್ಯ ಯಥಾ ಪರಿಭವೋ ಧ್ರುವಂ ॥ ೧೧ ॥

ಕುರ್ವೇ ಲೋಕಹಿತಾರ್ಥಾಯ ಶ್ರದ್ಧಾಂ ಕಾಮಸಮನ್ವಿತಾಂ ।
ವಿಚಿಕಿತ್ಸಾ ತು ತತ್ರೈವ ಸರ್ವಾಸೂನಘ ಗಚ್ಛತಿ ॥ ೧೨ ॥

ತ್ಯಕ್ತ್ವೈಕಾಂ ಪಾರ್ವತೀಂ ದುರ್ಗಾಂ ನ ತಸ್ಯ ಮಾನಸಂ ಸ್ಥಿರಂ ।
ತತಃ ಕ್ರುದ್ಧೋ ಜಗತ್ಸ್ವಾಮೀ ತಂ ಚ ವೈರೂಪ್ಯತಾಂ ನಯೇತ್ ॥ ೧೩ ॥

---

೯. ಆಗ ದೇವತೆಗಳು ಬ್ರಹ್ಮನ ಬಳಿಗೆ ಹೋಗಿ ಅಂಧಕನು ನಮ್ಮನ್ನು ಜಯಿಸಿ ರಾಜ್ಯವನ್ನೂ, ಸುಖವನ್ನೂ ಕಿತ್ತುಕೊಂಡು ಯಾಗದ ಹವಿಸ್ಸನ್ನೂ ಆ ಅಂಧಕನು ಅಪಹರಿಸುತ್ತಿರುವನು. ಎಂದು ಹೇಳಿದರು.

೧೦. ಅದರಿಂದ ಅವನ ವಧೆಯ ಉಪಾಯವನ್ನು ಹೇಳೆನ್ನಲು ಆಗ ಬ್ರಹ್ಮನು ಅವರ ಮಾತನ್ನು ಕೇಳಿ ಇವನ ವಧೆಯ ವಿಷಯವನ್ನು ಕುರಿತು ಇಂತೆಂದನು

೧೧ ಇವನು ವಿಷ್ಣುವಿನ ವರದಿಂದ ಹುಟ್ಟಿ ಅಮೃತಪಾನ ಮಾಡಿರುವುದರಿಂದ ಇವನಿಗೆ ಸಾವಿರುವುದಿಲ್ಲ. ಆದರೆ ಇವನು ಸೋಲುವಂತೆ ಮಾಡಬೇಕು.

೧೨. ಆದರೆ ಲೋಕದ ಹಿತಕ್ಕಾಗಿ ಅವನನ್ನು ನಾಶಮಾಡಬೇಕು. ಆ ವಿಷಯದಲ್ಲಿಯೇ ಯೋಚಿಸುತ್ತೇನೆ. ಶ್ರದ್ಧೆ, ಕಾಮ ಚಿಕಿತ್ಸೆಗಳನ್ನು ಕಳುಹಿಸಿ ಅವರು ಎಲ್ಲರಲ್ಲಿಯೂ ಸೇರುವಂತೆ ಮಾಡುತ್ತೇನೆ.

೧೩. ಆ ಅಂಧಕನಿಗೆ ಪಾರ್ವತಿಯಲ್ಲಿ ಮನಸ್ಸು ನಟ್ಟಿರುವುದು. ಮತ್ತಾರಲ್ಲಿಯೂ ಇಲ್ಲ. ಆದ್ದರಿಂದ ಸ್ವಾಮಿಯಾದ ಶಿವನು ಕೋಪಗೊಂಡು ಅವನನ್ನು ಕುರೂಪಿಯನ್ನಾಗಿ ಮಾಡುವನು.

ತತೋಽಸುರತ್ವಂ ಸಂತ್ಯಜ್ಯ ಗಣಸ್ತಸ್ಯ ಭವಿಷ್ಯತಿ ।
ಏವಮುಕ್ತ್ವಾ ಪ್ರಜಾಧ್ಯಕ್ಷಃ ಶ್ರದ್ಧಾಂ ಕಾಮಸಮನ್ವಿತಾಂ ॥ ೧೪ ॥

ವಿಚಿಕಿತ್ಸಾಂ ಸ್ವಮಾಯಾಂ ಚ ಪ್ರೇಷಯಾಮಾಸ ತಂ ಪ್ರತಿ ।
ತತೋ ವಿಚೇಷ್ಟಿತಃ ಕಾಮಾದ್ಯೋಷಾನ್ವೇಷಣತತ್ಪರಃ ॥ ೧೫ ॥

ಸ್ವದಾರಾನ್ಪರಯೋಷಾಂ ಚ ನ ಪಶ್ಯೇದ್ವಿಚಿಕಿತ್ಸಯಾ ।
ತತೋ ಮಾಯಾಪ್ರಯೋಕ್ತ್ರೋಽಸೌ ತ್ರೈಲೋಕ್ಯಂ ವಿಚಚಾರ ಹ ॥ ೧೬ ॥

ದೃಷ್ಟಂ ಚ ಹಿಮವತ್ಪೃಷ್ಠೇ ಸ್ತ್ರೀರತ್ನಂ ಚಾತಿಶೋಭನಂ ।
ದೃಷ್ಟ್ವಾ ಚ ಪಾರ್ವತೀಂ ದೈತ್ಯಃ ಕಾಮಸ್ಯ ವಶಗೋಽಭವತ್ ॥ ೧೭ ॥

ಜ್ಞಾನಲೋಪಾತ್ತತೋ ದುರ್ಗಾಂ ಗ್ರಹೀತುಂ ತಾಂ ಸ ಚೇಚ್ಛತಿ ।
ಉಮಾ ಚ ಕೋಟವೀರೂಪಂ ಕೃತ್ವಾ ದೇಹಸ್ಯ ಚಾತ್ಮನಃ ॥ ೧೮ ॥

---

೧೪-೧೬. ಅನಂತರ ಅವನು ಈ ಅಸುರ ಭಾವವನ್ನು ಬಿಟ್ಟು ಅವನಿಗೆ ಗಣವಾಗಿ ಆಗುತ್ತಾನೆ. ಹೀಗೆಂದು ಹೇಳಿ ಆ ಬ್ರಹ್ಮನು ಶ್ರದ್ಧೆ, ಕಾಮ, ವಿಚಿಕಿತ್ಸೆಯರನ್ನು ಆ ಅಂಧಕನ ಬಳಿಗೆ ಕಳುಹಿಸಿದನು. ಆಗ ಆತನು ಕಾಮದಿಂದ ಕೂಡಿದವನಾಗಿ ತನ್ನ ಹೆಂಡಿರು ಇತರರ ಹೆಂಡಿರು ಎಂಬುದನ್ನು ತಿಳಿಯದವನಾದನು. ಈರೀತಿ ಬ್ರಹ್ಮನ ಮಾಯೆಯಿಂದ ಆವೃತನಾಗಿ ಮೂರು ಲೋಕವನ್ನೂ ಸುತ್ತಿದನು.

೧೭. ಹೀಗೆ ಸುತ್ತುತ್ತಿರುವಲ್ಲಿ ಹಿಮವತ್ಪರ್ವತದ ತಪ್ಪಲಿನಲ್ಲಿ ಒಂದು ಉತ್ತಮವಾದ ಸ್ತ್ರೀರತ್ನವನ್ನು ನೋಡಿದನು. ಅವಳೇ ಪಾರ್ವತಿಯು. ಈಕೆಯನ್ನು ನೋಡಿ ಕಾಮನಿಗೆ ಅಧೀನನಾದನು.

೧೮. ಈ ಪಾರ್ವತಿಯು ಪರಾತ್ಪರನ ಹೆಂಡತಿಯು. ಎಂಬ ಜ್ಞಾನವಿಲ್ಲದುದ ರಿಂದ ಆಕೆಯನ್ನು ಹಿಡಿಯಲು ಯತ್ನಿಸಿದನು. ಆಗ ಪಾರ್ವತಿಯು ಬೌದ್ಧ ಸನ್ಯಾಸಿನಿಯ ರೂಪವನ್ನು ಹೊಂದಿದಳು.

ಈಶ್ವರಸ್ಯಾಂತಿಕಸ್ಥಾ ಚ ಗ್ರಹೀತುಂ ತಾಂ ಸಸಾರ ಸಃ ।
ತತಃ ಕಾಮವಿಚೇತಾಶ್ಚ ಉನ್ಮತ್ತೀಕೃತಚೇತನಃ ॥ ೧೯ ॥

ನ ಜಹಾತಿ ಶಿವಪತ್ನೀಂ ಪಾರ್ವತೀಂ ದೈತ್ಯಪುಂಗವಃ ।
ತತೋ ಧ್ಯಾನಾತ್ತ್ವಮಾಗಮ್ಯ ಮಿಲಿತಃ ಪಾರ್ವತೀಂ ಧವಃ ॥ ೨೦ ॥

ದೃಷ್ಟ್ವಾ ತಂ ಚ ಸ ದೈತ್ಯೇಂದ್ರಃ ಪ್ರಗತಸ್ತು ಸ್ವಮಾಲಯಂ ।
ಸಜ್ಜೀಕೃತ್ಯ ಸ್ವಯೋಧಾಂಶ್ಚ ಶಂಭುಂ ಜೇತುಂ ಸಮುತ್ಸುಕಃ ॥ ೨೧ ॥

ಗೌರೀಮೇವ ಸಮಾನೇತುಂ ಕಾಮಮೋಹಾದಚೇತನಃ ।
ಏತಚ್ಛ್ರುತ್ವಾ ತು ತ್ರಿದಶಾ ಗತ್ವಾ ತಂ ನಂದಿನೇರಿತಾಃ ॥ ೨೨ ॥

ಅಕುರ್ವಂಶ್ಚ ಮಹದ್ಯುದ್ಧಂ ಘೋರಂ ಲೋಕಭಯಂಕರಂ ।
ದೈತ್ಯಾನ್ರಣೇ ಮೃತಾಂಸ್ತತ್ರ ದೈತ್ಯಾಚಾರ್ಯೋ ಮಹಾಕವಿಃ ॥ ೨೩ ॥

---

೧೯. ಆ ರೂಪವನ್ನು ಹೊಂದಿ ಈಶ್ವರನ ಹತ್ತಿರ ಹೋದಳು. ಈಕೆಯು ಈಶ್ವರನ ಬಳಿಗೆ ಹೋದರೂ ಆಕೆಯನ್ನು ಹಿಡಿಯಲು ಕಾಮಿಯಾದ ಅವನು ಅಲ್ಲಿಗೆ ಹೋದನು.

೨೦. ಈ ಪಾರ್ವತಿಯು ಗಂಡನ ಬಳಿಗೆ ಹೋದರೂ, ಆ ದೈತ್ಯನು ಆಕೆಯನ್ನು ಬಿಡದೆ ಬೆನ್ನಟ್ಟಿದನು. ಆಗ ಶಿವನು ತಾನು ಮಾಡುತ್ತಿದ್ದ ಧ್ಯಾನವನ್ನು ಬಿಟ್ಟು ಹೆಂಡತಿಯನ್ನು ಹತ್ತಿರಕ್ಕೆ ಕರೆದುಕೊಂಡನು.

೨೧. ಆಗ ಈಶ್ವರನು ಬಂದುದನ್ನು ನೋಡಿ ಆ ದೈತ್ಯನು ಹೊರಟುಹೋಗಿ ಪಾರ್ವತಿಯನ್ನು ಹೊಂದಿದ ಶಿವನನ್ನು ಜಯಿಸಲು ತನ್ನ ಸೈನ್ಯವನ್ನು ಸಿದ್ಧಪಡಿಸಿದನು.

೨೨-೨೩. ಕಾಮಮೋಹಿತನಾಗಿ ಆ ಗೌರಿಯನ್ನು ತರಲು ಪ್ರಯತ್ನಪಟ್ಟ ಆ ದೈತ್ಯನನ್ನು ಜಯಿಸಲು ಸೈನ್ಯವನ್ನು ತರಲು ನಂದಿಯು ದೇವತೆಗಳಿಗೆ ಹೇಳಿದನು. ಅವರು ಸಿದ್ಧರಾಗಿ ಬಂದರು. ಆಗ ಇಬ್ಬರಿಗೂ ಭಯಂಕರವಾದ ಯುದ್ಧವು ನಡೆಯಿತು. ಆ ಯುದ್ಧದಲ್ಲಿ ಸತ್ತ ದೈತ್ಯರನ್ನು ದೈತ್ಯ ಗುರುವಾದ ಶುಕ್ರನು ಮೃತಸಂಜೀವಿನೀ

ಮೃತಸಂಜೀವಿನೀಂ ಜಪ್ತ್ವಾ ತಾನೇವಾಯುಮಜೀವಯತ್ ।
ಪುನರ್ಯುರ್ಧ್ಯಂತಿ ತೇ ದೈತ್ಯಾಃ ಸುರೈಃ ಸಾರ್ಧಂ ಮಹಾಬಲೈಃ ॥ ೨೪ ॥

ಅಕ್ಷಯಂ ಚಾವ್ಯಯಂ ತತ್ರ ದೈತ್ಯಾನಾಂ ಚ ಮಹದ್ಭಯಂ ।
ಏತದ್ವೃತ್ತಂ ತು ಕೈಲಾಸೇ ಶರ್ವೇ ಚೈವ ನಿವೇದಿತಂ ।
ಕ್ರೋಧಾಚ್ಛಂಭುಸ್ತದಾ ವಾಕ್ಯಂ ನಂದಿನಂ ನಿಜಗಾದ ಹ ॥ ೨೫ ॥

॥ ಶಂಭುರುವಾಚ ॥

ಗಚ್ಛ ದೈತ್ಯಾಲಯಂ ವೀರ ದ್ರುತಮೇವ ಮಮಾಜ್ಞಯಾ ।
ಪಶ್ಯತಾಂ ಸರ್ವದೈತ್ಯಾನಾಂ ದೈತ್ಯೇಂದ್ರಸ್ಯ ಚ ಸಂಸದಿ ॥ ೨೬ ॥

ಗೃಹೀತ್ವಾ ಚಿಕುರೇಽತ್ಯರ್ಥಂ ಭಾರ್ಗವಸ್ಯ ದುರಾತ್ಮನಃ ।
ಬದ್ಧ್ವಾ ಚಾಸ್ಮತ್ಸಕಾಶಂ ವೈ ವಿಹ್ವಲಂ ಚಾನಯ ಕ್ಷಣಾತ್ ॥ ೨೭ ॥

॥ ವ್ಯಾಸ ಉವಾಚ ॥

ತತೋ ನಂದೀಶ್ವರಃ ಶ್ರೀಮಾನ್ಪಾರ್ವತೀಪತಿನೇರಿತಃ ।
ಕಾವ್ಯಸ್ಯ ಕುಂತಲೇ ಧೃತ್ವಾ ದೈತ್ಯಾನಾಂ ಪುರತೋ ಬಲಾತ್ ॥ ೨೮ ॥

---

ಜಪವನ್ನು ಜಪಿಸಿ ಬದುಕಿಸುತ್ತಿದ್ದನು. ಆಗ ಸತ್ತವರು ಮತ್ತೆ ಮತ್ತೆ ಬಂದು ಯುದ್ಧ ಮಾಡುತ್ತಿರಲು ಅವರೆಲ್ಲರೂ ಕ್ಷಯವನ್ನು ಹೊಂದದೆ ಅಕ್ಷಯವಾಗುತ್ತಿದ್ದುದು ಬಹು ಭಯಂಕರವಾಗಿದ್ದಿತು. ಈ ವಿಷಯವನ್ನು ಕೈಲಾಸದಲ್ಲಿರುವ ಈಶ್ವರನಿಗೆ ಹೇಳಲು ಅವನು ಕೋಪಗೊಂಡು ನಂದಿಯನ್ನು ಕರೆದು ಇಂತೆಂದನು.

೨೬–೨೭. ಎಲೈ ವೀರನೇ ! ನನ್ನ ಅಪ್ಪಣೆಯಂತೆ ದೈತ್ಯರ ಪಟ್ಟಣಕ್ಕೆ ಹೋಗು. ಅವನ ಸಭೆಯಲ್ಲಿರುವ ಆ ಶುಕ್ರನನ್ನು ಎಲ್ಲರೆದುರಿಗೂ ಜುಟ್ಟನ್ನು ಹಿಡಿದು ನನ್ನ ಬಳಿಗೆ ಕ್ಷಣಕಾಲದಲ್ಲಿ ಎಳೆದುಕೊಂಡು ಬಾ.

೨೮–೨೯. ವ್ಯಾಸನು ಹೇಳಿದನು– ಈಶ್ವರನು ಹೀಗೆ ಹೇಳಲು ನಂದಿಯು ಆದರಂತೆ ಹೋಗಿ ಆ ರಾಕ್ಷಸರ ಎದುರಿಗೆ ಆ ಶುಕ್ರನ ಜುಟ್ಟನ್ನು ಹಿಡಿದುಕೊಂಡು

ಆನಯತ್ತಂ ಕವಿಂ ದೈತ್ಯಾ ಜಘ್ನುಃ ಪ್ರಹರಣೈಃ ಶರೈಃ ।
ನ ಶೇಕುಸ್ತೇ ರುಜಂ ಕರ್ತುಂ ನಂದಿನೋ ಬಲಶಾಲಿನಃ ॥ ೨೯ ॥

ದೇವಾನುಮುಗ್ರತೋ ನಂದೀ ಗೃಹೀತ್ವಾ ತಸ್ಯ ಕುಂತಲೇ ।
ಹರಸ್ಯ ಪುರತೋ ಹೃಷ್ಟಃ ಸಹ ತೇನ ಸಮಾಯಯೌ ॥ ೩೦ ॥

ಗೃಹೀತ್ವಾ ಭಾರ್ಗವಂ ಶಂಭುರಸುರಾಣಾಂ ಗುರುಂ ರುಷಾ ।
ಅಗಿಲದ್ರೌದ್ರಮೂರ್ತಿರ್ಽಸೌ ಕಾಲಾಂತಕಸಮಃ ಪ್ರಭುಃ ॥ ೩೧ ॥

ತತೋ ದೈತ್ಯಪತಿಃ ಕ್ರುದ್ಧಃ ಸರ್ವಸೈನ್ಯಾವೃತೋ ಬಲೀ ।
ದುದ್ರಾವ ಶಂಕರಂ ತತ್ರ ಘೋರೈಃ ಪ್ರಹರಣಾದಿಭಿಃ ॥ ೩೨ ॥

ತ್ರಿದಶಾಶ್ಚ ತಥಾ ಕ್ರುದ್ಧಾಸ್ತತೋ ವಿದ್ಯಾಧರಾದಯಃ ।
ಪ್ರಯಯುಃ ಸಮರಂ ತತ್ರ ದೈತ್ಯಾನಾಂ ಚ ಭೃಶಂ ರುಷಾ ॥ ೩೩ ॥

---

ಈಶ್ವರನ ಬಳಿಗೆ ತಂದನು. ಆಗ ದೈತ್ಯರೆಲ್ಲರೂ ಬಾಣಗಳಿಂದ ಆ ನಂದಿಯನ್ನು ಹೊಡೆದರೂ ಆತನಿಗೆ ನೋವಾಗಲಿಲ್ಲ.

೩೦. ಆ ಶುಕ್ರನನ್ನು ನಂದಿಯು ಹಿಡಿದುಕೊಂಡು ದೇವತೆಗಳು ನೋಡುತ್ತಿರುವಂತೆಯೇ ಹರನ ಎದುರಿಗೆ ಬಂದು ನಿಂತನು.

೩೧. ಆಗ ಶಂಭುವು ಆ ಶುಕ್ರನನ್ನು ಹಿಡಿದುಕೊಂಡು ಕೋಪಗೊಂಡು ನುಂಗಿಬಿಟ್ಟನು.

೩೨. ಆಗ ದೈತ್ಯೇಂದ್ರನು ಕೋಪಗೊಂಡು ಸೈನ್ಯದಿಂದ ಕೂಡಿಕೊಂಡು ಹರಿತವಾದ ಆಯುಧಗಳನ್ನು ತೆಗೆದುಕೊಂಡು ಯುದ್ಧಕ್ಕೆ ಮೊದಲುಮಾಡಿದನು.

೩೩. ದೇವತೆಗಳೂ, ವಿದ್ಯಾಧರರೂ, ಕೋಪಗೊಂಡು ದೈತ್ಯರ ಮೇಲೆ ಯುದ್ಧಕ್ಕೆ ಹೋದರು.

ಏತಸ್ಮಿನ್ನಂತರೇ ಘೋರಂ ಯುದ್ಧಂ ಭೀಷ್ಮಂ ಸಮುತ್ಥಿತಂ ।
ದೇವದಾನವಯೋರೇವಂ ಸರ್ವಲೋಕಭಯಂಕರಂ ॥ ೩೪ ॥

ತತಃ ಪ್ರತ್ಯಯಿತಾಸ್ತ್ರೈಶ್ಚ ದೇವಾ ನಿಘ್ನಂತಿ ದಾನವಾನ್ ।
ದನುಜಾ ನಿರ್ಜರಾಂಸ್ತತ್ರ ವಿನಿಘ್ನಂತಿ ಮಹಾಹವೇ ॥ ೩೫ ॥

ಶಾತಕುಂಭಮಯೈರ್ಗಾತ್ರೈಃ ಶರೈರ್ವಜ್ರಸಮಾನಕೈಃ ।
ಬಿಭಿದೂ ರತ್ನಪುಂಖೈಶ್ಚ ಪರಸ್ಪರಜಯೈಷಿಣಃ ॥ ೩೬ ॥

ದೀಪಯಂತಿ ಭೃಶಂ ಕಾಂತ್ಯೈಸ್ತದ್ಗಾತ್ರಾಣಿ ನಭಾಂಸಿ ಚ ।
ವೀರ್ಯವಂತೋ ಮಹಾದೈತ್ಯಾನಮೋಘೈರಸ್ತ್ರಸಂಚಯೈಃ ॥ ೩೭ ॥

ಹತ್ವಾ ಚ ಪಾತಯಾಮಾಸುಃ ಕಾಶ್ಯಪಾಃ ಸುರಸತ್ತಮಾಃ ।
ಜಗದ್ವ್ಯಾಪ್ತಂ ಮಹಾಸೈನ್ಯಂ ಬಲಾಯುಧಸುಸಂವೃತಂ ॥ ೩೮ ॥

---

೩೪. ಈ ಸಮಯದಲ್ಲಿ ಆ ದೇವದಾನವರಿಗೆ ಸರ್ವಲೋಕಭಯಂಕರವಾದ ಯುದ್ಧವು ನಡೆಯಿತು.

೩೫. ಆಗ ದೇವತೆಗಳು ಉಗ್ರವಾದ ಬಾಣಗಳಿಂದ ದಾನವರನ್ನೂ, ದಾನವರು ಕ್ರೂರವಾದ ಅಸ್ತ್ರಗಳಿಂದ ದೇವತೆಗಳನ್ನೂ ಹೊಡೆದರು.

೩೬. ಒಬ್ಬರಿಗೊಬ್ಬರು ಚಿನ್ನದಿಂದ ಮಾಡಿರುವ ವಜ್ರದಂತೆ ಗಟ್ಟಿಯಾಗಿ ಹರಿತವಾದ ಬಾಣಗಳನ್ನು ಬಿಡುತ್ತಾ ಜಯದ ಆಸೆಯಿಂದ ಯುದ್ಧಮಾಡುತ್ತಿದ್ದರು.

೩೭. ಆ ಕಾಂತಿಯುಳ್ಳ ಶರಗಳಿಂದ ಶತ್ರುಗಳ ದೇಹವನ್ನೂ, ಆಕಾಶವನ್ನೂ ಬೆಳಕು ಮಾಡುತ್ತಿದ್ದರು ಹೀಗೆ ಮಾಡುತ್ತ ದೈತ್ಯರನ್ನು ದೇವತೆಗಳು ಅತ್ಯುತ್ತಮವಾದ ಅಸ್ತ್ರಗಳಿಂದ ಹೊಡೆಯುತ್ತಿದ್ದರು.

೩೮. ಬಲದಿಂದಲೂ, ಆಯುಧದಿಂದಲೂ, ಕೂಡಿ ಪ್ರಪಂಚವನ್ನೇ ಆವರಿಸಿರುವ ದೈತ್ಯ ಸೈನ್ಯವನ್ನು ದೇವತೆಗಳು ಹೊಡೆದು ಕೆಡವಿದರು.

ನೀತಂ ಕ್ಷಯಂ ಸುರೈಃ ಸರ್ವೈಃ ಶಸ್ತ್ರೈಃ ಪ್ರತ್ಯಯಿತೈಃ ಕ್ಷಣಾತ್ ।
ತತೋ ದೇವಾನ್ಸಮಾಭಾಷ್ಯ ಶುಕ್ರಮುದ್ಗೀರ್ಣವಾನ್ ಶಿವಃ ॥ ೩೯ ॥

ಭೂಮೌ ನಿಪತಿತೋ ಗರ್ಭಸ್ತತೋ ಭೌಮ ಇತಿ ಸ್ಮೃತಃ ।
ಶುಕ್ರಃ ಶಿವಂ ಸಮಾಭಾಷ್ಯ ಗತೋ ದೈತ್ಯಾನ್ಮುದಾಽನ್ವಿತಃ ॥ ೪೦ ॥

ಚಂಡಿಕಾಯಾಃ ಪ್ರಸಾದೇನ ದೈತ್ಯೋ ನಾಶಂ ಸಮೇಯಿವಾನ್ ।
ತತಃ ಶಿಷ್ಟಾಶ್ಚ ಯೇ ದೈತ್ಯಾ ವಿವಿಶುಸ್ತೇ ರಸಾತಲಂ ॥ ೪೧ ॥

ಅಂಧಕೋ ಗಣತಾಂ ನೀತಃ ಕೃತ್ವಾ ಭೃಂಗಿರಿಟಿಂ ದ್ವಿಜಃ ।
ಏವಂ ಭೌಮಃ ಸಮುತ್ಪನ್ನೋ ಹರಾಂಶೋ ಭೂಸಮುದ್ಭವಃ ॥ ೪೨ ॥

ತಸ್ಯ ಪೂಜಾ ಚತುರ್ಥ್ಯಾಂ ತು ಭೌಮವಾರೇ ಚ ಸುವ್ರತೈಃ ।
ದಶಾದ್ಯರಿಷ್ಟೇ ಚ ತಥಾ ಗೋಚರೇಽನಿಷ್ಟರಾಶಿನೇ ॥ ೪೩ ॥

---

೩೯. ಈ ರೀತಿಯಾಗಿ ದೇವತೆಗಳು ದೈತ್ಯರನ್ನು ನಾಶಮಾಡಲು ಶಿವನು ದೇವತೆಗಳಿಗೆ ಒಳ್ಳೆಯ ಮಾತನ್ನು ಹೇಳಿ ಶುಕ್ರನನ್ನು ಹೊಟ್ಟೆಯಿಂದ ಹೊರಕ್ಕೆ ಉಗಿದನು.

೪೦. ಆಗ ಆ ಗರ್ಭವು ಭೂಮಿಯಲ್ಲಿ ಬಿದ್ದುದರಿಂದ ಭೌಮವೆಂದು ಹೆಸರು ಬಂದಿತು. ಆಗ ಶುಕ್ರನು ಶಿವನಿಗೆ ಧನ್ಯವಾದವನ್ನು ಹೇಳಿ ದಾನವರನ್ನು ಸೇರಿ ಕೊಂಡನು.

೪೧. ಹೀಗೆ ಚಂಡಿಕೆಯ ಪ್ರಸಾದದಿಂದ ದೈತ್ಯನು ನಾಶವಾದನು. ಅನಂತರ ಕಳೆದುಳಿದ ದೈತ್ಯರು ಪಾತಾಳಕ್ಕೆ ಹೊರಟುಹೋದರು.

೪೨. ಆ ಅಂಧಕನನ್ನು ಗಣದಲ್ಲಿ ಸೇರಿಸಿ ಅವನಿಗೆ ಭೃಂಗಿರಿಟಿ ಎಂದು ಹೆಸರಿಟ್ಟನು. ಈ ರೀತಿಯಾಗಿ ಹರನ ಅಂಶವಾಗಿ ಭೂಮಿಯಲ್ಲಿ ಭೌಮನು ಹುಟ್ಟಿದನು.

೪೩. ಅವನಿಗೆ ಮಂಗಳವಾರ ಚತುರ್ಥಿಯಲ್ಲಿ ಪೂಜೆಮಾಡಬೇಕು. ಇವನ ದೆಶೆ ಗೋಚಾರಗಳು ನಡೆಯುವಾಗ ಅವನನ್ನು ಪೂಜಿಸಬೇಕು.

ತ್ರಿಕೋಣೇ ಮಂಡಲೇ ಚೈವ ರಕ್ತಪುಷ್ಪಾನುಲೇಪನೈಃ ।
ಏವಂ ವೈ ಪೂಜಿತೋ ಭೌಮಃ ಪ್ರಯಚ್ಛತಿ ಮತಿಂ ಧನಂ ॥
ಪುತ್ರಾನ್ಸುಖಂ ಯಶಶ್ಚೈವ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೪೪ ॥

॥ ವ್ಯಾಸ ಉವಾಚ ॥

ಏತದ್ವಃ ಕಥಿತಂ ಶಿಷ್ಯಾ ಧರ್ಮಾಖ್ಯಾನಂ ಶುಭಾವಹಂ ।
ಯಚ್ಛ್ರುತ್ವಾ ನ ಪುನರ್ಭೂಯೋ ಜಾಯತೇ ಮ್ರಿಯತೇಽಪಿ ವಾ ॥ ೪೫ ॥

ದ್ವಿಜಾತೀನಾಂ ಪುಣ್ಯದಂ ಚ ಸಂಸೇವ್ಯಂ ಚ ಶುಭೇಪ್ಸುಭಿಃ ।
ಯಥಾಸುಖಂ ಚ ಗಚ್ಛಧ್ವಂ ಕೃತಕೃತ್ಯಾ ಮನುಜ್ಞಯಾ ॥ ೪೬ ॥

॥ ಬ್ರಹ್ಮೋವಾಚ ॥

ಏವಂ ವಿಶ್ರಾವ್ಯ ಭಗವಾನ್ವ್ಯಾಸಃ ಸತ್ಯವತೀಸುತಃ ।
ನಿರ್ಣೀಯ ಧರ್ಮಂ ವಿವಿಧಂ ಶಮ್ಯಾಪ್ರಾಶಮಗಾತ್ಸುತ ॥ ೪೭ ॥

---

೪೪. ತ್ರಿಕೋಣ ಮಂಡಲದಲ್ಲಿ ಕೆಂಪು ಹೂಗಳಿಂದಲೂ, ಗಂಧಾದಿಗಳಿಂದಲೂ ಆ ಭೌಮನನ್ನು ಪೂಜಿಸಿದರೆ ಪುತ್ರ, ಪೌತ್ರ, ಸುಖ, ಯಶಸ್ಸುಗಳನ್ನು ಕೊಡುವನು. ಮತ್ತೇನು ಬೇಕು? ಕೇಳು. ಹೇಳುತ್ತೇನೆ.

೪೫. ವ್ಯಾಸನು ಹೇಳಿದನು– ಎಲೈ ಶಿಷ್ಯರಿರಾ! ಈ ಧರ್ಮಾಖ್ಯಾನವನ್ನು ನಿಮಗೆ ಹೇಳಿದ್ದೇನೆ. ಇದು ಮಂಗಳಕರವು. ಇದನ್ನು ಕೇಳಿದರೆ ಮೋಕ್ಷವನ್ನು ಹೊಂದುತ್ತಾನೆ.

೪೬. ಇದು ದ್ವಿಜಾತಿಗಳಿಗೆ ಪುಣ್ಯವನ್ನುಂಟುಮಾಡುತ್ತದೆ. ಈಗ ನೀವು ಕೃತ ಕೃತ್ಯರಾದಿರಿ. ನನ್ನ ಅಪ್ಪಣೆಯಂತೆ ಹೋಗಿರಿ

೪೭. ಬ್ರಹ್ಮನು ಹೇಳಿದನು– ಶ್ರೀ ವ್ಯಾಸರು ಈ ರೀತಿ ಎಲ್ಲವನ್ನೂ ಹೇಳಿ ನಾನಾ ವಿಧವಾದ ಧರ್ಮಗಳನ್ನು ನಿರ್ಣಯಿಸಿ ಶಮ್ಯಾಪ್ರಾಶವೆಂಬ ಆಶ್ರಮಕ್ಕೆ ಹೋದರು.

ತ್ವಮಪಿ ಶ್ರದ್ಧಯಾ ವತ್ಸ ಜ್ಞಾತ್ವಾ ತತ್ತ್ವಂ ಯಥಾಸುಖಂ ।
ವಿಹರಸ್ವ ಯಥಾಕಾಲಂ ಗಾಯಮಾನೋ ಹರಿಂ ಮುದಾ ॥
ಲೋಕಾನ್ಧರ್ಮಂ ಚೋಪದಿಶನ್ಪ್ರೇಣರ್ಯ ಜಗತಾಂ ಗುರುಂ ॥ ೪೮ ॥

॥ ಪುಲಸ್ತ್ಯ ಉವಾಚ ॥

ಇತ್ಯುಕ್ತಃ ಪ್ರಯಯೌ ಭೂಪ ನಾರದೋ ಗಂಧಮಾದನಂ ।
ನಾರಾಯಣಂ ಮುನಿವರಂ ದ್ರಷ್ಟುಂ ಬದರಿಕಾಶ್ರಮೇ ॥ ೪೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಭೌಮೋತ್ಪತ್ತಿಪೂಜನಂ
ನಾಮ ಊನಾಶೀತಿತಮೋಽಧ್ಯಾಯಃ

---

೪೮. ಎಲೈ ವತ್ಸನೇ! ನೀನೂ ಸುಖವಾಗಿ ಈ ತತ್ತ್ವಗಳನ್ನು ತಿಳಿದು ಹರಿಯನ್ನು ಧ್ಯಾನಮಾಡುತ್ತ ಲೋಕಕ್ಕೆ ಧರ್ಮವನ್ನು ಉಪದೇಶಿಸುತ್ತ ಕಾಲವನ್ನು ಕಳೆ.

೪೯. ಪುಲಸ್ತ್ಯನು ಹೇಳಿದನು- ಬ್ರಹ್ಮನು ಹೀಗೆಂದು ಹೇಳಲು ನಾರದನು ಗಂಧಮಾದನ ಪರ್ವತದಲ್ಲಿರುವ ಬದರಿಕಾಶ್ರಮಕ್ಕೆ ನಾರಾಯಣನನ್ನು ನೋಡಲು ಹೋದನು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಭೌಮಜನನವೆಂಬ
ಎಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಅಶೀತಿತಮೋಽಧ್ಯಾಯಃ ॥



॥ ಭೀಷ್ಮ ಉವಾಚ ॥

ಚಂಡಿಕಾನುಗ್ರಹಾದ್ದೈತ್ಯಾ ಗತಾಃ ಶಿಷ್ಟಾ ರಸಾತಲಂ ।
ತದ್ವದಸ್ವ ಮಹಾಪ್ರಾಜ್ಞ ಚಂಡಿಕಾಪೂಜನೇ ಫಲಂ ॥ ೧ ॥

ಯಥಾ ಸಂಪೂಜ್ಯತೇ ದೇವೀ ತುಷ್ಟಾ ಯಚ್ಛತಿ ಯತ್ಫಲಂ ।
ಶ್ರೋತುಂ ಕೌತೂಹಲಂ ಮೇಽದ್ಯ ತದ್ವದಸ್ವ ಸವಿಸ್ತರಂ ॥ ೨ ॥

॥ ಪುಲಸ್ತ್ಯ ಉವಾಚ ॥

ಶೃಣುಷ್ವ ನೃಪಶಾರ್ದೂಲ ಚಂಡಿಕಾಪೂಜನೇ ಫಲಂ ।
ಯತ್ಕೃತ್ವಾ ಸ್ವರ್ಗಭುಕ್‌ಮರ್ತ್ಯಃ ಪಶ್ಚಾನ್ಮೋಕ್ಷಂ ಲಭೇದ್ಧ್ರುವಂ ॥ ೩ ॥

---

## ಎಂಭತ್ತನೆಯ ಅಧ್ಯಾಯವು

ಭೀಷ್ಮನು ಹೇಳಿದನು- ಚಂಡಿಕೆಯ ಅನುಗ್ರಹದಿಂದ ಉಳಿದ ದೈತ್ಯರು ರಸಾತಳಕ್ಕೆ ಹೋದರಷ್ಟೆ ? ಆ ಚಂಡಿಕಾ ಪೂಜೆಯಿಂದ ಬರುವ ಫಲವನ್ನು ತಿಳಿಸು.

೨. ಆ ಚಂಡಿಕೆಯನ್ನು ಹೇಗೆ ಪೂಜೆಮಾಡಬೇಕು ? ಆಕೆಯು ಸಂತೋಷ ಗೊಂಡರೆ ಯಾವ ಫಲವನ್ನು ಕೊಡುತ್ತಾಳೆ ? ಅದನ್ನು ಕೇಳಲು ಇಚ್ಛೆಯಿದೆ. ಅದನ್ನು ವಿಸ್ತಾರವಾಗಿ ಹೇಳು.

೩. ಪುಲಸ್ತ್ಯನು ಹೇಳಿದನು- ಎಲೈ ದೊರೆಯೇ ! ಚಂಡಿಕೆಯ ಪೂಜೆಯನ್ನು ಹೇಳುತ್ತೇನೆ. ಕೇಳು. ಆ ಪೂಜೆಯನ್ನು ಮಾಡಿದರೆ ಮನುಷ್ಯನು ಸ್ವರ್ಗದ ಸುಖವನ್ನು ಅನುಭವಿಸಿ ಅನಂತರ ಮೋಕ್ಷವನ್ನು ಹೊಂದುತ್ತಾನೆ.

ಯತ್ಪೂಜನೇ ಫಲಂ ದೇವ್ಯಾ ನ ತತ್ಕ್ರತುಶತೈರಪಿ ।
ಲಭ್ಯತೇ ನಿತರಾಂ ತಾತ ತೀರ್ಥದಾನವ್ರತಾದಿಭಿಃ ॥ ೪ ॥

ಚಂಡಿಕಾಂ ಪೂಜಯೇದ್ಭಕ್ತ್ಯಾ ಯೋ ನರಃ ಪ್ರತ್ಯಹಂ ನೃಪ ।
ನ ಕ್ಷಮಸ್ತತ್ಫಲಂ ವಕ್ತುಂ ಸಾಕ್ಷಾದ್ದೇವಃ ಪಿತಾಮಹಃ ॥ ೫ ॥

ಮಾತುರ್ದೇವ್ಯಾಃ ಪ್ರಸಾದೇನ ಸುಲಭಂ ಸರ್ವಮೇವ ಹಿ ।
ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ ॥ ೬ ॥

ಚಂಡಿಕಾಭ್ಯರ್ಚನಸ್ಯೈತೇ ಲಕ್ಷಾಂಶೇನಾಪಿ ನೋ ಸಮಾಃ ।
ಸ ದಾತಾ ಸ ಮುನಿರ್ಯಷ್ಟಾ ಸ ತಪಸ್ವೀ ಸ ತೀರ್ಥಗಃ ॥ ೭ ॥

ಯಃ ಸದಾ ಪೂಜಯೇದ್ದುರ್ಗಾಂ ನಾನಾಪುಷ್ಪಾನುಲೇಪನೈಃ ।
ಧೂಪೈರ್ದೀಪೈಸ್ತಥಾ ಭೋಜ್ಯೈಃ ಪ್ರಣಮೇದ್ವಾಽಪಿ ಭಾಮಿನೀಂ ॥ ೮ ॥

ಸ ಯೋಗೀ ಸ ಮುನಿಃ ಶ್ರೀಮಾಂಸ್ತಸ್ಯ ಮುಕ್ತಿಃ ಕರೇ ಸ್ಥಿತಾ ।
ವರ್ಷಮೇಕಂ ತು ಯೋ ದುರ್ಗಾಂ ಪೂಜಯೇದ್ವಿಜಿತೇಂದ್ರಿಯಃ ॥ ೯ ॥

---

೪. ದೇವಿಯ ಪೂಜೆಯಿಂದ ಬರುವ ಫಲವು ನೂರು ಯಾಗಗಳಿಂದಾಗಲಿ, ತೀರ್ಥ, ದಾನ, ವ್ರತಗಳಿಂದಾಗಲಿ ಬರುವುದಿಲ್ಲ.

೫. ಚಂಡಿಕೆಯನ್ನು ಯಾವನು ನಿತ್ಯವೂ ಭಕ್ತಿಯಿಂದ ಪೂಜಿಸುವನೋ ಅವನು ಹೊಂದುವ ಫಲವನ್ನು ಸಾಕ್ಷಾದ್ಬ್ರಹ್ಮನೂ ಹೇಳಲಾರನು.

೬-೧೨. ಹಾಗೆ ಪೂಜಿಸಿದರೆ ಆ ಚಂಡಿಕೆಯ ಅನುಗ್ರಹದಿಂದ ಎಲ್ಲವೂ ಸುಲಭವಾಗಿ ಸಿಕ್ಕುತ್ತದೆ. ಸಾವಿರ ಅಶ್ವಮೇಧ ಯಾಗಗಳೂ, ಈ ಚಂಡಿಕಾ ಪೂಜೆಯ ಲಕ್ಷ ಭಾಗದಲ್ಲಿ ಒಂದು ಭಾಗವನ್ನು ಹೊಂದಲಾರವು. ಯಾವನು ದುರ್ಗೆಯನ್ನು ಬಗೆಬಗೆಯಾದ ಗಂಧ, ಹೂಗಳಿಂದ ಪೂಜಿಸುವನೋ ಅವನೇ ದಾತೃವು. ಮುನಿಯು. ಯಾಗ ಮಾಡುವವನು. ತೀರ್ಥಗಳನ್ನು ಪೂಜಿಸುವವನು. ಯಾವನು ಧೂಪದೀಪಗಳಿಂದ ಪೂಜಿಸಿ ಆ ದುರ್ಗೆಯನ್ನು ನಮಸ್ಕರಿಸುವನೋ ಆತನೇ ಯೋಗಿಯು. ಮುನಿಯು ಶ್ರೀಮಂತನು. ಅವನಿಗೆ ಮುಕ್ತಿಯು ಅಂಗೈಯ್ಯಲ್ಲಿಯೇ ಇರುವುದು ಒಂದು ವರ್ಷಕಾಲ ಜಿತೇಂದ್ರಿಯನಾಗಿ ದುರ್ಗೆಯನ್ನು ಒಪ್ಪತ್ತು

ಏಕಾಹಾರೋ ಮಹಾಬಾಹೋ ಸೋಽಗ್ನಿಷ್ಟೋಮಫಲಂ ಲಭೇತ್ ।
ಪೌರ್ಣಮಾವಸ್ಯಾಂ ನವಮ್ಯಾಂ ಚ ಕ್ಷಿರೇಣೈವ ನರಾಧಿಪ ॥ ೧೦ ॥

ಸ್ನಾಪಯಿತ್ವಾ ಶುಭಾಂ ದುರ್ಗಾಂ ವಾಜಪೇಯಫಲಂ ಲಭೇತ್ ।
ಶುಕ್ಲಪಕ್ಷೇ ನವಮ್ಯಾಂ ತು ಅಷ್ಟಮ್ಯಾಂ ಪರಮೇಶ್ವರೀಂ ॥ ೧೧ ॥

ತ್ರಿಕಾಲಂ ಪೂಜಯೇದ್ಯಸ್ತು ಚತುರ್ದಶ್ಯಾಂ ನರಾಧಿಪ ।
ಸ ಗಚ್ಛತಿ ಪರಂ ಸ್ಥಾನಂ ಯತ್ರ ದೇವೀ ವ್ಯವಸ್ಥಿತಾ ॥ ೧೨ ॥

ಕ್ರೀಡಯಿತ್ವಾ ಚಿರಂ ಕಾಲಂ ರಾಜಾ ಭವತಿ ಭೂತಲೇ ।
ನವಮ್ಯಾಂ ಸೋಪವಾಸಸ್ತು ಯಃ ಪೂಜಯತಿ ಚಂಡಿಕಾಂ ॥ ೧೩ ॥

ದಶಾನಾಮಶ್ವಮೇಧಾನಾಂ ಫಲಂ ಪ್ರಾಪ್ನೋತಿ ಮಾನವಃ ।
ಜಿತೇಂದ್ರಿಯೋ ಬ್ರಹ್ಮಚಾರೀ ಶುಚಿರ್ಭೂತ್ವಾ ತು ಯೋ ನರಃ ॥ ೧೪ ॥

ಚಂಡಿಕಾಂ ಪೂಜಯೇದ್ಭಕ್ತ್ಯಾ ಸ ಯಾತಿ ಪರಮಾಂ ಗತಿಂ ।
ಸ್ನಾನೋಪವಾಸನಿಯಮೈಃ ಪೂಜಾಜಾಗರಮಾರ್ಜನೈಃ ॥ ೧೫ ॥

ಪರ್ವಕಾಲೇತು ಸರ್ವೇಷು ಚಂಡಿಕಾಂ ಯಃ ಪ್ರಪೂಜಯೇತ್ ।
ವಿಮಾನವರಮಾರುಹ್ಯ ಧ್ವಜಮಾಲಾಕುಲಂ ನೃಪ ॥ ೧೬ ॥

---

ಊಟಮಾಡಿಕೊಂಡು ಪೂಜಿಸಿದರೆ ಅಗ್ನಿಷ್ಟೋಮ ಯಾಗದ ಫಲವು ಬರುತ್ತದೆ. ಹುಣ್ಣಿಮೇ ನವಮಿಗಳಲ್ಲಿ ಆ ದುರ್ಗೆಗೆ ಹಾಲಿನ ಅಭಿಷೇಕ ಮಾಡಿದರೆ ವಾಜಪೇಯ ಯಾಗದ ಫಲವು ಬರುತ್ತದೆ. ಶುಕ್ಲಪಕ್ಷದ ಅಷ್ಟಮಿ, ನವಮಿ, ಚತುರ್ದಶಿಗಳಲ್ಲಿ ಮೂರು ಹೊತ್ತೂ ದುರ್ಗೆಯನ್ನು ಪೂಜಿಸಿದರೆ ದೇವಿಯು ಇರುವ ಸ್ಥಾನವೇ ಸಿಕ್ಕುತ್ತದೆ.

೧೩-೧೯. ಅಲ್ಲಿ ಬಹು ಕಾಲವಿದ್ದು ಭೂಮಿಯಲ್ಲಿ ರಾಜನಾಗಿ ಹುಟ್ಟುತ್ತಾನೆ. ನವಮಿಯ ದಿನ ಉಪವಾಸವಿದ್ದು ಚಂಡಿಕೆಯನ್ನು ಪೂಜಿಸಿದರೆ ಹತ್ತು ಅಶ್ವಮೇಧ ಯಾಗಗಳ ಫಲವನ್ನು ಹೊಂದುತ್ತಾನೆ. ಇಂದ್ರಿಯ ನಿಗ್ರಹಮಾಡಿಕೊಂಡು ಬ್ರಹ್ಮಚಾರಿಯಾಗಿ ಶುಡಿಯಿಂದ ಚಂಡಿಕೆಯನ್ನು ಪೂಜಿಸಿದರೆ ಉತ್ತಮ ಗತಿಯನ್ನು ಹೊಂದುತ್ತಾನೆ. ಸ್ನಾನ, ಉಪವಾಸ, ನಿಯಮ, ಪೂಜೆ ಜಾಗರಣೆಗಳಿಂದ ಪರ್ವಕಾಲ ಗಳಲ್ಲೆಲ್ಲಾ ಚಂಡಿಕೆಯನ್ನು ಪೂಜಿಸುವವನು ಧ್ವಜಗಳಿಂದ ಕೂಡಿದ ವಿಮಾನವನ್ನು

ಬ್ರಹ್ಮಲೋಕೇ ನರೋ ಗತ್ವಾ ಮೋದತೇ ಶಾಶ್ವತೀಃ ಸಮಾಃ ।
ತಸ್ಮಾತ್ಸರ್ವಪ್ರಯತ್ನೇನ ಯಥಾವಿಭವವಿಸ್ತರೈಃ ॥ ೧೭ ॥

ಪೂಜಯೇತ್ಸತತಂ ದುರ್ಗಾಂ ಮಹಾಪುಣ್ಯಫಲೇಚ್ಛಯಾ ।
ಅಯನೇ ವಿಷುವೇ ಚೈವ ಷಡಶೀತಿಮುಖೇ ನೃಪ ॥ ೧೮ ॥

ಮಾಸೈಶ್ಚತುರ್ಭಿರ್ಯತ್ಪುಣ್ಯಂ ವಿಧಿನಾ ಪೂಜ್ಯ ಚಂಡಿಕಾಂ ।
ತತ್ಫಲಂ ಲಭತೇ ವೀರ ನವಮ್ಯಾಂ ಕಾರ್ತಿಕಸ್ಯ ತು ॥ ೧೯ ॥

ಮಾಸಿ ಚಾಶ್ವಯುಜೇ ವೀರ ಶುಕ್ಲೇ ಪಕ್ಷೇ ತ್ರಿಶೂಲಿನೀಂ ।
ನವಮ್ಯಾಂ ಪೂಜಯೇದ್ಯಸ್ತು ತಸ್ಯ ಪುಣ್ಯಫಲಂ ಶೃಣು ॥ ೨೦ ॥

ಅಶ್ವಮೇಧಸಹಸ್ರಸ್ಯ ರಾಜಸೂಯಶತಸ್ಯ ಚ ।
ಯತ್ಫಲಂ ತಲ್ಲಭೇದ್ವೀರ ದಿವಿ ದೇವಗಣೈರ್ವೃತಃ ॥ ೨೧ ॥

ಮಾಸಿ ಮಾಸಿ ನರೋ ಭಕ್ತ್ಯಾ ಪೂಜಯೇದ್ಯಸ್ತು ಚಂಡಿಕಾಂ ।
ಲಭೇತ್ಷಾಣ್ಮಾಸಿಕಂ ಪುಣ್ಯಂ ನವಮ್ಯಾಂ ತು ನ ಸಂಶಯಃ ॥ ೨೨ ॥

---

ಪತ್ತಿ ಬ್ರಹ್ಮಲೋಕಕ್ಕೆ ಹೋಗಿ ಅನೇಕ ವರ್ಷಗಳವರೆಗೂ ಸುಖಿಸುತ್ತಾನೆ. ಆದ್ದರಿಂದ ಪ್ರಯತ್ನಪಟ್ಟು ಐಶ್ವರ್ಯಕ್ಕೆ ತಕ್ಕಂತೆ ದುರ್ಗೆಯನ್ನು ಪೂಜಿಸಿದರೆ ಮಹಾ ಪುಣ್ಯವು ಬರುತ್ತದೆ. ಉತ್ತರಾಯಣ ದಕ್ಷಿಣಾಯನ ಪುಣ್ಯಕಾಲಗಳು ವಿಷುವತ್ಪುಣ್ಯ ಕಾಲ ಷಡಶೀತಿ ಪುಣ್ಯಕಾಲಗಳಲ್ಲಿಯೂ ಆಶ್ವಯುಜ, ಕಾರ್ತಿಕ, ಮಾರ್ಗಶಿರ, ಪುಷ್ಯ ಮಾಸಗಳಲ್ಲಿಯೂ ಪೂಜಿಸಿದರೆ ಯಾವ ಪುಣ್ಯವು ಬರುವುದೋ ಆ ಪುಣ್ಯವನ್ನು ಕಾರ್ತಿಕ ಮಾಸದ ನವಮಿಯಲ್ಲಿ ಪೂಜಿಸಿದರೆ ಹೊಂದುತ್ತಾನೆ.

೨೦. ಆಶ್ವಯುಜ ಶುಕ್ಲ ನವಮಿಯಲ್ಲಿ ತ್ರಿಶೂಲನ ಹೆಂಡತಿಯಾದ ದುರ್ಗೆಯನ್ನು ಪೂಜಿಸಿದರೆ ಬರುವ ಪುಣ್ಯವನ್ನು ಹೇಳುತ್ತೇನೆ. ಕೇಳು.

೨೧. ಸಾವಿರ ಅಶ್ವಮೇಧಗಳು, ನೂರು ರಾಜಸೂಯ ಯಾಗಗಳು, ಇವನ್ನು ಮಾಡಿದರೆ ಬರುವ ಫಲವನ್ನು ಈ ಪೂಜೆಯಿಂದ ಹೊಂದುತ್ತಾನೆ. ಸ್ವರ್ಗದಲ್ಲಿ ದೇವತೆಗಳೊಡನೆ ಸೇರಿ ಸುಖವನ್ನು ಅನುಭವಿಸುತ್ತಾನೆ.

೨೨. ಪ್ರತಿ ಮಾಸದಲ್ಲಿಯೂ ಪೂಜೆ ಮಾಡುತ್ತ ಆರು ತಿಂಗಳು ಎಡೆಬಿಡದೆ ಪೂಜಿಸಿದರೆ ಬರುವ ಪುಣ್ಯವನ್ನು ನವಮಿಯಲ್ಲಿ ಪೂಜಿಸಿದರೆ ಹೊಂದುತ್ತಾನೆ.

ಮೇರುಪರ್ವತತುಲ್ಯೋಽಪಿ ರಾಶಿಃ ಪಾಪಸ್ಯ ಕರ್ಮಣಃ ।
ಚಂಡಿಕಾಂ ವೈದ್ಯಮಾಸಾದ್ಯ ನಶ್ಯತೇ ದುಷ್ಟರೋಗವತ್ ॥ ೨೩ ॥

ದುರ್ಗಾರ್ಚನೇ ರತೋ ನಿತ್ಯಂ ಮಹಾಪಾತಕಸಂಭವೈಃ ।
ದೋಷೈರ್ನ ಲಿಪ್ಯತೇ ವೀರ ಪದ್ಮಪತ್ರಮಿವಾಂಭಸಾ । ॥ ೨೪ ॥

ಭಿತ್ವಾ ಭಿತ್ವಾ ಚ ಭೂತಾನಿ ಹತ್ವಾ ಸರ್ವಮಿದಂ ಜಗತ್ ।
ಪ್ರಣಮ್ಯ ಶಿರಸಾ ದೇವೀಂ ನ ಪಾಪೈರ್ಭುವಿ ಲಿಪ್ಯತೇ ॥ ೨೫ ॥

ಸರ್ವಾವಸ್ಥಾಂ ಗತೋ ವಾಽಪಿ ಯುಕ್ತೋ ವಾ ಸರ್ವಪಾತಕೈಃ ।
ದುರ್ಗಾಂ ದೃಷ್ಟ್ವಾ ನರಃ ಸೋಽಪಿ ಪ್ರಯಾತಿ ಪರಮಂ ಪದಂ ॥ ೨೬ ॥

ಸ್ವಪಂಸ್ತಿಷ್ಠನ್ವ್ರಜನ್ಮಾರ್ಗೇ ಪ್ರಲಪನ್ಭೋಜನೇ ರತಃ ।
ಸ್ಮರತೇ ಸತತಂ ದುರ್ಗಾಂ ಸ ಚ ಮುಚ್ಯೇತ ಬಂಧನಾತ್ ॥ ೨೭ ॥

---

೨೩. ಪಾಪ ರಾಶಿಯು ಮೇರು ಪರ್ವತದಷ್ಟು ಇದ್ದರೂ ಚಂಡಿಕೆ ಎಂಬ ವೈದ್ಯನನ್ನು ಹೊಂದಿದರೆ ದುಷ್ಟ ರೋಗದಂತೆ ನಾಶವಾಗುತ್ತದೆ.

೨೪. ದುರ್ಗಾರ್ಚನೆ ಮಾಡುವವನಿಗೆ ಮಹಾ ಪಾತಕದಿಂದ ಬರುವ ಪಾಪಗಳು ಕಮಲದ ಎಲೆಯ ಮೇಲೆ ನೀರು ಬಿದ್ದರೆ ಅಂಟದಿರುವಂತೆ ಅಂಟುವುದಿಲ್ಲ.

೨೫. ಪ್ರಾಣಿಗಳನ್ನು ಕಡಿದು ಚೂರು ಮಾಡಿದರೂ, ಜಗತ್ತನ್ನೇ ಕೊಂದರೂ ಕೂಡ ದೇವಿಯನ್ನು ನಮಸ್ಕರಿಸಿದರೆ ಆ ಪಾಪವು ಬರುವುದಿಲ್ಲ

೨೬. ಮನುಷ್ಯನು ಎಲ್ಲಾ ಪಾಪಗಳನ್ನೂ ಮಾಡಿ ಯಾವ ಅವಸ್ಥೆಯಲ್ಲಿದ್ದರೂ, ದುರ್ಗೆಯ ದರ್ಶನವನ್ನು ಮಾಡಿದರೆ ಉತ್ತಮ ಗತಿಯನ್ನು ಹೊಂದುವನು.

೨೭, ಮಲಗಿರಲಿ, ನಿಂತಿರಲಿ, ಕೂತಿರಲಿ, ಮಾತಾಡುತ್ತಿರಲಿ, ಊಟಮಾಡುತ್ತಿರಲಿ, ದುರ್ಗೆಯನ್ನು ಯಾವಾಗಲೂ ಸ್ಮರಿಸುತ್ತಿದ್ದರೆ ಅವನು ಬಂಧನದಿಂದ ಪಾರಾಗುತ್ತಾನೆ.

ತದ್ದೇಶೇ ನ ತು ದುರ್ಭಿಕ್ಷಂ ನ ಚ ದುಃಖಂ ಪ್ರವರ್ತತೇ ।
ನ ಕಶ್ಚಿನ್ಮ್ರಿಯತೇ ರಾಜನ್ಪೂಜ್ಯತೇ ಯತ್ರ ಚಂಡಿಕಾ ॥ ೨೮ ॥

ಯೋ ದುರ್ಗಾಂ ಪೂಜಯೇನ್ನಿತ್ಯಂ ಶ್ವಪಚೋ ವಾ ಜಿತೇಂದ್ರಿಯಃ ।
ಭಾವನೇ ಚ ಸಮಾಯುಕ್ತಂ ಸೋಽಪಿ ಯಾತಿ ಪರಾಂ ಗತಿಂ ॥ ೨೯ ॥

ಪೂಜಯಿತ್ವಾ ತು ತಾಂ ಭಕ್ತ್ಯಾ ಶ್ರದ್ಧಯಾ ಸರ್ವಮಂಗಲಾಂ ।
ಪ್ರಯಾತಿ ಪರಮಂ ಸ್ಥಾನಂ ಯತ್ರ ಸಾ ಸರ್ವಮಂಗಲಾ ॥ ೩೦ ॥

ಘೃತಾಭಿಷೇಕಂ ಯಃ ಕುರ್ಯಾದಹೋರಾತ್ರಂ ನರಾಧಿಪ ।
ಸೂಕ್ಷ್ಮಧಾರೇಣ ತಾಮ್ರೇಣ ಭಗವತ್ಯಾ ವಿಚಕ್ಷಣಃ ॥ ೩೧ ॥

ಮಾಸಿ ಚಾಽಶ್ವಯುಜೇ ವೀರ ಸರ್ವಪಾಪೈಃ ಪ್ರಮುಚ್ಯತೇ ।
ಕಾರ್ತಿಕೇ ಪೌರ್ಣಮಾಸ್ಯಾಂ ಯಃ ಸೋಮವಾರೇಽರ್ಚಯೇದುಮಾಂ ೩೨

ಸೋಽಗ್ನಿಷ್ಟೋಮಫಲಂ ವಿಂದೇತ್ಸೂರ್ಯಲೋಕೇ ಚ ಗಚ್ಛತಿ ।
ಆಷಾಢೇ ಪೌರ್ಣಮಾಸ್ಯಾಂ ತು ಯೋಽರ್ಚಯೇದಂಬಿಕಾಂ ನರಃ ॥ ೩೩ ॥

---

೨೮. ಚಂಡಿಕೆಯನ್ನು ಪೂಜಿಸುವ ದೇಶದಲ್ಲಿ ದುರ್ಭಿಕ್ಷವಿರುವುದಿಲ್ಲ ದುಃಖ ವಿರುವುದಿಲ್ಲ. ಅಕಾಲಮರಣವಿರುವುದಿಲ್ಲ.

೨೯. ಚಂಡಾಲನೇ ಆಗಲಿ ಜಿತೇಂದ್ರಿಯನಾಗಿ ಏಕಾಗ್ರತೆಯಿಂದ ಚಂಡಿಕೆಯನ್ನು ಪೂಜಿಸಿದರೆ ಅವನು ಉತ್ತಮ ಗತಿಯನ್ನು ಹೊಂದುತ್ತಾನೆ.

೩೦. ಮನುಷ್ಯನು ಭಕ್ತಿಯಿಂದಲೂ, ಶ್ರದ್ಧೆಯಿಂದಲೂ, ಸರ್ವಮಂಗಳೆಯಾದ ದುರ್ಗೆಯನ್ನು ಪೂಜಿಸಿದರೆ ಸರ್ವಮಂಗಳೆಯಿರುವ ಸ್ಥಾನವನ್ನೇ ಹೊಂದುತ್ತಾನೆ.

೩೧. ಆಶ್ವಯುಜ ಮಾಸದಲ್ಲಿ ಮನುಷ್ಯನು ಹಗಲೂ, ರಾತ್ರಿಯೂ ಸಣ್ಣ ತೂತುಳ್ಳ ತಾಮ್ರದ ಸೋಮ ಸೂತ್ರವನ್ನು ಕಟ್ಟಿ ದುರ್ಗೆಗೆ ಪೂಜೆ ಮಾಡಿದರೆ ಅವನ ಪಾಪವೆಲ್ಲವೂ ಹೋಗುತ್ತದೆ. ಕಾರ್ತಿಕ ಮಾಸದಲ್ಲಿ ಹುಣ್ಣಿಮೆಯು ಸೋಮವಾರ ಬಂದಾಗ ದುರ್ಗೆಯನ್ನು ಪೂಜಿಸಿದರೆ ಅವನು ಅಗ್ನಿಷ್ಟೋಮ ಯಾಗದ ಫಲವನ್ನು ಹೊಂದುತ್ತಾನೆ. ಸೂರ್ಯ ಲೋಕವನ್ನೂ ಹೊಂದುತ್ತಾನೆ. ಆಷಾಢ ಮಾಸದ ಹುಣ್ಣಿಮೆಯಲ್ಲಿ ದುರ್ಗೆಯನ್ನು ಉಪವಾಸವಿದ್ದು ಪೂಜಿಸಿದರೆ ಅವನಿಗೆ ಉತ್ತಮ

ಸೋಽಪವಾಸೋ ಮಹಾಭಾಗ ಸ ಯಾತಿ ಪರಮಾಂ ಗತಿಂ ।
ಪೌರ್ಣಮಾಸ್ಯಾಂ ತು ಯೋ ಮಾಘೇ ಪೂಜಯೇದ್ವಿಧಿವಚ್ಛಿವಾಂ ॥ ೩೪ ॥

ಸೋಽಶ್ವಮೇಧಮವಾಪ್ನೋತಿ ವಿಷ್ಣುಲೋಕೇ ಮಹೀಯತೇ ।
ಅಯನೇ ದಕ್ಷಿಣೇ ಯಸ್ತು ಪೂಜಯೇದಂಬಿಕಾಂ ನೃಪ ॥ ೩೫ ॥

ಸಕೃದ್ಗಂಧೋದಕೈಃ ಪುಷ್ಪೈರ್ಗಂಧರ್ವಸದನೇ ವಸೇತ್ ।
ಪಂಚಗವ್ಯಂ ತತಃ ಕ್ಷಿಪ್ತ್ವಾ ಪಂಚಚೂಡಾಚಲಂ ವ್ರಜೇತ್ ॥ ೩೬ ॥

ಆಪಃ ಕ್ಷೀರಂ ಕುಶಾಗ್ರಾಣಿ ತಂಡುಲಾ ಹವಿರಕ್ಷತಾಃ ।
ಸಹಾ ಸಿದ್ಧಾರ್ಥಕಾ ದೂರ್ವಾಃ ಕುಂಕುಮಂ ರೋಚನಾ ಮಧು ॥ ೩೭ ॥

ಅರ್ಘೋಽಯಂ ಕುರುಶಾರ್ದೂಲ ದ್ವಾದಶಾಂಗ ಉದಾಹೃತಃ ।
ಅನೇನ ಪೂಜಯೇದ್ಯಸ್ತು ಸ ಯಾತಿ ಪರಮಂ ಪದಂ ॥ ೩೮ ॥

ದಾರವೇಣಾರ್ಘ್ಯಪಾತ್ರೇಣ ದತ್ವಾರ್ಘ್ಯಂ ವಿಧಿವನ್ನೃಪ ।
ದೇವ್ಯೈ ತದಾ ಮಹಾರಾಜ ಅಗ್ನಿಷ್ಟೋಮಫಲಂ ಲಭೇತ್ ॥ ೩೯ ॥

---

ಗತಿಯು ಬರುತ್ತದೆ. ಮಾಘಮಾಸದ ಹುಣ್ಣಿಮೆಯ ದಿನ ಶಾಸ್ತ್ರದಲ್ಲಿ ಹೇಳಿರುವಂತೆ ದುರ್ಗೆಯನ್ನು ಪೂಜಿಸಿದರೆ ಅವನಿಗೆ ಅಶ್ವಮೇಧದ ಫಲವು ಬರುತ್ತದೆ. ಅಲ್ಲದೆ ವಿಷ್ಣುಲೋಕವನ್ನೂ ಹೊಂದುತ್ತಾನೆ. ದಕ್ಷಿಣಾಯನ ಪುಣ್ಯಕಾಲದಲ್ಲಿ ಅಂಬಿಕೆಯನ್ನು ಗಂಧಪುಷ್ಪಾದಿಗಳಿಂದ ಪೂಜಿಸಿದರೆ ಗಂಧರ್ವ ಲೋಕಕ್ಕೆ ಹೋಗುತ್ತಾನೆ. ಪಂಚಗವ್ಯ (ಹಾಲು, ಮೊಸರು, ತುಪ್ಪ, ಸಗಣಿ, ಗಂಜಲ) ಗಳಿಂದ ಪೂಜಿಸಿದರೆ ಪಂಚ ಚೂಡಾಚಲವೆಂಬ ಸ್ವರ್ಗವಿಶೇಷವನ್ನು ಹೊಂದುವನು.

೩೭-೩೮. ನೀರು, ಹಾಲು, ದರ್ಭೆಯ ಅಗ್ರ, ಅಕ್ಕಿ, ಹವಿಸ್ಸು, ಅಕ್ಷತೆ, ಸಹದೇವಿ, ಬಿಳಿಯ ಸಾಸುವೆ, ಗರಿಕೆ, ಕುಂಕುಮಕೇಸರಿ, ಗೋರೋಚನ, ಜೇನು ತುಪ್ಪ, ಈ ಹನ್ನೆರಡೂ ಅರ್ಘ್ಯದ ಅವಯವಗಳು. ಇವುಗಳಿಂದ ದುರ್ಗೆಯನ್ನು ಪೂಜಿಸಿದರೆ ಅವನಿಗೆ ಉತ್ತಮ ಗತಿಯು ಬರುತ್ತದೆ.

೩೯ ಅರ್ಘ್ಯವನ್ನು ವಿಧಿವತ್ತಾಗಿ ಮರದ ಪಾತ್ರೆಯಲ್ಲಿ ಆ ದೇವಿಗೆ ಕೊಟ್ಟರೆ ಅಗ್ನಿಷ್ಟೋಮದ ಫಲವು ಬರುತ್ತದೆ.

ಅಬ್ದಮೇಕಶತಂ ದಿವಂ ಶಕ್ರಲೋಕೇ ಮಹೀಯತೇ ।
ಗಂಧಾನುಲೇಪನಂ ಕೃತ್ವಾ ಜ್ಯೋತಿಷ್ಟೋಮಫಲಂ ಲಭೇತ್ ॥ ೪೦ ॥

ಚಂದ್ರನೇನಾವಲಿಪ್ಯಾಯಾರ್ಮಗ್ನಿಷ್ಟೋಮಫಲಂ ಲಭೇತ್ ।
ವಿಲಿಪ್ಯ ಕೃಷ್ಣಾಗರುಣಾ ವಾಜಪೇಯಫಲಂ ಲಭೇತ್ ॥ ೪೧ ॥

ಕುಂಕುಮೇನ ವಿಲಿಪ್ಯಾರ್ಯಾಂ ಗೋಸಹಸ್ರಫಲಂ ಲಭೇತ್ ।
ಚಂದನಾಗರುಕರ್ಪೂರೈಃ ಸೂಕ್ಷ್ಮಪತ್ರೈಃ ಸಕುಂಕುಮೈಃ ॥ ೪೨ ॥

ದುರ್ಗಾಮಾಲಿಪ್ಯ ವಿಧಿವತ್ಕಲ್ಪಕೋಟಿಂ ವಸೇದ್ದಿವಿ ।
ಅಗ್ನಿಹೋತ್ರಪರೇ ವಿಪ್ರೇ ವೇದವೇದಾಂಗಪಾರಗೇ ॥ ೪೩ ॥

ಸುವರ್ಣಾನಾಂ ಸುವರ್ಣಾನಾಂ ಶತೇ ದತ್ತೇ ತು ಯತ್ಫಲಂ
ತತ್ಫಲಂ ಲಭತೇ ರಾಜನ್ಪೂಜಯಿತ್ವಾ ತು ಚಾಂಬಿಕಾಂ ॥ ೪೪ ॥

ಮಾಲಯಾ ಬಿಲ್ವಪತ್ರಾಣಾಂ ನವಮ್ಯಾಂ ಗುಗ್ಗುಲೇನ ಚ ।
ಮಾಲಾದ್ವಯೇನ ಸಂಪೂಜ್ಯ ದುರ್ಗಾಂ ದೇವೀಂ ನರಾಧಿಪಃ ॥ ೪೫ ॥

---

೪೦ ಈ ರೀತಿ ಅರ್ಘ್ಯವನ್ನು ಕೊಟ್ಟರೆ ನೂರು ದಿವ್ಯ ವರ್ಷಗಳವರೆಗೆ ಇಂದ್ರ ಲೋಕದಲ್ಲಿ ಸುಖಿಸುವನು. ಗಂಧವನ್ನು ದುರ್ಗೆಗೆ ಪೂಜಿಸಿದರೆ ಜ್ಯೋತಿಷ್ಟೋಮ ಫಲವನ್ನು ಹೊಂದುವನು.

೪೧-೪೪. ದುರ್ಗೆಗೆ ಚಂದನ ಹಚ್ಚಿದರೆ ಅಗ್ನಿಷ್ಟೋಮ ಫಲವು ಬರುತ್ತದೆ. ಕೃಷ್ಣಾಗರು (ಕಪ್ಪು ಅಗುರು) ವಿನಿಂದ ಪೂಜಿಸಿದರೆ ವಾಜಪೇಯದ ಫಲವು ಬರುತ್ತದೆ. ಕುಂಕುಮಕೇಸರಿಯನ್ನು ಬಳಿದರೆ ಸಾವಿರ ಗೋದಾನ ಮಾಡಿದ ಫಲವು ಬರುತ್ತದೆ. ಚಂದಿರ, ಅಗುರು, ಪಚ್ಚಕರ್ಪೂರ, ಕುಂಕುಮಕೇಸರಿಗಳನ್ನು ಒಟ್ಟಿಗೆ ಅರೆದು ದುರ್ಗೆಯನ್ನು ಪೂಜಿಸಿದರೆ ಕೋಟಿ ಕಲ್ಪಗಳವರೆಗೂ ಸ್ವರ್ಗದಲ್ಲಿ ಸುಖಿಸುತ್ತಾನೆ. ವೇದ ವೇದಾಂಗಗಳನ್ನು ಅಭ್ಯಾಸಮಾಡಿ ಅಗ್ನಿಹೋತ್ರವನ್ನು ಇಟ್ಟುಕೊಂಡಿರುವ ಬ್ರಾಹ್ಮಣನಿಗೆ ಉತ್ತಮವಾಗಿರುವ ನೂರು ಚಿನ್ನದ ನಾಣ್ಯಗಳನ್ನು ಕೊಟ್ಟರೆ ಬರುವ ಫಲವು ಅಂಬಿಕೆಯನ್ನು ಪೂಜಿಸಿದರೆ ಬರುತ್ತದೆ.

೪೫-೫೧. ಬಿಲ್ವಪತ್ರೆಯ ಮಾಲೆಯನ್ನು ಕಟ್ಟಿ ಅವೆರಡರಿಂದಲೂ ಗುಗ್ಗುಳ ದಿಂದಲೂ, ದುರ್ಗೆಯನ್ನು ನವಮಿಯ ದಿನ ಪೂಜಿಸಿದರೂ, ಅದಾಗದಿದ್ದರೆ

ಬಿಲ್ವವೃಕ್ಷಸ್ಯ ಪತ್ರೈರ್ವಾ ರಾಜಸೂಯಫಲಂ ಲಭೇತ್ ।
ಕರವೀರಸ್ರಜೋಭಿಶ್ಚ ಪೂಜಯೇದ್ಯಸ್ತು ಚಂಡಿಕಾಂ ॥ ೪೬ ॥

ವಾಜಪೇಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ।
ದ್ರೋಣಪುಷ್ಪಸ್ರಜೋಭಿಸ್ತು ಪೂಜಯೇದ್ಯಸ್ತು ಚಂಡಿಕಾಂ ॥ ೪೭ ॥

ರಾಜಸೂಯಫಲಂ ಪ್ರಾಪ್ಯ ಸ್ವರ್ಗಲೋಕೇ ಮಹೀಯತೇ ।
ಪೂಜಯಿತ್ವಾ ತು ರಾಜೇಂದ್ರ ಶ್ರದ್ಧಯಾ ವಿಧಿಪೂರ್ವಕಂ ॥ ೪೮ ॥

ವನ್ಯಪುಷ್ಪಸ್ರಜೋಭಿಸ್ತು ಪಿತೃಲೋಕೇ ಮಹೀಯತೇ ।
ಶಮೀಪುಷ್ಪಸ್ರಜೋಭಿಸ್ತು ಆರ್ಯಾಂ ಸಂಪೂಜ್ಯ ಭಕ್ತಿತಃ ॥ ೪೯ ॥

ಗೋಸಹಸ್ರಫಲಂ ಲಬ್ಧ್ವಾ ವಿಷ್ಣುಲೋಕೇ ಮಹೀಯತೇ ।
ಸರ್ವೇಷಾಮೇವ ಪುಷ್ಪಾಣಾಂ ಪ್ರವರಂ ನೀಲಮುತ್ಪಲಂ ॥ ೫೦ ॥

ನಿಲೋತ್ಪಲಸಹಸ್ರೇಣ ಯಸ್ತು ಮಾಲಾಂ ಪ್ರಯಚ್ಛತಿ ।
ದುರ್ಗಾಯೈ ವಿಧಿವದ್ವೀರ ತಸ್ಯ ಪುಣ್ಯಫಲಂ ಶೃಣು ॥ ೫೧ ॥

ವರ್ಷಕೋಟಿಸಹಸ್ರಾಣಿ ವರ್ಷಕೋಟಿಶತಾನಿ ಚ ।
ದಿವ್ಯಮೂರ್ತಿಧರೋ ಭೂತ್ವಾ ರುದ್ರಲೋಕೇ ಮಹೀಯತೇ ॥ ೫೨ ॥

---

ಬಿಲ್ವಪತ್ರೆಯ ಬಿಡಿ ದಳಗಳಿಂದಾಗಲಿ, ಪೂಜಿಸಿದರೂ ರಾಜಸೂಯ ಯಾಗದ ಫಲವು ಬರುತ್ತದೆ ದುರ್ಗೆಯನ್ನು ಕಣಿಗಲೆ ಹೂಮಾಲೆಯಿಂದ ಪೂಜಿಸಿದರೆ ವಾಜಪೇಯ ಯಾಗದ ಫಲವನ್ನೂ, ತುಂಬೆಯ ಹೂವಿನ ಮಾಲೆಯಿಂದ ಪೂಜಿಸಿದರೆ ರಾಜಸೂಯ ಯಾಗದ ಫಲವನ್ನೂ ಮನುಜನು ಹೊಂದುತ್ತಾನೆ. ಕಾಡಿನ ಹೂಗಳಿಂದ ಶಾಸ್ತ್ರದಲ್ಲಿ ಹೇಳಿರುವಂತೆಯೂ, ಶ್ರದ್ಧೆಯಿಂದಲೂ ಪೂಜಿಸಿದರೆ ಪಿತೃಲೋಕದಲ್ಲಿ ಸುಖಿಸುತ್ತಾನೆ. ಬನ್ನಿ ಹೂವನ್ನು ಮಾಲೆಕಟ್ಟಿ ಆ ದುರ್ಗೆಯನ್ನು ಪೂಜಿಸಿದರೆ ಸಾವಿರ ಗೋದಾನವನ್ನು ಮಾಡಿದ ಫಲವನ್ನು ಹೊಂದಿ ವೈಕುಂಠದಲ್ಲಿ ಸುಖಿಸುತ್ತಾನೆ ಹೂಗಳೊಳಗೆಲ್ಲಾ ನೀಲೋತ್ಪಲವು (ಕನ್ನೈದಿಲೆಯು) ಶ್ರೇಷ್ಠವಾದುದು ಆ ಸಾವಿರ ನೀಲೋತ್ಪಲಗಳನ್ನು ಮಾಲೆ ಕಟ್ಟಿ ದುರ್ಗೆಗೆ ಶಾಸ್ತ್ರ ವಿಧಿಯಿಂದ ಪೂಜೆಮಾಡಿದರೆ ಅವನಿಗೆ ಬರುವ ಪುಣ್ಯ ಫಲವನ್ನು ಕೇಳು.

೫೨ ಇವನು ದಿವ್ಯವಾದ ದೇಹವನ್ನು ಹೊಂದಿ ಸಾವಿರದ ನೂರುಕೋಟಿ ವರ್ಷಗಳವರೆಗೂ ರುದ್ರಲೋಕದಲ್ಲಿ ಸುಖಿಸುತ್ತಾನೆ

ಸರ್ವಾಸಾಂ ಪುಷ್ಪಜಾತೀನಾಂ ಯತ್ಫಲಂ ಪರಿಕೀರ್ತಿತಂ ।
ತಸ್ಮಾಚ್ಛತಗುಣಂ ಪ್ರಾಪ್ಯ ದುರ್ಗಾಲೋಕೇ ಮಹೀಯತೇ ॥ ೫೩ ॥

ನೀಲೋತ್ಪಲಸಹಸ್ರೈಸ್ತು ಪೂಜಯೇದ್ಯಸ್ತು ಚಂಡಿಕಾಂ ।
ವಾಜಪೇಯಫಲಂ ಪ್ರಾಪ್ಯ ರುದ್ರಲೋಕೇ ಮಹೀಯತೇ ॥ ೫೪ ॥

ಅಲಾಭೇ ಪುಷ್ಪಜಾತೀನಾಂ ಪತ್ರಾಣ್ಯಪಿ ನಿವೇದಯೇತ್ ।
ಪತ್ರಾಣಾಮಪ್ಯಲಾಭೇ ತು ಓಷಧೀಸ್ತು ನಿವೇದಯೇತ್ ॥ ೫೫ ॥

ಓಷಧೀನಾಮಲಾಭೇ ತು ಭಕ್ತ್ಯಾ ಭಗವತೀ ಜಿತಾ ।
ಪ್ರತ್ಯೇಕಮುಕ್ತಪುಷ್ಪೇಷು ಕುಶೇಷ್ವಪಿ ಫಲಂ ನೃಪ ॥ ೫೬ ॥

ಆಂಗೀರಸೇಷು ತೇಷ್ವೇಷು ದ್ವಿಗುಣಂ ಕಾಂಚನಸ್ಯ ತು ।
ಮಲ್ಲಿಕಾಮುತ್ಪಲಂ ಪತ್ರಂ ಶಮೀಪುನ್ನಾಗ ಚಂಪಕಂ ॥ ೫೭ ॥

---

೫೩. ಈ ಉತ್ಪಲದಿಂದ ಪೂಜಿಸಿದರೆ ಎಲ್ಲ ಪುಷ್ಪಜಾತಿಗಳಿಗೂ ಯಾವ ಯಾವ ಫಲವನ್ನು ಹೇಳಿದ್ದೇನೆಯೋ ಅವೆಲ್ಲಕ್ಕಿಂತಲೂ ನೂರರಷ್ಟು ಹೆಚ್ಚು ಫಲವನ್ನು ಹೊಂದಿ ದುರ್ಗೆಯ ಲೋಕದಲ್ಲಿ ಸುಖಿಸುವನು.

೫೪. ಸಾವಿರ ನಿಲೋತ್ಪಲಗಳಿಂದ ಅಂಬಿಕೆಯನ್ನು ಪೂಜಿಸಿದರೆ ವಾಜಪೇಯ ಯಾಗದ ಫಲವನ್ನು ಹೊಂದಿ ರುದ್ರ ಲೋಕದಲ್ಲಿ ಸುಖಿಸುತ್ತಾನೆ.

೫೫. ಹೂವುಗಳು ಸಿಕ್ಕದಿದ್ದರೆ ಪತ್ರೆಗಳನ್ನು ಪೂಜೆ ಮಾಡಬಹುದು. ಆ ಪತ್ರೆಗಳೂ ಸಿಕ್ಕದಿದ್ದರೆ ಓಷಧಿಗಳು ಎಂದರೆ ಹುಟ್ಟಿದ ಮೊದಲು ಹೂ ಕಾಯಿಗಳನ್ನು ಬಿಟ್ಟೊಡನೆಯೇ ನಾಶವಾಗುವ ಬಾಳೆ, ಭತ್ತಗಳಂತಹ ಸಸ್ಯಗಳು ಅವುಗಳಿಂದ ಪೂಜಿಸಬಹುದು.

೫೬. ಓಷಧಿಗಳು ಸಿಕ್ಕದಿದ್ದರೆ ಭಕ್ತಿಯಿಂದ ಧ್ಯಾನಿಸಿದರೆ ಆ ಭಗವತಿಯಾದ ದುರ್ಗೆಯು ತುಷ್ಟಳಾಗುತ್ತಾಳೆ ಬೇರೆ ಬೇರೆಯಾಗಿ ಹೇಳಿದ ಹೂಗಳಲ್ಲಿ ದರ್ಭೆಯನ್ನು ಸೇರಿಸಬೇಕು. ಅದನ್ನು ಪೂಜೆ ಮಾಡಿದರೂ ಫಲವುಂಟು

೫೭–೫೮. ದರ್ಭೆಗಳಲ್ಲಿ ಕುಶದ ದರ್ಭೆಯೆಂದೂ, ಆಂಗಿರಸ ದರ್ಭೆಯೆಂದೂ ಎರಡು ಬಗೆ. ಅವುಗಳಲ್ಲಿ ಆಂಗಿರಸ ಶ್ರೇಷ್ಠವಾದುದು. ಆ ದರ್ಭೆಗಿಂತಲೂ ಚಿನ್ನ ವಲ್ಲಿ ಪೂಜಿಸಿದರೆ ಎರಡರಷ್ಟು ಪುಣ್ಯವು ಬರುತ್ತದೆ. ಮಲ್ಲಿಗೆ, ಕನ್ನೈದಿಲೆ, ಬನ್ನಿ,

ಕರ್ಣಿಕಾರಮಶೋಕಂ ಚ ದ್ರೋಣಪುಷ್ಪಂ ವಿಶೇಷತಃ ।
ಚಂದನಂ ಚ ಜಪಾಪುಷ್ಪಂ ನಾಗಕೇಸರಮೇವ ಚ ॥ ೫೮ ॥

ಯಃ ಪ್ರಯಚ್ಛತಿ ಪುಣ್ಯಾತ್ಮಾ ಪುಷ್ಪಾಣ್ಯೇತಾನಿ ಭಾವತಃ ।
ಚಂಡಿಕಾಯೈ ನರಶ್ರೇಷ್ಠ ಸ ಚ ಪ್ರೋಕ್ತಫಲಂ ಲಭೇತ್ ॥ ೫೯ ॥

ಸಂಪ್ರಾಪ್ಯ ಕಾಲಾದ್ರಾಜತ್ವಂ ಚಂಡಿಕಾನುಚರೋ ಭವೇತ್ ।
ಅಥ ಪುಷ್ಪವಿಶೇಷಾಣಾಂ ಫಲಂ ವಕ್ಷ್ಯೇಽಂಬಿಕಾರ್ಚನೇ ॥ ೬೦ ॥

ಋತುಕಾಲೋದ್ಭವೈಃ ಪುಷ್ಪೈರ್ಮಲ್ಲಿಕಾಜಾತಿಕುಂಕುಮೈಃ ।
ಸಿತರಕ್ತೈಸ್ತಥಾ ಪುಷ್ಪೈರ್ನೀಲಪುಷ್ಪೈಸ್ತು ಪಾಂಡುರೈಃ ॥ ೬೧ ॥

ಕಿಂಶುಕೈಃ ಕರವೀರೈಶ್ಚ ವಿಕಂಕಸುಚಂಪಕೈಃ ।
ಬಕುಲೈಶ್ಚೈವ ಮಂದಾರೈಃ ಕುಂದಪುಷ್ಪೈಃ ಕುರುಂಟಕೈಃ ॥ ೬೨ ॥

ಕರ್ಣಿಕಾರಾರ್ಕಪುಷ್ಪೈಶ್ಚ ನಿಂಬಜೈಶ್ಚಾಪರಾಜಿತೈಃ ।
ಧತ್ತೂರಕಾತಿಮುಕ್ತೈಶ್ಚ ಬ್ರಹ್ಮಕಾಗಸ್ತಿಸಂಭವೈಃ ॥ ೬೩ ॥

---

ಸುರಹೊನ್ನೆ, ಸಂಪಿಗೆ, ಕರ್ಣಿಕಾರ, ಅಶೋಕ, ಇವು ಉತ್ತಮವುವು. ಇವಕ್ಕಿಂತ ತುಂಬೆ ಹೂ ಶ್ರೇಷ್ಠವು. ಚಂದನ, ದಾಸವಾಳ, ನಾಗಕೇಸರ ಇವೂ ಉತ್ತಮವು.

೫೯. ಈ ಮೇಲೆ ಹೇಳಿದ ಹೂಗಳನ್ನು ಯಾವ ಮಹಾನುಭಾವನು ಭಕ್ತಿಯಿಂದ ಚಂಡಿಕೆಗೆ ಪೂಜೆ ಮಾಡುತ್ತಾನೋ ಅವನಿಗೆ ಆಯಾಯ ಪೂಜೆಯ ಫಲವು ಬರುತ್ತದೆ. ಅಲ್ಲದೆ ಮುಂದೆ ಹೇಳುವ ಫಲವೂ ಬರುತ್ತದೆ

೬೦-೬೬. ಕ್ರಮೇಣ ರಾಜನಾಗಿ ಚಂಡಿಕೆಯ ಭಕ್ತನಾಗುವನು. ಯಾವ ಯಾವ ಹೂಗಳನ್ನು ಪೂಜೆಮಾಡಿದರೆ ಯಾವ ಫಲವು ಬರುತ್ತದೆ ? ಯಾವ ಋತುವಿನಲ್ಲಿ ಹುಟ್ಟಿದ ಹೂಗಳನ್ನು ಋತುವಿಗನುಸಾರವಾಗಿ ಪೂಜೆ ಮಾಡಿದರೆ ಫಲವೇನು? ಎಂಬುದನ್ನು ಹೇಳುತ್ತೇನೆ. ಹೂಗಳು ಬಿಳುಪು, ಕೆಂಪು, ಕೆಂಪುಬಿಳುಪು, ನೀಲ, ನೀಲಬಿಳುಪು, ಎಂದು ಬಗೆಬಗೆಯಾಗಿವೆ. ಮುತ್ತುಗ, ಕಣಿಗಲೆ, ವಿಕಂಕತ, ಸಂಪಿಗೆ, ಪಗಡೆ, ಮಂದಾರ, ಮಲ್ಲಿಗೆ, ಕೆಂದಲಿಗೆ, ಕರ್ಣಿಕಾರ, ಎಕ್ಕ, ಬೇವು, ವಿಷ್ಣುಕ್ರಾಂತಿ, ಉಮ್ಮತ್ತ, ಅತಿಮುಕ್ತೆ, ಬ್ರಹ್ಮಕೆ, ಅಗಸೆ, ದವನ, ಲಕ್ಕಿ, ಸುರಭಿ,

ದಮನ್ಯೈಃ ಸಿಂಧುವಾರೈಶ್ಚ ಸುರಭೀಮಾರ್ಕವೈಸ್ತಥಾ ।
ಲತಾಭಿರ್ಬ್ರಹ್ಮವೃಕ್ಷೈಶ್ಚ ದೂರ್ವಾಂಕುರೈಶ್ಚ ಕೋಮಲೈಃ ॥ ೬೪ ॥

ಮಂಜರೀಭಿಃ ಕುಶಾನಾಂ ಚ ಬಿಲ್ವಪತ್ರೈಃ ಸುಶೋಭನೈಃ ।
ಭಕ್ತ್ಯಾ ಯುಕ್ತಸ್ತಥಾನ್ಯೈರ್ಜಲಜೈಃ ಸ್ಥಲಸಂಭವೈಃ ॥ ೬೫ ॥

ಪುತ್ರೈಃ ಪುಷ್ಪೈರ್ಯಥಾಲಾಭಂ ಸರ್ವೌಷಧಿಮಯೈಃ ಶುಭೈಃ ।
ವನ್ಯಾನಾಂ ಸರ್ವಪತ್ರೈಶ್ಚ ಪುಷ್ಪೈಶ್ಚೈವ ಪ್ರಪೂಜಯೇತ್ ॥ ೬೬ ॥

ಪದ್ಮಾಕೃತಿಂ ಚ ಯಃ ಕುರ್ಯಾನ್ಮಂಡಲಂ ಚಂಡಿಕಾಗೃಹೇ ।
ಸ ಬ್ರಹ್ಮಣಃ ಪುರೇ ಗತ್ವಾ ಮೋದತೇ ಬ್ರಹ್ಮಣಾ ಸಹ ॥ ೬೭ ॥

ಶಂಖವರ್ಣಂ ತು ಯಃ ಕುರ್ಯಾನ್ಮಂಡಲಂ ವಿಧಿನ್ನೃಪ ।
ಸ ದಿವ್ಯಂ ಯಾನಮಾರುಹ್ಯ ಚಂದ್ರಲೋಕಮವಾಪ್ನುಯಾತ್ ॥ ೬೮ ॥

ನಾನಾವರ್ಣೇನ ಚೂರ್ಣೇನ ಕೃತ್ವಾ ಮಂಡಲಮುತ್ತಮಂ ॥
ಗತ್ವಾ ಮಾಹೇಶ್ವರೀಲೋಕಂ ಮೋದತೇ ಶಾಶ್ವತೀಃ ಸಮಾಃ ॥ ೬೯ ॥

---

ಗರುಗ, ಇವುಗಳ ಹೂಗಳಿಂದಲೂ, ಅರಳಿ ಚಿಗುರುಗಳಿಂದಲೂ, ಗರುಕೆಯ ಚಿಗುರು ಗಳಿಂದಲೂ, ದರ್ಭೆಗಳ ಮೇಲೆ ಬಿಡುವ ಹೂ ಜೊಂಪೆಯಿಂದಲೂ, ಒಳ್ಳೆಯ ಬಿಲ್ವಪತ್ರೆ ಗಳಿಂದಲೂ, ಇನ್ನೂ ಅನೇಕವಾದ ನೀರು ನೆಲಗಳಲ್ಲಿ ಹುಟ್ಟಿರುವ ಹೂಗಳಿಂದಲೂ, ಸಾಧಾರಣವಾಗಿ ಸಿಕ್ಕುವ ಹೂವು ಎಲೆಗಳಿಂದಲೂ ಪೂಜೆ ಮಾಡಬೇಕು.

೬೭. ಚಂಡಿಕೆಯು ದೇವಸ್ಥಾನದಲ್ಲಿ ಪದ್ಮವನ್ನು ಬರೆದರೆ ಅವನು ಬ್ರಹ್ಮ ಲೋಕದಲ್ಲಿ ಬ್ರಹ್ಮನೊಡನೆ ಸುಖಿಸುತ್ತಾನೆ.

೬೮. ಶಂಖ ವರ್ಣದ ಮಂಡಲವನ್ನು ಶಾಸ್ತ್ರೋಕ್ತವಾಗಿ ಮಾಡಿದರೆ ಅವನು ಉತ್ತಮವಾದ ವಿಮಾನವನ್ನು ಹತ್ತಿ ಚಂದ್ರಲೋಕವನ್ನು ಹೊಂದುತ್ತಾನೆ.

೬೯. ಬಗೆ ಬಗೆಯ ಚೂರ್ಣಗಳಿಂದ ಮಂಡಲಗಳನ್ನು ಬರೆದರೆ ಅವನು ಮಹೇಶ್ವರಿಯ ಲೋಕವನ್ನು ಹೊಂದಿ ಅನೇಕ ವರ್ಷಗಳು ಸುಖಿಸುವನು.

ವಜ್ರಾಕೃತಿಂ ವಜ್ರಚೂರ್ಣೈರ್ಯಃ ಕುರ್ಯಾನ್ಮಂಡಲಂ ನೃಪ ।
ಐರಾವತ ಸಮಾರೂಢ ಇಂದ್ರಾಣೀಲೋಕಮಾಪ್ನುಯಾತ್ ॥ ೭೦ ॥

ಯಃ ಕರೋತಿ ನರೋ ಭಕ್ತ್ಯಾ ದುರ್ಗಾಯಾಃ ಪುರತೋ ಮಹತ್ ।
ಶ್ವೇತಕೃಷ್ಣೈಃ ಸಿತೈರ್ವರ್ಣೈಃ ಶ್ರೀವತ್ಸಾಂಕಿತಮುತ್ತಮಂ ॥ ೭೧ ॥

ಮಂಡಲಂ ಸ ನರೋ ವೀರ ವಿಮಾನವರಮಾಶ್ರಿತಃ ।
ಸೇವ್ಯಮಾನೋಽಪ್ಸರೋವ್ರಾತೈರ್ವ್ರಜೇಚ್ಛ್ರೀಲೋಕಮುತ್ತಮಂ ॥ ೭೨ ॥

ಯಃ ಕರೋತಿ ನರೋ ಭಕ್ತ್ಯಾ ಮಂಡಲಂ ಹ್ಯಂಬಿಕಾಗೃಹೇ ।
ರಮತೇ ಕಿಂನರೈಃ ಸಾರ್ಧಂ ಯಾವದಾಭೂತಸಂಪ್ಲವಂ ॥ ೭೩॥

ಘೃತಪಿಷ್ಟಪ್ರದೀಪಾದ್ಯೌ ಘೃತಮಿಶ್ರಿತಪಲ್ಲವೈಃ ।
ಓಷಧೀಭಿಶ್ಚ ಮೇಧ್ಯಾಭಿಃ ಸರ್ವಬೀಜೈರ್ಯವಾದಿಭಿಃ ॥ ೭೪ ॥

ನವಮ್ಯಾಂ ಸರ್ವಕಾಲೇ ತು ಯಾತ್ರಾಕಾಲೇ ವಿಶೇಷತಃ ।
ಯಃ ಕುರ್ಯಾಚ್ಛ್ರದ್ಧಯಾ ವೀರ ದಿವ್ಯಂ ನೀರಾಜನಂ ನರಃ ॥ ೭೫ ॥

---

೭೦. ವಜ್ರದಂತಹ ಹಿಟ್ಟಿನಿಂದ ವಜ್ರಾಯುಧದ ಆಕಾರವನ್ನು ಬರೆದರೆ ಅವನು ಐರಾವತದಮೇಲೆ ಹತ್ತಿಕೊಂಡು ಇಂದ್ರಾಣಿಯ ಲೋಕವನ್ನು ಹೊಂದುತ್ತಾನೆ.

೭೧–೭೨. ಯಾವನು ಬಿಳಿದು ಕಪ್ಪು ಬಣ್ಣಗಳಿಂದ ಶ್ರೀವತ್ಸದ ಆಕಾರವನ್ನು ಭಕ್ತಿಯಿಂದ ಆ ದುರ್ಗೆಯ ಎದುರಿಗೆ ಬರೆಯುತ್ತಾನೆಯೋ ಅವನು ವಿಮಾನವನ್ನು ಹತ್ತಿ ಅಪ್ಸರರಿಂದ ಸೇವಿಸಲ್ಪಡುತ್ತಾ ಲಕ್ಷ್ಮಿಯ ಲೋಕವನ್ನು ಹೊಂದುತ್ತಾನೆ.

೭೩. ಅಂಬಿಕೆಯ ಮನೆಯಲ್ಲಿ ಯಾವನು ಭಕ್ತಿಯಿಂದ ಮಂಡಲವನ್ನು ಬರೆಯುತ್ತಾನೆಯೋ ಅವನು ಕಿನ್ನರರೊಡನೆ ಪ್ರಪಂಚವಿರುವವರೆಗೂ ಸುಖಿಸುತ್ತಾನೆ.

೭೪-೭೫. ತುಪ್ಪದ ದೀಪ, ಹಿಟ್ಟಿನಲ್ಲಿ ದೀಪಮಾಡಿ ಅದರಲ್ಲಿ ದೀಪ ಹಚ್ಚುವುದು. ಚಿಗುರುಗಳನ್ನು ತುಪ್ಪದ ದೀಪಕ್ಕೆ ಅಲಂಕರಿಸಿ ಹಚ್ಚುವುದು. ಅನೇಕ ತರದ ಎಣ್ಣೆ ಬೀಜಗಳನ್ನು ಗಂಟು ಕಟ್ಟಿ ಹಚ್ಚುವುದು. ಯವವನ್ನು ಗಂಟು ಕಟ್ಟಿ ಅದನ್ನು ದೀಪ ಹಚ್ಚುವುದು. ನವಮಿಯ ದಿನವೆಲ್ಲವೂ ಹೀಗೆ ಮಾಡುತ್ತಿರಬೇಕು. ಜಾತ್ರೆಯ ಕಾಲದಲ್ಲಿ ಹೀಗೆ ಮಾಡಿಯೇ ಮಾಡಬೇಕು. ಈ ರೀತಿಯಾಗಿ ಶ್ರದ್ಧೆಯಿಂದ

ಶಂಖಭೇರ್ಯಾದಿಭಿರ್ಘೋರ್ವೈರ್ಮಹದ್ಭಿರ್ದೇವವಾದಿತ್ರೈಃ ।
ನತಾಶೇಷವಿನಿರ್ಘೋಷೈರ್ಜಯಶಬ್ದೈಶ್ಚ ಪುಷ್ಕಲೈಃ ॥ ೭೬ ॥

ಯಾವಂತೋ ದಿವಸಾ ದೇವ್ಯಾಃ ಪೂಜನೇ ಯಾಂತಿ ವೈ ನೃಣಾಂ ।
ತಾವತ್ಕಲ್ಪಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೭೭ ॥

ಯಸ್ತು ಕುರ್ಯಾತ್ಪ್ರದೀಪೇನ ಶಿವಲೋಕಂ ಸ ಗಚ್ಛತಿ ।
ಲವಣೇನಾಕ್ಷತೈಃ ಕೃತ್ವಾ ದೇವ್ಯಾ ನೀರಾಜನಂ ಶುಭಂ ॥ ೭೮ ॥

ತಾವತ್ಕಲ್ಪಸಹಸ್ರಾಣಿ ವಿಷ್ಣುಲೋಕೇ ಮಹೀಯತೇ ।
ಸುವರ್ಣರೌಪ್ಯವರ್ಣೈಶ್ಚ ಕೃತ್ವಾ ನೀರಾಜನಂ ನರಃ ॥ ೭೯ ॥

ಭಗವತ್ಯೈ ಮಹಾರಾಜ ಬ್ರಹ್ಮಲೋಕೇ ಮಹೀಯತೇ ।
ತ್ರಿಕಾಲಂ ಯೋ ನರಃ ಕುರ್ಯಾದ್ದುರ್ಗಾಯಾಃ ಪುರತೋ ನೃಪ ॥ ೮೦ ॥

ನೃತ್ಯಂ ಗೀತಂ ಚ ವಾದಿತ್ರಂ ತಸ್ಯ ಪುಣ್ಯಫಲಂ ಶೃಣು ।
ಯಾವಂತ್ಯಬ್ದಾನಿ ಕುರುತೇ ಗೀತಂ ನೃತ್ಯಂ ಚ ವಾದಿತಂ ॥ ೮೧ ॥

---

ಮಾಡಿ ಆರತಿ ಮಾಡಿದರೆ ಅದು ಬಹು ವಿಶೇಷವಾದುದು. ಶಂಖ, ಭೇರಿ ಇನ್ನೂ ಅನೇಕವಾದ ವಾದ್ಯ ಧ್ವನಿಗಳು, ಇವುಗಳಿಂದಲೂ, ಜಯ ಶಬ್ದದಿಂದಲೂ, ಎಷು ದಿವಸಗಳು ಪೂಜೆಯಲ್ಲಿ ಕಳೆಯುವರೋ ಅಷ್ಟು ದಿವಸಗಳ ಸಾವಿರ ವರ್ಷಗಳು ಅವರು ಸ್ವರ್ಗದಲ್ಲಿ ಸುಖಿಸುತ್ತಾರೆ.

೭೮ ೯೫. ಈ ರೀತಿ ಮಾಡಿ ದೊಡ್ಡದಾಗಿ ದೀಪವನ್ನು ಹಚ್ಚಿದರೆ ಶಿವ ಲೋಕವನ್ನು ಹೊಂದುತ್ತಾನೆ. ಉಪ್ಪಿನಿಂದಲೂ, ಅಕ್ಷತೆಯಿಂದಲೂ, ದೇವಿಗೆ ಆರತಿಯನ್ನು ಮಾಡಿದರೆ ಆ ಉಪ್ಪು ಅಕ್ಷತೆಗಳಿರುವಷ್ಟು ಚೂರು ಕಾಳುಗಳ ಸಾವಿರ ವರ್ಷಗಳವರೆಗೂ ವಿಷ್ಣುಲೋಕದಲ್ಲಿ ಸುಖಿಸುತ್ತಾನೆ. ಚಿನ್ನ ಬೆಳ್ಳಿಗಳಿಂದ ಆರತಿ ಯನ್ನು ಮಾಡಿ ದುರ್ಗೆಗೆ ಎತ್ತಿದರೆ ಅವನು ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ. ದುರ್ಗೆಯ ಮುಂದುಗಡೆ ಮೂರು ಕಾಲಗಳಲ್ಲಿಯೂ ಯಾವನು ನೃತ್ಯ, ಗೀತ, ವಾದ್ಯ ಗಳನ್ನು ಮಾಡುವನೋ ಅವನ ಪುಣ್ಯಫಲವನ್ನು ಕೇಳು. ನೃತ್ಯ, ಗೀತ, ವಾದ್ಯ ಗಳನ್ನು ಎಷ್ಟು ವರ್ಷಗಳವರೆಗೆ ಮಾಡುತ್ತಾನೆಯೋ ಅಷ್ಟು ಕಲ್ಪಗಳವರೆಗೂ ದೇವಿಯ

ತಾವತ್ಕಲ್ಪಾನಿ ರಾಜೇಂದ್ರ ದೇವೀಲೋಕೇ ಸುಖಂ ವಸೇತ್ ।
ಏಕಾಹಮಪಿ ಯೋ ಭಕ್ತ್ಯಾ ಪಂಚಗವ್ಯೇನ ಚಂಡಿಕಾಂ ॥ ೮೨ ॥

ಸ್ನಾಪಯೇನ್ನೃಪಶಾರ್ದೂಲ ಸ ಗಚ್ಛೇತ್ಸುರಭೀಪುರಂ ।
ಕಪಿಲಾಪಂಚಗವ್ಯೇನ ಘೃತಕ್ಷೀರಯುತೇನ ಚ ॥ ೮೩ ॥

ಸ್ನಾನಂ ಶತಗುಣಂ ಪ್ರೋಕ್ತಮಿತರೇಭ್ಯೋ ನರಾಧಿಪ ।
ವರ್ಷೈಶ್ಚ ಷಡ್ಸಹಸ್ರಾಣಾಂ ಪಾಪಾನಾಂ ಸಮುಪಾರ್ಜನಂ ॥ ೮೪ ॥

ತತ್ಸರ್ವಂ ವಿಲಯಂ ಯಾತಿ ತೋಯೇನ ಲವಣಂ ಯಥಾ ।
ಘೃತಾಭ್ಯಂಗೇನ ದೇವ್ಯಾಸ್ತು ಕೃತೇನ ವಿಧಿವನ್ನೃಪ ॥ ೮೫ ॥

ತಸ್ಮಾದಭ್ಯಂಜಯೇದ್ಭಕ್ತ್ಯಾ ನಿತ್ಯಂ ಭಗವತೀಂ ನೃಪ ।
ನವಮ್ಯಾಂ ಶುಕ್ಲಪಕ್ಷೇ ತು ವಿಧಿವಚ್ಚಂಡಿಕಾಂ ನೃಪ ॥ ೮೬ ॥

ಘೃತೇನ ಸ್ನಾಪಯೇದ್ಯಸ್ತು ತಸ್ಯ ಪುಣ್ಯಫಲಂ ಶೃಣು ।
ದಶ ಪೂರ್ವಾನ್ದಶ ಪರಾನಾತ್ಮಾನಂ ಚ ವಿಶೇಷತಃ ॥ ೮೭ ॥

ಭವಾರ್ಣವಾತ್ಸಮುದ್ಧೃತ್ಯ ದುರ್ಗಾಲೋಕೇ ಮಹೀಯತೇ ।
ಕ್ಷೀರಾದ್ಯೈಃ ಸ್ನಾಪಯೇದ್ಯಸ್ತು ಶ್ರದ್ಧಾಭಕ್ತಿಸಮನ್ವಿತಃ ॥ ೮೮ ॥

---

ಲೋಕದಲ್ಲಿ ಸುಖವಾಗಿ ಇರುವನು. ಯಾವನು ಒಂದು ದಿನವಾದರೂ ದುರ್ಗೆಗೆ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆಗಳಿಂದ ಪೂಜಿಸುವನೋ ಅವನು ಸುರಭಿಯ ಲೋಕವನ್ನು ಹೊಂದುವನು. ಕಪಿಲೆಯ ಹಾಲು, ಮೊಸರು, ತುಪ್ಪಗಳಿಂದ ಸ್ನಾನಮಾಡಿಸಿದರೆ ಇತರ ಪಂಚಗವ್ಯಕ್ಕಿಂತಲೂ ನೂರು ಪಾಲು ಶ್ರೇಷ್ಠವೆಂದೂ ನೂರು ಪಾಲು ಹೆಚ್ಚಿನ ಫಲವುಂಟೆಂದೂ ಹೇಳಿದ್ದಾರೆ. ದೇವಿಗೆ ವಿಧಿವತ್ತಾಗಿ ತುಪ್ಪದಲ್ಲಿ ಸ್ನಾನಮಾಡಿಸಿದರೆ ಆರು ಸಾವಿರ ವರ್ಷಗಳಿಂದ ಮಾಡಿದ ಪಾಪವೆಲ್ಲವೂ ನೀರಿನಲ್ಲಿ ಉಪ್ಪು ಕರಗುವಂತೆ ನಾಶವಾಗುತ್ತದೆ. ಆದ್ದರಿಂದ ಭಕ್ತಿಯಿಂದ ದುರ್ಗೆಗೆ ಅಭ್ಯಂಜನ ಮಾಡಿಸಬೇಕು. ಶುಕ್ಲ ಪಕ್ಷದ ನವಮಿಯ ದಿನ ವಿಧಿವತ್ತಾಗಿ ತುಪ್ಪದಿಂದ ದುರ್ಗೆಯನ್ನು ಒಳಿದು ಅಭ್ಯಂಜನ ಮಾಡಿಸಿದರೆ ಅವನ ಹತ್ತು ತಲೆ ಹಿಂದಿನವರು ಹತ್ತು ತಲೆ ಮುಂದಿನವರು ತಾನು ಒಟ್ಟು ಇಪ್ಪತ್ತೊಂದು ಜನರು ಸಂಸಾರದಿಂದ ಮುಕ್ತರಾಗಿ ದುರ್ಗೆಯ ಲೋಕದಲ್ಲಿ ಸುಖಿಸುತ್ತಾರೆ. ಭಕ್ತಿಯಿಂದ ಚಂಡಿಕೆಯನ್ನು ಹಾಲು

ಚಂಡಿಕಾಂ ಸ ನರೋ ಯಾತಿ ಗೋಲೋಕಂ ತಮಸಃ ಪರಂ ।
ಚಂಡಿಕಾಂ ಸ್ನಾಪಯೇದ್ಯಸ್ತು ನರಶ್ಚೇಕ್ಷುರಸೇನ ಚ ॥ ೮೯ ॥

ಸೌಪರ್ಣಕೇನ ಯಾನೇನ ವಿಷ್ಣುನಾ ಸಹ ಮೋದತೇ ।
ಯೋ ನರಃ ಸ್ನಾಪಯೇದ್ದುರ್ಗಾಂ ಶ್ರದ್ಧಯಾ ಹೇಮವಾರಿಣಾ ॥ ೯೦ ॥

ಸೌವರ್ಣಯಾನಮಾರೂಢೋ ಮೋದತೇ ಪುರುಷೈರ್ದಿವಿ ।
ರತ್ನೋದಕೇನ ವಿಧಿವತ್ಸ್ನಾಪಯೇಚ್ಛ್ರದ್ಧಯಾಽನ್ವಿತಃ ॥ ೯೧ ॥

ಚಂಡಿಕಾಂ ಸ ನರೈಃ ಪೂರ್ವೈರ್ವಿಷ್ಣುಲೋಕೇ ಮಹೀಯತೇ ।
ಸ್ನಾಪಯೇಷ್ಯ ಉಮಾಂ ದೇವೀಂ ನರಃ ಕರ್ಪೂರವಾರಿಣಾ ॥ ೯೨ ॥

ಸೌವರ್ಣಯಾನಮಾರೂಢೋ ಗಚ್ಛತೇ ಯತ್ರ ಚಂಡಿಕಾ ।
ಚಂಡಿಕಾಂ ಸ್ನಾಪಯಿತ್ವಾ ತು ಶ್ರದ್ಧಯಾಽಗರುವಾರಿಣಾ ॥ ೯೩ ॥

ಇಂದ್ರಲೋಕಂ ಸಮಾಸಾದ್ಯ ಕ್ರೀಡತೇ ಸಹ ಕಿನ್ನರೈಃ ।
ಪಿತ್ರ್ಯಾನುದ್ದಿಶ್ಯ ಯೋ ದುರ್ಗಾಂ ಮಧುನಾ ಪಾಯಸೇನ ಚ ॥ ೯೪ ॥

---

ಮುಂತಾದುವುಗಳಿಂದ ಅಭಿಷೇಕ ಮಾಡಿದರೆ ಅವನು ಉತ್ತಮವಾದ ಗೋಲೋಕವನ್ನು ಹೊಂದುತ್ತಾನೆ. ಯಾವನು ಚಂಡಿಕೆಯನ್ನು ಕಬ್ಬಿನ ಹಾಲಿನಿಂದ ಅಭಿಷೇಕ ಮಾಡಿಸುವನೋ ಅವನು ಗರುಡಯಾನದಲ್ಲಿ ವಿಷ್ಣುವಿನೊಡನೆ ಸುಖಿಸುತ್ತಾನೆ. ಚಿನ್ನದ ನೀರಿನಿಂದ ದುರ್ಗೆಯನ್ನು ಸ್ನಾನಮಾಡಿಸಿದರೆ ಅವನು ಗರುಡಯಾನದಿಂದ ಸ್ವರ್ಗದಲ್ಲಿ ಉತ್ತಮರಾದ ಜನರೊಡನೆ ಸುಖಿಸುತ್ತಾನೆ ಶಾಸ್ತ್ರದ ರೀತಿಯಿಂದ ರತ್ನೋದಕದಿಂದ ಸ್ನಾನಮಾಡಿಸಿದರೆ ವಿಷ್ಣುಲೋಕದಲ್ಲಿ ತನ್ನ ಪೂರ್ವಿಕರನ್ನು ಕರೆದುಕೊಂಡು ಹೋಗಿ ಸುಖಿಸುತ್ತಾನೆ. ಪಚ್ಚಕರ್ಪೂರದ ನೀರಿನಿಂದ ದುರ್ಗೆಯನ್ನು ಸ್ನಾನಮಾಡಿಸಿದರೆ ಚಿನ್ನದ ವಿಮಾನದಲ್ಲಿ ಕುಳಿತು ಚಂಡಿಕೆಯಿರುವಲ್ಲಿಗೆ ಹೋಗುತ್ತಾನೆ. ಅಗರು ನೀರಿನಿಂದ ಚಂಡಿಕೆಯನ್ನು ಸ್ನಾನಮಾಡಿಸಿದರೆ ಇಂದ್ರಲೋಕವನ್ನು ಹೊಂದಿ ಕಿನ್ನರರೊಡನೆ ಸುಖಿಸುತ್ತಾನೆ. ಜೇನು ಪಾಯಸಗಳಿಂದ ಪಿತೃಗಳನ್ನುದ್ದೇಶಿಸಿಕೊಂಡು ದುರ್ಗೆಯನ್ನು ಪೂಜಿಸಿದರೆ, ಸ್ನಾನಮಾಡಿಸಿದರೆ ಅವನಿಗೆ ಬರುವ ಪುಣ್ಯ

ಸ್ನಾಪಯೇದ್ವಿಧಿವತ್ಪ್ರಕ್ತ್ಯಾ ತಸ್ಯ ಪುಣ್ಯಫಲಂ ಶೃಣು ।
ತೃಪ್ತಾ ಭವಂತಿ ಪಿತರಸ್ತಸ್ಯ ವರ್ಷಶತದ್ವಯಂ ॥ ೯೫ ॥

ಯ ಏವಂ ಸ್ನಾಪಯೇನ್ನಿತ್ಯಂ ಸ್ನಾನದ್ರವ್ಯೈರ್ನರಾಧಿಪ ।
ಯುಗಪದ್ವಿಧಿವದ್ವೀರ ತಸ್ಯ ಪುಣ್ಯಫಲಂ ಶೃಣು ॥ ೯೬ ॥

ಅಶ್ವಮೇಧಸಹಸ್ರಸ್ಯ ರಾಜಸೂಯಶತಸ್ಯ ಚ ।
ಅಗ್ನಿಷ್ಟೋಮಸ್ಯ ಯಜ್ಞಸ್ಯ ಸ ಫಲಂ ವಿಂದತೇ ನರಃ ॥ ೯೭ ॥

ಸ್ನಾಪಯಿತ್ವಾ ನರಸ್ತಾಮ್ರೈರ್ವಾಜಪೇಯಫಲಂ ಲಭೇತ್ ।
ಸೌವರ್ಣೈಃ ಸ್ನಾಪಯಿತ್ವಾ ತು ಚಂಡಿಕಾಂ ಕಲಶೈರ್ನೃಪ ॥ ೯೮ ॥

ಅಶ್ವಮೇಧಫಲಂ ಪ್ರಾಪ್ಯ ಬ್ರಹ್ಮಲೋಕೇ ಮಹೀಯತೇ ।
ಘೃತಸ್ನಾತಾಂ ತಥಾ ದುರ್ಗಾಂ ಸಮುದ್ವರ್ತಯತೇ ತು ಯಃ ॥ ೯೯ ॥

ಯವಗೋಧೂಮಚೈಶ್ಚೂರ್ಣೈರ್ಘರ್ಷಯೇಚ್ಛರ್ಕರೇಣ ಚ ।
ಘೃತೇನ ಪಯಸಾ ದಧ್ನಾ ಸ್ನಾಪಯೇಚ್ಚಂಡಿಕಾಂ ತತಃ ॥ ೧೦೦ ॥

---

ಫಲವನ್ನು ಹೇಳುವೆನು ಕೇಳು. ಅವನ ಪಿತೃಗಳು ಎರಡು ವರ್ಷಗಳವರೆಗೂ ತೃಪ್ತರಾಗುತ್ತಾರೆ.

೯೬-೯೭ ಸ್ನಾನ ದ್ರವ್ಯಗಳಿಂದ ದುರ್ಗೆಯನ್ನು ಸ್ನಾನ ಮಾಡಿಸಿದರೆ ಅವನು ಸಾವಿರ ಅಶ್ವಮೇಧಗಳ, ನೂರಾರು ರಾಜಸೂಯಗಳ, ಒಂದು ಅಗ್ನಿಷ್ಟೋಮದ ಫಲವನ್ನು ಹೊಂದುತ್ತಾನೆ.

೯೮-೧೦೦. ತಾಮ್ರದ ಪಾತ್ರೆಯಲ್ಲಿ ನೀರನ್ನಿಟ್ಟುಕೊಂಡು ದುರ್ಗೆಯನ್ನು ಸ್ನಾನ ಮಾಡಿಸಿದರೆ ವಾಜಪೇಯ ಯಾಗದ ಫಲವು ಬರುತ್ತದೆ. ಚಿನ್ನದ ಬಿಂದಿಗೆಯಲ್ಲಿ ನೀರನ್ನು ಹಾಕಿ ದುರ್ಗೆಯನ್ನು ಸ್ನಾನ ಮಾಡಿಸಿದರೆ ಅಶ್ವಮೇಧ ಫಲವನ್ನು ಹೊಂದಿ ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ. ಮನುಷ್ಯನು ದುರ್ಗೆಗೆ ತುಪ್ಪದ ಮಜ್ಜನ ಮಾಡಿಸಿ ಅನಂತರ ಯವ, ಗೋಧಿ, ಸಕ್ಕರೆಗಳನ್ನು ಹಾಕಿ ತಿಕ್ಕಿ ತೊಳೆಯಬೇಕು. ಮತ್ತೆ ತುಪ್ಪ ಹಾಲುಗಳಿಂದ ಸ್ನಾನಮಾಡಿಸಬೇಕು.

ಬಿಲ್ವಪತ್ರೈಃ ಸುಗಂಧಾಢ್ಯೈರ್ಘರ್ಷಯೇದ್ಯತ್ನತಃ ಪುಮಾನ್ ।
ಗೋಸಹಸ್ರಶತೇ ದತ್ತೇ ಯತ್ಫಲಂ ಪುಷ್ಕರೇ ಸ್ಮೃತಂ ॥ ೧೦೧ ॥

ತತ್ಫಲಂ ಲಭತೇ ವೀರ ದೇವ್ಯಾ ಉದ್ವರ್ತನೇ ಕೃತೇ ।
ದತ್ವಾಽರ್ಘ್ಯಂ ವಿಧಿವದ್ಭಕ್ತ್ಯಾ ದುರ್ಗಾಯೈ ಪದ್ಮವಾರಿಣಾ ॥ ೧೦೨ ॥

ಸಂಪೂಜ್ಯಮಾನೋ ಗಂಧರ್ವೈಃ ರಮತೇ ದಿವಿ ದೇವವತ್ ।
ಕೃತ್ವೋಪವಾಸಂ ವಿಧಿವತ್ಸುಭೋಗೀ ಪುತ್ರವಾನ್ಭವೇತ್ ॥ ೧೦೩ ॥

ಉತ್ತರೇ ತ್ವಯನೇ ಯಸ್ತು ಸೋಪವಾಸೋ ಯಜೇಚ್ಛಿವಾಂ ।
ಬಹುಪುತ್ರೋ ಬಹುಧನಃ ಸ ನರಃ ಕೀರ್ತಿಮಾನ್ಭವೇತ್ ॥ ೧೦೪ ॥

ಕೃತ್ವೋಪವಾಸಂ ವಿಧಿವದ್ವಿಷುವೇ ಯೋಽರ್ಚಯೇಚ್ಛಿವಾಂ ।
ಶಕ್ತಿಮಾನ್ಬಹುಪುತ್ರಶ್ಚ ಸ ಭವೇದ್ಬಲವಾನ್ನರಃ ॥ ೧೦೫ ॥

ಯೋಽರ್ಚಯೇದ್ವಿಧಿವದ್ದುರ್ಗಾಂ ಗ್ರಹಣೇ ಚಂದ್ರಸೂರ್ಯಯೋಃ ।
ಕೃತ್ವೋಪವಾಸಂ ವಿಧಿವತ್ಸ ಭವೇತ್ಪುತ್ರವಾನ್ನರಃ ॥ ೧೦೬ ॥

---

೧೦೧-೧೦೩. ದುರ್ಗೆಯನ್ನು ಗಂಧಾದಿಗಳಿಂದ ಪೂಜಿಸಿ ಗಂಧವನ್ನು ತೊಡೆದು ಬಿಲ್ವಪತ್ರೆಯಿಂದ ಪೂಜಿಸಿದರೆ ಪುಷ್ಕರ ಕ್ಷೇತ್ರದಲ್ಲಿ ಸಾವಿರ ಗೋವನ್ನು ದಾನಮಾಡಿದ ಫಲವನ್ನು ಹೊಂದುತ್ತಾನೆ. ಪದ್ಮದ ಉದಕದಿಂದ ದುರ್ಗೆಗೆ ಅರ್ಘ್ಯವನ್ನು ಶಾಸ್ತ್ರ ರೀತಿಯಿಂದ ಕೊಟ್ಟರೆ ಅವನು ದೇವತೆಗಳಿಂದ ಪೂಜಿತನಾಗಿ ಗಂಧರ್ವರೊಡನೆ ಪೂಜಿಸಲ್ಪಡುತ್ತಾನೆ. ದುರ್ಗೆಯನ್ನು ಕುರಿತು ಉಪವಾಸ ವ್ರತವನ್ನು ಶಾಸ್ತ್ರರೀತಿ ಯಲ್ಲಿ ಮಾಡಿದರೆ ಭೋಗವುಳ್ಳವನಾಗಿ ಪುತ್ರರನ್ನು ಹೊಂದುತ್ತಾನೆ.

೧೦೪. ಉತ್ತರಾಯಣ ಪುಣ್ಯಕಾಲದಲ್ಲಿ ಉಪವಾಸ ಮಾಡಿ ಪಾರ್ವತಿಯನ್ನು ಪೂಜಿಸಿದರೆ ಅವನಿಗೆ ಅನೇಕ ಜನ ಮಕ್ಕಳಾಗುತ್ತಾರೆ ಮತ್ತು ಕೀರ್ತಿಯೂ ಬರುತ್ತದೆ.

೧೦೫. ವಿಷುವತ್ಪುಣ್ಯಕಾಲದಲ್ಲಿ ಉಪವಾಸಮಾಡಿ ಪಾರ್ವತಿಯನ್ನು ಪೂಜಿಸಿದರೆ ಅವನು ಶಕ್ತಿವಂತನಾಗಿಯೂ, ಮಕ್ಕಳೊಂದಿಗನಾಗಿಯೂ ಆಗುವನು

೧೦೬. ಚಂದ್ರ ಸೂರ್ಯ ಗ್ರಹಣಗಳಲ್ಲಿ ಉಪವಾಸವಿದ್ದು ಶಾಸ್ತ್ರರೀತಿಯಿಂದ ಪಾರ್ವತಿಯನ್ನು ಪೂಜಿಸಿದರೆ ಪುತ್ರವಂತನಾಗುವನು.

ಶಾಂತಿಕಾಮೋ ನರೋ ಯಸ್ತು ರಾಹುಗ್ರಸ್ತೇ ದಿವಾಕರೇ ।
ಸೋಽಪವಾಸೋಽರ್ಚಯೇದ್ದೇವೀಂ ಸ ಗಚ್ಛೇತ್ಪರಮಂ ಪದಂ ॥ ೧೦೭ ॥

ಇತ್ಯೇತೇ ಕಥಿತಾ ವೀರ ಪೂಜಾಕಾಲಾ ಮನೀಷಿಭಿಃ ।
ದುರ್ಗಾಯಾಃ ಕುರುಶಾರ್ದೂಲ ಯೇಷು ಪೂಜ್ಯ ದಿವಂ ವ್ರಜೇತ್ ॥ ೧೦೮ ॥

ದುರ್ಗಾಯಾ ದರ್ಶನಂ ಪುಣ್ಯಂ ದರ್ಶನಾದಭಿವಂದನಂ ।
ವಂದನಾತ್ಸ್ಪರ್ಶನಂ ಪುಣ್ಯಂ ಸ್ಪರ್ಶನಾದಭಿಪೂಜನಂ ॥ ೧೦೯ ॥

ಪೂಜನಾಲ್ಲೇಪನಂ ಶ್ರೇಷ್ಠಂ ಲೇಪನಾತ್ತರ್ಪಣಂ ಸ್ಮೃತಂ ।
ತರ್ಪಣಾನ್ಮಾಂಸದಾನಂ ತು ಮಹಿಷಾಜನಿಪಾತನಂ ॥ ೧೧೦ ॥

ಅಹನ್ಯಹನಿ ಯೋ ದುರ್ಗಾಂ ಪೂಜಯೇದ್ರುಧಿರಾದಿಭಿಃ ।
ಕುಲಾನಾಂ ಶತಮುದ್ಧೃತ್ಯ ಬ್ರಹ್ಮಲೋಕೇ ಮಹೀಯತೇ ॥ ೧೧೧ ॥

---

೧೦೭. ಶಾಂತಿಯನ್ನಪೇಕ್ಷಿಸುವವನು ಸೂರ್ಯಗ್ರಹಣದಲ್ಲಿ ಉಪವಾಸವಿದ್ದು ದುರ್ಗೆಯನ್ನು ಪೂಜಿಸಿದರೆ ಅವನು ಸ್ವರ್ಗವನ್ನು ಹೊಂದುತ್ತಾನೆ.

೧೦೮. ಈ ರೀತಿಯಾಗಿ ದುರ್ಗೆಯ ಪೂಜಾ ಕಾಲಗಳನ್ನು ತಿಳಿದವರು ಹೇಳಿರುವರು ಈ ದಿನಗಳಲ್ಲಿ ದುರ್ಗೆಯನ್ನು ಪೂಜಿಸಿದರೆ ಆತನು ಸ್ವರ್ಗವನ್ನು ಹೊಂದುತ್ತಾನೆ.

೧೦೯-೧೧೦. ದುರ್ಗೆಯ ದರ್ಶನವೇ ಪುಣ್ಯವು. ದರ್ಶನಕ್ಕಿಂತ ನಮಸ್ಕಾರವು ಇನ್ನೂ ಪುಣ್ಯವು. ನಮಸ್ಕಾರಕ್ಕಿಂತ ಮುಟ್ಟುವಿಕೆ, ಮುಟ್ಟುವಿಕೆಗಿಂತ ಪೂಜಿಸುವಿಕೆ, ಪೂಜಿಸುವಿಕೆಗಿಂತ ಗಂಧಾದಿಗಳನ್ನು ತೊಡೆಯುವಿಕೆ, ಗಂಧಾದಿಗಳನ್ನು ತೊಡೆಯುವಿಕೆಗಿಂತ ತರ್ಪಣ ಮಾಡುವಿಕೆ, ತರ್ಪಣ ಮಾಡುವಿಕೆಗಿಂತ ಎಮ್ಮೆ ಆಡು ಕುರಿಗಳನ್ನು ಕಡಿದು ಮಾಂಸ ಹಾಕುವಿಕೆ, ಇವು ಒಂದಕ್ಕಿಂತಲೂ ಮತ್ತೊಂದು ಮುಂದೆ ಮುಂದೆ ಹೋದಂತೆಲ್ಲಾ ಒಳ್ಳೆಯವು.

೧೧೧. ರಕ್ತ ಮಾಂಸಗಳಿಂದ ನಿತ್ಯವೂ ಯಾವನು ಪೂಜಿಸುವನೋ ಅವನು ತನ್ನ ಕುಲದಲ್ಲಿ ನೂರು ತಲೆಗಳನ್ನು ಉದ್ಧರಿಸಿ ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ.

**ವರಂ ಪ್ರಾಣಪರಿತ್ಯಾಗಃ ಶಿರಸಃ ಕರ್ತನಂ ವರಂ ।**
**ನ ಚಾಪೂಜ್ಯೇಹ ಭುಂಜೀತ ಚಂಡಿಕಾಂ ಚಂಡರೂಪಿಣೀಂ ॥ ೧೧೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ದೇವೀಪೂಜಾಕಥನಂ ನಾಮ ಅಶೀತಿತಮೋಽಧ್ಯಾಯಃ**

---

೧೧೨. ಚಂಡ ರೂಪಿಣಿಯಾದ ಚಂಡಿಕೆಯನ್ನು ಪೂಜೆ ಮಾಡದೆ ಊಟ ಮಾಡುವುದಕ್ಕಿಂತ ಪ್ರಾಣ ಬಿಡುವುದು ಲೇಸು. ಕೊನೆಗೆ ಕತ್ತನ್ನು ಕಡಿದ ಕೊಳ್ಳುವುದೂ ಮೇಲು. ಆದ್ದರಿಂದ ಪೂಜೆ ಮಾಡಿಯೇ ತೀರಬೇಕು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ದೇವೀಪೂಜೆಯ ಕಥನವೆಂಬ ಎಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಏಕಾಶೀತಿತಮೋಽಧ್ಯಾಯಃ ॥



॥ ಪುಲಸ್ತ್ಯ ಉವಾಚ ॥

ದೇವೈಃ ಪುರಾ ಜಗತ್ಕರ್ತಾ ಪೃಷ್ಟೋ ದೇವಃ ಪಿತಾಮಹಃ ।
ಬ್ರೂಹಿ ದುರ್ಗಾರ್ಚನಂ ದೇವ ಯೇನ ತುಷ್ಯತಿ ಚಂಡಿಕಾ ॥ ೧ ॥

॥ ಬ್ರಹ್ಮೋವಾಚ ॥

ಶಂಭುಃ ಪೂಜಯತೇ ದೇವೀಂ ಮಂತ್ರಶಕ್ತಿಮಯೀಂ ಶುಭಾಂ ।
ಅಕ್ಷಮಾಲಾಂ ಕರೇ ನ್ಯಸ್ಯ ತೇನಾಸೌ ವಿಭವೋದ್ಭವಃ ॥ ೨ ॥

ದುರ್ಗಾಂ ರತ್ನಮಯೀಂ ದೇವಾಃ ಪೂಜಯಾಮಿ ಸದಾ ಹ್ಯಹಂ ।
ತೇನ ಪ್ರಾಪ್ತಂ ಮಯಾ ಚೈವ ಬ್ರಹ್ಮತ್ವಂ ಚ ಸುದುರ್ಲಭಂ ॥ ೩ ॥

---

### ಎಂಭತ್ತೊಂದನೆಯ ಅಧ್ಯಾಯವು

೧. ಪುಲಸ್ತ್ಯನು ಹೇಳಿದನು– ಪೂರ್ವದಲ್ಲಿ ದೇವತೆಗಳು ಜಗತ್ಕರ್ತನಾದ ಬ್ರಹ್ಮನನ್ನು ಕುರಿತು ದುರ್ಗೆಯ ಪೂಜೆಯ ವಿಧಿಯನ್ನೂ, ಯಾವುದರಿಂದ ಆಕೆಯು ತೃಪ್ತಿ ಹೊಂದುವಳೆಂಬುದನ್ನೂ ತಿಳಿಸು ಎಂದರು.

೨. ಬ್ರಹ್ಮನು ಹೇಳಿದನು– ಶಂಭುವು ಕೈಯ್ಯಲ್ಲಿ ಅಕ್ಷಮಾಲೆಯನ್ನು ಹಿಡಿದುಕೊಂಡು ಮಂತ್ರಮೂರ್ತಿಯಾದ ದುರ್ಗೆಯನ್ನು ಯಾವಾಗಲೂ ಪೂಜೆಮಾಡುವನು. ಆದ್ದರಿಂದಲೇ ಅವನು ಇಷ್ಟೊಂದು ಮಹಿಮೆಯಿಂದ ಕೂಡಿರುವುದು.

೩. ಎಲೈ ದೇವತೆಗಳಿರ! ರತ್ನಮಯಿಯಾದ ದುರ್ಗೆಯನ್ನು ನಾನು ಯಾವಾಗಲೂ ಪೂಜೆಮಾಡುತ್ತೇನೆ. ಆದ್ದರಿಂದಲೇ ನಾನೂ ಕೂಡ ದುರ್ಲಭವಾದ ಬ್ರಹ್ಮತ್ವವನ್ನು ಹೊಂದಿದ್ದೇನೆ.

ಇಂದ್ರನೀಲಮಯೀಂ ದೇವೀಂ ವಿಷ್ಣುಃ ಪೂಜಯತೇ ಸದಾ ।
ವಿಷ್ಣುತ್ವಂ ಪ್ರಾಪ್ತವಾಂಸ್ತೇನ ಅದ್ಭುತೈಕಂ ಸನಾತನಂ ॥ ೪ ॥

ದೇವೀಂ ಹೇಮಮಯೀಂ ದುರ್ಗಾಂ ಧನದೋಽರ್ಚಯತೇ ಸದಾ ।
ತೇನಾಸೌ ಧನದೋ ದೇವೋ ಧನೇಶತ್ವಮವಾಪ್ತವಾನ್ ॥ ೫ ॥

ವಿಶ್ವೇ ದೇವಾ ಮಹಾತ್ಮಾನೋರೌಪ್ಯಾಂ ದೇವೀಂ ಮನೋರಮಾಂ ।
ಯುಜಂತಿ ವಿಧಿವತ್ತೇನ ವಿಶ್ವೇದೇವತ್ವಮಾಗತಾಃ ॥ ೬ ॥

ವಾಯುಃ ಪೂಜಯತೇ ಭಕ್ತ್ಯಾ ದೇವೀಂ ಪಿತ್ತಲಸಂಭವಾಂ ।
ವಾಯುತ್ವಂ ತೇನ ಸಂಪ್ರಾಪ್ತಮನೌಪಮ್ಯಗುಣಾವಹಂ ॥ ೭ ॥

ವಸವಃ ಕಾಂಸ್ಯಕಾಂ ದೇವೀಂ ಪೂಜಯಂತಿ ವಿಧಾನತಃ ।
ಪ್ರಾಪ್ತಾಸ್ತತೋ ಮಹಾತ್ಮಾನೋ ವಸುತ್ವಂ ತನ್ಮಹೋದಯಂ ॥ ೮ ॥

---

೪. ಇಂದ್ರನೀಲ ಮಣಿಯಿಂದ ಕೂಡಿದ ದುರ್ಗೆಯನ್ನು ವಿಷ್ಣುವು ಪೂಜಿಸುತ್ತಿರುವನು. ಆದ್ದರಿಂದಲೇ ಸನಾತನವಾದ ವಿಷ್ಣುತನವನ್ನು ಹೊಂದಿದ್ದಾನೆ. ಅದು ಬಹು ಅದ್ಭುತವಾದುದು.

೫. ಚಿನ್ನದಲ್ಲಿ ಮಾಡಿದ ದುರ್ಗಾಪ್ರತಿಮೆಯನ್ನು ಕುಬೇರನು ಪೂಜಿಸುತ್ತಿರುವನು. ಆದ್ದರಿಂದಲೇ ಆ ಕುಬೇರನು ಧನಕ್ಕೆ ಒಡೆಯನಾದನು.

೬. ವಿಶ್ವೇದೇವರು ಬೆಳ್ಳಿಯ ದುರ್ಗಾ ವಿಗ್ರಹವನ್ನು ಪೂಜಿಸುತ್ತಾರೆ. ಅದರಿಂದಲೇ ಅವರು ವಿಶ್ವೇದೇವರಾದರು.

೭. ವಾಯುವು ಯಾವಾಗಲೂ ಹಿತ್ತಾಳೆಯ ದುರ್ಗೆಯನ್ನು ಪೂಜಿಸುತ್ತಿರುವನು. ಆದ್ದರಿಂದಲೇ ಅವನು ಉತ್ತಮವಾದ ಗುಣವುಳ್ಳ ವಾಯುತನದ ಮಹಿಮೆಯನ್ನು ಹೊಂದಿದನು.

೮. ವಸುಗಳು ಕಂಚಿನ ದುರ್ಗೆಯ ಪ್ರತಿಮೆಯನ್ನು ಪೂಜಿಸುತ್ತಿರುವರು. ಆದ್ದರಿಂದಲೇ ಅವರು ಉತ್ತಮವಾದ ಗೌರವವನ್ನು ಹೊಂದಿ ವಸುಗಳೆಂದು ಪ್ರಸಿದ್ಧರಾಗಿರುವರು.

ಅಶ್ವಿನೌ ಪಾರ್ಥಿವೀಂ ದೇವೀಂ ಪೂಜಯಂತೋ ವಿಧಾನತಃ ।
ತೇನ ತಾವಶ್ವಿನೌ ದೇವೌ ಸ್ವರ್ವೈದ್ಯೌ ಸಂಬಭೂವತುಃ ॥ ೯ ॥

ಸ್ಫಾಟಿಕೀಂ ಶೋಭನಾಂ ದೇವೀಂ ವರುಣಃ ಪೂಜಯೇತ್ಸದಾ ।
ವರುಣತ್ವಂ ಚ ಸಂಪ್ರಾಪ್ತಂ ತೇನ ಚದ್ಧಾರ್ಥ್ಯ ಸಮನ್ವಿತಂ ॥ ೧೦ ॥

ದೇವೀಂ ರತ್ನಮಯೀಂ ಪುಣ್ಯಾಮಗ್ನಿರ್ಯಜತಿ ಭಾವಿತಃ ।
ಅಗ್ನಿತ್ವಂ ಪ್ರಾಪ್ತವಾಂಸ್ತೇನ ತೇಜೋರೂಪಸಮನ್ವಿತಂ ॥ ೧೧ ॥

ತಾಮ್ರಾಂ ದೇವೀಂ ಸದಾಕಾಲಂ ಭಕ್ತ್ಯಾ ದೇವೋ ದಿವಾಕರಃ ।
ಅರ್ಚತೇ ತೇನ ಸಂಪ್ರಾಪ್ತಂ ಸೂರ್ಯತ್ವಂ ಶುಭಮುತ್ತಮಂ ॥ ೧೨ ॥

ಮುಕ್ತಾಫಲಮಯೀಂ ದೇವೀಂ ಸೋಮಃ ಪೂಜಯತೇ ಸದಾ ।
ತೇನ ಸೋಮೇನ ಸಂಪ್ರಾಪ್ತಂ ಸೋಮತ್ವಂ ಸತತೋಜ್ಜ್ವಲಂ ॥ ೧೩ ॥

ಪ್ರವಾಲಕಮಯೀಂ ದೇವೀಂ ಪೂಜಯಂತಿ ವಿಧಾನತಃ ।
ತೇನ ತೇ ಗ್ರಹತಾಂ ಪ್ರಾಪ್ತಾ ಗ್ರಹಾಃ ಸೂರ್ಯಾದಯೋಽನಿಶಂ ॥ ೧೪ ॥

---

೯. ಅಶ್ವಿನೀ ದೇವತೆಗಳು ಮಣ್ಣಿನ ಪ್ರತಿಮೆಯ ದುರ್ಗೆಯನ್ನು ಪೂಜಿಸುವರು. ಆದ್ದರಿಂದ ಅಶ್ವಿನೀ ದೇವತೆಗಳು ದೇವಲೋಕ ವೈದ್ಯರಾಗಿ ಆದರು.

೧೦. ವರುಣನು ಸ್ಫಟಿಕ ಶಿಲೆಯ ದುರ್ಗೆಯನ್ನು ಪೂಜಿಸುತ್ತಿರುವನು. ಆದ್ದರಿಂದಲೇ ವರುಣನು ಇಂತಹ ಉತ್ಕರ್ಷತೆಯನ್ನು ಹೊಂದಿರುವನು.

೧೧. ಅಗ್ನಿಯು ರತ್ನದ ದುರ್ಗಾಪ್ರತಿಮೆಯನ್ನು ಪುಜಿಸುತ್ತಿರುವನು. ಆದ್ದರಿಂದಲೇ ಇಂತಹ ತೇಜೋರೂಪವಾದ ಮಹಿಮೆಯನ್ನು ಹೊಂದಿರುವನು.

೧೨. ಸೂರ್ಯನು ತಾಮ್ರದ ದುರ್ಗಾದೇವಿಯನ್ನು ಭಕ್ತಿಯಿಂದ ಯಾವಾಗಲೂ ಪೂಜಿಸುತ್ತಿರುವನು. ಆದ್ದರಿಂದಲೇ ಸೂರ್ಯನು ಉತ್ತಮವಾದ ಸ್ಥಾನವನ್ನೂ ಗೌರವವನ್ನೂ ಹೊಂದಿರುವನು.

೧೩. ಚಂದ್ರನು ಮುತ್ತಿನ ದುರ್ಗೆಯ ಪ್ರತಿಮೆಯನ್ನು ಪೂಜಿಸುತ್ತಿರುವನು ಆದ್ದರಿಂದಲೇ ಚಂದ್ರನು ಪ್ರಕಾಶಮಾನವಾದ ಚಂದ್ರನಾಗಿರುವನು

೧೪. ಗ್ರಹಗಳು ಹವಳದ ದುರ್ಗಾಪ್ರತಿಮೆಯನ್ನು ಪೂಜಿಸುತ್ತಿರುವರು. ಆದ್ದರಿಂದಲೇ ಅವರು ಗ್ರಹಗಳ ಅಧಿಕಾರದಲ್ಲಿ ನಿಯುಕ್ತರಾಗಿರುವರು.

ವಾರಿಜಾಂ ಶೋಭನಾಂ ದೇವೀಂ ಪೂಜಯಂತ್ಯಸುರೋತ್ತಮಾಃ ।
ವಾರಿಜಾಶ್ಚ ಮಹಾತ್ಮಾನಸ್ತೇನ ತೇಽಮಿತವಿಕ್ರಮಾಃ ॥ ೧೫ ॥

ತ್ರಪುಸೀಸಮಯೀಂ ದೇವೀಂ ಯಜಂತೇ ಪಿತರಃ ಸದಾ ।
ಪಿತೃತ್ವಂ ಪ್ರಾಪ್ಯ ತೇ ಸರ್ವೇ ಸಂಪೂಜ್ಯಾಶ್ಚ ಜಗತ್ರಯೇ ॥ ೧೬ ॥

ತಥಾ ಲೋಹಮಯೀಂ ದೇವೀಂ ಪಿಶಾಚಾಃ ಪೂಜಯಂತಿ ತಾಂ ।
ತೇನ ಸಿದ್ಧಿಬಲೋಪೇತಾಃ ಪ್ರಯಾಂತಿ ಪರಮಂ ಪದಂ ॥ ೧೭ ॥

ತ್ರಿಲೋಹಿನೀಂ ಸದಾ ದೇವೀಂ ಯಜಂತೇ ಗುಹ್ಯಕಾದಯಃ ।
ತೇನ ಭೋಗಬಲೋಪೇತಾಃ ಪ್ರಯಾಂತೀಶ್ವರ ಮಂದಿರಂ ॥ ೧೮ ॥

ವಜ್ರಲೋಹಮಯೀಂ ದೇವೀಂ ಯಜಂತೇ ಭೂತಯೋನಯಃ ।
ತೇನ ಮುಕ್ತಾಃ ಸುರತ್ವಂ ಚ ಲಭಂತೇ ಸತತಂ ದಿವಿ ॥ ೧೯ ॥

---

೧೫. ದೈತ್ಯರು ನೀರಿನಲ್ಲಿ ಹುಟ್ಟಿದ ಶಂಖ ಮೊದಲಾದ ಪದಾರ್ಥಗಳಿಂದ ಮಾಡಿದ ದುರ್ಗೆಯನ್ನು ಪೂಜಿಸುತ್ತಿರುವರು. ಆದ್ದರಿಂದಲೇ ಅವರು ಪರಾಕ್ರಮಿಗಳಾಗಿಯೂ, ನೀರಿನಲ್ಲಿ ವಾಸಮಾಡುವವರಾಗಿಯೂ ಇದ್ದಾರೆ

೧೬. ತವರ ಮತ್ತು ಸೀಸಗಳಲ್ಲಿ ಮಾಡಿರುವ ದುರ್ಗೆಯ ಪ್ರತಿಮೆಯನ್ನು ಪಿತೃಗಳು ಪೂಜೆ ಮಾಡುತ್ತಿರುವರು. ಆದ್ದರಿಂದಲೇ ಅವರು ಪಿತೃಗಳ ಸ್ಥಾನವನ್ನು ಹೊಂದಿ ಮೂರು ಲೋಕದಲ್ಲಿಯೂ ಪೂಜ್ಯರಾಗಿರುವರು

೧೭. ಪಿಶಾಚಗಳು ಕಬ್ಬಿಣದಲ್ಲಿ ಮಾಡಿರುವ ದುರ್ಗೆಯ ಪ್ರತಿಮೆಯನ್ನು ಪೂಜೆಮಾಡುತ್ತಾರೆ. ಆದ್ದರಿಂದಲೇ ಅವರಿಗೆ ಎಲ್ಲಾ ಸಿದ್ಧಿಗಳೂ ಉಂಟಾಗುತ್ತವೆ. ಮತ್ತು ಸ್ವರ್ಗಲೋಕವನ್ನೂ ಹೊಂದುತ್ತಾರೆ

೧೮. ಮೂರು ಲೋಹಗಳಿಂದ ಮಾಡಿದ ದುರ್ಗೆಯ ಪ್ರತಿಮೆಯನ್ನು ಗುಹ್ಯಕರೇ ಮುಂತಾದವರು ಪೂಜೆ ಮಾಡುತ್ತಾರೆ ಆದ್ದರಿಂದಲೇ ಅವರು ಅನೇಕ ಭೋಗಗಳನ್ನು ಹೊಂದಿ ಕೈಲಾಸವನ್ನು ಹೊಂದುತ್ತಾರೆ.

೧೯. ವಜ್ರದ ದುರ್ಗೆಯ ಪ್ರತಿಮೆಗೆ ಕಬ್ಬಿಣದ ಪೀಠ ಮುಂತಾದುವನ್ನು ಮಾಡಿಸಿ ಅದರಲ್ಲಿ ಆ ಪ್ರತಿಮೆಯನ್ನಿಟ್ಟು ಭೂತಗಳು ಪೂಜಿಸುತ್ತಾರೆ. ಆದ್ದರಿಂದಲೇ ಇವರು ಮುಕ್ತಿಯನ್ನು ಹೊಂದಿ ಸ್ವರ್ಗದಲ್ಲಿ ಸುಖಿಸುತ್ತಾರೆ.

ದೇವಾಸ್ತಥಾ ಯೂಯಮಪಿ ಯದೀಚ್ಛಥ ಪರಾಂ ಗತಿಂ ।
ಶಿವಾಂ ಮಣಿಮಯೀಂ ಪೂಜ್ಯ ಲಭಧ್ವಂ ಮಾನಸೇಪ್ಸಿತಂ ॥ ೨೦ ॥

ಯಶ್ಚ ದೇವ್ಯಾಃ ಗೃಹಂ ನಿತ್ಯಂ ಸಮ್ಮಾರ್ಜಯತಿ ಭಕ್ತಿತಃ ।
ಸ ಭವೇದ್ಬಲವಾನ್ ದೇವಾಃ ಸರ್ವಸಂಪತ್ತಿಸಂಯುತಃ ॥ ೨೧ ॥

ದೇವ್ಯಾ ಗೃಹಂ ತು ಯೋ ದೇವಾ ಗೋಮಯೇನೋಪಲೇಪಯೇತ್ ।
ಸ್ತ್ರೀ ಪುಮಾನ್ವಾ ಯಥಾವಚ್ಚ ಷಣ್ಮಾಸಾಭ್ಯಂತರೇ ತತಃ ॥ ೨೨ ॥

ಸ ಲಭೇದೀಪ್ಸಿತಾನ್ಕಾಮಾನ್ ದೇವೀಲೋಕಂ ಚ ಗಚ್ಛತಿ ॥ ೨೩ ॥

॥ ಪುಲಸ್ತ್ಯ ಉವಾಚ ॥

ಸ್ನಾನಕಾಲೇ ಮಹಾರಾಜ ನಾನಾವಾದಿತ್ರಮಂಗಲೈಃ ।
ಜಯಶಬ್ದೈಶ್ಚ ಯೋ ದುರ್ಗಾಂ ಸ್ನಾಪ್ಯಮಾನಾಂ ಜಲಾದಿಭಿಃ ॥ ೨೪ ॥

ಸಂಪೂಜಯತಿ ಭಕ್ತ್ಯಾ ಚ ಗಂಧಪುಷ್ಪಾದಿಭಿಸ್ತಥಾ ।
ಸ ಕ್ರೀಡತೇ ದಿವಂ ಗತ್ವಾ ಗಂಧರ್ವಾಪ್ಸರಸಾಂ ಗಣೈಃ ॥ ೨೫ ॥

---

೨೦. ಎಲೈ ದೇವತೆಗಳಿರಾ ! ನಿಮಗೂ ಉತ್ತಮ ಗತಿಯು ಬೇಕಾದಲ್ಲಿ ಮಣಿಯಲ್ಲಿ ದುರ್ಗೆಯ ಪ್ರತಿಮೆಯನ್ನು ಮಾಡಿಸಿಕೊಂಡು ಪೂಜಿಸಿರಿ, ನಿಮಗೆ ಇಷ್ಟಾರ್ಥವು ಕೈಗೂಡುತ್ತದೆ.

೨೧. ಯಾವನು ದೇವಿಯ ದೇವಸ್ಥಾನವನ್ನು ನಿತ್ಯವೂ ಭಕ್ತಿಯಿಂದ ಗುಡಿಸುತ್ತಾನೆಯೋ ಅವನು ಲೋಕದಲ್ಲಿ ಬಲಿಷ್ಠನೂ, ಎಲ್ಲಾ ಸಂಗತ್ತುಗಳಿಂದ ಕೂಡಿದವನೂ ಆಗುತ್ತಾನೆ.

೨೨–೨೩. ಎಲೈ ದೇವತೆಗಳಿರಾ! ಯಾವನು ಸಗಣಿಯಿಂದ ದೇವಸ್ಥಾನವನ್ನು ಸಾರಿಸುತ್ತಾನೆಯೋ ಅವನು ಗಂಡಸಾಗಲಿ, ಹೆಂಗಸಾಗಲಿ ಆರು ತಿಂಗಳೊಳಗೇ ಇಷ್ಟಾರ್ಥಗಳೆಲ್ಲವನ್ನೂ ಹೊಂದಿ ದೇವಿಯ ಲೋಕವನ್ನು ಹೊಂದುತ್ತಾನೆ.

೨೪–೨೫. ಆ ದೇವಿಗೆ ಅಭಿಷೇಕ ಮಾಡುವಾಗ ಅನೇಕ ಬಗೆಯಾದ ಮಂಗಳ ವಾದ್ಯಗಳನ್ನು ಮಾಡಿಸುತ್ತ, ಜಯ ಜಯಯೆಂದು ಶಬ್ದಮಾಡುತ್ತ ದುರ್ಗೆಗೆ ಅಭಿಷೇಕ ಮಾಡಿದರೆ ಅವನು ಸ್ವರ್ಗವನ್ನು ಹೊಂದಿ ಗಂಧರ್ವರು ಮತ್ತು ಅಪ್ಸರರುಗಳ ಜೊತೆಯಲ್ಲಿ ಸುಖಿಸುತ್ತಾನೆ.

ಚಕ್ರೈರ್ವಾ ಶತಸಂಖ್ಯೈಸ್ತು ಕ್ಷೀರವೃಕ್ಷಸಮುದ್ಭವೈಃ ।
ಹೇಮಜೈಶ್ಚಾಪಿ ಕಲಶೈರ್ಜಲಕ್ಷೀರಘೃತಾದಿಭಿಃ ॥ ೨೬ ॥

ಅನೇಕವರ್ಣಸಂಯುಕ್ತೈರಕ್ಷತೈರ್ನೀಲತಂಡುಲೈಃ ।
ಯಃ ಕರೋತಿ ನರೋ ಭಕ್ತ್ಯಾ ಚಕ್ರಾಕಾರಂ ತು ಮಂಡಲಂ ॥ ೨೭ ॥

ಚಂಡಿಕಾಯಾಃ ಪುರೋ ರಾಜಂಶ್ಚಂಡಿಕಾಯಾಶ್ಚ ಮಂದಿರೇ ।
ಸ ದಿವ್ಯಯಾನಗೋ ಭೂತ್ವಾ ರಮತೇ ವೈಷ್ಣವೇ ಪುರೇ ॥ ೨೮ ॥

ಶುಭಂ ವಾಽಪ್ಯಶುಭಂ ವಾಽಪಿ ಫಲಂ ಪುಷ್ಪಂ ನಿವೇದಯೇತ್ ।
ಭಕ್ತ್ಯಾ ಯುಕ್ತೋ ನರಃ ಸರ್ವಂ ಸ ಚ ದೇವತ್ವಮಾಪ್ನುಯಾತ್ ॥ ೨೯ ॥

ನಾನಾಪುಷ್ಪಸ್ರಜೋಭಿಶ್ಚ ಮಂಡಪಂ ಚಂಡಿಕೋಪರಿ ।
ಯಃ ಕುರ್ಯಾದ್ವಿಧಿವದ್ಭಕ್ತ್ಯಾ ವಿಷ್ಣುಲೋಕೇ ಮಹೀಯತೇ ॥ ೩೦ ॥

---

೨೬-೨೮. ಹಾಲು ಬರುವ ಮರಗಳಿಂದ ನೂರು ಚಕ್ರಗಳನ್ನು ಮಾಡಿ ಅವುಗಳ ಮೇಲೆ ಶಕ್ತ್ಯನುಗುಣವಾಗಿ ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ, ಮಣ್ಣು ಇವುಗಳಲ್ಲಿ ಯಾವುದಾದರೂ ಕೊಡವನ್ನು ನೂರನ್ನು ಇಟ್ಟು ಕೆಲವಕ್ಕೆ ತುಪ್ಪ, ಕೆಲವಕ್ಕೆ ಹಾಲು, ಕೆಲವಕ್ಕೆ ನೀರನ್ನು ತುಂಬಿ ಮಾವಿನ ಚಿಗುರು ಮುಂತಾದುವುಗಳನ್ನು ಹಾಕಿ ಅಲಂಕರಿಸಿ ಅದರ ಕೆಳಗೆ ಅನೇಕ ತರಹವಾದ ರಂಗೋಲಿಗಳಿಂದಲೂ, ನೀರಿನಲ್ಲಿ ಕಲಸಿದ ಅಕ್ಕಿಯ ಹಿಟ್ಟಿನಿಂದಲೂ, ಮಂಡಲಗಳನ್ನು ಮಾಡಬೇಕು. ಹೀಗೆ ಮಾಡಿದರೆ ಅವನು ಉತ್ತಮವಾದ ವಿಮಾನದಲ್ಲಿ ಕುಳಿತು ವೈಕುಂಠದಲ್ಲಿ ಸುಖಿಸುತ್ತಾನೆ.

೨೯. ಆ ದುರ್ಗೆಗೆ ಒಳ್ಳೆಯದಾಗಲಿ, ಕೆಟ್ಟದಾಗಲಿ, ಫಲವನ್ನಾಗಲಿ, ಪುಷ್ಪವನ್ನಾಗಲಿ ಭಕ್ತಿಯಿಂದ ನಿವೇದನ ಮಾಡಬೇಕು. ಹಾಗೆ ಮಾಡಿದರೆ ದೇವತೆಯೇ ಆಗುತ್ತಾನೆ.

೩೦. ಆ ಚಂಡಿಕೆಗೆ ಅನೇಕ ಹೂಮಾಲೆಗಳಿಂದ ಮಂಟಪವನ್ನು ಮಾಡಿದರೆ ಅವನು ವಿಷ್ಣುಲೋಕದಲ್ಲಿ ಸುಖಿಸುತ್ತಾನೆ.

ಕುರ್ಯಾತ್ಪುಷ್ಪಗೃಹಂ ಭಕ್ತ್ಯಾ ವಿಧಿವಚ್ಚಂಡಿಕೋಪರಿ ।
ನವಮ್ಯಾಂ ಪರ್ವಕಾಲೇ ವಾ ವಿಚಿತ್ರಕುಸುಮೋಜ್ಜ್ವಲಂ ॥ ೩೧ ॥

ವಿಮಾನಂ ವರಮಾರುಹ್ಯ ಪುಷ್ಪದಾಮೋಪಶೋಭಿತಂ ।
ಅಕ್ಷಯಂ ಮೋದತೇ ಕಾಲಂ ಚಂಡಿಕಾಲಯಮಾಶ್ರಿತಃ ॥ ೩೨ ।

ಪೂಜಾವಿಭಕ್ತಿವಿನ್ಯಾಸರಚನಾದಿಷು ಸರ್ವತಃ ।
ಫಲಮೇವ ಸಮಾಸೇನ ಜ್ಞೇಯಂ ವಿತ್ತಾನುಸಾರತಃ ॥ ೩೩ ॥

ಕೃಷ್ಣಾಗರುಂ ಸಕರ್ಪೂರಂ ರೋಚನಂ ಚಂದನಂ ತಥಾ ।
ಭಗವತ್ಯೈ ನರೋ ಭೂಯಃ ಪಂಕಂ ದತ್ವಾ ನರಾಧಿಪಃ ॥ ೩೪ ॥

ಇಹ ಕಾಮಾನವಾಪ್ಯಾಥ ಶಿವಲೋಕೇ ಮಹೀಯತೇ ।
ಗುಗ್ಗುಲಂ ಸಘೃತಂ ದತ್ವಾ ದುರ್ಗಾಯೈ ಚ ನರರ್ಷಭ ॥ ೩೫ ॥

ವರ್ಷಾರ್ಧಂ ವಿಧಿವದ್ಭಕ್ತ್ಯಾ ಗೋಸಹಸ್ರಫಲಂ ಲಭೇತ್ ।
ಅಗುರುಂ ಧೂಪಮಾವೇದ್ಯ ಸರ್ವಯಜ್ಞಫಲಂ ಲಭೇತ್ ॥ ೩೬ ॥

---

೩೧-೩೨. ಚಂಡಿಕೆಗೆ ಹೂವಿನ ಮಂಟಪವನ್ನು ನವಮಿಯಲ್ಲಾಗಲಿ, ಪರ್ವ ಕಾಲಗಳಲ್ಲಿಯಾಗಲಿ, ಬಗೆ ಬಗೆಯಾಗಿ ಕಟ್ಟಿದರೆ ಅವನು ಹೂವಿನಿಂದ ಅಲಂಕೃತ ವಾದ ವಿಮಾನವನ್ನು ಹತ್ತಿ ಬಹು ಕಾಲದವರೆಗೂ ಚಂಡಿಕೆಯ ಲೋಕದಲ್ಲಿ ಸುಖಿಸು ತ್ತಿರುವನು.

೩೩. ಎಲ್ಲಾ ವಿಷಯಗಳಲ್ಲಿಯೂ ತನ್ನ ಯೋಗ್ಯತೆಗನುಗುಣವಾಗಿ ಪೂಜೆ ಗಳನ್ನು ಮಾಡಿದರೆ ಯೋಗ್ಯ ಫಲವು ಸಿಕ್ಕುತ್ತದೆಂದು ಸಂಗ್ರಹವಾಗಿ ಹೇಳಿದ್ದೇನೆ.

೩೪ ೩೬. ಕೃಷ್ಣಾಗರು, ಕರ್ಪೂರ, ಚಂದನ, ಗೋರೋಚನಗಳನ್ನು ಭಗವತಿಗೆ ಪೂಜಿಸಿ ಪಂಚವನ್ನು ಮಾಡಿ ಅದರಲ್ಲಿ ಕೂರಿಸಿದರೆ ಈ ಲೋಕದಲ್ಲಿ ಎಲ್ಲಾ ಇಷ್ಟಗಳನ್ನೂ ಹೊಂದಿ ಶಿವಲೋಕದಲ್ಲಿ ಸುಖಿಸುತ್ತಾನೆ. ಗುಗ್ಗುಳವನ್ನೂ ತುಪ್ಪವನ್ನೂ ಆ ದುರ್ಗೆಗೆ ಆರು ತಿಂಗಳವರೆಗೆ ನಿವೇದಿಸಿದರೆ ಸಾವಿರ ಗೋದಾನ ಮಾಡಿದ ಫಲವನ್ನು ಹೊಂದುತ್ತಾನೆ. ಅಗುರು ಧೂಪವನ್ನು ದುರ್ಗೆಗೆ ಕೊಟ್ಟರೆ ಎಲ್ಲಾ ಯಜ್ಞಗಳನ್ನು ಮಾಡಿದ ಫಲವು ಒರುತ್ತದೆ. ಅಗುರನ್ನು ಕೊಟ್ಟರೆ ಸಾವಿರ

ಸಿತಾಗರುಂ ನರೋ ದತ್ತ್ವಾ ಗೋಸಹಸ್ರಫಲಂ ಲಭೇತ್ ।
ಸರ್ವೇಷಾಮೇವ ಧೂಪಾನಾಂ ದುರ್ಗಾಯಾ ಗುಗ್ಗುಲಃ ಪ್ರಿಯಃ ॥ ೩೭ ॥

ಘೃತಯುಕ್ತೋ ವಿಶೇಷೇಣ ಸತತಂ ಪ್ರೀತಿವರ್ಧನಃ ।
ದ್ವೇ ಸಹಸ್ರೇ ಪಲಾನಾಂ ತು ತಥಾ ಪಲಶತದ್ವಯಂ ॥ ೩೮ ॥

ದತ್ವಾ ಶುಕ್ಲನವಮ್ಯಾಂ ತು ಚಂಡಿಕಾವಲ್ಲಭೋ ಭವೇತ್ ।
ಮಹಿಷಾಕ್ಷಂ ಘೃತಾಕ್ತಂ ತು ದತ್ವಾ ಬಿಲ್ವಮಥಾಪಿ ವಾ ॥ ೩೯ ॥

ವಾಜಪೇಯಫಲಂ ಪ್ರಾಪ್ಯ ಸೂರ್ಯಲೋಕೇ ಮಹೀಯತೇ ।
ಸಕೃಚ್ಛಾಗರುಧೂಪೇನ ಪ್ರೀತಿದಾ ಸರ್ವಮಂಗಲಾ ॥ ೪೦ ॥

ಶೋಧಯೇತ್ಪಾಪಕಲಿಲಂ ಕಾಂಚನಂ ದಹನೋ ಯಥಾ ।
ವಸ್ತ್ರಾಣಿ ಸುವಿಚಿತ್ರಾಣಿ ಸೂಕ್ಷ್ಮಾಣಿ ಸುಮೃದೂನಿ ಚ ॥ ೪೧ ॥

ಯಃ ಪ್ರಯಚ್ಛತಿ ದುರ್ಗಾಯೈ ಸ ಗಚ್ಛತಿ ಶಿವಾಲಯಂ ।
ಯಾವಂತಸ್ತನ್ತವೋ ವೀರ ತೇಷು ವಸ್ತ್ರೇಷು ಕೀರ್ತಿತಾಃ ॥ ೪೨ ॥

---

ಗೋಗಳನ್ನು ದಾನಮಾಡಿದ ಫಲವು ಬರುತ್ತದೆ. ಎಲ್ಲಾ ಧೂಪಗಳಿಗಿಂತಲೂ ಗುಗ್ಗುಳವು ದುರ್ಗೆಗೆ ಬಹು ಪ್ರಿಯವಾದುದು.

೩೮-೪೫. ತುಪ್ಪದಿಂದ ಕೂಡಿದ ಗುಗ್ಗುಳವು ಆ ದುರ್ಗೆಗೆ ಬಹು ಪ್ರೀತಿಕರವಾದುದು. ಎರಡು ಸಾವಿರದ ಇನ್ನೂರು ಪಲಗಳಷ್ಟನ್ನು ಶುದ್ಧ ನವಮಿಯ ದಿನ ಕೊಟ್ಟರೆ ಚಂಡಿಕೆಗೆ ಪ್ರೀತಿಪಾತ್ರನಾಗುವನು ಗುಗ್ಗುಳವನ್ನು ತುಪ್ಪದಿಂದ ನೆನೆಸಿ ನಿವೇದಿಸಿದರೂ ಅಥವಾ ಬಿಲ್ವಪತ್ರ ಹಣ್ಣನ್ನು ತುಪ್ಪದಿಂದ ನೆನೆಸಿ ಕೊಟ್ಟರೂ ವಾಜಪೇಯ ಫಲವನ್ನು ಹೊಂದಿ ಸೂರ್ಯಲೋಕದಲ್ಲಿ ಸುಖಿಸುತ್ತಾನೆ. ಅಗುರುವನ್ನು ಒಂದು ಬಾರಿ ಧೂಪ ಹಾಕಿದರೂ ದುರ್ಗೆಯು ಸಂತೋಷಪಡುತ್ತಾಳೆ. ಬೆಂಕಿಯು ಚಿನ್ನವನ್ನು ಶುದ್ಧಮಾಡುವಂತೆ ಎಲ್ಲಾ ಪಾಪವನ್ನು ಕಳೆದು ಮನುಷ್ಯನನ್ನು ಶುದ್ಧಮಾಡುತ್ತಾಳೆ. ಉತ್ತಮವಾಗಿಯೂ, ನವಿರಾಗಿಯೂ ಇರುವ ವಸ್ತ್ರಗಳನ್ನು ದುರ್ಗೆಗೆ ಕೊಟ್ಟರೆ ಅವನು ಶಿವಸ್ಥಾನವಾದ ಕೈಲಾಸವನ್ನು ಹೊಂದುತ್ತಾನೆ. ಆ ಒಟ್ಟೆಯಲ್ಲಿ ಎಷ್ಟು ನೂಲುಗಳಿವೆಯೋ ಅಷ್ಟು ಸಾವಿರ ವರ್ಷಗಳವರೆಗೂ

ತಾವದ್ವರ್ಷಸಹಸ್ರಾಣಿ ಶೋಭತೇ ಚಂಡಿಕಾಲಯೇ ।
ಸುವರ್ಣತಿಲಕೇ ಯಸ್ತು ಭಗವತ್ಯೈ ಪ್ರಯಚ್ಛತಿ ॥ ೪೩ ॥

ಸ ಗಚ್ಛತಿ ಪರಂ ಸ್ಥಾನಂ ಯತ್ರ ಸಾ ಪರಮಾ ಕಲಾ ।
ಸುವರ್ಣಘಟಿತಂ ವಸ್ತ್ರಂ ಯೋ ದುರ್ಗಾಯೈ ಪ್ರಯಚ್ಛತಿ ॥ ೪೪ ॥

ಗೋಸಹಸ್ರಫಲಂ ಪ್ರಾಪ್ಯ ಸೂರ್ಯಲೋಕೇ ಮಹೀಯತೇ ।
ಏವಂ ವಿತ್ತಾನುಸಾರೇಣ ಫಲಂ ಜ್ಞೇಯಂ ಸಮಾಸತಃ ॥ ೪೫ ॥

ಸಂಧ್ಯಾಕಾಲೇ ನವಮ್ಯಾಂ ಯೋ ಬಲಿಂ ಕುರ್ಯಾನ್ನರಾಧಿಪ ।
ಚಂಡಿಕಾಯತನೇ ಭಕ್ತ್ಯಾ ಮಹಿಷಾಜನಿಪಾತನೈಃ ॥ ೪೬ ॥

ಸ ಗಚ್ಛತಿ ಪರಂ ಸ್ಥಾನಂ ಯತ್ರ ಸಾ ಚಂಡಿಕಾ ಸ್ಥಿತಾ ।
ಗುಡಖಂಡಾಜ್ಯಸಂಮಿಶ್ರಮನ್ನಂ ದದ್ಯಾನ್ನರಾಧಿಪ । ॥ ೪೭ ॥

ದೇವ್ಯೈ ಯಃ ಸಕುಲಃ ಸೋಽಥ ಸೂರ್ಯಲೋಕೇ ಮಹೀಯತೇ ।
ಗುಡಖಂಡಘೃತಾನಾಂ ಚ ತಥಾ ಶರ್ಕರಯಾ ನೃಪ ॥ ೪೮ ॥

---

ಚಂಡಿಕೆಯ ಲೋಕದಲ್ಲಿ ಸುಖಿಸುತ್ತಾನೆ. ಚಿನ್ನದ ತಿಲಕವನ್ನು ಆ ದೇವಿಗೆ ಕೊಟ್ಟರೆ ಅವನು ಆ ದುರ್ಗೆಯಿರುವ ಜಾಗವನ್ನು ಹೊಂದಿ ಸುಖಿಸುತ್ತಾನೆ. ಚಿನ್ನದ ಸರಿಗೆಯಿಂದ ಕೂಡಿದ ವಸ್ತ್ರವನ್ನು ದುರ್ಗೆಗೆ ಕೊಟ್ಟರೆ ಸಾವಿರ ಗೋದಾನ ಮಾಡಿದ ಫಲವನ್ನು ಹೊಂದಿ ಸೂರ್ಯಲೋಕದಲ್ಲಿ ಸುಖಿಸುತ್ತಾನೆ. ಈ ರೀತಿಯಾಗಿ ತಿಳಿಯಿರಿ. ಒಟ್ಟಿನಲ್ಲಿ ಹೇಳಬೇಕಾದರೆ ಅವನ ಐಶ್ವರ್ಯಕ್ಕನುಗುಣವಾಗಿ ಸೇವೆಮಾಡಿದರೆ ಅದಕ್ಕೆ ತಕ್ಕ ಫಲವನ್ನು ತಿಳಿಯಬೇಕು.

೪೬-೫೭. ನವಮಿಯ ದಿನ ಸಂಧ್ಯಾಕಾಲದಲ್ಲಿ ಚಂಡಿಕೆಗೆ ಎಮ್ಮೆ, ಆಡು, ಕುರಿಗಳನ್ನು ಕಡಿದು ಬಲಿಯನ್ನು ಕೊಟ್ಟರೆ ಆತನು ಚಂಡಿಕೆಯಿರುವ ಸ್ಥಾನವನ್ನು ಹೊಂದುತ್ತಾನೆ ಬೆಲ್ಲ ತುಪ್ಪಗಳಿಂದ ಕಲಸಿದ ಅನ್ನವನ್ನು ದೇವಿಗೆ ನಿವೇದನ ಮಾಡಿದರೆ ಅವನು ತನ್ನ ವಂಶದವರನ್ನೂ ಕರೆದುಕೊಂಡು ಸೂರ್ಯ ಲೋಕದಲ್ಲಿ ಸುಖಿಸುತ್ತಾನೆ. ಬೆಲ್ಲ, ತುಪ್ಪ, ಸಕ್ಕರೆ ಇವುಗಳನ್ನು ದೇವಿಗೆ ಬಳಿದು ಸ್ನಾನ

ದತ್ತೇ ಚೋದ್ವರ್ತನೇ ದೇವ್ಯೈ ಸ ಯಾತಿ ಬ್ರಹ್ಮಣಃ ಪದಂ ।
ಶಾಲ್ಯೋದನಂ ರಸಾನಾಂ ಚ ಪ್ರಪಾನಂ ವಿರಜಂ ತಥಾ ॥ ೪೯ ॥

ಯಃ ಪ್ರಯಚ್ಛತಿ ದುರ್ಗಾಯೈ ಸ ಚ ಗಚ್ಛೇಚ್ಛಿವಾಲಯಂ ।
ಮುಗ್ಧಾಮುದ್ದಿಶ್ಯ ಪಾನೀಯಂ ಕೇತಕೀಗಂಧವಾಸಿತಂ ॥ ೫೦ ॥

ಯಃ ಪ್ರಯಚ್ಛತಿ ರಾಜೇಂದ್ರ ಸ ಗಣಾಧಿಪತಿರ್ಭವೇತ್ ।
ಆಮ್ರಂ ಚ ನಾರಿಕೇಲಂ ಚ ಖರ್ಜೂರಂ ಬೀಜಪೂರಕಂ ॥ ೫೧ ॥

ಯಃ ಪ್ರಯಚ್ಛತಿ ದುರ್ಗಾಯೈ ಸ ಗಚ್ಛೇತ್ಪರಮಂ ಪದಂ ।
ಘೃತದೀಪಪ್ರದಾನೇನ ಯೋಽರ್ಚಯೇಚ್ಚಂಡಿಕಾಂ ನರಃ ॥ ೫೨ ॥

ಸೋಽಶ್ವಮೇಧಫಲಂ ಪ್ರಾಪ್ಯ ಚಂಡಿಕಾನುಚರೋ ಭವೇತ್ ।
ತೈಲದೀಪಂ ಚ ಯೋ ದದ್ಯಾತ್ಪೂಜಯಿತ್ವಾ ತು ಚಂಡಿಕಾಂ ॥ ೫೩ ॥

ನಾಗಲೋಕಂ ಸಮಾಸಾದ್ಯ ಕ್ರೀಡತೇ ಸಹ ಕಿನ್ನರೈಃ ।
ಆತ್ಮದೇಹವಸಾದೀಪಂ ಪ್ರಜ್ವಾಲ್ಯ ಚಂಡಿಕಾಗ್ರತಃ ॥ ೫೪ ॥

---

ಮಾಡಿಸಿದರೆ ಅವನು ಬ್ರಹ್ಮಸ್ಥಾನವನ್ನು ಹೊಂದಿ ಸುಖಿಸುತ್ತಾನೆ. ಶಾಲ್ಯನ್ನ, ಇನ್ನೂ ರುಚಿ ರುಚಿಯಾದ ಅನ್ನಗಳು, ಅರವಟ್ಟಿಗೆ, (ಪಾನಕ ಪಣಿಯಾರಗಳು) ಇವುಗಳನ್ನು ದುರ್ಗೆಯ ಪ್ರೀತ್ಯರ್ಥವಾಗಿ ಇಡಿಸಿ ಆ ದೇವಸ್ಥಾನವನ್ನು ಗುಡಿಸುವಂತೆ ಮಾಡಿದರೆ ಅವನು ಕೈಲಾಸವನ್ನು ಹೊಂದುವನು. ಯಾವನು ಪಾನಕ ಮುಂತಾದುವನ್ನು ಮಾಡಿಸಿ ಅದಕ್ಕೆ ತಾಳೆಯ ಹೂ ಮುಂತಾದ ಹೂಗಳ ವಾಸನೆಯನ್ನು ಕಟ್ಟಿ ದುರ್ಗೆಯ ಪ್ರೀತ್ಯರ್ಥವಾಗಿ ಕೊಡುತ್ತಾನೆಯೋ ಅವನು ಗಣಗಳಿಗೆ ಅಧಿಪತಿಯಾಗುತ್ತಾನೆ. ಮಾವು, ತೆಂಗು, ಖರ್ಜೂರ ಸೀಬೆ, ಮುಂತಾದ ಹಣ್ಣುಗಳನ್ನು ದುರ್ಗೆಗೆ ನಿವೇದನ ಮಾಡಿದರೆ ಅವನು ಪರಮಪದವನ್ನು ಹೊಂದುತ್ತಾನೆ. ತುಪ್ಪದ ದೀಪವನ್ನು ಹಚ್ಚಿ ಚಂಡಿಕೆಯ ಪ್ರೀತ್ಯರ್ಥವಾಗಿ ಕೊಟ್ಟರೆ ಅವನು ಅಶ್ವಮೇಧ ಯಾಗದ ಫಲವನ್ನು ಹೊಂದಿ ಚಂಡಿಕೆಯ ಜೊತೆಯಲ್ಲಿಯೇ ಇರುತ್ತಾನೆ. ಚಂಡಿಕೆಯನ್ನು ಪೂಜಿಸಿ ಎಣ್ಣೆಯ ದೀಪವನ್ನು ಹಚ್ಚಿದರೆ ಅವನು ನಾಗಲೋಕಕ್ಕೆ ಹೋಗಿ ಕಿನ್ನರರೊಡನೆ ಸುಖಿಸುತ್ತಾನೆ. ತನ್ನ ದೇಹದ ಕೊಬ್ಬನ್ನು ಹಾಕಿ ಚಂಡಿಕೆಯ ಮುಂದೆ ದೀಪವನ್ನು

ನಿವೇದಯೇನ್ನರೋ ಭಕ್ತ್ಯಾ ಮೋದತೇ ಸೋಽಂಬಿಕಾಲಯೇ ।
ಯಃ ಕುರ್ಯಾತ್ಕಾರ್ತಿಕೇ ಮಾಸಿ ಶೋಭನಾಂ ದೀಪಮಾಲಿಕಾಂ ॥ ೫೫ ॥

ಚಂಡಿಕಾಯತನೇ ಭಕ್ತ್ಯಾ ಸ ಸೂರ್ಯಾಲಯಮಾವ್ರಜೇತ್ ।
ಘೃತೇನ ಕುರುಶಾರ್ದೂಲ ಅಮಾಯಾಂ ಚ ಸ್ವಶಕ್ತಿತಃ ॥ ೫೬ ॥

ವಿಶೇಷತೋ ನವಮ್ಯಾಂ ಚ ಭಕ್ತ್ಯಾ ಶ್ರದ್ಧಾಸಮನ್ವಿತಃ ।
ತಾವದ್ವರ್ಷಸಹಸ್ರಾಣಿ ಬ್ರಹ್ಮಲೋಕೇ ಮಹೀಯತೇ ॥ ೫೭ ॥

ಅಶ್ಮಸಾರಮಯಂ ಕೃತ್ವಾ ನಾನಾದೀಪಸಮನ್ವಿತಂ ।
ದೀಪವೃಂದಂ ಸಮುದ್ಬೋಧ್ಯ ದುರ್ಗಾಯಾಃ ಪುರತೋ ನೃಪ ॥ ೫೮ ॥

ನರಃ ಕಲ್ಪಾಯುತಂ ಸಾಗ್ರಂ ದುರ್ಗಾಲೋಕೇ ಮಹೀಯತೇ ।
ಚಂದ್ರಾಂಶುನಿರ್ಮಲಂ ಛತ್ರಂ ಮಣಿಮಾಣಿಕ್ಯಭೂಷಿತಂ ॥ ೫೯ ॥

ಸರ್ವತಃ ಶೋಭನಂ ಕೃತ್ವಾ ನಾನಾಪುಷ್ಪಾನುಲೇಪನೈಃ ।
ದುರ್ಗಾಯಾಃ ಪುರತೋ ಧತ್ತೇ ಸ ಯಾತಿ ಪರಮಾಂ ಗತಿಂ ॥ ೬೦ ॥

---

ಹಚ್ಚಿದರೆ ಆತನು ಚಂಡಿಕೆಯ ಮನೆಯಲ್ಲಿ ಸುಖಿಸುತ್ತಾನೆ. ಕಾರ್ತಿಕ ಮಾಸದಲ್ಲಿ ಚಂಡಿಕೆಯ ಮುಂದೆ ಸಾಲು ದೀಪವನ್ನು ಹಚ್ಚಿದರೆ ಆತನು ಸೂರ್ಯ ಲೋಕವನ್ನು ಹೊಂದುತ್ತಾನೆ. ಅಮಾವಾಸ್ಯೆಯಲ್ಲಿ ಭಕ್ತಿಯಿಂದ ತುಪ್ಪದ ದೀಪವನ್ನು ಶಕ್ತಿಗನು ಗುಣವಾಗಿ ದೇವಿಯ ಮುಂದೆ ಹಚ್ಚಿದರೂ ನವಮಿಯ ದಿನ ಹಚ್ಚಿದರೂ ಎಷ್ಟು ದೀಪಗಳನ್ನು ಹಚ್ಚುತ್ತಾನೆಯೋ ಅಷ್ಟು ಸಾವಿರ ವರ್ಷಗಳವರೆಗೂ ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ.

೫೮–೬೦. ಕಲ್ಲಿನ ಚಪ್ಪಡಿಯಲ್ಲಿ ಸಾಲು ದೀಪಗಳನ್ನು ತೋಡಿಸಿ ಆ ದುರ್ಗೆಯ ಮುಂದೆ ಹಚ್ಚಿದರೆ ಆತನು ಸಾವಿರ ಕಲ್ಪಗಳವರೆಗೂ ದುರ್ಗೆಯ ಲೋಕದಲ್ಲಿ ಸುಖಿಸುತ್ತಾನೆ. ಮತ್ತು ರತ್ನಗಳಿಂದ ಕೂಡಿದ ಬಿಳಿಯ ಛತ್ರಿಯನ್ನು ಹೂವಿನಿಂದ ಅಲಂಕರಿಸಿ ದುರ್ಗೆಗೆ ಕೊಟ್ಟರೆ ಅವನು ಉತ್ತಮ ಗತಿಯನ್ನು ಹೊಂದುತ್ತಾನೆ.

ಚಾಮರೇ ಶ್ರದ್ಧಯಾ ದೇವ್ಯೈ ದತ್ತ್ವಾ ಚ ಶ್ರದ್ಧಯಾನ್ವಿತಃ ।
ರಾಜಸೂಯಫಲಂ ಪ್ರಾಪ್ಯ ಹಂಸಲೋಕೇ ಮಹೀಯತೇ ॥ ೬೧ ॥

ಸಂಪ್ರಸಾರಿತದೇಹೋ ಯೋ ದಂಡವತ್ಪತಿತೋ ಭುವಿ ।
ಚಂಡಿಕಾಪುರತೋ ವೀರ ಸ ಯಾತಿ ಪರಮಾಂ ಗತಿಂ ॥ ೬೨ ॥

ಜಪಸಂಧ್ಯೋಪವಾಸೇಷು ಸರ್ವತೀರ್ಥೇಷು ಯತ್ಫಲಂ ।
ತತ್ಫಲಂ ಲಭತೇ ವೀರ ಪ್ರಣಮ್ಯ ಶಿರಸಾ ಶಿವಾಂ ॥ ೬೩ ॥

ದುರ್ಗಾಪೂಜೋಪಕರಣಂ ಸ್ವಲ್ಪಂ ವಾ ಯದಿ ವಾ ಬಹು ।
ಕೃತ್ವಾ ವಿತ್ತಾನುಸಾರೇಣ ರುದ್ರಲೋಕೇ ಮಹೀಯತೇ ॥ ೬೪ ॥

ಚಂಡಿಕಾಂ ಪೂಜಯಿತ್ವಾ ತು ಪ್ರಹೃಷ್ಟೇನಾಂತರಾತ್ಮನಾ ।
ಕೃತಾಂಜಲಿಪುಟೋ ಭೂತ್ವಾ ಇದಂ ಸ್ತೋತ್ರಮುದೀರಯೇತ್ ॥ ೬೫ ॥

---

೬೧. ಭಕ್ತಿಯಿಂದ ದೇವಿಗೆ ಚಾಮರಗಳನ್ನು ಕೊಟ್ಟರೆ ಅವನಿಗೆ ರಾಜಸೂಯ ಯಾಗದ ಫಲವು ಬರುತ್ತದೆ. ಮತ್ತು ಹಂಸಲೋಕದಲ್ಲಿ ಸುಖಿಸುತ್ತಾನೆ.

೬೨. ಕೈಕಾಲುಗಳನ್ನು ಉದ್ದಕ್ಕೂ ನೀಡಿ ಚಂಡಿಕೆಯ ಎದುರಿಗೆ ದೀರ್ಘ ದಂಡ ನಮಸ್ಕಾರಮಾಡಿದರೆ ಉತ್ತಮ ಗತಿಯು ಬರುತ್ತದೆ

೬೩. ಆ ಚಂಡಿಕೆಗೆ ಒಂದು ಬಾರಿ ನಮಸ್ಕರಿಸಿದರೇನೇ ಜಪ ಸಂಧ್ಯಾವಂದನೆಗಳ ಫಲವೂ. ಉಪವಾಸ ಮಾಡಿದ ಫಲವೂ, ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದ ಫಲವೂ ಬರುತ್ತದೆ.

೬೪. ದುರ್ಗೆಗೆ ಪೂಜೆ ಪದಾರ್ಥಗಳನ್ನು ತನ್ನ ಯೋಗ್ಯತೆಗೆ ತಕ್ಕಂತೆ ಕೊಟ್ಟರೆ ರುದ್ರಲೋಕವನ್ನು ಹೊಂದುತ್ತಾನೆ.

೬೫. ಸಂತೋಷದಿಂದ ಚಂಡಿಕೆಯನ್ನು ಪೂಜೆಮಾಡಿ ಕೈಮುಗಿದುಕೊಂಡು ಈ ಸ್ತೋತ್ರವನ್ನು ಹೇಳಬೇಕು.

ದುರ್ಗಾಂ ಶಿವಾಂ ಶಾಂತಿಕರೀಂ ಬ್ರಹ್ಮಾಣೀಂ ಬ್ರಹ್ಮಣಃ ಪ್ರಿಯಾಂ ।
ಸರ್ವಲೋಕಪ್ರಣೇತ್ರೀಂ ಚ ಪ್ರಣಮಾಮಿ ಸದಾಽಂಬಿಕಾಂ ॥ ೧೬ ॥

ಮಂಗಲಾಂ ಶೋಭನಾಂ ಶುದ್ಧಾಂ ನಿಷ್ಕಲಾಂ ಪರಮಾಂ ಕಲಾಂ ।
ವಿಶ್ವೇಶ್ವರೀಂ ವಿಶ್ವವಂದ್ಯಾಂ ಚಂಡಿಕಾಂ ಪ್ರಣಮಾಮ್ಯಹಂ ॥ ೧೭ ॥

ಸರ್ವದೇವಮಯೀಂ ದೇವೀಂ ಸರ್ವದೇವನಮಸ್ಕೃತಾಂ ।
ಬ್ರಹ್ಮೇಶವಿಷ್ಣುನಮಿತಾಂ ಪ್ರಣಮಾಮಿ ಸದಾ ಉಮಾಂ ॥ ೧೮ ॥

ವಿಂಧ್ಯಸ್ಥಾಂ ವಿಂಧ್ಯನಿಲಯಾಂ ದಿವ್ಯಸ್ಥಾನನಿವಾಸಿನೀಂ ।
ಯೋಗಿನೀಂ ಯೋಗವಿದ್ಯಾಂ ಚ ಚಂಡಿಕಾಂ ಪ್ರಣಮಾಮ್ಯಹಂ ॥ ೧೯ ॥

ಈಶಾನಮಾತರಂ ದೇವೀಮೀಶ್ವರೀಮೀಶ್ವರಪ್ರಿಯಾಂ ।
ಪ್ರಣತೋಽಸ್ಮಿ ಸದಾ ದುರ್ಗಾಂ ಸಂಸಾರಾರ್ಣವತಾರಿಣೀಂ ॥ ೨೦ ॥

---

೧೬. ಮಂಗಳಕರಳಾದ, ಶಾಂತಿಯನ್ನು ಕೊಡುವ, ಬ್ರಹ್ಮರೂಪಳಾದ, ಬ್ರಹ್ಮನಿಗೆ ಪ್ರೀತಿಪಾತ್ರಳಾದ, ಲೋಕಗಳನ್ನು ಸೃಷ್ಟಿಮಾಡುವ, ದುರ್ಗೆಯನ್ನು ಯಾವಾಗಲೂ ನಮಸ್ಕರಿಸುತ್ತೇನೆ

೧೭. ಮಂಗಳ ಸ್ವರೂಪಳೂ, ಮಂಗಳ ದಾಯಕಳೂ, ಶುದ್ಧಳೂ, ಕಲೆ ರೂಪಳಲ್ಲದವಳೂ, ಉತ್ತಮವಾದ ಕಳಾರೂಪಳೂ, ಪ್ರಪಂಚಕ್ಕೇ ಒಡೆಯಳೂ, ಪ್ರಪಂಚಕ್ಕೇ ಪೂಜ್ಯಳೂ, ಆದ ಚಂಡಿಕೆಯನ್ನು ನಮಸ್ಕರಿಸುತ್ತೇನೆ.

೧೮. ಸರ್ವದೇವತಾ ಸ್ವರೂಪಳಾದ, ಸರ್ವ ದೇವರಿಂದಲೂ ನಮಸ್ಕಾರವನ್ನು ಹೊಂದುವ, ಬ್ರಹ್ಮ, ವಿಷ್ಣು, ಈಶ್ವರರಿಂದ ನಮಸ್ಕರಿಸಿಕೊಳ್ಳುವ, ಉಮೆಯನ್ನು ಯಾವಾಗಲೂ ನಮಸ್ಕರಿಸುತ್ತೇನೆ.

೧೯. ವಿಂಧ್ಯಪರ್ವತದಲ್ಲಿರುವ, ವಿಂಧ್ಯಪರ್ವತವೇ ಮನೆಯಾಗಿ ಉಳ್ಳ, ದಿವ್ಯಸ್ಥಾನದಲ್ಲಿರುವ, ಯೋಗಿನಿಯಾದ, ಯೋಗ ಸ್ವರೂಪಳಾದ, ಚಂಡಿಕೆಯನ್ನು ನಮಸ್ಕರಿಸುತ್ತೇನೆ.

೨೦. ಈಶಾನರ ತಾಯಿಯಾದ, ಕೇಳಿದುದನ್ನು ಕೊಡುವ, ಈಶ್ವರನಿಗೆ ಪ್ರಿಯಳಾದ, ಸಂಸಾರವೆಂಬ ಸಮುದ್ರವನ್ನು ದಾಟಿಸುವ, ದುರ್ಗೆಯನ್ನು ನಮಸ್ಕರಿಸುತ್ತೇನೆ.

ಇದಂ ಯಃ ಪಠತೇ ಸ್ತೋತ್ರಂ ಶೃಣುಯಾದ್ವಾಽಪಿ ಭಕ್ತಿತಃ ।
ಸ ಮುಕ್ತಃ ಸರ್ವಪಾಪೇಭ್ಯೋ ದುರ್ಗಾಲೋಕೇ ಮಹೀಯತೇ ॥ ೭೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ದುರ್ಗಾರ್ಚನಸ್ತೋತ್ರ ಕಥನಂ ನಾಮ ಏಕಾಶೀತಿತಮೋಽಧ್ಯಾಯಃ

---

೭೧. ಈ ಸ್ತೋತ್ರವನ್ನು ಪಠಿಸುವವನೂ, ಭಕ್ತಿಯಿಂದ ಕೇಳುವವನೂ, ಪಾಪಗಳನ್ನು ಕಳೆದುಕೊಂಡು ದುರ್ಗೆಯ ಲೋಕದಲ್ಲಿ ಸುಖಿಸುತ್ತಾರೆ.

ಇಂತು ಶ್ರೀಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ದುರ್ಗಾಸ್ತೋತ್ರ ಕಥನವೆಂಬ ಎಂಭತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ದ್ವ್ಯಶೀತಿತಮೋಽಧ್ಯಾಯಃ ॥



**॥ ಭೀಷ್ಮ ಉವಾಚ ॥**

**ಶ್ರುತಂ ಸೂರ್ಯಸ್ಯ ಚಂದ್ರಸ್ಯ ಭೌಮಸ್ಯಾಪಿ ಪ್ರಪೂಜನಂ ।**
**ಬುಧಸ್ಯ ಸೋಮಸೂನೋಶ್ಚ ಪೂಜನಂ ಕಥಯಾಧುನಾ ॥ ೧ ॥**

**॥ ಪುಲಸ್ತ್ಯ ಉವಾಚ ॥**

**ತಾರಾಗರ್ಭಸಮುದ್ಭೂತೋ ಬುಧಶ್ಚಂದ್ರಕುಮಾರಕಃ ।**
**ಸೌಮ್ಯಃ ಕ್ರೂರಗ್ರಹೋ ಜ್ಞೇಯಃ ಶುಭಾಶುಭಪ್ರದೋ ನೃಣಾಂ ॥ ೨ ॥**

**ಶರಾಕಾರಂ ಮಂಡಲಂ ತು ಬುಧಸ್ಯ ಪರಿಕೀರ್ತಿತಂ ।**
**ಹಿರಣ್ಮಯಸವರ್ಣೈಶ್ಚೂರ್ಣೈಃ ಕುರ್ಯಾತ್ತು ಮಂಡಲಂ ॥ ೩ ॥**

---

### ಎಂಭತ್ತೆರಡನೆಯ ಅಧ್ಯಾಯವು

೧. ಭೀಷ್ಮನು ಹೇಳಿದನು- ಎಲೈ ಋಷಿಯೇ ! ಸೂರ್ಯ, ಚಂದ್ರ, ಅಂಗಾರಕರ, ಪೂಜೆಗಳ ವಿಷಯವನ್ನು ಹೇಳಿದೆ. ಈ ಚಂದ್ರನ ಮಗನಾದ ಬುಧನ ಪೂಜೆಯ ವಿಷಯವನ್ನು ಹೇಳು.

೨. ಪುಲಸ್ತ್ಯನು ಹೇಳಿದನು- ತಾರೆಯ ಹೊಟ್ಟೆಯಲ್ಲಿ ಹುಟ್ಟಿದ ಚಂದ್ರನ ಮಗನಾದ ಬುಧನು ಸೌಮ್ಯನೆಂದು ಹೆಸರು ಪಡೆದರೂ, ಕ್ರೂರಗ್ರಹನು. ಮನುಷ್ಯರಿಗೆ ಶುಭಾಶುಭ ಫಲಗಳನ್ನು ಕೊಡುವನು.

೩. ಬಾಣದ ಆಕಾರವಾದ ಮಂಡಲವು ಬುಧನಿಗೆ ಶಾಸ್ತ್ರದಲ್ಲಿ ಹೇಳಿದೆ. ಹೊಂಬಣ್ಣದ ವರ್ಣವುಳ್ಳ ಹಿಟ್ಟಿನಿಂದ ಆ ಮಂಡಲವನ್ನು ಮಾಡಬೇಕು.

ಪೂಜಯೇತ್ತತ್ರ ಗಂಧಾದ್ಯೈಃ ಪುಷ್ಪೈರ್ಧೂಪೈಃ ಸುಶೋಭನೈಃ ।
ದಾನಂ ಚ ಸಿಧಿವತ್ಕುರ್ಯಾದ್ದಶಾರಿಷ್ಟೇ ಚ ಗೋಚರೇ ॥ ೪ ॥

ಕರ್ಪೂರಂ ಚೈವ ಮುದ್ಗಾಂಶ್ಚ ಹರಿದ್ವಸ್ತ್ರಂ ಹಿರಣ್ಮಯಂ ।
ಸುವರ್ಣಂ ಚ ಯಥಾಶಕ್ತ್ಯಾ ದದ್ಯಾದ್ಬುಧತುಷ್ಟಯೇ ॥ ೫ ॥

ಸೋಮಪುತ್ರ ಮಹಾಪ್ರಾಜ್ಞ ವೇದವೇದಾಂಗಪಾರಗ ।
ನಮಸ್ತೇ ಗ್ರಹಮಧ್ಯಸ್ಥ ಪ್ರಸನ್ನೋ ಭವ ಮೇ ಸದಾ ॥ ೬ ॥

ಇತಿ ಸ್ತುತ್ವಾ ಮಹಾರಾಜ ಬುಧಂ ಭಕ್ತ್ಯಾ ಸಮಾಹಿತಃ ।
ಪ್ರಾಪ್ನುಯಾನ್ನಿಖಿಲಾನ್ಕಾಮಾನ್ಸೋಮಸೂನುಪ್ರಸಾದತಃ ॥ ೭ ॥

ಗುರೋಶ್ಚ ಪೂಜನಂ ಪ್ರೋಕ್ತಂ ಪಟ್ಟಿಶಾಕಾರಮಂಡಲೇ ।
ಪೀತವರ್ಣೈಃ ಸುನಿಷ್ಪನ್ನೈಶ್ಚೂರ್ಣೈ ರಾಜಸ್ಸುಶೋಭನೈಃ ॥ ೮ ॥

ಪೀತೈರ್ಗಂಧಯುತೈಃ ಪುಷ್ಪೈರ್ವಸ್ತ್ರೈರ್ಹೇಮ್ನಾ ಚ ಪೂಜಯೇತ್ ।
ದಶಾಗೋಚರಯೋಃ ಪೌಷ್ಟೌ ದಾನಂ ದದ್ಯಾಚ್ಚ ಶಕ್ತಿತಃ ॥ ೯ ॥

---

೪. ಆತನ ದಶೆಯೂ, ಆತನ ಗೋಚಾರವೂ, ಬಂದಾಗ ಗಂಧ ಪುಷ್ಪಗಳಿಂದ ಪೂಜಿಸಿ ಆ ಅರಿಷ್ಟ ಶಾಂತಿಗೋಸ್ಕರ ದಾನವನ್ನು ಮಾಡಬೇಕು.

೫. ಕರ್ಪೂರ, ಹೆಸರು, ಅರಶಿನ, ಬಣ್ಣದ ಬಟ್ಟೆ, ಸುವರ್ಣಗಳನ್ನು ಆ ಬುಧನ ಪ್ರೀತಿಗೋಸ್ಕರವಾಗಿ ಯಥಾಶಕ್ತಿ ಕೊಡಬೇಕು.

೬. ಚಂದ್ರನ ಮಗನಾದ, ಬುದ್ಧಿವಂತನಾದ, ವೇದವೇದಾಂಗಗಳನ್ನು ಬಲ್ಲ, ಗ್ರಹಗಳ ಮಧ್ಯದಲ್ಲಿರುವ ಬುಧನೇ ನಿನಗೆ ನಮಸ್ಕಾರವು. ನನಗೆ ಪ್ರಸನ್ನನಾಗು.

೭. ಈ ರೀತಿಯಾಗಿ ಬುಧನನ್ನು ಭಕ್ತಿಯಿಂದ ಸ್ತೋತ್ರ ಮಾಡಿಸರೆ ಆ ಬುಧನ ಅನುಗ್ರಹದಿಂದ ಎಲ್ಲಾ ಇಷ್ಟಗಳನ್ನೂ ಹೊಂದುತ್ತಾನೆ.

೮. ಗುರುಗ್ರಹದ ಪೂಜೆಯನ್ನು ಪಟ್ಟಿಶವೆಂಬ ಆಯುಧ ಆಕಾರದ ಮಂಡಲದಲ್ಲಿ ಹಳದಿಯ ಬಣ್ಣದ ಹೂಗಳಿಂದಲೂ, ಚೂರ್ಣಗಳಿಂದಲೂ ಮಾಡಬೇಕು.

೯. ಹಳದಿಯ ಗಂಧ, ಹೂ, ವಸ್ತ್ರ, ಸುವರ್ಣಗಳಿಂದ ಅವನ ದುಷ್ಟದೆಸೆಯಲ್ಲಿ ಪೂಜಿಸಿ ಯಥಾಶಕ್ತಿ ದಾನವನ್ನು ಕೊಡಬೇಕು.

ಚಣಕದ್ವಿದಲಂ ಚೈವ ಪೀತವಸ್ತ್ರಂ ಸುವರ್ಣಕಂ ।
ಪುಷ್ಪರಾಗಂ ತು ವಿಪ್ರಾಯ ದದ್ಯಾಚ್ಚಾರಿಷ್ಟಶಾಂತಯೇ ॥ ೧೦ ॥

ಬೃಹಸ್ಪತೇ ಸುರಾಚಾರ್ಯ ಸರ್ವಶಾಸ್ತ್ರವಿಶಾರದ ।
ದಾನೇನಾನೇನ ಸಂತುಷ್ಟೋ ಭವ ಸೌಮ್ಯೋ ಮಮಾಧುನಾ ॥ ೧೧ ॥

ಏವಂ ಕೃತೇ ತು ರಾಜೇಂದ್ರ ಸಾನುಕೂಲೋ ಭವೇದ್ಗುರುಃ ।
ಸರ್ವಾನ್ಕಾಮಾನವಾಪ್ನೋತಿ ನರೋ ಗುರುಸಮರ್ಚನಾತ್ ॥ ೧೨ ॥

ಭಾರ್ಗವಸ್ಯ ಪ್ರವಕ್ಷ್ಯಾಮಿ ಪೂಜನಂ ನೃಪತೇಽಧುನಾ ।
ಯತ್ಕೃತ್ವಾ ಸರ್ವಕಾಮಾಪ್ತಿಃ ಸಮ್ಯಕ್ ಪುಂಸಾಂ ಪ್ರಜಾಯತೇ ॥ ೧೩ ॥

ಪಂಚಕೋಣಂ ಸಮುದ್ದಿಷ್ಟಂ ಮಂಡಲಂ ಭಾರ್ಗವಸ್ಯ ತು ।
ಚೂರ್ಣಕೈಃ ಶ್ವೇತವರ್ಣೈಶ್ಚ ವಿಧಿನಾ ಸುಧಿಯಾ ಕೃತಂ ॥ ೧೪ ॥

---

೧೦. ಕಡಲೆಯ ಬೇಳೆಯನ್ನೂ, ಹೊಂಬಣ್ಣದ ವಸ್ತ್ರವನ್ನೂ ಚಿನ್ನವನ್ನೂ, ಪುಷ್ಯರಾಗವನ್ನೂ ದಾನಕೊಟ್ಟರೆ ಅವನಿಂದುಂಟಾದ ಅರಿಷ್ಟವು ನಾಶವಾಗುತ್ತದೆ.

೧೧. ಬೃಹಸ್ಪತಿಯೇ! ದೇವತೆಗಳ ಗುರುವೇ! ಸರ್ವ ಶಾಸ್ತ್ರಗಳಲ್ಲಿಯೂ ಪಂಡಿತನೇ! ಈ ದಾನದಿಂದ ಸಂತುಷ್ಟನಾಗಿ ನನಗೆ ಸುಮುಖನಾಗು.

೧೨. ಹೀಗೆ ಮಾಡಿದರೆ ಗುರುವು ಅನುಕೂಲನಾಗುತ್ತಾನೆ. ಹೀಗೆ ಗುರುವನ್ನು ಪೂಜಿಸಿದರೆ ಮನುಷ್ಯನು ಎಲ್ಲಾ ಇಷ್ಟಾರ್ಥಗಳನ್ನೂ ಹೊಂದುತ್ತಾನೆ.

೧೩. ಶುಕ್ರನ ಪೂಜೆಯನ್ನು ಹೇಳುತ್ತೇನೆ. ಅದನ್ನು ಮಾಡುವುದರಿಂದ ಜನರಿಗೆ ಇಷ್ಟಾರ್ಥವು ಸಿದ್ಧಿಸುತ್ತದೆ.

೧೪. ಶುಕ್ರನಿಗೆ ಐದು ಮೂಲೆಗಳಿರುವ ಮಂಡಲವನ್ನು ಮಾಡಬೇಕು. ಬಿಳಿಯ ಚೂರ್ಣಗಳಿಂದ ಆ ಮಂಡಲವನ್ನು ಶ್ರದ್ಧೆಯಿಂದ ಮಾಡಬೇಕು.

ಶ್ವೇತಗಂಧೈಶ್ಚ ಪುಷ್ಪೈಶ್ಚ ವಸ್ತ್ರೈಶ್ಚಾಪಿ ಸಿತೈಸ್ತಥಾ।
ಪೂಜಯೇದ್ಭಾರ್ಗವಂ ಭಕ್ತ್ಯಾ ನರಃ ಶ್ರದ್ಧಾಸಮನ್ವಿತಃ ॥ ೧೫ ॥

ರೌಪ್ಯಂ ಚ ದಕ್ಷಿಣಾದಾನಂ ಯಥಾಶಕ್ತಿ ಪ್ರಕೀರ್ತಿತಂ।
ದಶಾದ್ಯರೀಷ್ಟೇ ಚೋತ್ಪನ್ನೇ ಸಿತಮಶ್ವಂ ಪ್ರದಾಪಯೇತ್ ॥ ೧೬ ॥

ತಂಡುಲಾಃ ಶ್ವೇತವಸ್ತ್ರಂ ಚ ರೌಪ್ಯಂ ಚಂದನಮೇವ ಚ।
ಕರ್ಪೂರಂ ಚ ಸುಗಂಧಾಢ್ಯಂ ದೇಯಂ ದಾನಂ ದ್ವಿಜಾತಯೇ ॥ ೧೭ ॥

ಭೃಗುಪುತ್ರ ಮಹಾಭಾಗ ದಾನವಾನಾಂ ಪುರೋಹಿತ।
ದಾನೇನಾನೇನ ಸಂತುಷ್ಟೋ ಭವ ಸರ್ವಾಸುರಾರ್ಚಿತ ॥ ೧೮ ॥

ಇತಿ ಮಂತ್ರಂ ಸಮುಚ್ಚಾರ್ಯ ದದ್ಯಾದ್ದಾನಂ ಯಥೋದಿತಂ।
ತಸ್ಯ ತುಷ್ಟೋ ಭವತ್ಯಾಶು ಭಾರ್ಗವಃ ಕುರುನಂದನ ॥ ೧೯ ॥

---

೧೫. ಬಿಳಿಯ ಹೂ, ಬಿಳಿಯ ಗಂಧ, ಬಿಳಿಯ ಬಟ್ಟೆ, ಬಿಳಿಯ ಸಕ್ಕರೆಗಳಿಂದ ಆ ಶುಕ್ರನನ್ನು ಪೂಜಿಸಬೇಕು.

೧೬ ಬೆಳ್ಳಿಯ ದಕ್ಷಿಣೆಯನ್ನು ಶಕ್ತ್ಯನುಸಾರವಾಗಿ ಕೊಡಬೇಕು. ಆ ಶುಕ್ರನ ದೆಸೆಯು ಕೆಟ್ಟದ್ದಾಗಿ ಕಂಡುಬಂದರೆ ಆಗ ಬಿಳಿಯ ಕುದುರೆಯನ್ನು ದಾನ ಮಾಡಬೇಕು.

೧೭. ಅಕ್ಕಿ, ಬಿಳಿಯ ಬಟ್ಟೆ, ಬೆಳ್ಳಿ, ಬಿಳಿಯ ಚಂದನ, ಪಚ್ಚಕರ್ಪೂರ, ಸುಗಂಧದ ಪದಾರ್ಥಗಳನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೧೮. ಭೃಗುವಿನ ಮಗನೂ, ದಾನವರಿಗೆ ಪುರೋಹಿತನೂ, ಪೂಜ್ಯನೂ, ಆದ ಶುಕ್ರನೇ! ಈ ದಾನದಿಂದ ತೃಪ್ತಿಯನ್ನು ಹೊಂದು.

೧೯. ಎಲೈ ಧರ್ಮಜನೇ! ಈ ಮಂತ್ರವನ್ನು ಹೇಳಿ ಅವನಿಗೆ ಕೊಡಬೇಕಾದ ದಾನಗಳನ್ನು ಕೊಡಬೇಕು. ಆ ರೀತಿ ಮಾಡಿದವನಿಗೆ ಶುಕ್ರನು ಪ್ರಸನ್ನನಾಗುತ್ತಾನೆ.

**ಶನೈಶ್ಚರಸ್ಯ ಪೂಜಾರ್ಥಂ ಮಂಡಲಂ ಚ ನರಾಕೃತಿ ।**
**ಕೃತ್ವಾ ಚೂರ್ಣೈಃ ಕೃಷ್ಣವರ್ಣೈಃ ಪೂಜಯೇತ್ತತ್ರ ಭಕ್ತಿತಃ　　॥ ೨೦ ॥**

**ಕೃಷ್ಣೈರ್ಗಂಧೈಶ್ಚ ಪುಷ್ಪೈಶ್ಚ ವಸ್ತ್ರೈಶ್ಚಾಪಿ ತಥಾವಿಧೈಃ ।**
**ಲೋಹಂ ಚ ದಕ್ಷಿಣಾದಾನಂ ಪಿಣ್ಯಾಕಂ ಚ ತಿಲಸ್ಯ ಚ　　॥ ೨೧ ॥**

**ದಾನಂ ಶನೈಶ್ಚರಾರಿಷ್ಟೇ ಕೃಷ್ಣಾಂ ಗಾಂ ಕೃಷ್ಣವಸ್ತ್ರಕಂ ।**
**ಸುವರ್ಣಂ ಚ ಯಥಾಶಕ್ತಿ ದದ್ಯಾನ್ನೀಲಮಣಿಂ ತಥಾ　　॥ ೨೨ ॥**

**ಸೂರ್ಯಸೂನೋ ಮಹಾಭಾಗ ಛಾಯಾಪುತ್ರ ಮಹಾಬಲ ।**
**ಅಧೋದೃಷ್ಟೇ ಭವ ಶನೇ ಪ್ರಸನ್ನೋಽಸ್ಮಾತ್ಪ್ರದಾನತಃ　　॥ ೨೩ ॥**

**ಏವಂ ಸ್ತುತ್ವಾ ಶನಿಂ ಭಕ್ತ್ಯಾ ಯಶ್ಚ ದದ್ಯಾದ್ದ್ವಿಜಾತಯೇ ।**
**ಸಾನುಕೂಲೋ ಭವೇತ್ತಸ್ಯ ಶನಿಃ ಪಾಕೇ ಚ ಗೋಚರೇ　　॥ ೨೪ ॥**

---

೨೦. ಶನೈಶ್ಚರನಿಗೆ ಮನುಷ್ಯನ ಆಕಾರದ ಮಂಡಲವನ್ನು ಮಾಡಬೇಕು. ಕಪ್ಪು ಚೂರ್ಣಗಳಿಂದ ಅಲಂಕರಿಸಿ ಭಕ್ತಿಯಿಟ್ಟು ಪೂಜೆಮಾಡಬೇಕು.

೨೧. ಕಪ್ಪು ಗಂಧ, ಕಪ್ಪು ಹೂ, ಕಪ್ಪು ಬಟ್ಟೆ, ಈ ರೀತಿಯಾದವುಗಳಿಂದ ಪೂಜೆಮಾಡಬೇಕು. ಕಬ್ಬಿಣವನ್ನೇ ದಕ್ಷಿಣೆಯಾಗಿಯೂ. ದಾನವಾಗಿಯೂ, ಕೊಡಬೇಕು. ಎಳ್ಳಿನ ಚಿಗುಳಿಯನ್ನು ದಾನಮಾಡಬೇಕು.

೨೨. ಶನೈಶ್ಚರನಿಂದ ತೊಂದರೆ ಬಂದಾಗ ಕಪ್ಪು ಹಸು, ಕಪ್ಪು ಬಟ್ಟೆ ಶಕ್ತಿಗನುಗುಣವಾಗಿ ಸುವರ್ಣಗಳನ್ನೂ, ನೀಲ ಮಣಿಗಳನ್ನೂ ದಾನಮಾಡಬೇಕು.

೨೩. ಸೂರ್ಯನ ಮಗನಾದ, ಛಾಯೆಯಲ್ಲಿ ಹುಟ್ಟಿದ, ಬಲಿಷ್ಠನಾದ, ಶನಿಯೇ! ಈ ದಾನದಿಂದ ಪ್ರಸನ್ನನಾಗಿ ದೃಷ್ಟಿಯನ್ನು ಕೆಳಕ್ಕೆ ಮಾಡಿಕೋ.

೨೪. ಈರೀತಿ ಶನಿಯನ್ನು ಸ್ತೋತ್ರಮಾಡಿ ಬ್ರಾಹ್ಮಣನಿಗೆ ದಾನ ಕೊಡಬೇಕು. ಹಾಗೆ ಮಾಡಿದರೆ ಶನಿಯು ತನ್ನ ದೆಶೆ ಗೋಚಾರಗಳಲ್ಲಿ ಅನುಕೂಲನಾಗುತ್ತಾನೆ.

ರಾಹೋರ್ವರ್ಣಾದಿಕಂ ಸರ್ವಂ ಶಶಿವನ್ಮಂಡಲಂ ತಥಾ ।
ಸೂರ್ಯಾಕಾರಂ ಸಮುದ್ದಿಷ್ಟಂ ತಸ್ಯ ಪೂಜಾऽರ್ಕಸೂನುವತ್ ॥ ೨೫ ॥

ಗೋಮೇಧಂ ಸರ್ಷಪಾಶ್ಚೈವ ತಿಲಾ ಮಾಷಾಶ್ಚ ಕೃಷ್ಣಕಾಃ ।
ಮಹಿಷೀ ಚ ತಥಾ ಛಾಗೋ ದಾನಂ ರಾಹೋಃ ಪ್ರಕೀರ್ತಿತಂ ॥ ೨೬ ॥

ಸಿಂಹಿಕಾಸುತ ದೈತ್ಯೇಂದ್ರ ರಾಹೋ ಚಂದ್ರಾರ್ಕಮರ್ದನ ।
ಭವ ತುಷ್ಟೋ ಮಹಾಭಾಗ ದಾನೇನಾನೇನ ಸುವ್ರತ ॥ ೨೭ ॥

ಕೇತೋರ್ಮಂಡಲಕಂ ಕುರ್ಯಾದ್ಧ್ವಜಾಕೃತಿ ಸುಶೋಭನಂ ।
ಶನಿವತ್ಸಕಲಂ ಜ್ಞೇಯಂ ಪೂಜಾವರ್ಣಾದಿಕಂ ನೃಪ ॥ ೨೮ ॥

ಸಪ್ತಧಾನ್ಯಂ ಸಮುದ್ದಿಷ್ಟಂ ಸಸ್ವರ್ಣಂ ಕೇತುದಾನಕಂ ।
ಏವಂ ಕೃತೇ ಸಾನುಕೂಲೌ ಭವೇತಾಂ ಚ ನೃಣಾಂ ನೃಪ ॥ ೨೯ ॥

---

೨೫. ರಾಹುವಿನ ವರ್ಣ, ಅದರ ಮಂಡಲ, ದಾನದ ಬಣ್ಣ, ಇವೆಲ್ಲವೂ ಶನಿಯದರಂತೆ. ಆಕಾರವು ಸೂರ್ಯನಂತಿರುವುದು. ಪೂಜೆಯನ್ನು ಶನಿಯ ಪೂಜೆಯಂತೆ ಮಾಡಬೇಕು

೨೬. ಗೋಮೇದರತ್ನ, ಸಾಸುವೆ, ಎಳ್ಳು, ಕರಿಯ ಉದ್ದು, ಎಮ್ಮೆ, ಆಡು ಇವನ್ನು ಈ ರಾಹುವಿನ ಪ್ರೀತ್ಯರ್ಥವಾಗಿ ದಾನಮಾಡಬೇಕು.

೨೭. ಸಿಂಹಿಕೆಯ ಮಗನೂ, ದೈತ್ಯೇಂದ್ರನೂ, ಚಂದ್ರಸೂರ್ಯರನ್ನು ಹಿಂಸಿಸುವವನೂ, ಆದ ರಾಹುವೇ! ಈ ದಾನದಿಂದ ಸಂತೋಷಪಟ್ಟು ಪ್ರಸನ್ನನಾಗು.

೨೮. ಕೇತುವಿಗೆ ಧ್ವಜದಂತೆ ಮಂಡಲವನ್ನು ಮಾಡಬೇಕು. ಉಳಿದ ಪೂಜೆ ಬಣ್ಣಗಳೆಲ್ಲವೂ ಶನಿಯದರಂತೆ. ಎಂದು ತಿಳಿಯಬೇಕು.

೨೯. ಇವರಿಗೆ ಏಳು ಧಾನ್ಯಗಳೂ, ಸುವರ್ಣವೂ, ದಾನವಾಗಿ ಹೇಳಲ್ಪಟ್ಟಿದೆ. ಹೀಗೆ ಮಾಡಿದರೆ ರಾಹು ಕೇತುಗಳು ಅನುಕೂಲರಾಗಿ ಆಗುತ್ತಾರೆ.

ಪ್ರದದ್ಯಾತಾಂ ಧನಂ ಪುತ್ರಾನ್ಸುಖಂ ಸೌಭಾಗ್ಯಮೇವ ಚ ।
ಆಕೃಷ್ಣೇತಿ ರವೇರ್ಮಂತ್ರ ಇಮಂ ದೇವಾಸ್ತಥಾ ವಿಧೋಃ ॥ ೩೦ ॥

ಅಗ್ನಿಮೂರ್ಧೇತಿ ಭೌಮಸ್ಯ ಮಂತ್ರೋ ಜಪ್ಯೋ ತಥಾಽರ್ಹಣೇ ।
ಉದ್ಬುಧ್ಯಸ್ವೇತೀಂದುಸೂನೋರ್ಬೃಹಸ್ಪತೇ ಗುರೋಸ್ತಥಾ ॥ ೩೧ ॥

ಅನ್ನಾತ್ಪರೀತಿ ಶುಕ್ರಸ್ಯ ಶಂ ನೋ ದೇವೀರಯಂ ಶನೇಃ ।
ಕಯಾ ನ ಇತಿ ರಾಹೋಶ್ಚ ಕೇತೋಃ ಕೇತುರಿತಿ ಸ್ಮೃತಃ ॥ ೩೨ ॥

ಏತೇ ಮಂತ್ರಾಃ ಸಮುದ್ದಿಷ್ಟಾ ಗ್ರಹಾಣಾಂ ಪೂಜನೇ ಜಪೇ ।
ಏವಂ ಕೃತೇ ನರಶ್ರೇಷ್ಠ ಸಾನುಕೂಲಾಽಖಿಲಾ ಗ್ರಹಾಃ ।
ಭವಂತಿ ಪುಂಸಾಂ ಸತತಂ ಯಚ್ಛಂತಿ ಚ ಸುಸಂಪದಃ ॥ ೩೩ ॥

ಏತನ್ಮಹಾರಾಜ ಮಯಾ ಸಮಸ್ತಂ-
ತುಭ್ಯಂ ಸಮುದ್ದಿಷ್ಟಮಿಹ ಕ್ರಮೇಣ ।
ಶ್ರುತ್ವಾ ನರಃ ಸರ್ವಶ್ರುತಾರ್ಥಸಾರ-
ಮೇತೀಶ್ವರಸ್ಯೈವ ಚ ಸನ್ನಿಧಾನಂ ॥ ೩೪ ॥

---

೩೦-೩೨. ಹಣ, ಮಕ್ಕಳು, ಐಶ್ವರ್ಯಗಳನ್ನು ಸಂತುಷ್ಟರಾದ ರಾಹು ಕೇತುಗಳು ಕೊಡುತ್ತಾರೆ. "ಆಕೃಷ್ಣೇನ" ಎಂಬ ಮಂತ್ರವು ಸೂರ್ಯನಿಗೂ, "ಇಮಂ ದೇವಾಃ" ಎಂಬುದು ಚಂದ್ರನಿಗೂ, "ಅಗ್ನಿಮೂರ್ಧಾದಿವಃ" ಎಂಬುದು ಅಂಗಾರಕನಿಗೂ, "ಉದ್ಬುಧ್ಯಸ್ವಾಗ್ನೇ" ಎಂಬುದು ಬುಧನಿಗೂ, "ಬೃಹಸ್ಪತೇ ಅತಿ ಯದರ್ಯೋ" ಎಂಬುದು ಗುರುವಿಗೂ, "ಅನ್ನಾತ್ಪರಿ" ಎಂಬುದು ಶುಕ್ರನಿಗೂ, "ಶಂನೋದೇವೀಃ" ಎಂಬುದು ಶನಿಗೂ, "ಕಯಾನಶ್ಚಿತ್ರ" ಎಂಬುದು ರಾಹುವಿಗೂ, "ಕೇತುಂ ಕೃಣ್ವನ್ನಕೇತವೇ" ಎಂಬುದು ಕೇತುವಿಗೂ ಹೇಳಲ್ಪಟ್ಟಿವೆ

೩೩. ಗ್ರಹಗಳ ಪೂಜೆಗಾಗಲಿ, ಜಪಕ್ಕಾಗಲಿ, ಈ ಮೇಲೆ ಹೇಳಿದ ಮಂತ್ರ ಗಳು ಹೇಳಲ್ಪಟ್ಟಿವೆ. ಹೀಗೆ ಮಾಡಿದರೆ ಎಲ್ಲಾ ಗ್ರಹಗಳೂ ಅನುಕೂಲರಾಗಿ, ಸರ್ವ ಸಂಪತ್ತನ್ನೂ ಕೊಡುತ್ತಾರೆ.

೩೪. ಎಲೈ ದೊರೆಯೇ ! ಎಲ್ಲವನ್ನೂ ನಿನಗೆ ಕ್ರಮವಾಗಿ ಹೇಳಿದ್ದೇನೆ. ಇದು ಸರ್ವ ಶ್ರುತಿಗಳ ಸಾರವು. ಇದನ್ನು ಮನುಷ್ಯನು ಕೇಳಿದರೆ ಈಶ್ವರನ ಸನ್ನಿಧಿಗೆ ಹೋಗುತ್ತಾನೆ.

ಇದಂ ಪವಿತ್ರಂ ಯಶಸೋ ನಿದಾನ-
ಮಿದಂ ಪಿತೄಣಾಮತಿವಲ್ಲಭಂ ಸ್ಯಾತ್ ।
ಇದಂ ಚ ದೇವೇಷ್ವಮೃತಾಯ ಕಲ್ಪತೇ-
ಪುಣ್ಯಾವಹಂ ಪಾತಕಿನಾಂ ಚ ಪುಂಸಾಂ ॥ ೩೫ ॥

ಇತಿ ಪಠತಿ ಯಶಸ್ಯಂ ಯಂ ಶೃಣೋತೀಹ ಭಕ್ತ್ಯಾ-
ಮಧುಮುರನರಕಾರೇರರ್ಚನಂ ವಾಽಥ ಪಶ್ಯೇತ್ ।
ಮತಿಮಪಿ ಚ ಜನಾನಾಂ ಯೋ ದದಾತೀಂದ್ರಲೋಕೇ-
ಹರಿಶಿವವಿಬುಧಾದ್ಯೈಃ ಪೂಜ್ಯತೇ ಕಲ್ಪಮೇಕಂ ॥ ೩೬ ॥

ಯ ಇದಂ ಶೃಣುಯಾನ್ನಿತ್ಯಮೃಷೀಣಾಂ ಚರಿತಂ ಶುಭಂ ।
ವಿಮುಕ್ತಃ ಸರ್ವಪಾಪೇಭ್ಯಃ ಸ್ವರ್ಗಲೋಕೇ ಮಹೀಯತೇ ॥ ೩೭ ॥

ತಪಃ ಕೃತೇ ಪ್ರಶಂಸಂತಿ ತ್ರೇತಾಯಾಂ ಜ್ಞಾನಮೇವ ಚ ।
ದ್ವಾಪರೇ ಯಜ್ಞಮಿತ್ಯಾಹುರ್ದಾನಮೇಕಂ ಕಲೌ ಯುಗೇ ॥ ೩೮ ॥

---

೩೫. ಇದು ಯಶಸ್ಸಿಗೆ ಕಾರಣವು. ಪಿತೃಗಳಿಗೆ ಪ್ರೀತಿಪಾತ್ರವು. ದೇವತೆಗಳಿಗೆ ಇದು ಅಮೃತವು. ಪಾತಕಿಗಳಿಗೆ ಪಾಪನಾಶಕವೂ, ಪುಣ್ಯಪ್ರದವೂ ಆಗಿದೆ.

೩೬. ಇದನ್ನು ಭಕ್ತಿಯಿಂದ ಓದುವವನೂ, ಕೇಳುವವನೂ, ಅಥವಾ ಈ ಮಧು, ಮುರ, ನರಕರಿಗೆ ನಾಶಕನಾದ ವಿಷ್ಣುವಿನ ಪೂಜೆಯನ್ನು ನೋಡುವವನೂ, ಜನರಿಗೆ ಬುದ್ಧಿಯನ್ನು ಕೊಟ್ಟು ಇಂದ್ರಲೋಕದಲ್ಲಿ ತ್ರಿಮೂರ್ತಿಗಳಿಂದಲೂ, ಇಂದ್ರಾದಿ ದೇವತೆಗಳಿಂದಲೂ, ಗೌರವಿಸಲ್ಪಟ್ಟವನಾಗಿ ಕಲ್ಪ ಪರ್ಯಂತವೂ ಸುಖಿಸುತ್ತಾನೆ.

೩೭. ಋಷಿಗಳ ಶುಭವಾದ ಈ ಚರಿತ್ರೆಯನ್ನು ಕೇಳಿದವನು ಪಾಪಗಳಿಂದ ಮುಕ್ತನಾಗಿ ಸ್ವರ್ಗದಲ್ಲಿ ಸುಖಿಸುತ್ತಾನೆ.

೩೮ ಕೃತಯುಗದಲ್ಲಿ ತಪಸ್ಸೂ, ತ್ರೇತಾಯುಗದಲ್ಲಿ ಜ್ಞಾನವೂ, ದ್ವಾಪರ ಯುಗದಲ್ಲಿ ಯಜ್ಞವೂ ಉತ್ತಮವಾದುವು. ಕಲಿಯುಗದಲ್ಲಿ ದಾನವೇ ಉತ್ತಮವಾದುದೆಂದೂ ಹೇಳುತ್ತಾರೆ.

ಸರ್ವೇಷಾಮೇವ ದಾನಾನಾಮಿದಮೇವೈಕಮುತ್ತಮಂ ।
ಅಭಯಂ ಸರ್ವಭೂತಾನಾಂ ನಾಸ್ತಿ ದಾನಮತಃ ಪರಂ ॥ ೩೯ ॥

ದಾನಂ ಪ್ರಧಾನಂ ಶೂದ್ರಸ್ಯ ಪ್ರಾಹೇತಿ ಭಗವಾನ್ಪ್ರಭುಃ ।
ದಾನೇನ ಸರ್ವಕಾಮಾಪ್ತಿಸ್ತಸ್ಯ ಸಂಜಾಯತೇ ತಪಃ ॥ ೪೦ ॥

ಪುಣ್ಯಂ ಪವಿತ್ರಮಾಯುಷ್ಯಂ ಸರ್ವಪಾಪವಿನಾಶನಂ ।
ಪುರಾಣಮೇತತ್ಕಥಿತಂ ತೀರ್ಥಶ್ರಾದ್ಧಾನುವರ್ಣನಂ ॥ ೪೧ ॥

ಶೃಣೋತಿ ಯಃ ಪಠೇದ್ವಾಽಪಿ ಶ್ರೀಮಾನ್ಸಂಜಾಯತೇ ನರಃ ।
ಸರ್ವಪಾಪವಿನಿರ್ಮುಕ್ತಃ ಸಲಕ್ಷ್ಮೀಕಂ ಹರಂ ಲಭೇತ್ ॥ ೪೨ ॥

ಇದಂ ಮಹಾರಾಜ ಅಗಾದಿ ತುಭ್ಯಂ-
ಪುಣ್ಯಂ ಮಹಾಪಾತಕನಾಶನಂ ಚ ।
ಬ್ರಹ್ಮಾರ್ಕರುದ್ರೈಶ್ಚ ಸುಪೂಜಿತಂ ಚ-
ಶ್ರೋತವ್ಯಮೇತತ್ಪ್ರವದಂತಿ ತಜ್ಞಾಃ ॥ ೪೩ ॥

---

೩೯. ದಾನಗಳೊಳಗೆಲ್ಲಾ ಯಾವುದು ಉತ್ತಮವಾದ ದಾನವೆಂದರೆ ಸರ್ವ ಭೂತಗಳಿಗೂ ಅಭಯ ದಾನವೇ ಉತ್ತಮವಾದುದು. ಇದಕ್ಕಿಂತಲೂ ಬೇರೆ ದಾನವೇ ಇಲ್ಲ.

೪೦. ಶೂದ್ರನಿಗೆ ದಾನವೇ ಮುಖ್ಯವೆಂದು ಸ್ವಾಮಿಯು ಹೇಳಿದ್ದಾನೆ. ದಾನದಿಂದ ಇಷ್ಟಾರ್ಥಗಳೆಲ್ಲಾ ಕೈಗೂಡುತ್ತವೆ. ತಪಸ್ಸು ಆತನಿಗೆ ಈ ದಾನವೇ ಆಗಿರುತ್ತದೆ.

೪೧-೪೨. ಈ ಪುರಾಣವು ಪುಣ್ಯವನ್ನುಂಟುಮಾಡುತ್ತದೆ. ಇದರಲ್ಲಿ ತೀರ್ಥಗಳೂ, ಶ್ರಾದ್ಧಗಳೂ ಹೇಳಲ್ಪಟ್ಟಿವೆ. ಇದನ್ನು ಓದುವವನೂ, ಕೇಳುವವನೂ, ಸಂಪತ್ತನ್ನು ಹೊಂದುತ್ತಾನೆ. ಪಾಪಗಳೆಲ್ಲವನ್ನೂ ಕಳೆದುಕೊಂಡು ಹರಿಯಲ್ಲಿ ಐಕ್ಯನಾಗುತ್ತಾನೆ.

೪೩. ಪುಣ್ಯಕರವೂ, ಪಾಪನಾಶಕವೂ, ಆದ ಈ ಪುರಾಣವನ್ನು ನಿನಗೆ ಹೇಳಿದ್ದೇನೆ. ಬ್ರಹ್ಮ, ಸೂರ್ಯ, ರುದ್ರರೂ ಕೂಡ ಇದನ್ನು ಗೌರವಿಸುತ್ತಾರೆ. ಆದ್ದರಿಂದ ಇದನ್ನು ಕೇಳಬೇಕೆಂದು ತಿಳಿದವರು ಹೇಳುತ್ತಾರೆ.

ಸೃಷ್ಟಿಖಂಡಮಿದಂ ರಾಜನ್ಮಯಾ ತುಭ್ಯಂ ಪ್ರಕೀರ್ತಿತಂ ।
ಪುರಾಣಸ್ಯಾದಿಭೂತಂ ಚ ನವಧಾಸೃಷ್ಟಿಪೌಷ್ಕರಂ ॥ ೪೪ ॥

ದ್ವಿಜೇಭ್ಯಃ ಶ್ರಾವಯೇದ್ವಿದ್ವಾನ್ಯಶ್ಚೈವ ಶೃಣುಯಾತ್ಪಠೇತ್ ।
ಕಲ್ಪಕೋಟಿಶತಂ ಸಾಗ್ರಂ ಬ್ರಹ್ಮಲೋಕೇ ಸ ಮೋದತೇ ॥ ೪೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪುರಾಣಾವತಾರೇ
ಗ್ರಹಾರ್ಚನವರ್ಣನಂ ನಾಮ ದ್ವ್ಯಶೀತಿತಮೋಽಧ್ಯಾಯಃ

ಇತಿ ಶ್ರೀಮಹಾಮುನಿವ್ಯಾಸಪ್ರಣೀತೇ ಮಹಾಪುರಾಣೇ ಪಾದ್ಮೇ ಪಂಚಮಂ
ಸೃಷ್ಟಿಖಂಡಂ ಸಮಾಪ್ತಂ



---

೪೪. ಎಲೈ ರಾಜನೇ ! ನಾನು ಈ ಸೃಷ್ಟಿಖಂಡವನ್ನು ನಿನಗೆ ಹೇಳಿದ್ದೇನೆ ಇದು ಪುರಾಣಗಳಿಗೆಲ್ಲಾ ಮೊದಲನೆಯದು. ಈ ಪದ್ಮಪುರಾಣವು ಒಂಭತ್ತು ಬಗೆಯಾದ ಸೃಷ್ಟಿಯನ್ನು ಹೊಂದಿದೆ.

೪೫. ಇದನ್ನು ಬ್ರಾಹ್ಮಣರಿಗೆ ಹೇಳುತ್ತಿರಬೇಕು. ತಾನು ಓದುತ್ತಿರಬೇಕು. ಕೇಳುತ್ತಿರಬೇಕು. ಹಾಗೆ ಮಾಡಿದರೆ ಕೋಟಿ ಕಲ್ಪಗಳು ಪೂರ್ತಿಯಾಗಿ ಬ್ರಹ್ಮ ಲೋಕದಲ್ಲಿ ಸುಖಿಸುತ್ತಾನೆ.

ಇಂತು ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದ ಪುರಾಣಾವತಾರದಲ್ಲಿ
ಗ್ರಹಗಳ ಪೂಜೆಯೆಂಬ ಎಂಭತ್ತೆರಡನೆಯ ಅಧ್ಯಾಯವು ಮುಗಿದುದು

ಇಂತು ಮಹಾಮುನಿ ಶ್ರೀವ್ಯಾಸರು ರಚಿಸಿದ ಪದ್ಮಮಹಾಪುರಾಣದಲ್ಲಿ ಐದನೆಯದಾದ
ಸೃಷ್ಟಿಖಂಡವು ಮುಗಿದುದು



---

*Printed by, N. Narayana Raju, Proprietor,*
*Sree Hanuman Press, Sivarampet, Mysore.*